ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಪಾತಾಳಖಂಡ—ನಾಲ್ಕನೆಯ ಭಾಗ

(೧೦೦—೧೧೩ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ,**

ಸಾಹಿತ್ಯವಿದ್ವಾನ್

ಕನ್ನಡಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸು)

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಮುನ್ನುಡಿ

ಇದು ಪಾತಾಳಖಂಡದ ನಾಲ್ಕನೆಯ ಭಾಗವಾಗಿದೆ. ಈ ಭಾಗದಲ್ಲಿ ಹೇಳಿರುವುದೆಲ್ಲವೂ ಧರ್ಮಗಳು. ಅವುಗಳಿಗೆ ಒಂದೊಂದು ಉದಾಹರಣೆಗಳನ್ನು ಕೊಡುತ್ತಿರುವನು.

ಶಿವನು ಬ್ರಾಹ್ಮಣನ ವೇಷದಿಂದ ರಾಮನ ಮನೆಗೆ ಬರುವುದು, ಅವನ ಮನೆಯಲ್ಲಿ ಪುರಾಣವನ್ನು ಹೇಳುತ್ತಿರುವುದು, ಶ್ರಾದ್ಧಕಾಲ ಮತ್ತು ಅದರಲ್ಲಿ ಊಟ ಮಾಡುವವರ ನಿಯಮ, ವಿಭೂತಿಯ ಮಹಿಮೆ, ಸಹಗಮನದ ವಿಷಯ, ಶಿವಲಿಂಗದ ಪೂಜೆಯ ಮಹಿಮೆ, ಸೋಮವಾರ ವ್ರತವನ್ನು ಮಾಡಿ ಗೌತಮನು ದೇವತೆಗಳನ್ನು ತೃಪ್ತಿಪಡಿಸಿದುದು, ಪುರಾಣ ಹೇಳುವವರ ಮತ್ತು ಕೇಳುವವರ ಲಕ್ಷಣಗಳು, ನ್ಯಾಯದಿಂದ ಬಂದ ವಸ್ತುವಿನಿಂದ ಸ್ವಾಮಿಯನ್ನು ತೃಪ್ತಿಪಡಿಸುವುದಕ್ಕೂ ಚೌರ್ಯಾದಿದುಷ್ಟವೃತ್ತಿಯಿಂದ ಸಂಪಾದಿಸಿದ ವಸ್ತುಗಳಿಂದ ತೃಪ್ತಿಪಡಿಸುವುದಕ್ಕೂ ಇರುವ ವ್ಯತ್ಯಾಸ, ಇವುಗಳನ್ನೆಲ್ಲಾ ಹೇಳಿರುವುದಲ್ಲದೆ ಕೆಟ್ಟುಹೋದ ಪದಾರ್ಥಗಳ ನಿವೇದನವೂ, ಒಡಕು ಗಂಟೆಯ ಶಬ್ದವೂ, ಕೂಡದೆಂಬ ವಿಷಯವನ್ನು ಹೇಳಿ, ಪಾತಾಳಖಂಡದ ಶ್ರವಣಫಲವನ್ನು ಹೇಳಿರುವನು.

ಪುಣ್ಯಪ್ರಾಪ್ತಿ, ನೀತಿಗ್ರಹಣ, ಮತಗಳ ಹಿನ್ನೆಲೆಯಾದ ಆಚಾರ, ಇವುಗಳಿಗೆ ಮಾರ್ಗದರ್ಶಕಗಳಾದ ಇಂತಹ ಪುರಾಣಗಳನ್ನು ದೇಶಭಾಷೆಯಲ್ಲಿ ಅನುವಾದಿಸಲು ಪ್ರೋತ್ಸಾಹಿಸುತ್ತಿರುವ ನಮ್ಮ ಮಹಾಸ್ವಾಮಿಯವರಿಗೆ ಧನ್ಯವಾದಗಳನ್ನರ್ಪಿಸಿ, ಅವರಿಗೆ ಸರ್ವೇಶ್ವರನು ಸಕಲಸೌಭಾಗ್ಯಗಳನ್ನು ಕೊಡಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಅನುವಾದಕ,

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ,**

ಸಾಹಿತ್ಯವಿದ್ವಾನ್

ಕನ್ನಡಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸು)

20-2-45
ಮೈಸೂರು.



## ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ನಾಲ್ಕನೆಯ ಭಾಗದ

# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶತತಮೋಽಧ್ಯಾಯಃ

॥ ಋಷಯ ಊಚುಃ ॥

ಭೂಯೋ ವದ ಮಹಾಭಾಗ ರಾಮಚಾರಿತ್ರಮದ್ಭುತಂ ।
ರಾಮಮಾಹಾತ್ಮ್ಯಸರ್ವಸ್ವಂ ಭಕ್ತಾನಾಂ ಪ್ರೀತಿದಾಯಕಂ ॥ ೧ ॥

ಅಶ್ವಮೇಧಕ್ರತುವರಂ ಕೃತ್ವಾ ದಾಶರಥಿರ್ಯಥಾ ।
ಪ್ರವೃತ್ತೋ ಲೋಕಕೃತ್ಯೇಷು ಶಾಸ್ತ್ರಕೃತ್ಯೇಷು ಕೋವಿದಃ ॥ ೨ ॥

॥ ಸೂತ ಉವಾಚ ॥

ಅಯೋಧ್ಯಾಂ ಗಂತುಕಾಮೇನ ಶಂಕರೇಣ ಮಹಾತ್ಮನಾ ।
ಪಾರ್ವತ್ಯಾ ಸಹ ದೇವೇನ ಉಷಿತಂ ಸರಯೂತಟೇ ॥ ೩ ॥

---

## ನೂರನೆಯ ಅಧ್ಯಾಯವು

೧. ಋಷಿಗಳು ಕೇಳಿದರು:—ಎಲೈ ಪುಣ್ಯಪುರುಷನೇ, ಭಕ್ತರಿಗೆ ಪ್ರೀತಿಯನ್ನುಂಟುಮಾಡುವ ರಾಮಮಹಿಮೆಯ ಸರ್ವಸ್ವರೂಪವಾದ ರಾಮಚರಿತ್ರೆಯನ್ನು, ಮತ್ತೆ ಹೇಳು, ಕೇಳಬೇಕು.

೨. ಅಶ್ವಮೇಧವನ್ನು ಮಾಡಿದನಂತರ ರಾಮನು ಲೋಕವಿಷಯದಲ್ಲಿಯೂ, ಶಾಸ್ತ್ರದಲ್ಲಿಯೂ ಹೇಗೆ ಪ್ರವರ್ತಿಸಿದನೆಂಬುದನ್ನು ತಿಳಿಸು ಎಂದರು.

೩. ಸೂತನು ಹೇಳಿದನು:—ಅಯೋಧ್ಯೆಗೆ ಹೋಗಬೇಕೆಂದು ಈಶ್ವರನು ಬಂದು ಪಾರ್ವತಿಯೊಡನೆ ಸರಯೂನದಿಯ ದಡದಲ್ಲಿ ನಿಂತನು.

ಮುನಯಸ್ತಂ ಸಮಭ್ಯೇತ್ಯ ಶಂಕರಂ ವಿಶ್ವರೂಪಿಣಂ
ಕಶ್ಯಪಾದ್ಯಾ ಮಹಾತ್ಮಾನಃ ಪಪ್ರಚ್ಛುರಮಿತೌಜಸಂ ॥ ೪ ॥

ಸ್ವಾಗತಂ ತೇ ಮುನಿಶ್ರೇಷ್ಠ ಸಭಾರ್ಯಃ ಕುತ ಆಗತಃ ।
ಕಿಮಾಗಮನಕೃತ್ಯಂ ತೇ ಕಂ ದೇಶಂ ಗಂತುಮುದ್ಯತಃ ॥ ೫ ॥

॥ ಶಂಕರ ಉವಾಚ ॥

ಅಹಂ ಶಂಭುರಿತಿ ಖ್ಯಾತೋ ವಿಪ್ರೋ ಹಿಮಗಿರಿಸ್ಥಿತಃ ।
ದ್ರಷ್ಟುಂ ಚ ರಾಘವಂ ಗಚ್ಛೇ ಮಮ ಕಾರ್ಯಂ ಮಹತ್ತತಃ ॥ ೬ ॥

ಮಾಮಾಹ್ವಯತಿ ರಾಜಾಸೌ ಪುರಾಣಶ್ರವಣೇ ರತಃ ।
ಆಗಚ್ಛಂತು ಭವಂತೋಽಪಿ ರಾಘವಃ ಪರಿತುಷ್ಯತಿ ॥ ೭ ॥

ತತಃ ಶಿವಸ್ತೇ ಮುನಯೋ ಯಯೂ ರಾಮದಿದೃಕ್ಷಯಾ ।
ತಾನಾಗತಾನ್ವಸಿಷ್ಠಸ್ತು ಜ್ಞಾತ್ವಾ ರಾಮಾಯ ಚೋಕ್ತವಾನ್ ॥ ೮ ॥

---

೪. ಆಗ ಕಶ್ಯಪಾದಿಋಷಿಗಳು ವಿಶ್ವರೂಪಿಯಾದ ಶಂಕರನ ಬಳಿಗೆ ಬಂದು ಇಂತೆಂದು ಕೇಳಿದರು.

೫. ಎಲೈ ಮುನಿಶ್ರೇಷ್ಠನೇ, ನಿನಗೆ ಸ್ವಾಗತವೇ? ಭಾರ್ಯೆಯೊಡನೆ ಎಲ್ಲಿಂದ ಬಂದೆ? ಏನು ಕಾರ್ಯಾರ್ಥವಾಗಿ ಬಂದೆ? ಎಲ್ಲಿಗೆ ಹೋಗಲು ಹೊರಟಿದ್ದೀಯೆ?

೬. ಶಂಕರನು ಹೇಳಿದನು:—ನನ್ನ ಹೆಸರು ಶಂಭುವು. ಬ್ರಾಹ್ಮಣಜಾತಿಯವನು. ಹಿಮವತ್ಪರ್ವತವು ನನ್ನ ಸ್ಥಳ. ಶ್ರೀರಾಮನನ್ನು ನೋಡಲು ಹೋಗುತ್ತೇನೆ. ಅವನಿಂದ ಮಹತ್ಕಾರ್ಯವಾಗಬೇಕಾಗಿದೆ.

೭. ಪುರಾಣ ಕೇಳುವುದರಲ್ಲಿ ಆಸಕ್ತನಾದ ರಾಜನಾದ ರಾಮನು ನನ್ನನ್ನು ಕರೆಯುತ್ತಾನೆ. ನೀವುಗಳೂ ಬನ್ನಿರಿ. ರಾಘವನು ಸಂತೋಷಗೊಳ್ಳುತ್ತಾನೆ.

೮. ಅನಂತರ ಶಿವನೂ ಋಷಿಗಳೂ ರಾಮನನ್ನು ನೋಡಲು ಹೋದರು. ಇದನ್ನು ತಿಳಿದ ವಸಿಷ್ಠನು ಶ್ರೀರಾಮನಿಗೆ ತಿಳಿಸಿದನು.

ತತಃ ಸತ್ವರಮುತ್ಥಾಯ ನಿರ್ಯಯೌ ಸಪುರೋಹಿತಃ ।
ಅರ್ಘ್ಯಪಾದ್ಯಾದಿನಾ ಸರ್ವಾನ್ಪೂಜಯಾಮಾಸ ತಾನೃಷೀನ್ ॥ ೯ ॥

ಗೃಹರಾಜಂ ತತಃ ಸರ್ವಾನ್ಪ್ರಾವೇಶಯದರಿಂದಮಃ ।
ಪ್ರತ್ಯೇಕಮಾಸನಂ ದತ್ವಾ ಸ್ವಾಗತೇಽತ್ಯಾಸನಸ್ಥಿತಾನ್ ॥ ೧೦ ॥

ಕ್ರಮೇಣ ರಘುಶಾರ್ದೂಲಃ ಪೂಜಯಾಮಾಸ ತಾನೃಷೀನ್ ।
ವಾಚಾ ಮಧುರಯಾ ಪ್ರೀಣನ್ನಿದಮಾಹಾಸನಸ್ಥಿತಾನ್ ॥ ೧೧ ॥

॥ ಶ್ರೀರಾಮ ಉವಾಚ ॥

ಅದ್ಯ ಮೇ ಸಫಲಂ ಜನ್ಮ ಪ್ರಾಪ್ತಮದ್ಯ ತಪಃಫಲಂ ।
ಅದ್ಯಾಭ್ಯಾಸಸ್ಯ ವಿದ್ಯಾನಾಂ ಫಲಕಾಲೋಽಯಮಾಗತಃ ॥ ೧೨ ॥

ಅದ್ಯ ಮೇ ಪಿತರಸ್ತುಷ್ಟಾ ರಾಜ್ಯಂ ಚ ಸಫಲಂ ಮಮ ।
ಅದ್ಯ ಮೇ ಸಫಲಂ ವೃತ್ತಮದ್ಯ ಮೇ ಸಫಲಂ ಶ್ರುತಂ ॥ ೧೩ ॥

---

೯. ಅನಂತರ ಜಾಗ್ರತೆ ಎದ್ದು ಪುರೋಹಿತನೊಡನೆ ಹೋಗಿ ಅರ್ಘ್ಯಪಾದ್ಯಾದಿಗಳಿಂದ ಅವರೆಲ್ಲರನ್ನೂ ಸತ್ಕರಿಸಿದನು.

೧೦-೧೧. ಇವರೆಲ್ಲರನ್ನೂ ಉತ್ತಮವಾದ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಇವರೆಲ್ಲರಿಗೂ ಬೇರೆ ಬೇರೆ ಆಸನಗಳನ್ನು ಕೊಟ್ಟನು. ಹಾಗೆ ಕೊಟ್ಟು ಪ್ರತ್ಯೇಕವಾಗಿ ಪೂಜಿಸಿದನು. ಆಗ ಅವರನ್ನು ಕುರಿತು ಮಧುರವಾದ ಮಾತಿನಿಂದ ಇಂತೆಂದನು.

೧೨. ಶ್ರೀರಾಮನು ಹೇಳಿದನು:—ಈಗ ನನ್ನ ಜನ್ಮವು ಸಫಲವಾಯಿತು. ಇಂದು ನನ್ನ ತಪಸ್ಸಿಗೆ ಫಲವು ಸಿಕ್ಕಿತು. ವಿದ್ಯೆಗಳ ಅಭ್ಯಾಸಕ್ಕೆ ಇಂದು ಫಲಕಾಲವು ಬಂದಿತು.

೧೩. ಈದಿನ ನನ್ನ ಪಿತೃಗಳು ತುಷ್ಟರಾದರು. ರಾಜ್ಯವು ಸಫಲವಾಯಿತು. ನನ್ನ ಒಳ್ಳೆಯ ನಡತೆಗೆ ಇಂದು ಫಲ ಬಂದಿತು. ನನ್ನ ಶಾಸ್ತ್ರಗಳಿಗೆ ಇಂದು ಫಲವು ಲಭಿಸಿತು.

ಏವಂ ವದಂತಂ ರಾಜಾನಂ ಬ್ರಾಹ್ಮಣಾಃ ಕಶ್ಯಪಾದಯಃ ।
ಊಚುಃ ಪ್ರಿಯತರಂ ವಾಕ್ಯಂ ರಾಮಂ ರಾಜೀವಲೋಚನಂ ॥ ೧೪ ॥

॥ ಋಷಯ ಊಚುಃ ॥

ಅಯಂ ಶಂಭುರ್ದ್ವಿಜಃ ಪ್ರಾಪ್ತಃ ಸರ್ವಶಾಸ್ತ್ರವಿಶಾರದಃ ।
ವೇದವೇದಾಂಗತತ್ತ್ವಜ್ಞಃ ಸರ್ವಭೂತಹಿತೇ ರತಃ ॥ ೧೫ ॥

ಕೈಲಾಸವಾಸೀ ಸತತಂ ತಪಸೇ ಕೃತನಿಶ್ಚಯಃ ।
ಬ್ರಹ್ಮಣಾ ಬ್ರಹ್ಮವರ್ಚಸ್ಕೇ ತುಲ್ಯೋ ಬ್ರಹ್ಮವಿದಾಂ ವರಃ ॥ ೧೬ ॥

ಹರಿಣಾ ಬ್ರಹ್ಮವಾತ್ಸಲ್ಯೇ ಪ್ರಸಾದೇ ಶಂಕರೋಪಮಃ ।
ಏವಂವಿಧೋ ಮಹಾತೇಜಾಃ ಶಂಭುರ್ಬ್ರಾಹ್ಮಣಪುಂಗವಃ ॥ ೧೭ ॥

ಅಷ್ಟಾದಶಪುರಾಣಜ್ಞೋ ಮೀಮಾಂಸಾನ್ಯಾಯಕೋವಿದಃ ।
ತ್ವದ್ವಾಕ್ಯಗೌರವಾದೇವ ಪ್ರಾಪ್ತೋಽಯಂ ಮುನಿಪುಂಗವಃ ॥ ೧೮ ॥

---

೧೪. ರಾಜನು ಹೀಗೆ ಹೇಳುತ್ತಿರಲು ಕಶ್ಯಪಾದಿಬ್ರಾಹ್ಮಣರು ರಾಮನನ್ನು ಕುರಿತು ಪ್ರೀತಿಯುಕ್ತವಾದ ಮಾತನ್ನು ಹೇಳಿದರು.

೧೫-೧೬. ಋಷಿಗಳು ಹೇಳಿದರು:—ಎಲೈ ರಾಮನೇ, ಇಲ್ಲಿಗೆ ಈ ಶಂಭುವೆಂಬ ಬ್ರಾಹ್ಮಣನು ಬಂದಿದ್ದಾನೆ. ಇವನು ಸಮಸ್ತ ಶಾಸ್ತ್ರಗಳಲ್ಲಿಯೂ ಪಂಡಿತನು. ವೇದವೇದಾಂಗಗಳನ್ನು ತಿಳಿದಿದ್ದಾನೆ. ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿ ಆಸಕ್ತನು.

೧೭. ಬ್ರಹ್ಮನಲ್ಲಿರುವ ಪ್ರೀತಿಯಲ್ಲಿ ಹರಿಗೆ ಸಮಾನನು. ಅನುಗ್ರಹದಲ್ಲಿ ಶಂಕರನಿಗೆ ಹೋಲಿಕೆಯುಳ್ಳವನು. ಬ್ರಾಹ್ಮಣತೇಜಸ್ವಿಯಾದ ಈ ಶಂಭುವು ಮಹಾತೇಜಸ್ವಿಯಾಗಿ ಈರೀತಿ ಇದ್ದಾನೆ.

೧೮. ಹದಿನೆಂಟು ಪುರಾಣಗಳನ್ನೂ ತಿಳಿದಿದ್ದಾನೆ. ಮೀಮಾಂಸಾನ್ಯಾಯಗಳನ್ನು ಬಲ್ಲವನು. ನಿನ್ನ ಮಾತಿನ ಗೌರವದ ಮೇಲೆ ಈ ಮುನಿಶ್ರೇಷ್ಠನು ಬಂದಿದ್ದಾನೆ.

**ತ್ವಯಾಽಹೂತೋ ಮುನಿವರಃ ಕೈಲಾಸಾದಾಗತಃ ಪ್ರಭೋ ।**
**ಅತಃ ಪೃಚ್ಛ ಮಹಾಭಾಗ ಪುರಾಣಾಖ್ಯಾನಮುತ್ತಮಂ　　॥ ೧೯ ॥**

**ಶ್ರೋತುಕಾಮಾ ವಯಂ ಪ್ರಾಪ್ತಾಸ್ತ್ವಮದ್ಯ ರಘುನಂದನ ।**
**ಅಂತಂ ಗತಸ್ಯ ವೇದಾನಾಂ ಸರ್ವಶಾಸ್ತ್ರಾರ್ಥವೇದಿನಃ　　॥ ೨೦ ॥**

**ಪುಂಸೋಽಶ್ರುತಪುರಾಣಸ್ಯ ನ ಸಮ್ಯಗ್ಗತಿದರ್ಶನಂ　　॥ ೨೧ ॥**

**॥ ಸೂತ ಉವಾಚ ॥**

**ಏವಮುಕ್ತೋ ರಘುಶ್ರೇಷ್ಠೋ ಮುನಿಭಿಸ್ತತ್ತ್ವದರ್ಶಿಭಿಃ ।**
**ಪ್ರಹರ್ಷಮತುಲಂ ಲೇಭೇ ಪುರಾಣಶ್ರವಣೋತ್ಸುಕಃ　　॥ ೨೨ ॥**

**॥ ಶ್ರೀರಾಮ ಉವಾಚ ॥**

**ಲಿಂಗಾರ್ಚನಪ್ರಕಾರಂ ಚ ಲಿಂಗಮಾಹಾತ್ಮ್ಯಮೇವ ಚ ।**
**ಮಹೇಶನಾಮಮಾಹಾತ್ಮ್ಯಂ ಪೂಜಾಮಾಹಾತ್ಮ್ಯಮೇವ ಚ　　॥ ೨೩ ॥**

---

೧೯. ನೀನು ಕರೆದುದರಿಂದ ಕೈಲಾಸದಿಂದ ಬಂದಿದ್ದಾನೆ. ಆದ್ದರಿಂದ ಪುರಾಣವನ್ನು ಕೇಳು.

೨೦-೨೧. ಆ ಪುರಾಣವನ್ನು ಕೇಳಬೇಕೆಂಬ ಆಸೆಯಿಂದ ನಿನ್ನ ಬಳಿಗೆ ನಾವೂ ಬಂದಿದ್ದೇವೆ. ವೇದಾಂತವನ್ನು ತಿಳಿದಿದ್ದರೂ, ಸರ್ವಶಾಸ್ತ್ರಗಳನ್ನು ಅಧ್ಯಯನಮಾಡಿದ್ದರೂ ಪುರಾಣವನ್ನು ಕೇಳದವನಿಗೆ ಒಳ್ಳೆಯ ಗತಿ ಸಿಕ್ಕುವುದಿಲ್ಲವೆಂದು ದರ್ಶನಗಳು ಹೇಳುತ್ತವೆ.

೨೨. ಸೂತನು ಹೇಳಿದನು:—ರಾಮನಿಗೆ ಋಷಿಗಳು ಇಂತೆನ್ನಲಾಗಿ ಪುರಾಣವನ್ನು ಕೇಳಬೇಕೆಂಬ ಬಹುವಾದ ಸಂತೋಷವನ್ನು ಹೊಂದಿದನು.

೨೩. ಶ್ರೀರಾಮನು ಹೇಳಿದನು:—ಲಿಂಗಾರ್ಚನೆಯ ವಿಧಿಯನ್ನೂ, ಲಿಂಗದ ಮಹಿಮೆಯನ್ನೂ, ಮಹೇಶ್ವರನಾಮಮಹಿಮೆಯನ್ನೂ, ಪೂಜಾಮಹಿಮೆಯನ್ನೂ, ಕೇಳಬೇಕೆಂದಿದ್ದೇನೆ, ಹೇಳು.

**ನಮಸ್ಕಾರಸ್ಯ ಮಾಹಾತ್ಮ್ಯಂ ವೃಷ್ಟಿಮಾಹಾತ್ಮ್ಯಮೇವ ಚ ।**
**ಜಲದಾನಸ್ಯ ಮಾಹಾತ್ಮ್ಯಂ ಧೂಪದಾನಸ್ಯ ಸತ್ತಮ ॥ ೨೪ ॥**

**ದೀಪಗಂಧಾದಿದಾನಸ್ಯ ಪುಷ್ಪಮಾಹಾತ್ಮ್ಯಮೇವ ಚ ।**
**ನಾನಾಖ್ಯಾನೇತಿಹಾಸಾನಾಂ ಕಥಾಂ ಪಾಪಪ್ರಣಾಶಿನೀಂ ॥ ೨೫ ॥**

**ಧರ್ಮಾರ್ಥಕಾಮಮೋಕ್ಷಾಂಶ್ಚ ತದುಪಾಯಾಂಶ್ಚ ಸುವ್ರತ ।**
**ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ಮುನಿವರೋತ್ತಮ ॥ ೨೬ ॥**

**॥ ಶ್ರೀ ಶಂಭುರುವಾಚ ॥**

**ರಾಮ ರಾಮ ಮಹಾಬಾಹೋ ಪುಣ್ಯವಾನಸಿ ರಾಘವ ।**
**ರಾಜ್ಯಾಸಕ್ತಸ್ಯ ತೇ ಜಾತಾ ಪುರಾಣಶ್ರವಣೇ ರತಿಃ ॥ ೨೭ ॥**

**ಸ್ಯಾನ್ಮಹತ್ಸೇವಯಾ ರಾಮ ಪುಣ್ಯತೀರ್ಥನಿಷೇವಣಾತ್ ।**
**ಸಾ ಜಿಹ್ವಾ ಯಾ ಶಿವಂ ಗಾಯೇತ್ತಚ್ಚಿತ್ತಂ ಯತ್ತದರ್ಪಿತಂ ॥ ೨೮ ॥**

---

೨೪. ನಮಸ್ಕಾರದ ಮಹಿಮೆಯನ್ನೂ, ವೃಷ್ಟಿಮಹಿಮೆಯನ್ನೂ, ಜಲದಾನದ ಮಹಿಮೆಯನ್ನೂ, ಧೂಪದಾನದ ಮಹಿಮೆಯನ್ನೂ ದಯವಿಟ್ಟು ಹೇಳು.

೨೫. ದೀಪದಾನ, ಗಂಧದಾನ, ಪುಷ್ಪದಾನಗಳ ಮಹಿಮೆಯನ್ನೂ, ಪಾಪವನ್ನು ನಾಶಮಾಡುವ ಬಗೆಬಗೆಯಾದ ಇತಿಹಾಸಗಳನ್ನೂ ದಯವಿಟ್ಟು ಹೇಳು.

೨೬. ಧರ್ಮ, ಅರ್ಥ, ಕಾಮ, ಮೋಕ್ಷಗಳ ವಿಧವನ್ನೂ, ಅವನ್ನು ಹೊಂದುವ ಉಪಾಯವನ್ನೂ, ಅವೆಲ್ಲವನ್ನೂ ಕೂಡ, ಎಲೈ ಮುನಿವರನೇ, ನಿನ್ನಿಂದ ಕೇಳ ಬೇಕೆಂದಿದ್ದೇನೆ.

೨೭. ಶ್ರೀ ಶಂಭುವು ಹೇಳಿದನು :—ಮಹಾಬಾಹುವಾದ ರಾಮನೇ, ನೀನು ಪುಣ್ಯವಂತನಾಗಿದ್ದೀಯೆ. ರಾಜ್ಯದಲ್ಲಿ ಆಸಕ್ತನಾಗಿ ಸುಖಪಡುತ್ತಿದ್ದರೂ, ಪುರಾಣ ಶ್ರವಣದಲ್ಲಿ ಬುದ್ಧಿಯುಂಟಾಗಿದೆಯಲ್ಲ.

೨೮. ಮಹಾತ್ಮರ ಸೇವೆಯಿಂದಲೂ, ಪುಣ್ಯತೀರ್ಥಗಳ ಸೇವೆಯಿಂದಲೂ, ಪುರಾಣವನ್ನು ಕೇಳುವುದರಲ್ಲಿ ಬುದ್ಧಿಯುಂಟಾಗುತ್ತದೆ. ಶಿವನನ್ನು ಧ್ಯಾನಮಾಡು ವುದೇ ನಾಲಗೆಯು. ಅವನಲ್ಲಿ ಅರ್ಪಿಸುವುದೇ ಮನಸ್ಸು. ಅದಿಲ್ಲದುವು ವ್ಯರ್ಥಗಳು.

**ತಾವೇವ ಕೇವಲೌ ಶ್ಲಾಘ್ಯೌ ಯೌ ತತ್ಪೂಜಾಕರೌ ಕರೌ ।**
**ಸುಜನ್ಮದೇಹಮತ್ಯರ್ಥಂ ತದೇವಾಶೇಷಜನ್ಮಸು ॥ ೨೯ ॥**

**ಯದೇವ ಪುಲಕೋದ್ಭಾತಿ ಹರನಾಮಾನುಕೀರ್ತನಾತ್ ।**
**ಕೃತಾರ್ಥೋಽಸಿ ಮಹಾರಾಜ ತತ್ಪ್ರಶ್ನಾನುಗತಾ ಮತಿಃ ॥ ೩೦ ॥**

**ಅನಂತರಂ ಸಮಾಜಗ್ಮುರ್ಜಾಂಘಿಕಾ ಸತ್ವರಶ್ರಮಾಃ ।**
**ತತ್ಕರಾತ್ಪತ್ರಿಕಾಂ ಗೃಹ್ಯ ಪಪಾಠ ರಘುಸತ್ತಮಃ ॥ ೩೧ ॥**

**ಮನಸಾಽ ಚಿಂತಯದ್ರಾಮಃ ಕಥಮೇತದಭೂದಿತಿ ।**
**ರಾಮಂ ಶಂಭುಸ್ತದಾ ಪ್ರಾಹ ದೇವ್ಯಾ ಬ್ರಾಹ್ಮಣವೇಷವಾನ್ ॥ ೩೨ ॥**

**॥ ಶಂಭುರುವಾಚ ॥**

**ಕಿಂ ಚಿಂತಯಸಿ ಕಾಕುತ್ಸ್ಥ ಮುನಿಷ್ವಗ್ರೇ ಪಸತ್ಸ್ವಪಿ ।**
**ತದ್ವಾಕ್ಯಂ ರಾಘವಶ್ರುತ್ವಾ ಪಪ್ರಚ್ಛ ಮುನಿಪುಂಗವಾನ್ ॥ ೩೩ ॥**

---

೨೯. ಆ ಶಿವನನ್ನು ಪೂಜೆಮಾಡುವ ಕೈಗಳೇ ಶ್ಲಾಘ್ಯಗಳು. ಯಾವ ದೇಹದಿಂದ ಪೂಜೆಮಾಡುತ್ತೇವೆಯೋ ಅದೇ ಎಲ್ಲಾ ದೇಹಗಳಲ್ಲಿಯೂ ಒಳ್ಳೆಯದು.

೩೦. ಹರನ ಹೆಸರನ್ನು ಕೇಳಿದರೆ ಯಾವ ದೇಹವು ರೋಮಾಂಚವಾಗುವುದೋ, ಅದೇ ಉತ್ತಮವಾದ ದೇಹವು. ಆ ಪ್ರಶ್ನೆಯನ್ನು ಸೇರಿಕೊಂಡಿರುವ ಬುದ್ಧಿಯಿರುವುದರಿಂದಲೇ ನೀನು ಕೃತಾರ್ಥನು.

೩೧. ಆಮೇಲೆ ಕಾಗದವನ್ನು ತೆಗೆದುಕೊಂಡು ಓಡುತ್ತ ಶ್ರಮಪಟ್ಟುಕೊಂಡು ಕಾಲಾಳುಗಳು ಬಂದರು. ಅವರ ಕೈಯಲ್ಲಿದ್ದ ಕಾಗದವನ್ನು ತೆಗೆದುಕೊಂಡು ರಾಮನು ಓದಿದನು.

೩೨. ರಾಮನು ಇದು ಹೇಗಾಯಿತೆಂದು ಮನಸ್ಸಿನಲ್ಲಿ ಚಿಂತಿಸುತ್ತಿರಲು ಹೆಂಡತಿಯೊಡನೆ ಬ್ರಾಹ್ಮಣವೇಷವನ್ನು ಧರಿಸಿರುವ ಶಂಭುವು ಆಗ ರಾಮನನ್ನು ಕುರಿತು ಇಂತೆಂದನು.

೩೩. ಶಂಭುವು ಹೇಳಿದನು :—ಎಲೈ ರಾಮನೇ, ಮುನಿಗಳು ಮುಂದಿದ್ದರೂ, ಏನನ್ನು ಯೋಚಿಸುತ್ತೀಯೆ? ಎಂದನು. ಆ ಮಾತನ್ನು ರಾಘವನು ಋಷಿಶ್ರೇಷ್ಠರನ್ನು ಕೇಳಿದನು.

॥ ಶ್ರೀರಾಮ ಉವಾಚ ॥

ವಿಭೀಷಣಃ ಕಥಮಸೌ ಬದ್ಧಶ್ಶೃಂಖಲಯಾ ನೃಭಿಃ ।
ಮತ್ಸ್ಥಾಪಿತಂ ಶಿವಂ ಲಿಂಗಂ ದೃಷ್ಟ್ವಾ ರಾಮೇಶ್ವರಂ ತ್ವಹೋ ॥ ೩೪ ॥

ದ್ರಾವಿಡೈಃ ಕುಟಿಲೈರ್ದುಷ್ಟೈರಾತ್ಮನಾ ತದ್ವಿಚಾರ್ಯತಾಂ ।
ವಿಚಾರ್ಯ ಮುನಿವರ್ಯಾಸ್ತೇ ನೇಶಾಸ್ತಜ್ಜ್ಞಾತುಮಲ್ಪತಃ ॥ ೩೫ ॥

ನ ಜಾನೀಮ ಇತಿ ಪ್ರಾಹೂ ರಾಮಂ ರಾಮಸ್ತದಾಬ್ರವೀತ್ ।
ಪುರಾಣಂ ವೀಕ್ಷ್ಯ ವಿಧಿನಾ ತತ್ಸರ್ವಂ ಬ್ರೂತ ಸತ್ತಮಾಃ ॥ ೩೬ ॥

ಭವದಜ್ಞಾನಹೇತುಶ್ಚ ವಿಚಾರ್ಯಸ್ತದನಂತರಂ ।
ಕಿಂ ಕಿಂ ಪುರಾಣಂ ಪ್ರೇಕ್ಷ್ಯಂ ಸ್ಯಾದ್ವರ್ಜನೀಯಂ ತಥೈವ ಕಿಂ ॥ ೩೭ ॥

ಪ್ರಶಸ್ತಃ ಕೀದೃಶಃ ಶ್ಲೋಕಸ್ತದನ್ಯಃ ಕೀದೃಶೋ ಭವೇತ್ ।
ಕೀದೃಶೇಷು ಚ ಕಾರ್ಯೇಷು ಕೀದೃಶಃ ಪೂಜಕಸ್ತಥಾ ॥ ೩೮ ॥

---

೩೪-೩೫. ಶ್ರೀರಾಮನು ಹೇಳಿದನು:—ಮನುಷ್ಯರು ಸರಪಣಿಗಳಿಂದ ವಿಭೀಷಣನನ್ನು ಕಟ್ಟುವುದೆಂದರೇನು? ರಾಮೇಶ್ವರದಲ್ಲಿ ನಾನು ಸ್ಥಾಪಿಸಿರುವ ಲಿಂಗವನ್ನು ಅದು ರಾಮೇಶ್ವರವೆಂದಾಗಿರುವುದನ್ನು ನೋಡಿ, ವಕ್ರಬುದ್ಧಿಯುಳ್ಳ ದುಷ್ಟರಾದ ದ್ರಾವಿಡರು ಕಟ್ಟಿರುವರಲ್ಲ. ಅದನ್ನು ವಿಮರ್ಶಿಸಿ ಹೇಳಿ ಎಂದನು. ಇದನ್ನು ವಿಚಾರಿಸಿ ತಿಳಿಯಲು ಆ ಋಷಿಗಳು ಸಮರ್ಥರಾಗಲಿಲ್ಲ.

೩೬. ನಮಗೆ ಗೊತ್ತಿಲ್ಲವೆಂದು ರಾಮನಿಗೆ ಆ ಋಷಿಗಳು ಹೇಳಲು, ರಾಮನು ನೀವೆಲ್ಲರೂ ಪುರಾಣಗಳನ್ನು ನೋಡಿ ಹೇಳಿರೆಂದನು.

೩೭. ನಿಮ್ಮ ಅಜ್ಞಾನಕ್ಕೆ ಕಾರಣವನ್ನು ಆಮೇಲೆ ವಿಚಾರಿಸಿ. ಯಾರು ಯಾವ ಪುರಾಣವನ್ನು ನೋಡಬೇಕು? ಅಂತೆಯೇ ಯಾವುದನ್ನು ಬಿಡಬೇಕು?

೩೮. ಯಾವ ಶ್ಲೋಕವು ಪ್ರಶಸ್ತವಾದುದು? ಅಂತೆಯೇ ಉಪಯೋಗವಿಲ್ಲದಿರುವುದು ಯಾವುದು? ಯಾವ ಕೆಲಸದಲ್ಲಿ ಯಾರನ್ನು ಪೂಜಿಸಬೇಕು?

**ಪೂಜಾ ಚ ಕೀದೃಶೈರ್ಭಕ್ತೈಃ ಕಾರ್ಯಾ ನಿರ್ಣಯದರ್ಶನೇ ।**
**ಇತಿ ರಾಮಸ್ಯ ವಚನಂ ಶ್ರುತ್ವಾ ತೇ ದ್ವಿಜಸತ್ತಮಾಃ　　॥ ೩೯ ॥**

**ಪ್ರತ್ಯೂಚುಸ್ತಂ ರಘುಶ್ರೇಷ್ಠಂ ಚಿಂತಾವ್ಯಾಕುಲಮಾನಸಂ ।**
**ನ ವಕ್ತಾರೋ ವಯಂ ರಾಮ ನೀಕ್ಷ್ಯತಾಂ ತು ಪುರಾಣವಿತ್　　॥ ೪೦ ॥**

**ತಚ್ಛ್ರುತ್ವಾ ರಾಘವಶ್ಶಂಭುಂ ಪಪ್ರಚ್ಛ ವಿನಯಾನ್ವಿತಃ ।**
**ಸೋಽಪಿ ತದ್ವಾಕ್ಯಮಾಕರ್ಣ್ಯ ಪ್ರತ್ಯುವಾಚ ಮಹಾಮತಿಃ　　॥ ೪೧ ॥**

**॥ ಶಂಭುರುವಾಚ ॥**

**ಪುರಾಣಜೀವೀ ಪೂಜಾರ್ಹಃ ಸ್ವಶಾಖಾಧ್ಯಯನಶ್ಶುಚಿಃ ।**
**ಮೀಮಾಂಸಾತತ್ತ್ವವಿಜ್ಞಾನಃ ಶ್ರೋತ್ರಿಯೋಽನ್ಯತದೂಷಕಃ　　॥ ೪೨ ॥**

**ದೇವೇಷು ಚ ಸಮಸ್ತೇಷು ಸಮದೃಷ್ಟಿಶ್ಶಿವೇ ರತಃ ।**
**ಶತರುದ್ರೀಯಜಾಪೀ ಚ ಸಾಗ್ನಿಕಶ್ಶಾತಿವಾಚಕಃ　　॥ ೪೩ ॥**

---

೩೯. ನಿರ್ಣಯವನ್ನು ಮಾಡುವಾಗ ಎಂತಹ ಭಕ್ತರಿಂದ ಪೂಜೆ ನಡೆಯ ಬೇಕು.

೪೦. ಈರೀತಿ ಹೇಳಿದ ರಾಮನ ಮಾತನ್ನು ಆ ಬ್ರಾಹ್ಮಣರು ಕೇಳಿ ಚಿಂತೆಯಿಂದ ಕೂಡಿದ ರಾಮನನ್ನು ಕುರಿತು ಇಂತೆಂದರು. ಎಲೈ ರಾಮನೇ ನಮಗೆ ಗೊತ್ತಾಗುವುದಿಲ್ಲ. ಬೇರೆ ಪುರಾಣಜ್ಞನನ್ನು ಕೇಳು ಎಂದು ಹೇಳಿದರು.

೪೧. ಅದನ್ನು ಕೇಳಿ ರಾಘವನು ವಿನಯದಿಂದ ಶಂಭುವನ್ನು ಕೇಳಿದನು. ಆ ಮಹಾಮತಿಯಾದ ಶಂಭುವು ಆ ಮಾತನ್ನು ಕೇಳಿ ಇಂತೆಂದನು.

೪೨. ಶಂಭುವು ಹೇಳಿದನು:—ಪುರಾಣ ಬಲ್ಲವನನ್ನೂ, ಅದರಿಂದಲೇ ಜೀವಿಸುವವನನ್ನೂ ಪೂಜಿಸಬೇಕು. ಆತನು ಶುಚಿಯಾಗಿ ತನ್ನ ವೇದವನ್ನು ಅಧ್ಯಯನ ಮಾಡಿರಬೇಕು. ಮೀಮಾಂಸೆಯ ತತ್ವವನ್ನು ತಿಳಿದಿರಬೇಕು. ಶ್ರೋತ್ರೀಯನಾಗಿರಬೇಕು. ಸುಳ್ಳಿನಿಂದ ದೂರನಾಗಿರಬೇಕು.

೪೩. ಎಲ್ಲಾ ದೇವತೆಗಳಲ್ಲಿಯೂ, ಸಮದೃಷ್ಟಿಯಿರಬೇಕು. ಒಳ್ಳೆಯದರಲ್ಲಿಯೇ ಆಸಕ್ತನಾಗಿರಬೇಕು. ಶತರುದ್ರವನ್ನು ಜಪಿಸುತ್ತಿರಬೇಕು. ಅಗ್ನಿಹೋತ್ರವನ್ನಿಟ್ಟಿರಬೇಕು. ಬಹಳವಾಗಿ ಓದಿರಬೇಕು.

ಯಜುರ್ವೇದೀ ವಿಶೇಷೇಣ ಪೂಜಯೇತ್ಪುಸ್ತಕಂ ಸುಧೀಃ ।
ಶ್ರೀತಾಳಪತ್ರಲಿಖಿತಂ ದೇವಲಿಪ್ಯನ್ವಿತಂ ಶುಭಂ ॥ ೪೪ ॥

ಬಂಧಾದ್ಯಂತಿಪ್ರಚಂಪಟ್ಟೆಯುಗಲಾತ್ಪ್ರಣವಾಕ್ಷರಂ ।
ಪ್ರಾಗೂರ್ಧ್ವಗಂ ರೇಖಯೋಃ ಸ್ಯಾನ್ತೇ ಪ್ರಣವಸ್ಯಾಗ್ರಯೋಜಿಕಾ ॥ ೪೫ ॥

ರೇಖೈಕಾ ತು ಭವೇದೇವ ಮಕಾರಸ್ತಸ್ಯ ಪಾರ್ಶ್ವತಃ ।
ಶಿರೋಭಾಗಮುಪಕ್ರಮ್ಯ ಸಕೋಣಾಧಃಪ್ರಲಂಬಿನೀ ॥ ೪೬ ॥

ಆಕಾರಸ್ಸ ತು ವಿಜ್ಞೇಯಃ ಪಟ್ಟಿಕಾಪಕ್ಷರೇಖಯಾ ।
ವಾಮೇ ಷಟ್ಚಕ್ರಬಿಂದೂ ದ್ವಾವಿಕಾರ ಇತಿಕೀರ್ತಿತಃ ॥ ೪೭ ॥

ತಸ್ಯ ವಾಮಶಿರೋರೇಖಾಲಂಬಿನ್ಯಾ ಈ ಉದಾಹೃತಃ ।
ಸರ್ವಾಕ್ಷರೇ ಶಿರೋರೇಖಾ ಅವಕ್ರಾ ಪಣಪಂ ವಿನಾ ॥ ೪೮ ॥

---

೪೪. ಯಜುರ್ವೇದವನ್ನು ಚೆನ್ನಾಗಿ ಅಧ್ಯಯನಮಾಡಿರಬೇಕು. ತಾಳೆಗರಿಯಲ್ಲಿ ಬರೆದಿರುವ ದೇವನಾಗರಿ ಲಿಪಿಯುಳ್ಳ ಪುರಾಣದ ಪುಸ್ತಕವನ್ನು ಪೂಜಿಸಬೇಕು.

೪೫. ಓಂಕಾರವನ್ನು ಬರೆಯಬೇಕು. ಮೊದಲು ಬಂಧವನ್ನು ಹಾಕಬೇಕು. ಆ ಬಂಧವು ಮೊದಲು ಕೊನೆಗಳಲ್ಲಿ ಬಗ್ಗಿರಬೇಕು. ಅದರ ಮುಂದೆ ಎರಡು ಪಟ್ಟೆಗಳನ್ನು ಹಾಕಬೇಕು. ಎಂದರೆ ಅದಕ್ಕೆ ಸೇರಿಪಂತೆ ಮುಂದೆ ಎರಡು ಗೀಟುಗಳನ್ನು ಹಾಕಬೇಕು. ಆ ಎರಡು ರೇಖೆಗಳ ಮೇಲೆ ಎರಡಕ್ಕೂ ಸೇರಿದಂತೆ ಒಂದುಗೆರೆ ಹಾಕಬೇಕು.

೪೬. ಒಂದು ರೇಖೆಯನ್ನು ಹಾಕಿದ ಮೇಲೆ ಪಕ್ಕದಲ್ಲಿ ಮಕಾರವನ್ನು ಬರೆಯಬೇಕು. ಆ ಮಕಾರವನ್ನು ತಲೆಯನ್ನು ಮೊದಲು ಮಾಡಿಕೊಂಡು ಕೋಣಾಕಾರವಾಗಿ ಕೆಳಕ್ಕಿಳಿದಿರಬೇಕು.

೪೭. ಪಟ್ಟೆಯ ರೇಖೆಯಿಂದ ಕೂಡಿದ್ದರೆ ಅದು ಆಕಾರವೆಂದು ತಿಳಿಯಬೇಕು. ಅದರ ಎಡದಲ್ಲಿ ಷಟ್ಚಕ್ರಬಿಂದುವಿನಂತೆ ಎರಡು ಬಿಂದುಗಳಿರಬೇಕು. ಅದನ್ನು ಇಕಾರವೆಂದೆನ್ನುತ್ತಾರೆ.

೪೮-೪೯. ಅದರ ಬಲಗಡೆ ಉದ್ದವಾದ ಒಂದು ರೇಖೆಯನ್ನೆಳೆದರೆ ಅದು ಈಕಾರವಾಗುತ್ತದೆ. ಎಲ್ಲಾ ಅಕ್ಷರಗಳಿಗೂ ಸೇರಿಸೇ ಮೇಲುಗಡೆ ಶಿರೋರೇಖೆಯನ್ನು

**ತಸ್ಯಾಂ ತು ಲಂಬರೇಖಾ ಸ್ಯಾತ್ತದಂತೇ ಚ ಲವಿತ್ರವತ್ ।**
**ಉಕಾರಸ್ಸ ಹಿ ವಿಖ್ಯಾತೋ ಲವಿತ್ರದ್ವಯತಸ್ತದಾ ॥ ೪೯ ॥**

**ಏವಮನ್ಯಾನಿ ಸರ್ವಾಣಿ ಹ್ಯಕ್ಷರಾಣ್ಯಾಹ ಭಾರತೀ ।**
**ಲಿಪ್ಯಾನಯೈವ ಲಿಖಿತಂ ಪುರಾಣಂ ತು ಪ್ರಶಸ್ಯತೇ ॥ ೫೦ ॥**

**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಮಾರ್ತಂಡಂ ನಾರದೇರಿತಂ ।**
**ಮಾರ್ಕಂಡೇಯಮಥಾಗ್ನೇಯಂ ಕೌರ್ಮಂ ವಾಮನಮೇವ ಚ ॥ ೫೧ ॥**

**ಗಾರುಡಂ ಲೈಂಗಮಾಖ್ಯಾತಂ ಸ್ಕಾಂದಂ ಮಾತ್ಸ್ಯಂ ನೃಸಿಂಹಕಂ ।**
**ತಥೈವ ಗದಿತಂ ರಾಮ ಪುರಾಣಂ ಕಾಪಿಲಂ ತಥಾ ॥ ೫೨ ॥**

**ವಾರಾಹಂ ಬ್ರಹ್ಮವೈವರ್ತಂ ಶಕುನೇಷು ಪ್ರಶಸ್ಯತೇ ।**
**ಶೈವಂ ಭಾಗವತಂ ದೌರ್ಗಂ ಭವಿಷ್ಯೋತ್ತರಮೇವ ಚ ॥ ೫೩ ॥**

---

ಎಳೆಯಬೇಕು. ಅದು ವಕ್ರವಲ್ಲದ ಸರಳರೇಖೆಯಾಗಿರಬೇಕು. ಪ್ರಣವಕ್ಕೆ ಸೇರಿರಬಾರದು. ಅದರ ಕೊನೆಯಲ್ಲಿ ಒಂದು ಲಂಬರೇಖೆಯನ್ನು ಎಳೆದಿರಬೇಕು ಅದು ಕತ್ತರಿಯಂತಿರಬೇಕು. ಆ ಕತ್ತರಿಯು ಎರಡು ಸೇರಿದರೆ ಅದೇ ಉಕಾರವೆಂದೆನಿಸುತ್ತದೆ

೫೦. ಇದೇ ರೀತಿ ಮಿಕ್ಕ ಅಕ್ಷರಗಳೂ, ಎಂದು ಸರಸ್ವತಿಯು ಹೇಳಿದ್ದಾಳೆ. ಈ ಅಕ್ಷರದಿಂದ ಕೂಡಿದ ಪುರಾಣವೇ ಶ್ರೇಷ್ಠವಾದುದು.

೫೧-೫೨. ಬ್ರಾಹ್ಮ, ಪಾದ್ಮ, ವೈಷ್ಣವ, ಮಾರ್ತಂಡ, ನಾರದ, ಮಾರ್ಕಂಡೇಯ, ಆಗ್ನೇಯ, ಕೌರ್ಮ, ವಾಮನ, ಗಾರುಡ, ಲೈಂಗ, ಸ್ಕಾಂದ, ಮಾತ್ಸ್ಯ, ನೃಸಿಂಹ, ಕಾಪಿಲ, ಎಂಬಿವು ಪುರಾಣಗಳು. ವಾರಾಹವೂ, ಬ್ರಹ್ಮವೈವರ್ತವೂ, ಶಕುನಗಳನ್ನು ಹೇಳುತ್ತವೆ.

೫೩. ಶೈವ, ಭಾಗವತ, ದೌರ್ಗ, ಭವಿಷ್ಯೋತ್ತರ, ಅಥವಾ ಭವಿಷ್ಯ ಎಂಬ ಪುರಾಣಗಳು ಗ್ರಾಹ್ಯಗಳು ಉಳಿದವುಗಳನ್ನು ತ್ಯಜಿಸಬೇಕು

ಭವಿಷ್ಯಂ ಚೋಪಸಂಜ್ಞಾನಿ ತ್ವನ್ಯಾನಿ ಚ ವಿವರ್ಜಯೇತ್ ।
ವಿಮುಚ್ಯ ಪುಸ್ತಕೇ ರಜ್ಜುಂ ಪೀಠೇ ನಿಕ್ಷಿಪ್ಯ ಸಂಸ್ಕೃತಂ ॥ ೫೪ ॥

ಧೌತವಸ್ತ್ರಧರಸ್ಸ್ನಾತ್ವಾ ಶುಚಿರಕ್ರೋಧನೋಽತ್ವರಃ ।
ಆದಾವಾತ್ಮಾನಮಭ್ಯರ್ಚ್ಯ ಕೃತ್ವಾ ಸಂಕಲ್ಪಮೇವ ಚ ॥ ೫೫ ॥

ಅಂಕುಶಂ ಚಾಕ್ಷಸೂತ್ರಂ ಚ ಪಾಶಂ ಪುಸ್ತಕಮೇವ ಚ ।
ಧಾರಯಂತೀಂ ಸಿತಾಂ ಧ್ಯಾಯೇತ್ಪ್ರಸನ್ನಾಸ್ಯಾಂ ಸರಸ್ವತೀಂ ॥ ೫೬ ॥

ಗೋಕ್ಷೀರಸದೃಶಾಕಾರಂ ತ್ರಿಣೇತ್ರಂ ವೃಷವಾಹನಂ ।
ಸಹಾಸವದನಂ ಶಾಂತಂ ಶುಕ್ಲಾಂಬರಧರಂ ಶಿವಂ ॥ ೫೭ ॥

ಹರಿಣಂ ಚಾಽಭಯಂ ಚೋರ್ಧ್ವಬಾಹುಯುಗ್ಮೇ ಕಿರೀಟಿನಂ ।
ವ್ಯಾಖ್ಯಾಮುದ್ರಾ ಚ ದಕ್ಷೇಽಧೋ ವಾಮಹಸ್ತೇ ವರಪ್ರದಂ ॥ ೫೮ ॥

ನಾನಾರತ್ನವಿಭೂಷಾಢ್ಯಂ ಗಿರಿಜಾರ್ಧಾಂಬುಜಾಸನಂ ।
ಬಹುಭಿರ್ಮುನಿಮುಖ್ಯೈಸ್ತು ಧ್ಯಾಯಮಾನಪದಾಂಬುಜಂ ॥ ೫೯ ॥

---

೫೪. ಪುಸ್ತಕದ ದಾರವನ್ನು ಮೊದಲು ಬಿಚ್ಚಿ, ಸಂಸ್ಕೃತದ ಪುಸ್ತಕವನ್ನು ವ್ಯಾಸಪೀಠ ಅಥವಾ ಮಣೆಯ ಮೇಲೆ ಇಡಬೇಕು.

೫೫-೫೬. ಸ್ನಾನಮಾಡಿ ಒಟ್ಟೆಯನ್ನುಟ್ಟು ಶುಚಿಯೂ, ಕ್ರೋಧರಹಿತನೂ, ನಿಧಾನಿಯೂ, ಆಗಿರಬೇಕು. ಮೊದಲು ತನಗೆ ಬಂಧಾದಿಗಳನ್ನು ಮಾಡಿಕೊಳ್ಳಬೇಕು. ಅನಂತರ ಸಂಕಲ್ಪಮಾಡಬೇಕು. ಅಂಕುಶ, ಅಕ್ಷಸೂತ್ರ, ಪಾಶಪುಸ್ತಕಗಳನ್ನು ಧರಿಸಿ ಬೆಳ್ಳಗಿರುವ, ಪ್ರಸನ್ನಳಾದ ಸರಸ್ವತಿಯನ್ನು ಧ್ಯಾನಮಾಡಬೇಕು.

೫೭—೫೯. ಹಸುವಿನ ಹಾಲಿನಂತೆ ಬೆಳ್ಳಗಿರುವ, ಮೂರು ಕಣ್ಣುಳ್ಳ, ಎತ್ತಿನ ಮೇಲೆ ಕುಳಿತಿರುವ, ಶಾಂತನಾಗಿರುವ, ಬಿಳಿಯಬಟ್ಟೆಯನ್ನು ಧರಿಸಿದ, ಮಂಗಳ ಸ್ವರೂಪನಾದ, ಮೇಲಿನೆರಡು ಕೈಗಳಲ್ಲಿ ಒಂದನ್ನು ಅಭಯಹಸ್ತವನ್ನಾಗಿಯೂ, ಮತ್ತೊಂದರಲ್ಲಿ ಜಿಂಕೆಯನ್ನು ಹಿಡಿದೂ ಇರುವ, ಕಿರೀಟವನ್ನು ಧರಿಸಿದ, ಕೆಳಗಿನ ಕೈಗಳಲ್ಲಿ ಒಂದರಲ್ಲಿ (ಬಲದ್ದರಲ್ಲಿ) ವ್ಯಾಖ್ಯಾಮುದ್ರೆಯನ್ನೂ, ಮತ್ತೊಂದರಲ್ಲಿ ವರಮುದ್ರೆಯನ್ನೂ ಧರಿಸಿರುವ, ನಾನಾರತ್ನಗಳ ಆಭರಣವನ್ನು ಧರಿಸಿರುವ, ಪಾರ್ವತಿಯೊಡನೆ ಅರ್ಧಾಸನದಲ್ಲಿ ಕುಳಿತಿರುವ, ಅನೇಕವಾದ ಮುನಿಗಳಿಂದ ಧ್ಯಾನಿಸಲ್ಪಡುತ್ತಿರುವ ಪಾದಗಳುಳ್ಳ, ಈಶ್ವರನನ್ನು ಧ್ಯಾನಿಸಬೇಕು.

**ಮೂರ್ತಿಮದ್ಭಿಸ್ತಥಾ ವೇದೈಃ ಸ್ತೂಯಮಾನಂ ಪುರಾಣಕೈಃ ।**
**ಅನ್ಯೈಸ್ಸಮಸ್ತಲೋಕೈಶ್ಚ ಸಂಸೇವಿತಪದಾಂಬುಜಂ ॥ ೬೦ ॥**

**ಧ್ಯಾತ್ವೈವಂ ಪೂಜಕಸ್ಸಮ್ಯಗಾದೌ ಪೂಜಾಂ ಸಮಾಚರೇತ್ ।**
**ಆಪೋ ವಾ ಇದಮಿತ್ಯೇತತ್ಕಲಶಸ್ಯಾಭಿಮಂತ್ರಣಂ ॥ ೬೧ ॥**

**ತಜ್ಜಲಂ ತು ಗೃಹೀತ್ವಾಥ ಪಾತ್ರಸ್ಥಮಭಿಮಂತ್ರಯೇತ್ ।**
**ತತ್ಸದ್ಬ್ರಹ್ಮೇತಿ ಮಂತ್ರೇಣ ಪ್ರಶಸ್ಯ ಪ್ರಣವೇನ ತು ॥ ೬೨ ॥**

**ಆತ್ಮಾನಂ ಸರ್ವಪಾತ್ರಾಣಿ ತತ ಆವಾಹಯೇದಿತಿ ।**
**ಯದ್ವಾಗಿತಿ ತ್ಯೃಚೇನೈವ ಭಾರತೀಷೋಡಶಾರ್ಚನಂ ॥ ೬೩ ॥**

**ಪುರುಷಸೂಕ್ತೇನ ವಾ ಕುರ್ಯಾದ್ಗಾಯತ್ರ್ಯಾ ವಾ ಸಮರ್ಚಯೇತ್ ।**
**ಓಂ ನಮೋ ಭಗವತೇಽಮುಕಪುರಾಣಾಯೇತಿ ಪುರಾಣಮರ್ಚಯೇತ್ ॥ ೬೪ ॥**

---

೬೦-೬೧. ಮೂರ್ತೀಭವಿಸಿರುವ ವೇದಗಳಿಂದಲೂ, ಪುರಾಣಗಳಿಂದಲೂ, ಸ್ತೋತ್ರಮಾಡಲ್ಪಡುತ್ತಿರುವ, ಇನ್ನೂ ಉಳಿದ ಜನರಿಂದ ಸೇವಿಸಲ್ಪಟ್ಟ ಪಾದಗಳುಳ್ಳ, ಸ್ವಾಮಿಯಾದ ಈಶ್ವರನನ್ನು ಪುರಾಣಜ್ಞನು ಮೊದಲು ಈರೀತಿ ಧ್ಯಾನಮಾಡಿ ಪೂಜಿಸಬೇಕು. ಆ ಪೋವಾ ಇದಗ್ಂ ಸರ್ವಂ ಎಂಬ ಮಂತ್ರದಿಂದ ಕಲಶವನ್ನು ಅಭಿಮಂತ್ರಿಸಬೇಕು.

೬೨. ಆ ನೀರನ್ನು ತೆಗೆದುಕೊಂಡು ಪಾತ್ರೆಯಲ್ಲಿರುವುದನ್ನೆಲ್ಲಾ ಮಂತ್ರಿಸಬೇಕು. ಓಂಕಾರದಿಂದ ಕೂಡಿದ ತತ್ಸತ್‌ಬ್ರಹ್ಮ ಎಂಬ ಮಂತ್ರದಿಂದ ಸ್ತುತಿಸಬೇಕು.

೬೩. ಅನಂತರ ಆ ಪ್ರತಿಮೆಯಲ್ಲಿ ಆತ್ಮನನ್ನು ಎಲ್ಲಾ ಪಾತ್ರಗಳನ್ನೂ ಆವಾಹನೆಮಾಡಬೇಕು. ಆಗ ಯದ್ವಾಗ್ವದಂತಿ ಎಂಬ ಮಂತ್ರವನ್ನು ಹೇಳಬೇಕು. ಅನಂತರ ಸರಸ್ವತಿಗೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು.

೬೪. ಪುರುಷಸೂಕ್ತದಿಂದಾಗಲಿ, ಗಾಯಿತ್ರಿಯಿಂದಾಗಲಿ, ಪೂಜಿಸಬೇಕು. ಆಮೇಲೆ ಓಂ ಇಂತಹ ಮಹಿಮನಾದ ಪುರಾಣಕ್ಕೆ ನಮಸ್ಕಾರವೆಂದು ಪುರಾಣವನ್ನು ಪೂಜಿಸಬೇಕು.

ಕಾಂಡಾದಿತಿ ಹಿ ಮಂತ್ರೇಣ ದೂರ್ವಾಮಾನೀಯ ಪೂಜಯೇತ್ ।
ಓಂ ನಮೋ ಭಗವತ್ಯೈ ದೂರ್ವಾಯೈ ಇತಿ ।
ಸಲೋಕಪಾಲಪೂಜಾ ಸ್ಯಾದಥ ಕನ್ಯಾರ್ಚನಂ ಭವೇತ್ ॥ ೬೫ ॥

ವತ್ಸರಾತ್ಪಂಚಕಾದೂರ್ಧ್ವಂ ದಶವರ್ಷಾದಧಶ್ಶುಭಾ ।
ಅನುತ್ಪನ್ನ ಋತುರ್ವಾಪಿ ತಾಂ ಪ್ರಯತ್ನೇನ ಪೂಜಯೇತ್ ॥ ೬೬ ॥

ಗಂಧಪುಷ್ಪಾಕ್ಷತೈರ್ಧೂಪದೀಪತಾಂಬೂಲಭೂಷಣೈಃ ।
ಪಾಠಯೇದಪ್ಯಮುಂ ಮಂತ್ರಂ ಪೂಜಕಃ ಕನ್ಯಕಾಮಿಮಾಂ ॥ ೬೭ ॥

ಸತ್ಯಂ ಬ್ರೂಹಿ ಪ್ರಿಯಂ ಬ್ರೂಹಿ ಭಗವತಿ ಸರಸ್ವತಿ ನಮಸ್ತೇ ನಮಸ್ತ ಇತಿ ।
ಗಾಯತ್ರೀಯಾನುಕ್ರಮಾರ್ಥಾತ್ತು ದೂರ್ವಾಯುಗ್ಮಂ ತು ಕಾಮಯೇತ್
॥ ೬೮ ॥

ಸನ್ನಿಧೌ ಪುಸ್ತಕಸ್ಯಾಧಃ ಸಹಸ್ರಪರಮೇತ್ಯೃಚಾ ।
ದೂರ್ವಾಯುಗ್ಮತ್ರಯಂ ದದ್ಯಾತ್ತಸ್ಯಾ ಹಸ್ತೇ ವಿಚಕ್ಷಣಃ ॥ ೬೯ ॥

---

೬೫. ಕಾಂಡಾತ್ಕಾಂಡಾತ್ ಎಂಬ ಮಂತ್ರದಿಂದ ದೂರ್ವೆಯನ್ನು ತಂದು ಓಂನಮೋ ಭಗವತ್ಯೈ ದೂರ್ವಾಯೈ ಎಂದು ಗರಿಕೆಯನ್ನು ಪೂಜಿಸಬೇಕು. ಅನಂತರ ಲೋಕಪಾಲಕರನ್ನು ಪೂಜಿಸಬೇಕು. ಆಮೇಲೆ ಕನ್ಯಾಪೂಜೆಮಾಡಬೇಕು.

೬೬. ಐದುವರ್ಷದ ಮೇಲೆ ಹತ್ತುವರ್ಷದೊಳಗೆ ಆ ಕನ್ಯೆಯಿದ್ದರೆ ಅದು ಶುಭವು. ಅಥವಾ ಮೇಲಾದರೆ ಋತುಮತಿಯಾಗದಿರಬೇಕು. ಅಂತಹವಳನ್ನು ಪೂಜಿಸಬೇಕು.

೬೭. ಗಂಧ, ಹೂ, ಅಕ್ಷತೆ, ಧೂಪ, ದೀಪ, ತಾಂಬೂಲ, ಆಭರಣಗಳಿಂದ ಆಕೆಯನ್ನು ಪೂಜಿಸಬೇಕು. ಅನಂತರ ಆಕೆಗೆ ಈ ಮಂತ್ರವನ್ನು ಹೇಳಿಕೊಡಬೇಕು.

೬೮. ಸತ್ಯವನ್ನು ಹೇಳು. ಪ್ರಿಯವನ್ನು ಹೇಳು. ಭಗವತಿಯಾದ ಸರಸ್ವತಿಯೇ ನಿನಗೆ ನಮಸ್ಕಾರ ಎಂಬದಾಗಿ ಹೇಳಿಸಬೇಕು. ಗಾಯಿತ್ರಿಯ ಪಾದದಿಂದ, ಅರ್ಧ ದಿಂದ, ಪೂರ್ತಿಯಿಂದ ದೂರ್ವೆಯ ಯುಗ್ಮವನ್ನು ತೆಗೆದುಕೊಳ್ಳಬೇಕು.

೬೯. ಆ ಗರಿಕೆಯನ್ನು ಪುಸ್ತಕದ ಕೆಳಗಿನಿಂದ ತೆಗೆದುಕೊಳ್ಳಬೇಕು. ಅಥವಾ ಪುಸ್ತಕದ ಹತ್ತಿರವಿದ್ದರೂ, ಆಗಬಹುದು. "ಸಹಸ್ರಪರಮಾದೇವೀ" ಎಂಬುದರಿಂದ ಮೂರುಜೊತೆ ದೂರ್ವಗಳನ್ನು ಆ ಕನ್ಯೆಯ ಕೈಯಲ್ಲಿ ಕೊಡಬೇಕು.

**ಸಾ ಕ್ಷಿಪೇತ್ಪುಸ್ತಕಸ್ಸಂಧೌ ಶಲಾಕಾತ್ರಯಮುಸ್ವನು ।**
**ವಿಸೃಜ್ಯ ತಾಂ ಪುನರ್ದದ್ಯಾಚ್ಛಿವಾಭ್ಯಾಂ ನಮ ಇತ್ಯಥ ॥ ೭೦ ॥**

**ಪತ್ರಯೋರ್ಮಧ್ಯಮಶ್ಲೋಕಃ ಕಾರ್ಯಸಿದ್ಧೇರ್ಹಿ ಸೂಚಕಃ ।**
**ಪೂರ್ವಪತ್ರೇ ಸಮಾಪ್ತಿಸ್ಸ್ಯಾಚ್ಛ್ಲೋಕಸ್ಯ ಯದಿ ರಾಘವ ॥ ೭೧ ॥**

**ಪತ್ರೇಽಪರೇ ಪಠೇಚ್ಛ್ಲೋಕಂ ವಿವಿಚ್ಯಾರ್ಥಮುದೀರಯೇತ್ ।**
**ಶನೈಶ್ಶನೈಃ ಪಠೇತ್ಪ್ರಾಜ್ಞೋ ವ್ಯಾಖ್ಯಾಸ್ಯೇಚ್ಚ ಶನೈಶ್ಶನೈಃ ॥ ೭೨ ॥**

**ತ್ವರೇಹ ನ ಹಿ ಕರ್ತವ್ಯಾ ಕುಪ್ಯತಿ ತ್ವರಯಾ ತು ಗೀಃ ।**
**ಘಟಿಕಾಯಾಸ್ತು ಪಾದಂ ಸ್ಯಾದತ್ವರಾ ಸ್ಯಾತ್ತತೋಽಧಿಕಾ ॥ ೭೩ ॥**

**ತ್ವರಯೇನ್ನ ಚ ವಕ್ತಾರಂ ಜ್ಞಾತವ್ಯಾಂಶಮನು ದ್ವಿಜಂ ।**
**ವಿವಿಚ್ಯ ಪಾಠಂ ಶ್ಲೋಕಸ್ಯ ನಿಶ್ಚಿತಾರ್ಥಂ ಚ ಮಾನಸೇ ॥ ೭೪ ॥**

---

೭೦. ಆ ಕನ್ಯೆಯು ಅದನ್ನು ಕಂಠದ ಜೊತೆಯಲ್ಲಿ ಪುಸ್ತಕದೊಳಗೆ ಚುಚ್ಚ ಬೇಕು. ಅದನ್ನು ಹಾಕಿದ ಮೇಲೆ ಪಾರ್ವತಿಪರಮೇಶ್ವರರಿಗೆ ನಮಸ್ಕಾರವೆಂದು ಹೇಳಿ ವಾಚಕನಿಗೆ ಕೊಡಬೇಕು.

೭೧-೭೨. ಪತ್ರದ ಮಧ್ಯದಲ್ಲಿರುವ ಶ್ಲೋಕವನ್ನು ಓದಬೇಕು. ಅದೇ ಕಾರ್ಯಸಿದ್ಧಿಯ ಲಕ್ಷಣವು. ಆ ಶ್ಲೋಕದ ಶುಭಾಶುಭಗಳೇ ಪ್ರಕೃತ ಶುಭಾಶುಭಗಳು. ಒಂದುವೇಳೆ ಹಿಂದಿನ ಪತ್ರದಲ್ಲಿ ಆ ಶ್ಲೋಕವು ಮುಗಿದಿದ್ದರೆ ಮುಂದಿನ ಪತ್ರದಲ್ಲಿ ಆ ಶ್ಲೋಕವನ್ನು ನೋಡಿ ಅದರ ಅರ್ಥವನ್ನು ಬಿಡಿಸಿ ಹೇಳಬೇಕು. ಶ್ಲೋಕವನ್ನು ನಿದಾನವಾಗಿ ಓದುತ್ತಾ ನಿದಾನವಾಗಿ ಅದನ್ನು ವಿವರಿಸಬೇಕು.

೭೩. ಅವಸರವು ಇಲ್ಲಿ ಯುಕ್ತವಲ್ಲ. ಅವಸರದಿಂದ ಸರಸ್ವತಿಯು ಕೋಪ ಗೊಳ್ಳುತ್ತಾಳೆ. ಘಳಿಗೆಗೆ ಒಂದು ಪಾದವನ್ನು ವಿವರಿಸಿದರೆ ಅದು ಶೀಘ್ರವಲ್ಲ ಹೆಚ್ಚಾದರೆ ತ್ವರೆ (ಶೀಘ್ರವು).

೭೪. ಹೇಳತಕ್ಕವನನ್ನು ಅವಸರಪಡಿಸಬಾರದು. ತಿಳಿಯಬೇಕಾದ ಅಂಶ ವನ್ನು ಬಿಡಿಸಿ ಬಿಡಿಸಿ ಹೇಳಬೇಕು. ಮೊದಲು ತಾನು ಮನಸ್ಸಿನಲ್ಲಿ ನಿಶ್ಚಯಿಸಿ ಕೊಳ್ಳಬೇಕು.

**ಪ್ರತೀಪಂ ತನ್ನ ವಕ್ತವ್ಯಂ ವಿವಿಚ್ಯ ರಘುನಂದನ ।**
**ಯದಿಯುಕ್ತಮಯುಕ್ತಂ ವಾ ಶ್ಲೋಕಮನ್ಯಂ ಪಠೇದಸೌ ॥ ೭೫ ॥**

**ಪುಸ್ತಕಸ್ಥಂ ಚ ಹಿತ್ವೈವ ಪೂಜಕಃ ಸ ದ್ವಿಜೋ ಯದಿ ।**
**ತತ್ರಥೈವ ಹಿ ವಿಜ್ಞೇಯಂ ವಿಸಂವಾದೋ ನ ಶಸ್ಯತೇ ॥ ೭೬ ॥**

**ದೈವಾಗತೋ ಹಿ ಸ ಶ್ಲೋಕೋ ದೈವಂ ಹಿ ಬಲವತ್ತರಂ ।**
**ಉಪಶ್ರುತಿಷು ಯದ್ವಚ್ಚ ನಾಪರಾಧೋ ದ್ವಿಜಸ್ಯ ತು ॥ ೭೭ ॥**

**ವಿಸ್ಮಯೋ ನ ಚ ಕರ್ತವ್ಯೋ ದೈವಸ್ಯ ಕುಟಿಲಾ ಗತಿಃ ।**
**ಯತ್ತತ್ಪದವಿಪರ್ಯಾಸೇ ಪತ್ರೇ ಚೋತ್ಪನ್ನವಾರಿಣಿ ॥ ೭೮ ॥**

**ತಮಾದೇಶಂ ತಿರಸ್ಕೃತ್ಯ ದ್ವಿತೀಯಂ ತು ಪಠೇದತಃ ।**
**ತತಸ್ತೃತೀಯಂ ಪಾಠ್ಯಂ ಸ್ಯಾತ್ತತಃ ಕಾರ್ಯವಿವೇಚನಂ ॥ ೭೯ ॥**

---

೭೫. ವಿರುದ್ಧವಾಗಿರುವುದನ್ನು ಬಿಡಿಸಿ ಬಿಡಿಸಿ ಹೇಳಬಾರದು. ಆ ವಿರುದ್ಧ ವಾಗಿರುವುದು ಯುಕ್ತವಾಗಿರಲಿ ಅಥವಾ ಅಯುಕ್ತವಾಗಿರಲಿ ಅದನ್ನು ಬಿಟ್ಟು ಬೇರೆ ಶ್ಲೋಕವನ್ನು ಓದಬೇಕು.

೭೬. ಆಗ ಆ ಬೇರೆ ಶ್ಲೋಕವೂ ಹಾಗೆಯೇ ಬಂದಿದ್ದರೆ ಆಗ ಆ ಬ್ರಾಹ್ಮಣನು ಆ ವಿಷಯವು ಅಶುಭವೆಂದೇ ತಿಳಿಯಬೇಕು. ವಿರೋಧವಾಗಿ ವರ್ಣಿಸುವುದು ಒಳ್ಳೆಯದಲ್ಲ.

೭೭. ಆ ಶ್ಲೋಕವು ದೇವರ ಕಟಾಕ್ಷದಿಂದ ಬಂದುದು. ದೈವವೇ ಬಲವಾದುದು. ಉಪಶ್ರುತಿಗಳಲ್ಲಿ ತೋರಿಬರುವಂತೆ ಈ ಪುರಾಣದಲ್ಲಿಯೂ ಕೂಡ ಪೂಜಕನಾದ ಬ್ರಾಹ್ಮಣನ ತಪ್ಪಿಲ್ಲ, ಅದರಲ್ಲಿ ಆಶ್ಚರ್ಯಪಡಬೇಕಾದ್ದಿಲ್ಲ. ದೈವೀಗತಿಯೇ ವಕ್ರ ವಾದುದು.

೭೮. ಯತ್ಪದ, ತತ್ಪದಗಳು ವ್ಯತ್ಯಾಸವಾಗಿದ್ದರೂ, ಸಮುದ್ರ ಮುಂತಾದ ನೀರಿನ ವರ್ಣನೆಗಳು ಬಂದರೂ ಎರಡನೇ ಪತ್ರವನ್ನು ಓದಬೇಕು.

೭೯. ಅದೂ ವ್ಯತ್ಯಾಸವಾದರೆ ಮೂರನೆಯದನ್ನು ಓದಬೇಕು. ಅನಂತರ ಕಾರ್ಯವನ್ನು ವಿಮರ್ಶಿಸಬೇಕು.

**ಅವಿಸರ್ಗಾನ್ತಪೂರ್ವಾಸ್ತೇ ಪವರ್ಗೇತರಪಂಚಮಃ ।**
**ಸ್ತುತಿಲಿಙ್ಗವರ್ಜಿತಶ್ಲೋಕಃ ಶಕುನೇಷು ಪ್ರಶಸ್ಯತೇ ॥ ೮೦ ॥**

**ಅಧ್ಯಾಯಾದಿಃ ಸಮಾಪ್ತಿಶ್ಚ ವೃಥಾ ಪತ್ರಂ ವೃಥಾ ಲಿಪಿಃ ।**
**ಉಕ್ತಾನುವಚನಂ ಚೈವ ಹ್ಯುಪಸ್ತುತಸಂಭೈವ ಚ ॥ ೮೧ ॥**

**ದಗ್ಧಪತ್ರಂ ನಷ್ಟಲಿಪಿಃ ಸಂದಿಗ್ಧಾಕ್ಷರಮೇವ ಚ ।**
**ಏತಾನಿ ಶಕುನೇ ನಿತ್ಯಂ ವರ್ಜನೀಯಾನಿ ಪಂಡಿತೈಃ ॥ ೮೨ ॥**

**ಪ್ರಶ್ನೋ ಹಿ ದ್ವಿವಿಧೋ ಜ್ಞೇಯೋ ದೀಪ್ತಶಾನ್ತಪ್ರಭೇದತಃ ।**
**ಶಾನ್ತಂ ಚ ದ್ವಿವಿಧಂ ಜ್ಞೇಯಮುತ್ಪತ್ತಿಸ್ಥಿತಿವೃದ್ಧಿತಃ ॥ ೮೩ ॥**

**ತತ್ರ ಶಾನ್ತಂ ಪ್ರಶಸ್ತಂ ಸ್ಯಾಲ್ಲಕ್ಷಿತಂ ಪೂರ್ವಲಕ್ಷಣೈಃ ।**
**ಕಾರ್ಯಭೇದಾಸ್ತು ವರ್ಣ್ಯಂತೇ ಕೇಚಿನ್ಮರ್ತ್ಯೋಪಯೋಗಿನಃ ॥ ೮೪ ॥**

---

೮೦. ಆ ಶ್ಲೋಕವು ಮೊದಲಲ್ಲಿ ವಿಸರ್ಗವನ್ನು ಹೊಂದಿದ ಅಕ್ಷರವಾಗಿರಬಾರದು. ಪವರ್ಗದ ಪಂಚಮವಾದ ಮಕಾರವಾಗದೇ ಬೇರೆಯದು ಇದ್ದರೆ ಬಾಧಕವಿಲ್ಲ. ಸ್ತುತಿಯದಾಗಿರಬಾರದು. ಅಂತಹ ಶ್ಲೋಕವು ಶಕುನದಲ್ಲಿ ಯುಕ್ತವಾಗಿರುತ್ತದೆ.

೮೧-೮೨. ಅಧ್ಯಾಯದ ಆದಿಯು, ಅಂತೆಯೇ ಅದರ ಸಮಾಪ್ತಿಯು, ಹೇಳಿದ್ದನ್ನೇ ಹೇಳುವುದು, ಬಂದದ್ದೇ ಬರುವುದು, ಹಾಳೆಯು ಸುಟ್ಟಿರುವುದು, ಅಕ್ಷರವು ಕೆಟ್ಟುಹೋಗಿರುವುದು, ಸಂದೇಹವನ್ನುಂಟುಮಾಡುವ ಅಕ್ಷರವು, ಇವು ಶಕುನವಲ್ಲಿ ಬಿಡಲ್ಪಡುವುವುಗಳು.

೮೩. ದೀಪ್ತ, ಶಾಂತವೆಂದು ಪ್ರಶ್ನೆಯು ಎರಡುಬಗೆ. ಶಾಂತವೂ ಕೂಡ ಉತ್ಪತ್ತಿವೃದ್ಧಿ, ಸ್ಥಿತಿವೃದ್ಧಿ, ಎಂದು ಎರಡುಬಗೆಯಾಗಿರುವುದು. ಅವುಗಳಲ್ಲಿ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ಶಾನ್ತವು ಪ್ರಸ್ತವಾದುದು.

೮೪. ಮನುಷ್ಯರಿಗೆ ಉಪಯೋಗವಾಗುವ ಕೆಲವು ಕಾರ್ಯಭೇದಗಳನ್ನು ಹೇಳುತ್ತೇನೆ.

ಕಸ್ಯಚಿತ್ಕಾರ್ಯಮಾದಾಯ ಕಶ್ಚಿತ್ಪೃಷ್ಟಾ ಭವತ್ಯಪಿ ।
ಸ ಕರೋತಿ ತದಾ ಪ್ರಶ್ನಂ ಸಮೇತ್ಯ ಸ್ಮರತೇಽತ್ರ ಕಿಂ ॥ ೮೫ ॥

ಸ ಪುನರ್ಧಾರ್ಯ ಪತ್ರಂ ತತ್ತಸ್ಮಿನ್ಪತ್ರಂ ಪ್ರಶಸ್ಯತೇ ।
ಅಥವಾ ತತ್ಕ್ಷಮೋಪೇತಂ ವೈರಾಗ್ಯಂ ಪರಮೇವ ಚ ॥ ೮೬ ॥

ಯತಃ ಕುತಶ್ಚ ದೃಷ್ಟಶ್ಚ ಸ್ತುತಿಪಾದಕಮೇವ ಚ ।
ಪರಿಹೃತ್ಯ ಪರಂ ಚಾಪಿ ತಸ್ಮಿನ್ನರ್ಥೇ ಶುಭಪ್ರದಃ ॥ ೮೭ ॥

ಮೃತೋ ಗೃಹ್ಣಾತಿ ವಾಗರ್ಥಮಿತಿ ಪ್ರಶ್ನಃ ಶುಭಪ್ರದಃ ।
ವಿವಾದೇ ವಿಜಯಪ್ರಶ್ನೇ ಜಯದ್ಯೋತಕಮಿಷ್ಯತೇ ॥ ೮೮ ॥

ಸೃಷ್ಟಿರಪ್ಯತ್ರ ಶಸ್ತಾ ಸ್ಯಾತ್ಕ್ರೂರಾಯಾಂ ಕ್ಲೇಶತೋ ಜಯಃ ।
ಪ್ರಶಾನ್ತಾಯಾಮುಪಾಯೈಸ್ತು ಮಿಶ್ರಾಯಾಂ ವಿದ್ವರೋ ಭವೇತ್ ॥ ೮೯ ॥

---

೮೫. ಜೊತೆಯಲ್ಲಿ ಎಲ್ಲರೂ ಬಂದು ಒಬ್ಬನ ಕಾರ್ಯವನ್ನು ಕುರಿತು ಮತ್ತೊಬ್ಬನು ಪ್ರಶ್ನಿಸುತ್ತಾನೆ ಆಗೇನು ಮಾಡಬೇಕು?

೮೬. ಮತ್ತೆ ಆ ಪತ್ರವನ್ನು ತೆಗೆದು ಹೇಳಬೇಕು. ಅದೇ ಪತ್ರವು ಯೋಗ್ಯವಾಗಿರುತ್ತದೆ. ಅದಿಲ್ಲದಿದ್ದರೆ ಸಹನೆಯಿಂದ ವೈರಾಗ್ಯವನ್ನು ಸೂಚಿಸಬೇಕು.

೮೭. ಅಲ್ಲದಿದ್ದರೆ ಆಗ ಎಲ್ಲಿಯೋ ಒಂದು ಶ್ಲೋಕವನ್ನು ತೆಗೆದು ಒಂದು ಪಾದವನ್ನು ಓದಬೇಕು. ಮಿಕ್ಕದ್ದನ್ನು ಬಿಡಬೇಕು. ಈ ವಿಷಯದಲ್ಲಿ ಇದೇ ಶುಭಕರವು.

೮೮. ಸತ್ತವನು ಹೇಳಿದುದನ್ನು ತಿಳಿದುಕೊಳ್ಳುತ್ತಾನೆ. ಎಂದರ್ಥ ಬಂದರೆ ಆ ಪ್ರಶ್ನೆಗೆ ಶುಭವನ್ನುಂಟುಮಾಡುತ್ತದೆ. ಜಗಳದಲ್ಲಿ, ಜಯದಲ್ಲಿ ಇದೇ ಜಯವನ್ನು ಸೂಚಿಸುವ ಉತ್ತರ.

೮೯. ಸೃಷ್ಟಿಯ ವಿಷಯ ಬಂದರೂ ಒಳ್ಳೆಯದೇ. ಅದು ಕ್ರೂರವಾಗಿದ್ದರೆ ಕಷ್ಟದಿಂದ ಜಯವಾಗುತ್ತದೆ. ಶಾನ್ತವಾಗಿದ್ದರೆ ಉಪಾಯದಿಂದ ಜಯವು. ಮಿಶ್ರವಾಗಿದ್ದರೆ ಎರಡೂ ಸೇರಿದಂತೆ ತೊಂದರೆಯನ್ನು ಹೇಳಬೇಕು.

**ಪುರಾದಿವರ್ಣನಂ ಯತ್ತು ಮಧ್ಯಮಂ ಯದಿ ಚೋತ್ತಮಂ ।**
**ಕೇಲಿಸಂಭಾವನಾಯಾಸ್ತು ಶೃಂಗಾರಸ್ಯೋಪವರ್ಣನೇ ॥ ೯೦ ॥**

**ರಾಜ್ಯನಿರ್ವಾಹಚಿಂತಾಯಾಂ ರಾಜ್ಯಲಿಂಗಂ ಶುಭಾವಹಂ ।**
**ಯಸ್ಯಾಪಿ ಯಾದೃಶಂ ಯೋಗ್ಯಂ ವಿಚಾರ್ಯಂ ತಾದೃಶಂ ಬುಧೈಃ ॥ ೯೧ ॥**

**ಸ್ತುತಿವೈರಾಗ್ಯಯೋಃ ಕಾರ್ಯವಿಲಯಃ ಪರಿಕೀರ್ತಿತಃ ।**
**ಕಾರ್ಯಾಲ್ಪಸಿದ್ಧಿಃ ಸ್ಖಲಿತೇ ನ ಚ ನಿರ್ವಾಹಮೃಚ್ಛತಿ ॥ ೯೨ ॥**

**ತಸ್ಯಾನ್ಯಾರ್ಥಸ್ಯಾನ್ಯಭಾವೋ ರಾಮ ಶಾಂತವಿಚಾರಣೇ ।**
**ವಿಸರ್ಗಾನ್ತಶ್ಚ ಪೂರ್ವಾರ್ಧವಿಪರ್ಯಾಸೌ ಭವಿಷ್ಯತಃ ॥ ೯೩ ॥**

**ಸಂಕಲ್ಪಿತಾನ್ಯಥಾಭಾವೋ ಹ್ಯಧ್ಯಾಯಸ್ಯ ಸಮಾಪನೇ ।**
**ಕಾಂಡಾದೇಸ್ತು ಸಮಾಪ್ತೌ ತು ಸ್ಯಾತ್ತತ್ಕಾರ್ಯವಿನಾಶನಂ ॥ ೯೪ ॥**

---

೯೦. ಪುರಾದಿಗಳ ವರ್ಣನೆ ಬಂದರೆ ಮಧ್ಯಮವು. ಶೃಗಾರವರ್ಣನೆಯಲ್ಲಿ ಕಲಿಯ ವಿಷಯವಿದ್ದರೆ ಉತ್ತಮವು.

೯೧. ರಾಜ್ಯದ ಚಿಂತೆಯಲ್ಲಿ ರಾಜ್ಯದ ವರ್ಣನಾದಿಗಳು ಬಂದರೆ ಶುಭಕರವು. ಯಾವುದಕ್ಕೆ ಯಾವುದು ಯೋಗ್ಯವೆಂಬುದನ್ನು ವಿದ್ವಾಂಸನು ತಿಳಿದುಕೊಳ್ಳಬೇಕು.

೯೨. ಸ್ತುತಿವೈರಾಗ್ಯಗಳು ಬಂದರೆ ಕಾರ್ಯನಾಶವು. ಆ ಸ್ತುತಿವೈರಾಗ್ಯಗಳಲ್ಲಿ ಸ್ಖಾಲಿತ್ಯವಿದ್ದರೆ ಅಲ್ಪಸಿದ್ಧಿಯಾಗುತ್ತದೆ. ನಿರ್ವಾಹಮಾಡಲಾಗುವುದಿಲ್ಲ.

೯೩. ಶಾನ್ತಪ್ರಶ್ನ ವಿಚಾರಣೆಯಲ್ಲಿ ಆ ಶ್ಲೋಕವು ಅನ್ಯಾರ್ಥನಾಗಲೀ, ಅನ್ಯಭಾವವಾಗಲೀ ಇದ್ದರೆ ಕೆಲಸವು ವ್ಯತ್ಯಾಸವುಳ್ಳದ್ದಾಗಿ ಆಗುತ್ತದೆ. ಪೂರ್ವಾರ್ಧ ಶ್ಲೋಕವು ವಿಸರ್ಗಾಂತವಾಗಿ ನಿಂತರೆ ಕೆಲಸಕ್ಕೆ ವಿರುದ್ಧವೆಂದು ತಿಳಿ.

೯೪. ನಾವು ಮಾಡಿಕೊಂಡಿರುವುದಕ್ಕೆ ಬೇರೆ ರೀತಿಯಾಗಿರಬಹುದು. ಅಧ್ಯಾಯಕಾಂಡಗಳು ಪೂರೈಸುವುದು ಇವು ಕಾರ್ಯನಾಶಕವೆಂದು ತಿಳಿಯುವುದು.

ತಸ್ಮಾದೇತಾದೃಶೇ ದೋಷೇ ಶಕುನಸ್ಯ ವಿಪರ್ಯಯಃ ।
ಕ್ಷುತೇ ಪುಸ್ತಕಪಾತೇ ಚ ತ್ವಾಪತೇ ಮಸ್ತಕಾದಿಷು ॥ ೯೫ ॥

ವಕ್ತಾ ಪ್ಯೈಮಾನನಂ ಯಾತಿ ತತಶ್ಶಕುನನಾಶನಂ ।
ತಸ್ಮಾದೇತಾದೃಶೇ ದೋಷೇ ಶಕುನಂ ಪರಿವರ್ಜಯೇತ್ ॥ ೯೬ ॥

ಉಪಮಾಯಾಂ ಭವೇದ್ರಾಮ ಕಾರ್ಯಾಭಾಸೋ ನವಸ್ತುತಃ ।
ಸಂತಾನಾಂಭೋಸ್ಯತ್ರ ಚೋಕ್ತಾ ಸೃಷ್ಟಿರ್ಮಧ್ಯಫಲಪ್ರದಾ ॥ ೯೭ ॥

ಸ್ತುತಿಃ ಪ್ರಶಸ್ತಾ ಕುತ್ರಾಪಿ ಗುಣವಕ್ತಾಪಿ ನಿರ್ಣಯೇ ।
ವಿವಾಹೇ ಚೌಷಧೇ ದಾನೇ ವ್ಯವಹಾರೇ ಕೃಷೌ ತಥಾ ॥ ೯೮ ॥

ಯಥಾರ್ಥಾ ಚ ಸ್ತುತೀ ರಾಮ ನಿರ್ವಾಹೇಽಪಿ ನ ದೂಷಣಂ ।
ಅಯಥಾರ್ಥಾ ಸ್ತುತಿರ್ಯಾ ಹಿ ತತ್ರ ಕಾರ್ಯಂ ನ ಸಿಧ್ಯತಿ ॥ ೯೯ ॥

ಅಬುದ್ಧಾರ್ಥೇ ತಥಾ ಪದ್ಯೇ ಪುರಾಣಾದಿಹತಾದೃತೇ ।
ಪಲಾಯನೇ ದೇಶಭಾವೇ ವ್ಯಾಧಿಸಂಭವ ಏವ ಚ ॥ ೧೦೦ ॥

---

೯೫-೯೬. ಮೇಲೆ ಹೇಳಿದ ಪುಸ್ತಕಗಳ ವಿಷಯದಲ್ಲಿ ಹೇಳಿದ ದೋಷಗಳಿಗೆ ಶಕುನಗಳನ್ನು ನೋಡಬೇಕು. ಶೀತರೆ, ಪುಸ್ತಕವು ಬಿದ್ದರೆ, ತಲೆ ಮುಂತಾದ ಅಂಗಗಳ ಮೇಲೆ ಹೊಡೆದರೆ, ಹೇಳತಕ್ಕವನಿಗೆ ಅವಮಾನವಾದರೆ ಶಕುನವಾಗಲಿಲ್ಲ ವೆಂದು ತಿಳಿಯಬಾರದು. ಅವು ವ್ಯರ್ಥವಾಗುತ್ತವೆ. ಆದ್ದರಿಂದ ಈ ರೀತಿಯಾದ ದೋಷಗಳಲ್ಲಿ ಶಕುನಗಳನ್ನು ನೋಡಬಾರದು.

೯೭. ಉಪಮೆಯು ಬಂದರೆ ಕಾರ್ಯವಾದಂತೆ ಕಾಣುತ್ತದೆ. ಆದರೆ ಆಗು ವುದಿಲ್ಲ. ನದಿಗಳನ್ನಾಗಲೀ ಸೃಷ್ಟಿಯನ್ನಾಗಲೀ ವರ್ಣಿಸಿದರೆ ಮಧ್ಯಮಫಲವು.

೯೮-೯೯. ಸ್ತೋತ್ರವು ಎಲ್ಲಿ ಬಂದರೂ, ಗುಣವನ್ನು ಹೇಳಿದರೂ, ನಿರ್ಣಯ ಸ್ಥಳ ಬಂದರೂ, ವಿವಾಹ, ಔಷಧ, ದಾನ, ಜಗಳ, ಕೃಷಿಗಳು ಬಂದರೆ ಆ ಸ್ತುತಿಯು ಸತ್ಯವಾಗುತ್ತದೆ. ಕಾರ್ಯನಿರ್ವಾಹ ಸ್ಥಳಬಂದರೂ, ಕಾರ್ಯವಾಗುತ್ತದೆ. ಸುಳ್ಳಾದ ಸ್ತೋತ್ರ ಬಂದರೆ ಅಲ್ಲಿ ಕಾರ್ಯಸಿದ್ಧಿಯನ್ನು ಹೇಳಬಾರದು.

೧೦೦. ಅರ್ಥವು ತಿಳಿಯದಿದ್ದರೆ, ಪುರಾಣಕ್ಕೆ ಅದು ಹಿತವಲ್ಲದ ವಿಷಯ ವಾದರೆ, ಪಲಾಯನಮಾಡುವ ಸ್ಥಳಬಂದರೆ, ದೇಶದ ವಿಷಯಬಂದರೆ, ರೋಗ ಬರು ತ್ತದೆಂದು ಹೇಳಬೇಕು

ಚೌರಾದ್ಯಭಿಭವೇ ತಸ್ಮಿನ್ಶ್ಲೋಕೇ ಕಾರ್ಯವಿನಾಶನಂ ।
ಶಾನ್ತಸ್ಸ್ಯಾದ್ಯದಿ ಚೇತ್ಪ್ರಶ್ನ ಇತಿ ಪ್ರಾಹುಃ ಪುರಾವಿದಃ ॥ ೧೦೧ ॥

॥ ಶ್ರೀರಾಮಚಂದ್ರ ಉವಾಚ ॥

ಅಬುದ್ಧಾರ್ಥಂ ಕಥಂ ಪದ್ಯಂ ಪುರಾಣಜ್ಞೋ ವದಿಷ್ಯತಿ ।
ಅನುಕ್ತೋ ನ ಶ್ರುತಸ್ಸಮ್ಯಕ್ಫಲಂ ಶ್ರೋತ್ರೃಣಾಮಿತಿ ನಿಶ್ಚಯಃ ॥ ೧೦೨ ॥

ತದುದಾಹ್ರಿಯತಾಂ ಮಹ್ಯಮರ್ಥಶ್ಚಾಪಿ ವಿಚಾರ್ಯತಾಂ ।
ಭಾಗಾಬೋಧಕಮಪ್ಯತ್ರ ವಕ್ತುಮರ್ಹಸಿ ಪಂಡಿತ ॥ ೧೦೩ ॥

॥ ಶಂಭುರುವಾಚ ॥

ಮಧೂನಿ ಚ ಮಧೂನ್ಯತ್ರ ಮಧುರ್ಮಧುಭುಜಂ ಮಘಃ ।
ಮಧುನಾಮಧುನಾದರ್ಥವಿಷಾಣಿ ಚ ವಿಷಾಣಿ ಚ ॥ ೧೦೪ ॥

ಅಬುದ್ಧಾರ್ಥಸ್ತ್ವಯಂ ಶ್ಲೋಕಃ ಶಕುನೇ ನ ಹಿ ಶಸ್ಯತೇ ।
ರುತೇ ರುತೇ ರುತೇ ರೋರೌ ರೀರೀರಾರಂ ರರೀರರಂ ॥ ೧೦೫ ॥

---

೧೦೧. ಕಳ್ಳರಿಂದ ತೊಂದರೆಬಂದ ಸ್ಥಳವಾದರೆ ಕಾರ್ಯವು ಬಹುವಾಗಿ ಕೆಡು ತ್ತದೆ. ಶಾನ್ತಪ್ರಶ್ನೆಯಾದರೆ ಇವನ್ನು ಹೇಳಿಂದು ಪೂರ್ವಿಕರು ಹೇಳಿದ್ದಾರೆ.

೧೦೨. ಶ್ರೀರಾಮಚಂದ್ರನು ಕೇಳಿದನು:—ತಿಳಿಯದಿದ್ದರೆ ಆ ಶ್ಲೋಕದ ಅರ್ಥವನ್ನು ಪುರಾಣಿಕನು ಹೇಗೆ ಹೇಳುತ್ತಾನೆ? ಹೇಳದಿದ್ದರೆ ಕೇಳಿದವರಿಗೆ ಫಲ ವಿಲ್ಲವೆಂಬುದು ನಿಶ್ಚಯವು.

೧೦೩. ಅದರ ಉದಾಹರಣೆ ಕೊಟ್ಟು ಅದನ್ನು ವಿಮರ್ಶಿಸು. ಅದರ ಒಂದು ಭಾಗವು ಅರ್ಥವಾಗದಿದ್ದರೆ ಅದನ್ನೂ ಹೇಳಿ ತೋರಿಸು.

೧೦೪-೧೦೫. ಶಂಭುವು ಹೇಳಿದನು:—ಈ ಎರಡು ಪದ್ಯಗಳು ಅರ್ಥವಾಗದಿ ರುವುದರಿಂದ ಇವು ಶಕುನದಲ್ಲಿ ಯೋಗ್ಯವಲ್ಲ. ಇದೇ ಅಬುದ್ಧಾರ್ಥದ ಶ್ಲೋಕಕ್ಕೆ ಉದಾಹರಣೆಯು.

**ಏವಂ ಕರೋತಿ ಶುದ್ಧಾತ್ಮಾ ಬ್ರಾಹ್ಮಣೋ ಬ್ರಹ್ಮಕೋಽತಿಥಿಃ ।**
**ಭಾಗಾಬುದ್ಧಸ್ತ್ವಯಂ ಶ್ಲೋಕಃ ಶಕುನೇ ನ ಪ್ರಶಸ್ಯತೇ ॥ ೧೦೬ ॥**

**ಏವಮಾದೀನಿ ಪದ್ಯಾನಿ ಪುರಾಣೇಷು ರಘೂತ್ತಮ ।**
**ಸಂತಿ ತೇಷಾಂ ನ ಚ ವ್ಯಾಖ್ಯಾ ತತ್ಪಾಠಸ್ತು ಪರಂ ಭವೇತ್ ॥ ೧೦೭ ॥**

**ವಕ್ತುಃ ಶ್ರೋತುರವೈಗುಣ್ಯಂ ವ್ರತೇಷು ನಿಯಮೇಷು ಚ ।**
**ವೇದವಚ್ಚ ಪುರಾಣಾನಿ ನ ಚಿಂತ್ಯಾನಿ ಕಥಂ ತ್ವಿತಿ ॥ ೧೦೮ ॥**

**ತ್ರಿರುಕ್ತಾದಿವಶಾದರ್ಥಧೀರಪ್ಯಸ್ತು ವಿಚಾರತಃ ।**
**ಶ್ಲೋಕಾರ್ಥಂ ಪ್ರಕ್ರಿಯಾಶ್ಚೈವ ವಿಚಾರ್ಯ ಪರಮಾರ್ಥತಃ ॥ ೧೦೯ ॥**

**ಬಲವಾಂಸ್ತತ್ರ ಹಿ ಶ್ಲೋಕಃ ಪ್ರಕ್ರಿಯಾ ತು ತತೋ ಲಘುಃ ।**
**ವೃಥಾಪತ್ರೇ ವೃಥಾಯಾಸೋ ದಗ್ಧಪತ್ರೇ ವಿನಾಶನಂ ॥ ೧೧೦ ॥**

---

೧೦೬. ಶುದ್ಧಾತ್ಮನಾದ ಬ್ರಾಹ್ಮಣನು ಅತಿಥಿಯಾಗಿ ಹೇಳುತ್ತಾನೆ. ಎಂಬುದರ ಭಾಗವು ಅರ್ಥವಾಗದಿರುವುದರಿಂದ ಬಾಗಾಬುದ್ಧವು ಶಕುನದಲ್ಲಿ ಯೋಗ್ಯವಲ್ಲ.

೧೦೭. ಇವೇ ಮುಂತಾದ ಪದ್ಯಗಳು ಪುರಾಣಗಳಲ್ಲಿವೆ. ಅದಕ್ಕೆ ವ್ಯಾಖ್ಯಾನವಿಲ್ಲ. ಪಾಠಮಾತ್ರವಿದೆ. ಅದು ಓದುವುದಕ್ಕೆ ಮಾತ್ರವಿರತಕ್ಕದ್ದು.

೧೦೮. ಹೇಳುವವನಿಗೂ, ಕೇಳುವವನಿಗೂ, ವಿರುದ್ಧ ವ್ರತಾದಿ ನಿಯಮಗಳಲ್ಲಿ ಇರುವುದು. ವೇದಗಳಂತೆ ಪುರಾಣಗಳನ್ನು ಯೋಚಿಸಕೂಡದೆಂಬುದರಲ್ಲಿ ನಿಯಮವು ಹೇಗೆ?

೧೦೯. ಎರಡುಮೂರು ಬಾರಿ ಹೇಳುವುದರಿಂದಲೂ, ವಿಚಾರದಿಂದಲೂ, ಅರ್ಥವು ತಿಳಿಯುತ್ತದೆ. ಆಗ ಶ್ಲೋಕಾರ್ಥವನ್ನೂ ಪ್ರಕ್ರಿಯೆಯನ್ನೂ ಸರಿಯಾಗಿ ಯೋಚಿಸಬೇಕು.

೧೧೦. ಶ್ಲೋಕವೂ ಬಲವಾದುದು. (ಮುಖ್ಯವಾದುದು) ಪ್ರಕ್ರಿಯೆಯು ಅದಕ್ಕಿಂತ ಕಿರಿದು. ಬರಿಯಪತ್ರದಲ್ಲಿ ವ್ಯರ್ಥವಾದ ಆಯಾಸವು. ಸುಟ್ಟಪತ್ರದಲ್ಲಿ ವಿಷಯವೇ ನಾಶವಾಗಿರುತ್ತದೆ.

ಸ್ಯಾದಂತರಿತನಿರ್ವಾಹಪತ್ರೇ ಕಾರ್ಯವಿಸೂತ್ರತಾ ।
ಶೀರ್ಣಪತ್ರೇ ವ್ಯಯಃ ಪ್ರೋಕ್ತಃ ಪ್ರಣಷ್ಟಲಿಪಿಕೇ ತು ವಾ ॥ ೧೧೧ ॥

ವೃಥಾಕ್ಷರೇ ವೃಥಾಯಾಸಃ ಪುನರುಕ್ತೇ ವಿಸಂವಿದೇ ।
ಉಪಮಾನೇ ತು ಕಾರ್ಯಂ ತತ್ಸಿಧ್ಯತಿ ವಾ ನ ಸಿಧ್ಯತಿ ॥ ೧೧೨ ॥

ವಿಲಂಬೇನಾಥವಾ ಸಿದ್ಧಿರಸ್ಪಷ್ಟೇ ಚಾಽಕ್ಷರೇ ಪುನಃ ।
ಕಾರ್ಯಂ ಸಂಶಯಮಾಪ್ನೋತಿ ನಿರ್ದಿಷ್ಟದಿವಸೇಷ್ವಪಿ ॥ ೧೧೩ ॥

ನ ಪ್ರತ್ಯಹಂ ನಿರೀಕ್ಷೇತ ಪುರಾಣಶಕುನಂ ನೃಪ ।
ಭುಕ್ತ್ವೋತ್ತಿಷ್ಠಂಸ್ತಥಾ ನೈವ ನಿರೀಕ್ಷೇತ ಪುರಾಣಕಂ ॥ ೧೧೪ ॥

ಪೂರ್ವಸ್ಯದಿವಸಸ್ಯಾಥ ರಾತ್ರೌ ಪೂಜಾಂ ವಿಧಾಯ ಚ ।
ಪ್ರಾತಃಕಾಲೇ ಪರೇದ್ಯುಶ್ಚ ಶಕುನೇ ರಘುನಂದನ ॥ ೧೧೫ ॥

---

೧೧೧. ಆ ವಿಷಯವು ಮುಗಿಯಲು, ಮುಂದಿನ ಪತ್ರಕ್ಕೆ ಹೋದರೆ ಕೆಲಸವು ಸಾವಕಾಶವಾಗುವುದು. ಹಾಳೆಯು ಜೀರ್ಣವಾಗಿದ್ದರೂ, ನಷ್ಟವಾಗಿದ್ದರೂ ಸಾವಕಾಶವೆಂದೇ ಹೇಳಬೇಕು.

೧೧೨. ವ್ಯರ್ಥವಾದ ಅಕ್ಷರಗಳಲ್ಲಿ ವ್ಯರ್ಥವಾದ ಆಯಾಸವು. ಪುನರುಕ್ತಿ. ವಿಸಂವಾದಗಳಲ್ಲಿಯೂ, ವೃಥಾಯಾಸವು. ಉಪಮಾನದಲ್ಲಿ ಕಾರ್ಯಸಿದ್ಧಿಯಾಗುವುದೂ ಉಂಟು ಇಲ್ಲದಿರುವುದೂ ಉಂಟು.

೧೧೩. ಅಕ್ಷರವು ಸ್ಪಷ್ಟವಾಗಿಲ್ಲದಿದ್ದರೆ ಸಾವಕಾಶದಿಂದ ಕಾರ್ಯಸಿದ್ಧಿಯಾಗುತ್ತದೆ. ಹೇಳಿದ ದಿವಸಗಳಲ್ಲಿ ಕೆಲಸವು ಸಂಶಯವಾಗಿ ಆದರೂ ಆಗಬಹುದು.

೧೧೪. ಪುರಾಣಶಕುನವನ್ನು ಪ್ರತಿದಿನವೂ ನೋಡಬಾರದು. ಊಟಮಾಡಿದ ಒಡನೆಯೇ ಆಗಲಿ, ಮಲಗಿದ್ದು ಎದ್ದೊಡನೆಯೇ ಆಗಲಿ ನೋಡಬಾರದು.

೧೧೫-೧೧೬. ಪೂರ್ವದಿನದ ರಾತ್ರಿಯಲ್ಲಿ ಪುರಾಣಕ್ಕೆ ಪೂಜೆಮಾಡಬೇಕು. ಮಾರನೆಯದಿನ ಬೆಳಗೆ ಶಕುನವನ್ನು ನೋಡಬೇಕು. ಪೂಜೆಯನ್ನು ಆಗಲೇ

ಪಶ್ಚಾನ್ನಿರೀಕ್ಷಣಂ ಕಾರ್ಯಂ ಸದ್ಯಃಕಾಲಮಥಾಪಿ ವಾ ।
ಪ್ರಕ್ರಿಯಾದಿವಿಶೇಷೇಣ ವಿಶೇಷಂ ಶಕುನಂ ವದೇತ್ ॥ ೧೧೬ ॥

ಶುಭಕಾರ್ಯೇಷು ಸರ್ವೇಷು ಪ್ರೇತಶ್ರಾದ್ಧಾದಿವರ್ಜನಂ ।
ದಂಡಪ್ರಣಯನಂ ಶಾಪೋ ದೇಶಾನಾಂ ಚ ವಿಪರ್ಯಯಃ ॥ ೧೧೭ ॥

ರಕ್ಷಸಾಂ ದುಷ್ಟಸತ್ತ್ವಾನಾಂ ಶುದ್ಧಂ ಪ್ರಾಣಿವಿಹಿಂಸನಂ ।
ದದಹನಾದೇವ ನಿರ್ಮಾಣಂ ವಮನಂ ಕರುಣಂ ಹೃದಿ ॥ ೧೧೮ ॥

ಹಾಸೋ ಬೀಭತ್ಸತಾ ದುಃಖದುಃಸ್ವಪ್ನ ಭ್ರಮಪಾತತಾಃ ।
ಪಟಾದಿಪೂರ್ಣನಂ ಪೀಡಾ ಕಲಹೋ ಮರಣಂ ತಥಾ ॥ ೧೧೯ ॥

ಕ್ರೂರಾಣಾಮಾಗಮಶ್ಚಾಪಿ ಮಹತಾಂ ಭಯಮೇವ ಚ ।
ಏವಮಾದ್ಯಾಸ್ತಥಾ ಚಾನ್ಯಾಃ ಪ್ರಕ್ರಿಯಾಸ್ತು ವಿವರ್ಜಯೇತ್ ॥ ೧೨೦ ॥

ಶ್ರಿಯಃ ಪ್ರಾಪ್ತಿವಿಚಾರೇ ತು ರಾಜಸೃಷ್ಟಿಸ್ಸುಖಾವಹಾ ।
ಗ್ರಹಾಣಾಮುದಯೋ ರೋಗಶಾಂತಿರಪ್ಯತ್ರ ಶಸ್ಯತೇ ॥ ೧೨೧ ॥

---

ಮಾಡಿ ನೋಡಲೂಬಹುದು. ಹಿಂದುಮುಂದಿನ ವಿಷಯಗಳನ್ನು ನೋಡಿಕೊಂಡು ಶಕುನದಲ್ಲಿ ವಿಶೇಷವನ್ನು ಹೇಳಬೇಕು.

೧೧೭—೧೨೦. ಶುಭಕಾರ್ಯವನ್ನು ನೋಡುವಾಗ ಪ್ರೇತಕಾರ್ಯ, ಶ್ರಾದ್ಧಗಳನ್ನು ಬಿಡಬೇಕು. ಶಿಕ್ಷೆಮಾಡುವುದು, ಶಾಪಕೊಡುವುದು, ದೇಶದ ವ್ಯತ್ಯಾಸ, ರಾಕ್ಷಸ ಮತ್ತು ದುಷ್ಟಪ್ರಾಣಿಗಳು, ಇತರ ಶುದ್ಧವಾದ ಪ್ರಾಣಿಹಿಂಸೆ, ಸುಡುವುದರಿಂದ ನಿರ್ಮಿಸುವಿಕೆ, ವಾಂತಿ, ಅಳುವುದು, ಹಾಸ್ಯ, ಭಯ, ದುಃಖ, ಸ್ವಪ್ನ, ಭ್ರಮೆ, ಪಾಪ, ಬಟ್ಟೆಗಳಿಂದ ಮುಚ್ಚುವುದು, ಆಟ, ಜಗಳ, ಮರಣ, ಕೆಟ್ಟವರು ಬರುವುದು, ಮಹಾತ್ಮರಿಗೆ ಭಯ, ಇವೇ ಮುಂತಾದುವುಗಳು ಪ್ರಕ್ರಿಯೆಗಳು. ಇವನ್ನು ನೋಡಿ ಸಮಯಕ್ಕೆ ತಕ್ಕಂತೆ ವರ್ಜಿಸಬೇಕು.

೧೨೧. ಸಂಪತ್ತುಲಭಿಸುವ ವಿಚಾರದಲ್ಲಿ ರಾಜರ ಸೃಷ್ಟಿಯು ಒಳ್ಳೆಯದು. ಗ್ರಹಗಳ ಉದಯ ರೋಗ ಶಾಂತಿಗಳೂ ಒಳ್ಳೆಯವು.

ಕಿಮತ್ರ ಬಹುನೋಕ್ತೇನ ತತ್ತದ್ಯೋಗಂ ವಿಚಾರಯೇತ್ ।
ಸರ್ವೇಷು ಚ ಪುರಾಣೇಷು ಸ್ಕಾಂದಮತ್ರ ಪ್ರಶಸ್ಯತೇ ॥ ೧೨೨ ॥

ವೈಷ್ಣವಂ ಕೇಚಿದಿಚ್ಛಂತಿ ರಾಮಾಯಣಮಥಾಪರೇ ।
ಸತ್ಯಾದಿಸರ್ವದೋಷಾಣಾಂ ವೈಷ್ಣವೇ ನೈವ ದೋಷತಾ ॥ ೧೨೩ ॥

ಸ್ಕಾಂದೇ ರಾಮಾಯಣೇ ಚೈವ ದೋಷತ್ವಮಪಿ ಚಾಲ್ಪತಾ ।
ಕಿಂತು ಪೂಜಯಿತುಂ ಶಕ್ಯಂ ವೈಷ್ಣವಂ ನೈವ ಕೇನ ಚಿತ್ ॥ ೧೨೪ ॥

ಸದಾಚಾರವಿಹೀನೇನ ಪೂಜಿತಂ ಯದಿ ಚೇದ್ಭವೇತ್ ।
ತದಾಶುಭಮಿವಾಯಾತಿ ಶಕುನಂ ನೈವ ಸಿದ್ಧ್ಯತಿ ॥ ೧೨೫ ॥

ಸರ್ವಾಚಾರಸಮೋಪೇತೇ ಶಾಖಾಬಂಧೇ ಯಥಾ ವೃಷಃ ॥ ೧೨೬ ॥

॥ ಸೂತ ಉವಾಚ ॥

ಇತ್ಥಂ ಶಂಭುದ್ವಿಜೇನಾಥ ಬೋಧಿತೋ ರಾಘವಸ್ತದಾ ।
ವಿಭೀಷಣಪರೀಕ್ಷಾಯಾಂ ಶಕುನಾಯೋಪಚಕ್ರಮೇ ॥ ೧೨೭ ॥

---

೧೨೨. ಬಹಳದಿಂದೇನು ? ಆದರಲ್ಲಿ ಯೋಗವನ್ನು ವಿಚಾರಿಸಬೇಕು.

೧೨೩. ಪುರಾಣಗಳಲ್ಲೆಲ್ಲಾ ಸ್ಕಾಂದಪುರಾಣವು ಉತ್ತಮವು. ಕೆಲವರು ವಿಷ್ಣುಪುರಾಣವನ್ನೂ, ಕೆಲವರು ರಾಮಾಯಣವನ್ನೂ ಉತ್ತಮವೆಂದು ಹೇಳುತ್ತಾರೆ. ಸತ್ಯವೇ ಮುಂತಾದ ಹಿಂದೆ ಹೇಳಿದ ದೋಷಗಳಿಗೆ ವೈಷ್ಣವಪುರಾಣದಲ್ಲಿ ದೋಷವಿಲ್ಲ.

೧೨೪. ಸ್ಕಾಂದದಲ್ಲೂ ರಾಮಾಯಣದಲ್ಲಿಯೂ ಆ ದೋಷವು ಸ್ವಲ್ಪವು. ಆ ಪುರಾಣವನ್ನು ಪೂಜಿಸಬಹುದು. ವೈಷ್ಣವಪುರಾಣವು ಪೂಜಿಸಲಶಕ್ಯವು.

೧೨೫. ಸದಾಚಾರವಿಲ್ಲದವನು ಪೂಜಿಸಿದರೆ ಅಶುಭವೇ ಬಂದು, ಶಕುನವು ಸಿದ್ಧಿಸುವುದಿಲ್ಲ.

೧೨೬. ಸರ್ವಾಚಾರದಿಂದ ಕೂಡಿದವನಾದರೆ ಮರಕ್ಕೆ ಎತ್ತನ್ನು ಕಟ್ಟಿದಂತೆ ಒಳ್ಳೆಯದೇ ಬರುತ್ತದೆ.

೧೨೭. ಸೂತನು ಹೇಳಿದನು :—ಈರೀತಿ ಶಂಭುವಿನಿಂದ ಉಪದೇಶಿಸಲ್ಪಟ್ಟ ರಾಘವನು ವಿಭೀಷಣನ ವಿಷಯದ ಪರೀಕ್ಷೆಯಲ್ಲಿ ಶಕುನನೋಡಲುದ್ಯುಕ್ತನಾದನು.

ವಸಿಷ್ಠಂ ಸರ್ವತತ್ತ್ವಜ್ಞಂ ಪುರಾಣೇಷು ವಿಶಾರದಂ ।
ಬಭಾಷೇ ರಾಘವೋ ವಾಕ್ಯಂ ಪುರಾಣಂ ವೀಕ್ಷ್ಯತಾಮಿತಿ ॥ ೧೨೮ ॥

ವಸಿಷ್ಠೋಽಪ್ಯಾಹ ರಾಮಂ ತಂ ಮುನೇಶ್ಚಾಮುಷ್ಯ ಸನ್ನಿಧೌ ।
ವಕ್ತುಂ ನಿರೀಕ್ಷಿತುಂ ರಾಮ ನ ಶಕ್ತಿರ್ಮಮ ವಿದ್ಯತೇ ॥ ೧೨೯ ॥

ಶಂಭುಂ ಪ್ರಾಹ ತತೋ ರಾಮೋ ಮುನಿಸಂಪ್ರೇಕ್ಷಿತಾನನಂ ।
ಭವಂತೋಽಪಿ ಹಿ ತತ್ವಜ್ಞಾಃ ಪುರಾಣೇಷು ವಿಶಾರದಾಃ ॥ ೧೩೦ ॥

ತದ್ವದಸ್ತು ಪುರಾಣಸ್ಥಂ ಶಕುನಂ ಮಮ ಕಾರ್ಯತಃ ।
ತಥೇತಿ ಶಂಭುರುಕ್ತ್ವಾ ತು ಶುಚಿರ್ಭೂತ್ವಾಽರ್ಚಕೋಽ ಭವತ್ ॥ ೧೩೧ ॥

ಸ್ಕಾಂದಮಭ್ಯರ್ಚ್ಯ ವಿಧಿವತ್ಪ್ರಶ್ನಂ ಕೃತ್ವೇತಿ ತತ್ತ್ವತಃ ।
ಸ ಕಿಂ ಶೃಂಖಲಯಾ ಬದ್ಧೋ ಮಮ ಭಕ್ತೋ ವಿಭೀಷಣಃ ।
ಅಮೀ ದೃಷ್ಟಾಸ್ತದಾ ಶ್ಲೋಕಾಸ್ತ್ರಯ ಆದೇಶಕಾಸ್ತ್ರಿಧಾ ॥ ೧೩೨ ॥

---

೧೨೮. ಸರ್ವವನ್ನೂ ಬಲ್ಲ ಪುರಾಣವಿಶಾರದನಾದ ವಸಿಷ್ಠನನ್ನು ಪ್ರಶ್ನೆ ನೋಡುವಂತೆ ರಾಘವನು ಹೇಳಿದನು.

೧೨೯. ಆಗ ವಸಿಷ್ಠನು ಈ ಋಷಿಯ ಎದುರಿಗೆ ಹೇಳುವುದಕ್ಕೂ, ನೋಡು ವುದಕ್ಕೂ ತನಗೆ ಶಕ್ತಿಯಿಲ್ಲವೆಂದು ಹೇಳಿದನು.

೧೩೦-೧೩೧. ಆಗ ರಾಮನು ಮುನಿಗಳನ್ನು ನೋಡುತ್ತಾ ಶಂಭುವನ್ನು ನೋಡಿ ನೀವು ತತ್ವವನ್ನು ಬಲ್ಲವರು. ಪುರಾಣದಲ್ಲಿ ಬುದ್ಧಿವಂತರು. ಪುರಾಣ ದಲ್ಲಿರುವ ಶಕುನವನ್ನು ನನ್ನ ಕಾರ್ಯಕ್ಕೆ ನೋಡಿ ಎಂದನು. ಆರೀತಿಯೇ ಆಗಲೆಂದು ಶಂಭುವು ಹೇಳಿ ಶುಚಿಯಾಗಿ ಅರ್ಚಕನಾದನು.

೧೩೨. ಸ್ಕಾಂದವನ್ನು ನಿಯಮದಿಂದ ಪೂಜಿಸಿ, ನನ್ನ ಭಕ್ತನಾದ ವಿಭೀಷಣನು ಸರಪಣಿಯಿಂದ ಕಟ್ಟಲ್ಪಟ್ಟಿದ್ದಾನೆಯೇ ಎಂದು ಪ್ರಶ್ನೆಯನ್ನು ಮಾಡಿಕೊಂಡನು. ಆಗ ಅದರ ಉತ್ತರವಾದ ಈ ಮೂರು ಶ್ಲೋಕಗಳೂ ಬಂದವು.

ಬದ್ಧ್ವಾ ಸಮುದ್ರಂ ಸ ತು ರಾಘವೇಂದ್ರೋ
ರುರೋಧ ಗುಪ್ತಾಂ ಕ್ಷಣದಾಚರೇಂದ್ರಾನ್ ।
ಯೋದ್ಧುಂ ಸಮಾಗತ್ಯ ಸಮಾಯಯುಸ್ತೇ
ಲಂಕಾಪುರಸ್ಥಾಸ್ತ್ವತಿಕಾಯಮುಖ್ಯಾಃ ॥ ೧೩೩ ॥

ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾಸ್ತಥಾ ।
ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌ ಯುಗೇ ॥ ೧೩೪ ॥

ಏವಂ ಸ್ತುತೋ ಮಹೇಶಸ್ತು ದೇವತಾಃ ಪ್ರಾಹ ವೈ ಶಿವಃ ।
ಮೋಚಯಿಷ್ಯೇ ಭವತ್ಪತ್ನೀರ್ಮಲ್ಲಾಸುರನಿರೋಧಿತಾಃ ॥ ೧೩೫ ॥

ಶ್ಲೋಕತ್ರಯಂ ನಿರೀಕ್ಷ್ಯಾಥ ಬಂಧನಿಶ್ಚಯಮುಕ್ತವಾನ್ ।
ಮೋಚನಂ ತ್ವರಯಾ ರಾಮ ಭವಿಷ್ಯತಿ ನ ಸಂಶಯಃ ॥ ೧೩೬ ॥

---

೧೩೩. ಆ ರಾಘವನು ಸಮುದ್ರವನ್ನು ಕಟ್ಟಿದನು. ಅಲ್ಲಿ ರಾಕ್ಷಸರಿಂದ ಕಾಪಾಡಲ್ಪಟ್ಟ ಲಂಕೆಯನ್ನು ಮುತ್ತಿದನು ಅತಿಕಾಯನೇ ಮುಂತಾದವರು ಬಂದು ಯುದ್ಧಕ್ಕೆ ನಿಂತರು.

೧೩೪. ದೇಶಗಳಲ್ಲಿ ಮಹಡಿಯ ಮನೆಗಳು ಇಲ್ಲದೆ ಕಲಿಯುಗದಲ್ಲಿರುತ್ತವೆ. ಬ್ರಾಹ್ಮಣರು ಶಿವನನ್ನು ದ್ವೇಷಿಸುತ್ತಾರೆ. ಹೆಂಗಸರು ತಲೆಗೂದಲನ್ನು ಕಲಿಯುಗದಲ್ಲಿ ದ್ವೇಷಿಸುತ್ತಾರೆ. ಜನಗಳು ಕಲಿಯುಗದಲ್ಲಿ ಭೋಜನ ವಿಕ್ರಯಮಾಡುತ್ತಾರೆ. ಬ್ರಾಹ್ಮಣರು ದುಡ್ಡಿಗೋಸ್ಕರ ಶಿವಪೂಜೆಮಾಡುತ್ತಾರೆ. ಹೆಂಗಸರು ದುಡ್ಡಿಗೆ ಭಗವನ್ನು ವಿಕ್ರಯಿಸುತ್ತಾರೆ.

೧೩೫. ಈರೀತಿ ಮಹೇಶನನ್ನು ಸ್ತುತಿಸಲು ಮಲ್ಲಾಸುರನಿಂದ ಬಂಧಿತರಾದ ನಿಮ್ಮ ಹೆಂಡಿರನ್ನು ಬಿಡಿಸುತ್ತೇನೆಂದು ಶಿವನು ಹೇಳಿದನು.

೧೩೬. ಶಂಭುವು ಈ ಮೂರು ಶ್ಲೋಕಗಳನ್ನೂ ವಿಚಾರಿಸಿ ಎಲೈ ರಾಮನೇ, ಮುಕ್ತಿಯು ಶೀಘ್ರವಾಗಿ ಸಿಕ್ಕುತ್ತದೆ ಸಂಶಯವಿಲ್ಲವೆಂದು ಬಿಡುಗಡೆಯನ್ನು ಹೇಳಿದನು.

ಇತಿ ಶ್ರುತ್ವಾ ಮುನೇರ್ವಾಕ್ಯಂ ರಾಮಸ್ಸಮುನಿವಾನರಃ ।
ಕರ್ತುಂ ವಿನಿರ್ಯಯೌ ಶೀಘ್ರಂ ವಿಭೀಷಣಗವೇಷಣಂ ॥ ೧೩೭ ॥

ಶ್ರೀರಂಗನಾಮನಗರಂ ತ್ವರಯಾ ಪ್ರವಿವೇಶ ಹ ।
ರಾಮಂ ತೇ ಪೂಜಯಾಮಾಸುಃ ಪಾರ್ಥಿವಾಸ್ತತ್ರ ಯೇ ಸ್ಥಿತಾಃ ॥ ೧೩೮ ॥

ಪೂಜಿತಸ್ತಾನುವಾಚಾಥ ಕ್ವ ಸ್ಥಿತೋಽಸೌ ವಿಭೀಷಣಃ ।
ದೇವ ಶ್ರೀರಾಮ ನ ವಯಂ ಜಾನೀಮಸ್ತು ಕಥಾಮಿಮಾಂ ॥ ೧೩೯ ॥

ಪ್ರೇಷಯಾಮಾಸ ಕಾಕುತ್ಸ್ಥೋ ವಾನರಾನ್ಸರ್ವತೋದಿಶಂ ।
ತತೋ ಗತ್ವಾ ಕಪಿವರಾ ದೃಷ್ಟವನ್ತೋ ನ ವೈ ಬತ ॥ ೧೪೦ ॥

ಅಥ ರಾಮೋ ಮುನಿಂ ಪ್ರಾಹ ಶಂಭುಂ ಪಶ್ಚಾದ್ವದಸ್ವ ಮೇ ।
ತಥೇತಿ ರಾಮಸಹಿತೋ ಮುನಿಶ್ಶಂಭುರ್ದ್ವಿಜಾನ್ವಿತಃ ॥ ೧೪೧ ॥

---

೧೩೭. ಮುನಿಯ ಮಾತನ್ನು ರಾಮನು ಕೇಳಿ ಮುನಿಗಳೊಡನೆಯೂ, ವಾನರರೊಡನೆಯೂ, ವಿಭೀಷಣನನ್ನು ಹುಡುಕಲು ಜಾಗ್ರತೆ ಹೊರಟನು.

೧೩೮. ಅಲ್ಲಿದ್ದ ಶ್ರೀರಂಗವೆಂಬ ನಗರಕ್ಕೆ ಜಾಗ್ರತೆಯಾಗಿ ಹೋದನು. ಬಂದ ರಾಮನನ್ನು ನೋಡಿ ಅಲ್ಲಿದ್ದ ರಾಜರು ಅವನನ್ನು ಪೂಜಿಸಿದರು.

೧೩೯. ಅವರಿಂದ ಪೂಜೆಯನ್ನು ಹೊಂದಿದ ಶ್ರೀರಾಮನು ಅವರನ್ನು ಕುರಿತು ವಿಭೀಷಣನು ಎಲ್ಲಿದ್ದಾನೆಂದು ಪ್ರಶ್ನೆಮಾಡಿದನು. ಅದಕ್ಕೆ ಅವರು ಸ್ವಾಮಿ ಶ್ರೀ ರಾಮನೇ, ಆ ಕಥೆಯೇ ನಮಗೆ ತಿಳಿಯದೆಂದರು.

೧೪೦. ಆಗ ಅಲ್ಲಿ ಎಲ್ಲಾ ಕಡೆಗೂ ಕಪಿಗಳನ್ನು ಕಳುಹಿಸಿದನು. ಅವರು ಹುಡುಕಿ ಅಲ್ಲಿ ಎಲ್ಲೂ ಆತನನ್ನು ಕಾಣಲೇ ಇಲ್ಲ.

೧೪೧. ಆಮೇಲೆ ರಾಮನು ಶಂಭುವನ್ನು ಕುರಿತು ಆ ವಿಭೀಷಣನನ್ನು ತೋರಿಸೆಂದನು. ಶಂಭುವು ಆ ಋಷಿಗಳೊಡನೆ ಆಗಲಿ ಎಂದು ಹೇಳಿದನು.

**ದರ್ಶಯೇತಿ ತಥೈವೇತಿ ವಿಪ್ರಘೋಷಂ ಜಗಾಮ ಸಃ ।**
**ಪೃಷ್ಟಾಸ್ತತ್ರ ದ್ವಿಜಾಸ್ತೇಽಪಿ ದರ್ಶಯಾಮಾಸುರರ್ಚಿತಾಃ ॥ ೧೪೨ ॥**

**ಅಂತರ್ಭೂಮಿಗೃಹೇ ಬದ್ಧಂ ರಾಕ್ಷಸಂ ಬಹುಶೃಂಖಲೈಃ ।**
**ಅಥಾಹ ರಾಘವೋ ವಿಪ್ರಾಃ ಕಿಮನೇನ ಕೃತಂ ತ್ವಿತಿ ॥ ೧೪೩ ॥**

**ತೈರುಕ್ತಂ ಬ್ರಹ್ಮಹತ್ಯೇತಿ ವೃದ್ಧಬ್ರಾಹ್ಮಣಸಂಜ್ಞಿತಃ ।**
**ದ್ವಿಜೋಽತಿಧಾರ್ಮಿಕಃ ಕಶ್ಚಿದೇಕಾಂತೇ ಪ್ರವಯಾಃ ಕೃಶಃ ॥ ೧೪೪ ॥**

**ಧ್ಯಾನಾಯೋಪವನೇ ತಸ್ಥೌ ತತ್ರ ಗತ್ವಾ ವಿಭೀಷಣಃ ।**
**ಪಾದೇನಾಧರ್ಷಯದ್ವಿಪ್ರಂ ಸ ವಿಪ್ರೋಽಪ್ಯತಿಜೂರ್ಣಿತಃ ॥ ೧೪೫ ॥**

**ಪದಮೇಕಮತೋ ಗಂತುಂ ನ ಶಶಾಕ ವಿಭೀಷಣಃ ।**
**ಅಸ್ಮಾಭಿಸ್ತಾಡಿತೋ ದುಷ್ಟೋ ನ ಮಮಾರ ವಧೈರಪಿ ॥ ೧೪೬ ॥**

---

೧೪೨. ತೋರಿಸೆನ್ನಲು ಹಾಗೇ ಆಗಲೆಂದು ಶಂಭುವು ಒಂದು ಬ್ರಾಹ್ಮಣರ ಹಳ್ಳಿಗೆ ಹೋದನು. ಅಲ್ಲಿರುವ ಬ್ರಾಹ್ಮಣರನ್ನು ಕೇಳಲು ಅವರು ಅವನನ್ನು ತೋರಿಸಿದರು.

೧೪೩. ಅವರು ಆ ರಾಕ್ಷಸನನ್ನು ಬಹಳ ಸರಪಣಿಗಳಿಂದ ಕಟ್ಟಿ ನೆಲಮಾಳಿಗೆಯಲ್ಲಿ ಹಾಕಿದ್ದೇವೆ ಎಂದರು. ಆಗ ರಾಮನು ಎಲೈ ವಿಪ್ರರಿರಾ ಇವನು ಏನು ಮಾಡಿದನೆಂದನು.

೧೪೪-೧೪೫. ಅವರು ಬ್ರಹ್ಮಹತ್ಯೆಯು ಎಂದರು. ವೃದ್ಧಬ್ರಾಹ್ಮಣನೆಂಬ ಹೆಸರುಳ್ಳ ಅತಿ ಧಾರ್ಮಿಕನಾದ ವಯಸ್ಸುಕಳೆದ ಕೃಶನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ಧ್ಯಾನಕ್ಕೋಸ್ಕರ ಉದ್ಯಾನವನದಲ್ಲಿ ನಿರ್ಜನವಾದ ಒಂದೆಡೆ ಕುಳಿತಿದ್ದನು. ವಿಭೀಷಣನು ಅಲ್ಲಿಗೆ ಹೋಗಿ ಆತನನ್ನು ಕಾಲಿನಿಂದ ಒದೆದನು. ಆಗ ಆ ಬ್ರಾಹ್ಮಣನು ಪುಡಿಪುಡಿಯಾದನು.

೧೪೬. ಆಮೇಲೆ ವಿಭೀಷಣನನ್ನು ಒಂದು ಹೆಜ್ಜೆ ಹೋಗುವುದಕ್ಕೂ ಬಿಡದೆ ನಾವು ಹೊಡೆದು ಸಾಯುವಂತೆ ಮಾಡಿದರೂ ಸಾಯಲೇಯಿಲ್ಲ.

ಅತೋ ರಾಮ ವಧಿತ್ವೈನಂ ಪಾಪಾತ್ಮಾನಂ ವ್ಯಶೀಭವ ।
ರಾಮಸ್ಸಂಶಯಮಾಪನ್ನೋ ವಿಪ್ರಾನಿದಮುವಾಚ ಹ ॥ ೧೪೭ ॥

॥ ಶ್ರೀರಾಮ ಉವಾಚ ॥

ವರಂ ಮಮೈವ ಮರಣಂ ಮದ್ಭಕ್ತೋ ಹನ್ಯತೇ ಕಥಂ ।
ರಾಜ್ಯಮಾಯುರ್ಮಯಾ ದತ್ತಂ ತಥೈವ ಸ ಭವಿಷ್ಯತಿ ॥ ೧೪೮ ॥

ಭೃತ್ಯಾಪರಾಧೇ ಸರ್ವತ್ರ ಸ್ವಾಮಿನೋ ದಂಡ ಇಷ್ಯತೇ ।
ರಾಮವಾಕ್ಯಂ ದ್ವಿಜಾಶ್ಶ್ರುತ್ವಾ ವಿಸ್ಮಯಾದಿದಮಬ್ರುವನ್ ॥ ೧೪೯ ॥

॥ ದ್ವಿಜಾ ಊಚುಃ ॥

ನ ಪಟ್ಟಬದ್ಧಮರಣಂ ಭೋ ರಾಮ ಮುನಿಸಂಮತಂ ।
ವಸಿಷ್ಠಾದಿಮುನೀಂದ್ರೈಸ್ತ್ವೈರ್ವಿಚಾರಂ ಕುರು ಯದ್ಧಿತಂ ॥ ೧೫೦ ॥

---

೧೪೭. ಆದ್ದರಿಂದ ಎಲೈ ರಾಮನೇ, ನೀನು ಈ ಪಾಪಿಯನ್ನು ಕೊಂದು ಪುಣ್ಯವನ್ನು ಕಟ್ಟಿಕೋ ಎಂದರು. ಆಗ ರಾಮನು ಸಂಶಯಗೊಂಡು ಅವರನ್ನು ಕುರಿತು ಇಂತೆಂದನು.

೧೪೮. ಶ್ರೀರಾಮನು ಹೇಳಿದನು:—ನನ್ನ ಭಕ್ತನನ್ನು ನಾನು ಕೊಲ್ಲುವುದಕ್ಕಿಂತ ನಾನು ಸಾಯುವುದೇ ಮೇಲು. ರಾಜ್ಯವನ್ನೂ ಆಯುಸ್ಸನ್ನೂ ಅವನಿಗೆ ನಾನು ಕೊಟ್ಟಿದ್ದೇನೆ. ಅದು ಹಾಗೆಯೇ ಇರಬೇಕು.

೧೪೯. ಆಳಿನ ಅಪರಾಧಕ್ಕೆ ಎಲ್ಲಾ ಸ್ಥಳದಲ್ಲೂ ಸ್ವಾಮಿಗೆ ದಂಡವನ್ನು ಹಾಕುತ್ತಾರೆ. ಅದು ಯುಕ್ತವಾಗಿದೆ. ರಾಮನ ಮಾತನ್ನು ಆ ಬ್ರಾಹ್ಮಣರು ಕೇಳಿ ಆಶ್ಚರ್ಯದಿಂದ ಇಂತೆಂದರು.

೧೫೦. ಬ್ರಾಹ್ಮಣರು ಹೇಳಿದರು:—ಎಲೈ ರಾಮನೇ ರಾಜ್ಯಾಭಿಷಿಕ್ತನಾದವನನ್ನು ಕೊಲ್ಲುವುದು ಋಷಿ ಸಂಮತವಲ್ಲ. ವಸಿಷ್ಠಾದಿಮುನಿಗಳೊಡನೆ ಯಾವುದು ಹಿತವೋ ಅದನ್ನು ವಿಚಾರಿಸಿ ಮಾಡು.

ರಾಮಪೃಷ್ಟಾ ಮುನಿವರಾಃ ಪ್ರಾಯಶ್ಚಿತ್ತಮುಖೋಚಿರೇ ।
ಅಜ್ಞಾನಬ್ರಹ್ಮಹತ್ಯಾ ತು ಪ್ರಾಯಶ್ಚಿತ್ತೈರಪೋಹ್ಯತೇ ॥ ೧೫೧ ॥

ಇಯಮಜ್ಞಾನತೋ ಹತ್ಯಾ ಪ್ರಾಯಶ್ಚಿತ್ತಮಪೇಕ್ಷತೇ ।
ಗವಾಂ ಚ ತ್ರಿಶತಂ ಷಷ್ಟಿಂ ದದಾತು ಸ ವಿಭೀಷಣಃ ॥ ೧೫೨ ॥

ಬಂಧಕಾಶ್ಚಾಪಿ ತೇ ವಿಪ್ರಾಸ್ತಥೇತ್ಯೂಚುಃ ಪರಸ್ಪರಂ ।
ಮೋಚಯಿಷ್ಯಾಮ ತದ್ರಕ್ಷಃ ಪ್ರಾಯಶ್ಚಿತ್ತಂ ಕರೋತು ಸಃ ॥ ೧೫೩ ॥

ವಿಮುಚ್ಯ ರಾಕ್ಷಸಂ ವಿಪ್ರಾ ರಾಘವಾಯ ನ್ಯವೇದಯನ್ ।
ರಾಮೋऽಪಿ ನಾಭಿಭಾಷೇತ್ತಂ ಪ್ರಾಸಂಗಿಕಮಭಾಷತ ॥ ೧೫೪ ॥

ಸ್ನಾತ್ವಾ ಪೃಷ್ಟ್ವಾ ಮುನೀನ್ಕ್ರುದ್ಧಾನ್ಪ್ರಾಯಶ್ಚಿತ್ತಮತಃ ಪರಂ ।
ದ್ವಿಜಾನುಮತಿತಃ ಪಾಪೀ ಮಾಮುಪೈಷ್ಯತು ರಾಕ್ಷಸಃ ॥ ೧೫೫ ॥

---

೧೫೧. ರಾಮನು ಕೇಳಲು, ಋಷಿಗಳು ಅಜ್ಞಾನದಿಂದ ಮಾಡಿದ ಬ್ರಹ್ಮ ಹತ್ಯೆಯು ಪ್ರಾಯಶ್ಚಿತ್ತದಿಂದ ಹೋಗುತ್ತದೆ ಎಂದು ಹೇಳಿದರು.

೧೫೨. ಇದು ಅಜ್ಞಾನದಿಂದ ಮಾಡಿದ ಬ್ರಹ್ಮಹತ್ಯೆಯು, ಪ್ರಾಯಶ್ಚಿತ್ತದಿಂದ ಹೋಗುತ್ತದೆ. ಮುನ್ನೂರ ಅರವತ್ತು ಗೋದಾನವನ್ನು ಆ ವಿಭೀಷಣನು ಮಾಡಿದರ ಹೋಗುತ್ತದೆ.

೧೫೩. ಅವನನ್ನು ಬಂಧಿಸಿದ್ದ ಆ ಬ್ರಾಹ್ಮಣರು ಆತನಿಗೆ ಹಾಗೇ ಆಗಬಹು ದೆಂದರು. ರಾಕ್ಷಸನನ್ನು ಬಿಡಿಸುತ್ತೇನೆ. ಅವನು ಪ್ರಾಯಶ್ಚಿತ್ತವನ್ನೂ ಮಾಡಿ ಕೊಳ್ಳಲಿ ಎಂದನು.

೧೫೪. ಆ ಬ್ರಾಹ್ಮಣರು ರಾಕ್ಷಸನನ್ನು ಬಿಡಿಸಿ ರಾಮನಿಗೆ ಒಪ್ಪಿಸಿದರು. ರಾಮನು ಅವನನ್ನು ಮಾತನಾಡಿಸಲಿಲ್ಲ. ಪ್ರಕೃತವಾದ ವಿಷಯವನ್ನೇ ಮಾತ ನಾಡಿದನು.

೧೫೫. ಸ್ನಾನಮಾಡಿ ಕೋಪಗೊಂಡಿರುವ ಮುನಿಗಳನ್ನು ಕೇಳಿ ಬ್ರಾಹ್ಮಣರ ಅಪ್ಪಣೆಯಿಂದ ಪ್ರಾಯಶ್ಚಿತ್ತಮಾಡಿಕೊಂಡು ಪಾಪಿಯಾದ ಆ ರಾಕ್ಷಸನು ನನ್ನ ಬಳಿಗೆ ಬರಲೆಂದನು

ಶ್ರುತ್ವೇತಿ ರಾಘವವಚೋ ರಾಕ್ಷಸಃ ಪಾಪಸಂಯುತಃ ।
ಪ್ರಾಯಶ್ಚಿತ್ತಮೃಷಿಪ್ರೋಕ್ತಂ ಕೃತ್ವಾ ರಾಮಮುಪಾಭ್ಯಗಾತ್ ॥ ೧೫೬ ॥

ಪ್ರಾಯಶ್ಚಿತ್ತವಿಶುದ್ಧಾತ್ಮಾ ನನಾಮ ರಘುನಂದನಂ ।
ರಾಮಸ್ತಂ ಪ್ರಹಸನ್ವಾಕ್ಯಮಿದಮಾಹ ಸಭಾಂತರೇ ॥ ೧೫೭ ॥

॥ ಶ್ರೀರಾಮ ಉವಾಚ ॥

ಅದ್ಯಪ್ರಭೃತಿ ಪೌಲಸ್ತ್ಯ ವಿಮೃಶ್ಯ ಕುರು ಯದ್ಧಿತಂ ।
ಅಸ್ಮಾಕಂ ತ್ವತ್ಕೃತೇ ರಕ್ಷಃ ಪ್ರಯಾಸೋಽಯಮಭೂದ್ಯತಃ ॥ ೧೫೮ ॥

ಕೃಪಾಳುರ್ಭವ ಸರ್ವತ್ರ ಭೃತ್ಯೋ ಮಮ ಯತೋ ಭವಾನ್ ।
ಅಥ ತೇ ಮುನಯಸ್ಸರ್ವೇ ನಿಶ್ಚಿತಾರ್ಥೇ ರಘೂತ್ತಮೇ ॥ ೧೫೯ ॥

ಊಚುರಸ್ಮಾಕಮಜ್ಞಾನಂ ಕಥಂ ಶೀಘ್ರಮುಪಾಗತಂ ।

॥ ಶ್ರೀ ಶಂಭುರುವಾಚ ॥

ವಿಪ್ರಾವಜ್ಞಾನತೋ ವಿಪ್ರಾ ಅಜ್ಞಾನಂ ನೂನಮೇಷ್ಯತಿ ॥ ೧೬೦ ॥

---

೧೫೬. ರಾಮನ ಮಾತನ್ನು ಆ ರಾಕ್ಷಸನು ಕೇಳಿ, ಋಷಿಗಳು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ರಾಮನ ಬಳಿಗೆ ಬಂದನು.

೧೫೭. ಪ್ರಾಯಶ್ಚಿತ್ತದಿಂದ ಶುದ್ಧನಾಗಿ ವಿಭೀಷಣನು ರಾಮನ ಬಳಿಗೆ ಬರಲು, ರಾಮನು ನಗುತ್ತಾ ಸಭೆಯ ಮಧ್ಯದಲ್ಲಿ ಇಂತೆಂದನು.

೧೫೮. ಶ್ರೀರಾಮನು ಹೇಳಿದನು:—ಎಲೈ ಪುಲಸ್ತ್ಯನ ಮಗನಾದ ವಿಭೀಷಣನೇ, ಹಿತವಾದುದನ್ನು ಯೋಚಿಸಿ ಮಾಡು. ನನಗೆ ನಿನಗೋಸ್ಕರ ಈ ಪ್ರಯಾಸ ವುಂಟಾಯಿತು.

೧೫೯. ಎಲೈ ವಿಭಿಷಣನೇ, ನೀನು ನನಗೆ ಆಳಾದುದರಿಂದ ಎಲ್ಲರಲ್ಲಿಯೂ ಕೃಪಾಳುವಾಗಿರು ಎಂದನು. ಅನಂತರ ಆ ಋಷಿಗಳೆಲ್ಲರೂ ಆ ರಘೂತ್ತಮನು ಇಂತು ನಿಶ್ಚಯಿಕಕಾರ್ಯವುಳ್ಳವನಾಗಲು ನಮಗೆ ಅಜ್ಞಾನವು ಹೇಗೆ ಬಂದಿತೆಂದು ಕೇಳಿದರು

೧೬೦. ಶಂಭುವು ಹೇಳಿದನು:—ಎಲೈ ವಿಪ್ರರಿರಾ, ಬ್ರಾಹ್ಮಣರನ್ನು ಅವಮಾನಮಾಡಿದರೆ ಅಜ್ಞಾನವು ಮನುಷ್ಯರಿಗೆ ಬರುತ್ತದೆ.

॥ ಋಷಯ ಊಚುಃ ॥

ತ್ರೇತಾಯುಗೇಽಭಿರಾಮೋಽಸೌ ಪುರಾಣಾನಿ ಚ ಕೃತ್ಸ್ನಶಃ ।
ದ್ವಾಪರಾಂತೇ ಭಾರತಂ ಚ ಕಥಮೇತದ್ಧಿ ಯುಜ್ಯತೇ ॥ ೧೬೧ ॥

॥ ಸೂತ ಉವಾಚ ॥

ಪುರಾಣಾನಿ ತಥಾಪ್ಯೇವಂ ಸಂತಿ ತನ್ನಾಮಕಾನಿ ತು ।
ವ್ಯಾಸೇರಿತಾನಿ ತ್ವದ್ಯೈವ ಪುರಾಣಾನಿ ಚ ನಾನ್ಯಥಾ ॥ ೧೬೨ ॥

ಅದ್ಯಾಪಿ ಚ ವಿಧಾನಂ ತತ್ಪುರಾಣಶ್ರವಣೇ ಫಲಂ ।
ಮಹಾಭಾರತಮಪ್ಯತ್ರ ಶಕುನಾಯ ವಿಶಿಷ್ಯತೇ ॥ ೧೬೩ ॥

ಆದಿಪರ್ವೈಕಮಭ್ಯರ್ಚ್ಯ ನಿರೀಕ್ಷೇತ ವಿನಿಶ್ಚಯಂ ।
ಅಥವಾ ಸರ್ವಪರ್ವಾಣಿ ಪ್ರಶಸ್ತಾನ್ಯರ್ಥನಿರ್ಣಯೇ ॥ ೧೬೪ ॥

ಶ್ಲೋಕಾದಿಲಕ್ಷಣಂ ಸರ್ವಂ ಪೂರ್ವೋಕ್ತಂ ತದಿಹಾಪಿ ತು ।
ಶ್ಲೋಕಾನಾಮನ್ವಯಾದೇಕಸ್ತಾತ್ಪರ್ಯಾದಥ ವಾ ಪರಃ ॥ ೧೬೫ ॥

---

೧೬೧. ಋಷಿಗಳು ಹೇಳಿದರು:—ತ್ರೇತಾಯುಗದಲ್ಲಿ ಈ ಸ್ಕಾಂದಪುರಾಣವು ರಮ್ಯವು. ಬೇಕಾದಷ್ಟು ಪುರಾಣಗಳಿದ್ದರೂ ಅದಕ್ಕೆ ಪ್ರಾಶಸ್ತ್ಯವು. ದ್ವಾಪರಯುಗದ ಕೊನೆಯಲ್ಲಿ ಭಾರತಕ್ಕೆ ಪ್ರಾಶಸ್ತ್ಯವು. ಇದು ಹೇಗೆ ಸರಿಬರುತ್ತದೆ?

೧೬೨. ಸೂತನು ಹೇಳಿದನು :—ಪುರಾಣಗಳು ಒಂದೇ ಹೆಸರಿನವು. ಎಲ್ಲಾ ಕಾಲದಲ್ಲೂ ಇವೆ. ಆದರೆ ವ್ಯಾಸನು ಹೇಳಿದ ಪುರಾಣಗಳು ಈಗಲೇ ಹೊರತು ಬೇರೆಯಿಲ್ಲ.

೧೬೩. ಈಗಲೂ ಕೂಡ ಪುರಾಣಶ್ರವಣದಲ್ಲಿ ಅದೇ ವಿಧಾನವು. ಅದೇ ಫಲವೂ ಇದೆ. ಮಹಾಭಾರತವು ಶಕುನದಲ್ಲಿ ಎತ್ತಲ್ಪಟ್ಟಿದು.

೧೬೪. ಆದಿಪರ್ವ ಒಂದನ್ನೇ ನೋಡಿ ಪ್ರಶ್ನೆಯನ್ನು ನಿರೀಕ್ಷಿಸಬಹುದು. ಅದಿಲ್ಲದಿದ್ದರೆ ಎಲ್ಲಾ ಪರ್ವಗಳನ್ನೂ ನೋಡುವುದರಲ್ಲಿ ಪ್ರಶಸ್ತಗಳು.

೧೬೫. ಶ್ಲೋಕ ಮೊದಲಾದುವುಗಳ ಲಕ್ಷಣಗಳು ಇಲ್ಲಿಯೂ ಹಿಂದೆ ಹೇಳಿದಂತೇನೇ. ಶ್ಲೋಕದ ಅನ್ವಯದಿಂದ ಒಂದರ್ಥ, ಆ ತಾತ್ಪರ್ಯದಿಂದ ಮತ್ತೊಂದರ್ಥ.

ಅರ್ಥಸ್ಸಂಪ್ರತಿಪದ್ಯೇತ ತಾತ್ಪರ್ಯಂ ತತ್ರ ಗೃಹ್ಯತೇ ।
ಅರ್ಥಾದೇವ ಹಿ ಸರ್ವತ್ರ ವಸ್ತ್ವಾದೇಸ್ತು ನಿರೂಪಣಂ ॥ ೧೬೬ ॥

ಯತ್ರಾರ್ಥೋ ದೃಶ್ಯತೇ ತತ್ರ ಸ ಧಾತುಸ್ಸಮುದಾಹೃತಃ ।
ಅತ್ರಾರ್ಥಾದೇವ ಶಬ್ದಾನಾಂ ನ ಮಿಥ್ಯೈವ ನಿರೂಪಣಂ ।
ತಸ್ಮಾತ್ಸರ್ವತ್ರ ತಾತ್ಪರ್ಯಂ ಗ್ರಹೀತವ್ಯಂ ಮನೀಷಿಭಿಃ ॥ ೧೬೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವ
ಸಂವಾದೇ ಶತತಮೋಽಧ್ಯಾಯಃ



---

೧೬೬. ಅರ್ಥವು ಸರಿಹೋಗುವ ಜಾಗದಲ್ಲಿ ತಾತ್ಪರ್ಯಗಳನ್ನು ಗ್ರಹಿಸಬೇಕು. ಎಲ್ಲಾ ಕಡೆಯಲ್ಲೂ ಅರ್ಥದಿಂದಲೇ ವಸ್ತುವನ್ನು ಗ್ರಹಿಸುತ್ತೇವೆ.

೧೬೭. ಎಲ್ಲಿ ಅರ್ಥವು ತಿಳಿಯುತ್ತದೋ ಅದೇ ಧಾತುವೆಂದು ಹೇಳಬೇಕು. ಇಲ್ಲಿ ಶಬ್ದಗಳ ಅರ್ಥದಿಂದಲೇ ಹೇಳುವಿಕೆಯು ಸುಳ್ಳಾಗಲಾರದು. ಆದುದರಿಂದ ಬುದ್ಧಿವಂತರುಗಳು ಎಲ್ಲಾ ಕಡೆಯಲ್ಲಿಯೂ ತಾತ್ಪರ್ಯವನ್ನೇ ಗ್ರಹಿಸಬೇಕು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ನೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕಾಧಿಕಶತತಮೋಽಧ್ಯಾಯಃ

---

॥ ಮುನಯ ಊಚುಃ ॥

ಅತಃಪರಂ ಮಹಾಭಾಗ ಕಿಂ ಚಕಾರ ಸ ರಾಘವಃ ।
ಮುನಯಸ್ತೇ ಮಹಾತ್ಮಾನಃ ಕಿಮಕುರ್ವಂಸ್ತತಃ ಪರಂ ॥ ೧ ॥

॥ ಸೂತ ಉವಾಚ ॥

ರಾಮಚಂದ್ರೇ ಸುಖಾಸೀನೇ ವಿಭೀಷಣಕಪೀಶ್ವರೇ ।
ಶಂಭುಮೂಚುರ್ಮುನಿವರಾಃ ಕಥಾಂ ಪುಣ್ಯಾಂ ವದಸ್ವ ನಃ ॥ ೨ ॥

ತೇಷಾಮಾಕರ್ಣ್ಯ ತದ್ವಾಕ್ಯಂ ಪಾರ್ವತೀಮಾಹ ಶಂಕರಃ ।
ಇದಂ ಕಸ್ಯಾಪಿ ವಿಪ್ರಸ್ಯ ಗೃಹಂ ಪರಮಶೋಭನಂ ॥ ೩ ॥

---

## ನೂರೊಂದನೆಯ ಅಧ್ಯಾಯವು

೧. ಋಷಿಗಳು ಕೇಳಿದರು :—ಎಲೈ ಸೂತನೇ, ಆಮೇಲೆ ಶ್ರೀರಾಮನು ಏನು ಮಾಡಿದನು? ಅಲ್ಲಿಗೆ ಬಂದಿದ್ದ ಋಷಿಗಳೂ ಕೂಡ ಏನುಮಾಡಿದರು?

೨. ಸೂತನು ಹೇಳಿದನು :—ಶ್ರೀರಾಮನೂ, ವಿಭೀಷಣ ಸುಗ್ರೀವರೂ ಸುಖವಾಗಿ ಆಸನದಲ್ಲಿ ಕುಳಿತಿರಲು, ಋಷಿಗಳು ಶಂಭುವನ್ನು ಕುರಿತು ಪುಣ್ಯಪ್ರದವಾದ ಕಥೆಗಳನ್ನು ಹೇಳು ಎಂದರು.

೩. ಅದನ್ನು ಕೇಳಿ ಶಂಕರನು ಪಾರ್ವತಿಯನ್ನು ಕುರಿತಿಂತೆಂದನು. ಎಲೈ ಪಾರ್ವತಿಯೇ, ಇದು ಯಾವನೋ ಒಬ್ಬ ಬ್ರಾಹ್ಮಣನ ಮನೆಯು, ಚೆನ್ನಾಗಿದೆ.

ರಮ್ಯೋಪವನವಾಪೀಭಿರ್ವೀರುದ್ಭಿರುಪಶೋಭಿತಂ ।
ಕೂಜನ್ಮಧುಕರಶ್ರೇಣ್ಯಾ ಹ್ಯಾಹೂತಕುಸುಮಾಯುಧಂ ॥ ೪ ॥

ಮಧ್ಯಾಹ್ನ ಸಂಧ್ಯಾಮಾರೋಢುಮಿವ ಸೂರ್ಯಃ ಪ್ರವರ್ತತೇ ।
ಗಚ್ಛ ವಾಪೀಜಲಸ್ನಾತೌ ಪರಿಧಾಯ ಸುವಾಸಸೀ ॥ ೫ ॥

ಮೃಗನಾಭಿಸಮುದ್ಘೃಷ್ಟಘನಸಾರಸುಚಂದನಂ ।
ಆಲಿಪ್ಯ ಸಲ್ಲಕೀದಾಮಗೂಢಧಮ್ಮಿಲ್ಲಸಂಯುತೌ ॥ ೬ ॥

ಅನಲ್ಪಘನಸಾರಂ ತು ತಾಂಬೂಲಂ ಪ್ರತಿಖಾದಿತಂ ।
ಆಸ್ವಾದ್ಯ ಮಾದ್ಯನ್ಮುದಿತೌ ಯತ್ರ ಧಾರಾಗೃಹೇ ಶುಭೇ ॥ ೭ ॥

ಮಯೂರನಾದಬಹುಳೇ ಬರ್ಹಿರ್ಮಧುರಗೀತಕೈಃ ।
ಶಯ್ಯಾಯಾಮಾಸ್ತೃತಾಯಾಂ ಚ ಪರಸ್ಪರಸುಖಸ್ಥಿತೌ ॥ ೮ ॥

---

೪. ರಮ್ಯವಾಗಿರುವ ಉಪವನಗಳಿಂದ ಕೂಡಿದೆ. ಹೂವಿನ ರಸವನ್ನು ಕುಡಿಯುವ ದುಂಬಿಗಳು ಮನ್ಮಥನನ್ನು ಕೂಗುವಂತಿವೆ.

೫. ಸೂರ್ಯನು ಮಧ್ಯಾಹ್ನದ ಸಮಯಕ್ಕೆ ಬಂದಿದ್ದಾನೆ. ನಡಿ, ಬಾವಿಯ ನೀರಿನಲ್ಲಿ ಸ್ನಾನಮಾಡಿ ಮಡಿಬಟ್ಟೆಗಳನ್ನುಟ್ಟುಕೊಳ್ಳೋಣ.

೬. ಕಸ್ತೂರಿಯಿಂದ ಕೂಡಿರುವ ಪಚ್ಚಕರ್ಪೂರವನ್ನೂ, ಚಂದನವನ್ನೂ, ಪೂಸಿಕೊಳ್ಳೋಣ. ಹೂಮಾಲೆಯನ್ನು ಜುಟ್ಟಿಗೆಲ್ಲಾ ಸುತ್ತಿಕೊಂಡು ಮುಡಿದು ಕೊಳ್ಳೋಣ.

೭. ಪಚ್ಚಕರ್ಪೂರವನ್ನು ಹಾಕಿರುವ ತಾಂಬೂಲವನ್ನು ಹಾಕಿಕೊಂಡು ತಣ್ಣಗಿರುವ ನೀರುಮನೆಗಳಲ್ಲಿ ಕೊಂಚಹೊತ್ತು ಸಂತೋಷದಿಂದಿರೋಣ.

೮. ನವಿಲು ಕೂಗುತ್ತಿರುವವು ಮಧುರವಾದ ಸಂಗೀತಗಳಿಂದ ಸಂತೋಷಪಟ್ಟುಕೊಂಡು ಹಾಸಿರುವ ಹಾಸಿಗೆಯಲ್ಲಿ ಕೊಂಚಕಾಲ ಸುಖವಾಗಿ ಮಲಗಿರೋಣ.

ವಿಶಾಲಸ್ಮಿತದಂತೋಷ್ಠಮಾನನಂ ಚುಂಬಿತಂ ಯದಿ ।
ಸಂಸಾರಫಲಮಾಘ್ರಾತ ಮಾವಯೋಸ್ತು ಭವಿಷ್ಯತಿ ॥ ೯ ॥

ಇತೀರಿತಮಥಶ್ರುತ್ವಾ ಕುಪಿತಾ ಮುನಯಸ್ತು ತಂ ।
ಉಕ್ತಂ ವಾ ಸುಶುಭಂ ವಾಕ್ಯಮಸ್ಮಾಸು ಕಿಮಿದಂ ತ್ವಯಾ ॥ ೧೦ ॥

ಪ್ರಬಲಾಯಃಪ್ರಿಯಾಶಕ್ತಿಃ ಕೃತೋ ನೋ ಮದ್ವಚಃ ಕೃತಂ ।
ಅಥ ಕೋಪಪರಾಚ್ಛಂಭೋರಾನನಾತ್ಪರಮಾದ್ಭುತಾ ॥ ೧೧ ॥

ಜ್ವಾಲಾವಿನಿರ್ಗತಾ ಸಾಪಿ ಕರಾಳವದನಾಽಭವತ್ ।
ಕಸ್ಯಚಿತ್ತು ಮುನೇರ್ಭಾರ್ಯಾಮಾಸಸಾದಾಥ ಸತ್ವರಂ ॥ ೧೨ ॥

ಪಲಾಯನಪರಾ ಚಾಸೀದ್ರಾಮಂ ದೃಷ್ಟ್ವಾ ಚ ಬಿಭ್ಯತೀ ।
ರಾಮೋಽಪಿ ಬ್ರಾಹ್ಮಣೀಂ ಶುದ್ಧಾಂ ಮೋಚಯಾಮೀತ್ಯಭಾಷತ ॥ ೧೩ ॥

---

೯. ವಿಶಾಲವಾಗಿಯೂ, ಮುಗುಳುನಗೆಯಿಂದಲೂ, ಕೂಡಿರುವ ಕೆಂಪಾದ ತುಟಿಗಳನ್ನು ಚುಂಬಿಸಿದರೆ ಆಗ ನಾವಿಬ್ಬರೂ ಸಂಸಾರಸುಖವನ್ನು ಅನುಭವಿಸಿದಂತಾಗುತ್ತದೆ.

೧೦. ಹೀಗೆ ಶಂಭುವು ಹೇಳಿದುದನ್ನು ಕೇಳಿ ಋಷಿಗಳು ಕೋಪಗೊಂಡು ನಾವು ಒಳ್ಳೆಯ ಮಾತನ್ನು ಹೇಳಿದರೆ ನೀನು ಹೇಳುತ್ತಿರುವುದೇನು? ನಿನಗೆ ಹೆಂಡತಿಯ ಮನೋಭೀಷ್ಟ ಹೆಚ್ಚಾಗಿ ಅವಳ ಮಾತನ್ನು ನಡೆಸುತ್ತೀಯೇ ಹೊರತು ನಮ್ಮ ಮಾತಿನಂತೆ ಮಾಡುವುದಿಲ್ಲ ಎಂದರು.

೧೧-೧೨. ಆಗ ಶಂಭುವು ಕೋಪಗೊಳ್ಳಲು, ಆ ಶಂಭುವಿನ ಮುಖದಿಂದ ಅದ್ಭುತವಾದ ಒಂದು ಜ್ವಾಲೆಯು ಹೊರಟಿತು. ಅದು ಭಯಂಕರವಾದ ಮುಖವನ್ನು ಹೊಂದಿತು. ಅಲ್ಲಿದ್ದ ಒಬ್ಬ ಋಷಿಯ ಹೆಂಡತಿಯನ್ನು ಬೇಗನೆ ಹಿಡಿದುಕೊಂಡಿತು.

೧೩. ಆಕೆಯನ್ನು ಹಿಡಿದುಕೊಂಡ ಆ ಶಕ್ತಿಯು ರಾಮನನ್ನು ನೋಡಿದರೂ ಹೆದರದೆ ಓಡಾಡುತ್ತಿತ್ತು. ರಾಮನೂ ಕೂಡ ಅದನ್ನು ನೋಡಿ ಶುದ್ಧಳಾದ ಆಕೆಯನ್ನು ಬಿಡಿಸುತ್ತೇನೆ ಎಂದನು.

ಜಗಾಮ ಪುಷ್ಪಕೇಣೈವ ಬ್ರುವನ್ಮುಕ್ತಿಂ ಪುನಃ ಪುನಃ ।
ಬಾಣಂ ಚ ಧನುಷಾ ಯೋಕ್ತುಂ ಸ ಚ ಸಸ್ಮಾರ ರಾಘವಃ ॥ ೧೪ ॥

ಶಂಭುರಪ್ಯತಿಪುಣ್ಯಾನಿ ವನಾನ್ಯಾಯತನಾನಿ ಚ ।
ಪುರಾಣಿ ಚ ವಿಚಿತ್ರಾಣಿ ದೃಷ್ಟ್ವಾ ರಾಮಂ ನ ಚಾಸ್ಮರತ್ ॥ ೧೫ ॥

ಕ್ಷಣೇನ ಚ ತದಾ ಪ್ರಾಪ್ತೋ ಲೋಕಾಲೋಕಂ ಮಹಾಗಿರಿಂ ।
ದೃಷ್ಟ್ವಾಥ ರಾಘವಶ್ಶೈಲಂ ಗೃಹಮಾರ್ಗಸಮಾಕುಲಂ ॥ ೧೬ ॥

ವಿಪ್ರಯೋಷಿನ್ಮಹಾಭಾಗಾಃ ಕ್ವ ಗತಾ ವದತ ದ್ವಿಜಾಃ ।
ಇತೋ ಗತೇತಿ ತೇ ಪ್ರೋಚುಸ್ತಮೋಭಾಗಂ ಗಿರೇರಿತಿ ॥ ೧೭ ॥

ರಾಮೋ ವಿವರ್ಣವದನಃ ಕಷ್ಟಮಿತ್ಯಭಿಚಿಂತಯನ್ ।
ಅಥ ಶಂಭುರ್ಮಹಾತೇಜಾಃ ಪ್ರಕಾಶಮತುಲಂ ದದೌ ॥ ೧೮ ॥

---

೧೪. ಪುಷ್ಪಕವಿಮಾನದಲ್ಲಿ ಕುಳಿತು ಬಿಡುಬಿಡು ಎಂದು ಹೇಳುತ್ತಾ ಹಿಂದೆ ಹೋದನೇ (ಹೋದನೇ) ಹೊರತು ಧನುಸ್ಸಿನಲ್ಲಿ ಬಾಣವನ್ನು ಹೂಡುವುದಕ್ಕೆ ಜ್ಞಾಪಕಬರಲಿಲ್ಲ.

೧೫. ಇತ್ತ ಶಂಭುವೂ ಕೂಡ ಚೆನ್ನಾಗಿರುವ ಉದ್ಯಾನಗಳನ್ನೂ, ದೇವಸ್ಥಾನಗಳನ್ನೂ, ಮನೆಗಳನ್ನೂ, ಪಟ್ಟಣಗಳನ್ನೂ ನಾನಾಬಗೆಯಾದ ಇತರ ವಸ್ತುಗಳನ್ನೂ ನೋಡುತ್ತಾ ರಾಮನ ಜ್ಞಾಪಕವನ್ನೇ ಹೊಂದಲಿಲ್ಲ.

೧೬-೧೭. ಒಂದು ಗಳಿಗೆಯಲ್ಲಿಯೇ ಲೋಕಾಲೋಕಪರ್ವತಕ್ಕೆ ಹೋದನು. ಅಲ್ಲಿ ರಾಘವನು ದಾರಿಯನ್ನೂ, ಮನೆಗಳನ್ನೂ ಕಂಡನು. ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು ಎಲೈ ವಿಪ್ರರೇ, ಇಲ್ಲೊಬ್ಬನು ಬ್ರಾಹ್ಮಣನ ಹೆಂಡತಿಯನ್ನು ಹಿಡಿದು ಬಂದನಲ್ಲ ಆಕೆಯು ಎತ್ತಹೋದಳೆಂದನು. ಆ ದ್ವಿಜರು ಆಕೆಯು ಇಲ್ಲೇ ಇರುವ ಕತ್ತಲೆಯ ಭಾಗಕ್ಕೆ ಹೋದಳೆಂದರು.

೧೮. ಆಗ ರಾಮನು ಕಷ್ಟಬಂದಿತಲ್ಲ ಎಂದು ಯೋಚಿಸುತ್ತಾ ಕಾಂತಿಹೀನನಾದನು.

**ತತ್ಪ್ರಕಾಶಪ್ರಭಾವೇನ ರಾಮಃ ಕೃತ್ಯಾಂ ಯಯಾವನು ।**
**ತಮೋಮಯೀ ಮಹಾಭೂಮಿಃ ಸರ್ವಜನ್ತುವಿವರ್ಜಿತಾ ॥ ೧೯ ॥**

**ಆಬ್ರಹ್ಮಾಂಡಕಟಾಹಾನ್ತಾ ಶತಯೋಜನಕೋಟಿತಃ ।**
**ಮಹಾರಜತಭೂಮಿಶ್ಚ ತಮೋಮಧ್ಯೇ ವ್ಯವಸ್ಥಿತಾ ॥ ೨೦ ॥**

**ತತ್ರ ನಾರಾಯಣಪುರಂ ಸೂರ್ಯಕೋಟಿಸಮಪ್ರಭಂ ।**
**ಸರಾಮಮುನಿವರ್ಯಾಸ್ತು ತಂ ದೃಷ್ಟ್ವಾ ವಿಸ್ಮಯಂ ಯಯುಃ ॥ ೨೧ ॥**

**ಕಿಮೇತದಿತಿ ಚಾಚಿಂತ್ಯ ನಃ ಪ್ರವೇಶಃ ಕಥಂ ಭವೇತ್ ।**
**ಕಿಮೇಷ ಪ್ರಳಯಾಗ್ನಿಸ್ಸ್ಯಾನ್ಮಾಯಯಾ ಪರಮಾತ್ಮನಃ ॥ ೨೨ ॥**

**ಕಿಂ ವಾ ನೋ ಮರಣಂ ತ್ವದ್ಯ ಉತ ಶ್ರೇಯೋ ಭವಿಷ್ಯತಿ ।**
**ಇತಿ ಚಿಂತಾಕುಲೇಷ್ವೇವ ಸರಾಮೇಷು ಮುನಿಷ್ವಥ ॥ ೨೩ ॥**

೧೯. ಆಗ ಶಂಭುವು ಬೇಕಾದಷ್ಟು ಬೆಳಕನ್ನು ಕೊಟ್ಟನು. ಆ ಪ್ರಕಾಶದ ಮಹಿಮೆಯಿಂದ ರಾಮನು ಶಂಭುವಿನ ಮಾಟದ ಬೊಂಬೆಯನ್ನನುಸರಿಸಿ ಹೋದನು.

೨೦. ಅಲ್ಲಿ ತಮಸ್ಸಿನಿಂದ ಕೂಡಿ ಯಾವ ಜಂತುಗಳೂ ಇಲ್ಲದ, ಬ್ರಹ್ಮಾಂಡದಲ್ಲಿ ಪೂರ್ತಿಯಾಗಿ ಕೋಟಿನೂರು ಯೋಜನಗಳಷ್ಟಿರುವ, ಒಂದು ಬೆಳ್ಳಿಗಿರುವ ಭೂಮಿಯು ಆ ಕತ್ತಲೆಯ ಮಧ್ಯದಲ್ಲಿ ಕಂಡಿತು.

೨೧. ಅಲ್ಲಿ ನಾರಾಯಣಪುರವೆಂಬುದೊಂದೂರು. ಅದು ಕೋಟಿಸೂರ್ಯರಷ್ಟು ಪ್ರಕಾಶಮಾನವಾಗಿದ್ದಿತು. ರಾಮನೂ, ಮುನಿಗಳೂ, ಅದನ್ನು ನೋಡಿ ಆಶ್ಚರ್ಯಗೊಂಡರು.

೨೨. ಇದೇನೆಂಬುದಾಗಿ ಯೋಚಿಸಿದರು. ನಮಗೆ ಅಲ್ಲಿಗೆ ಪ್ರವೇಶವು ಹೇಗೆಂದು ಯೋಚಿಸುತ್ತಾ, ಇದೇನು ಪ್ರಳಯಾಗ್ನಿಯಾಗಿರಬಹುದೇ? ಅಥವಾ ಪರಮಾತ್ಮನ ಮಾಯೆಯಿಂದ ಸೃಷ್ಟಿಸಿಟ್ಟಿರಬಹುದೇ? ನಮಗೇನು ಇಲ್ಲಿ ಮರಣವೋ ಅಥವಾ ಶ್ರೇಯಸ್ಸೋ ಏನು ಉಂಟಾಗುತ್ತದೆ ಎಂದು ಯೋಚಿಸಿದರು.

೨೩-೨೪. ರಾಮನೂ, ಮುನಿಗಳೂ, ಇಂತು ಯೋಚಿಸುತ್ತಿರಲು ಶಂಭುವು

ಶಂಭುರಾಹ ಶೃಣುಷ್ವಾದ್ಯ ರಾಘವೈತದ್ವದಾಮ್ಯಹಂ ।
ಪ್ರಕಲ್ಪಿತಾ ಮಯಾ ಮಾಯಾನ ಕೃತ್ಯಾ ಚೈತದದ್ಭುತಂ ॥ ೨೪ ॥

ನಾರಾಯಣೀಯಮೇತತ್ತು ಪರಮಂ ಧಾಮ ಭಾಸ್ವತಂ ।
ಉಷ್ಣಶೀತಾದ್ಯವಿಚ್ಛೇದ್ಯಂ ಜ್ಞಾನಗಮ್ಯಂ ನ ಚಾಕ್ಷುಷಂ ॥ ೨೫ ॥

ತತ್ತು ಪೂಜಯತಶ್ಚೋರ್ಧ್ವಂ ಪಶ್ಯ ಬ್ರಹ್ಮಪುರೋಗಮಾನ್ ।
ದಿಕ್ಷು ಸರ್ವಾಸು ಚ ಮುನೀನ್ಪಶ್ಯ ಪೂಜಯತೋಽಮಲಾನ್ ॥ ೨೬ ॥

ಚತುರಃ ಪಶ್ಯ ವೇದಾಂಸ್ತು ಸ್ತುವತಃ ಪರಮಂ ಪದಂ ।
ಯೋಗಿನಃ ಸನಕಾದ್ಯಾಸ್ತು ಯೋಗಮಾಸ್ಥಾಯ ಯತ್ನತಃ ॥ ೨೭ ॥

ಧ್ಯಾಯಂತಿ ಪರಮಂ ತೇಜಸ್ತದಿದಂ ಪಶ್ಯ ರಾಘವ ।
ಅಮುಂ ಚ ರೋಮಶಂ ಪಶ್ಯ ಪ್ರದಕ್ಷಿಣನಮಸ್ಕ್ರಿಯಾಃ ॥ ೨೮ ॥

---

ಎಲೈ ರಾಮನೇ, ಕೇಳು. ರಾಕ್ಷಸ ಪಿಶಾಚಿಗಳೊಂದೂ ಅಲ್ಲ. ನಾನು ಮಾಯೆಯನ್ನು ಕಲ್ಪಿಸಿದ್ದೇನೆ, ಎಂದು ಹೇಳಿದನು.

೨೫. ಇದು ನಾರಾಯಣನ ಪರಂಧಾಮವು. ಪ್ರಕಾಶಿಸುತ್ತದೆ. ಉಷ್ಣಶೀತಗಳ ಬಾಧೆಯಿಲ್ಲ. ನಾಶರಹಿತವಾದುದು. ಜ್ಞಾನದಿಂದ ತಿಳಿಯಲು ಸಾಧ್ಯವೇ ಹೊರತು ಕಣ್ಣಿಗೆ ಕಾಣಿಸತಕ್ಕದ್ದಲ್ಲ.

೨೬. ನಾರಾಯಣಪುರವನ್ನು ಪೂಜಿಸುತ್ತಿರುವ ಬ್ರಹ್ಮ ಮುಂತಾದವರನ್ನೂ ಮೇಲುಗಡೆ ನೋಡು. ಎಲ್ಲಾ ದಿಕ್ಕುಗಳಲ್ಲಿಯೂ, ಅದನ್ನು ಪೂಜಿಸುತ್ತಿರುವ ಋಷಿಗಳನ್ನೂ ನೋಡು.

೨೭. ಪರಮಪದವನ್ನು ಸ್ತುತಿಸುತ್ತಿರುವ ನಾಲ್ಕು ವೇದಗಳನ್ನು ನೋಡು. ಸನಕಾದಿಗಳು, ಕಷ್ಟದಿಂದ ಯೋಗವನ್ನು ಹೊಂದಿ ಆ ಪರಮತೇಜಸ್ಸನ್ನು ಧ್ಯಾನ ಮಾಡುತ್ತಿರುವರು. ಇದನ್ನು ನೋಡು.

೨೮-೨೯. ಇಗೋ ಇವನು ರೋಮಶನು. ಇವರು ವಾಲಿಖಿಲ್ಯರು. ಇವರು

**ಕುರ್ವಾಣಂ ಕೋಟಿಕೋಟೀಶ್ಚ ವಾಲಖಿಲ್ಯಾನ್ಮುನೀಶ್ವರಾನ್ ।**
**ಲಕ್ಷ್ಮ್ಯಾದಿಸರ್ವವನಿತಾಪೂಜ್ಯಮಾನಂ ಪರಂ ಪದಂ ॥ ೨೯ ॥**

**ಸಾಕಾರಂ ಚ ನಿರಾಕಾರಂ ಬ್ರಹ್ಮ ಯತ್ಪರಿಕೀರ್ತಿತಂ ।**
**ಅಜ್ಞಾನಿನೋ ನ ಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೩೦ ॥**

**ಶಂಭುವಾಕ್ಯಾದತಸ್ಸರ್ವೇ ಪೂಜಯಾಮಾಸುರಚ್ಯುತಂ ।**
**ಗಿರಿಕರ್ಣೀಂ ಚ ತುಳಸೀಂ ಶಲ್ಲಕಂ ಮಾರುತಂ ತಥಾ ॥ ೩೧ ॥**

**ನೀಲೋತ್ಪಲೈರಂಬುಜೈಶ್ಚ ಕೃಷ್ಣಾಸ್ಫುಟಜಲೈರಪಿ ।**
**ಪೂಜಯನ್ತೋ ಮಹಾತ್ಮಾನೋ ಮಹಾತ್ಮಾನಂ ಜನಾರ್ದನಂ ॥ ೩೨ ॥**

**ನಾರದಂ ಖೇ ಚ ದದೃಶುರ್ಜಟಿಲಂ ಸವಿಪಂಚಿಕಂ ।**
**ನಾರಾಯಣಪದಾಘೋಷಂ ಲಂಬಕೂರ್ಚೋಪವೀತಿನಂ ॥ ೩೩ ॥**

---

ಕೋಟಿಕೋಟಿಗಟ್ಟಲೆಯಾಗಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಿದ್ದಾರೆ ನೋಡು. ಈ ಪರಮಪದವನ್ನು ಲಕ್ಷ್ಮಿಯೇ ಮುಂತಾದವರು ಪೂಜಿಸುತ್ತಿರುವುದನ್ನೂ ನೋಡು.

೩೦. ಸಾಕಾರವೂ, ನಿರಾಕಾರವೂ, ಆಗಿ ಯಾವ ಬ್ರಹ್ಮನಿರುವನೋ ಆತನನ್ನು ಅಜ್ಞಾನದಿಂದ ನೋಡಲಾಗುವುದಿಲ್ಲ. ಜ್ಞಾನ ಚಕ್ಷುಸ್ಸಿನಿಂದ ಮಾತ್ರ ನೋಡ ಬಹುದು.

೩೧-೩೨. ಶಂಭುವಿನ ಮಾತಿನಂತೆ ಅಚ್ಯುತನನ್ನು ಅವರೆಲ್ಲರೂ ಪೂಜಿಸಿದರು, ಗಿರಿಕರ್ಣಿಕೆಯನ್ನೂ, ತುಳಸಿಯನ್ನೂ, ಶಲ್ಲಕವನ್ನೂ, ಮಾರುತವನ್ನೂ. ನೀಲೋತ್ಪಲ ಗಳಿಂದಲೂ, ಕಮಲಗಳಿಂದಲೂ, ಕೃಷ್ಣೆಯ ನಿರ್ಮಲ ನೀರಿನಿಂದಲೂ, ಆ ಮಹಾತ್ಮರು ಮಹಾತ್ಮನಾದ ವಿಷ್ಣುವನ್ನು ಪೂಜಿಸಿದರು.

೩೩. ಆಮೇಲೆ ನಾರಾಯಣನ ನಾಮಸ್ಮರಣೆಮಾಡುತ್ತಿರುವ, ಜಟೆಯನ್ನು ಹೊಂದಿರುವ, ಕೈಯಲ್ಲಿ ವೀಣೆಯನ್ನು ಹಿಡಿದಿರುವ, ಗಡ್ಡವನ್ನು ಜೋಲಾಡಿಸಿಕೊಂಡು ಯಜ್ಞೋಪವೀತವನ್ನೂ ಹಾಕಿಕೊಂಡಿರುವ ನಾರದನನ್ನು ಅಂತರಿಕ್ಷದಲ್ಲಿ ನೋಡಿದರು.

ಸ ಚಾಪಿ ಮನಸಾ ದಧ್ಯೌ ಕ ಏಷ ಇತಿ ನಾರದಃ ।
ಸಂಪದ್ಯಾತಃ ಪ್ರಭೋಃ ಪಾದೇ ಶಂಭೋರಾನಂದನಿರ್ಭರೇ ॥ ೩೪ ॥

ಶೈವೀಂ ಪಂಚಾಕ್ಷರೀಂ ವಿದ್ಯಾಂ ಜಜಾಪ ಮನಸಾ ಮುನಿಃ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಜನ್ಮಾದ್ಯ ಸಫಲಂ ಮಮ ॥ ೩೫ ॥

ಬ್ರಹ್ಮಾದಿವಂದ್ಯಂ ಚಾಗಮ್ಯಂ ಜ್ಞಾತವಾನಸ್ಮಿ ತೇ ಪದಂ ।
ನಾರದಂ ತಮಥ ಪ್ರಾಹ ಶಂಭುರ್ಮೈವಂ ವದೇತಿ ಹಿ ॥ ೩೬ ॥

ಯಥಾ ಚ ಮಾಂ ನ ಜಾನಂತಿ ತಥಾ ಮೇ ಕುರು ವರ್ತನಂ ।
ಗಚ್ಛ ಶೀಘ್ರಂ ಹರಿಂ ಬ್ರೂಹಿ ಮಮಾಗಮನಮಲ್ಪತಃ ॥ ೩೭ ॥

ಅಥ ಸ ತ್ವರಯಾ ಗತ್ವಾ ಸರ್ವಂ ವಾಜ್ಞಾಪಯದ್ಧರಿಂ ।
ಅಥ ಸ ತ್ವರಯಾ ವಿಷ್ಣುರಾದಾಯಾಘೋರ್ಽದಕಂ ಶುಭಂ ॥ ೩೮ ॥

ಕಮಲಾಸಹಿತೋ ಯೋಗೀ ಕೋಟಿಕೋಟಿಸಮಾವೃತಃ ।
ನಿರ್ಯಯೌ ನಾರದಂ ಹಸ್ತೇ ಗೃಹೀತ್ವಾ ಗರುಡಧ್ವಜಃ ॥ ೩೯ ॥

---

೩೪-೩೫. ಆ ನಾರದನೂ ಕೂಡ ರಾಮನನ್ನು ನೋಡಿ ಇವನಾರಿರಬಹುದೆಂದು ಯೋಚಿಸಿದನು. ಶಂಭುವಿನ ಆನಂದದ ಪಾದದಲ್ಲಿ ಇಂತಹವುಗಳೆಷ್ಟೋ ಹುಟ್ಟಬಹುದೆಂದು ಕೊಂಡನು. ಆಗ ಶಿವಪಂಚಾಕ್ಷರಿಯನ್ನು ಮನಸ್ಸಿನಲ್ಲಿಯೇ ಜಪಿಸಲು ಮೊದಲುಮಾಡಿದನು. ನಾನು ಧನ್ಯನು. ಅನುಗ್ರಹಹೊಂದಿದವನು. ಈಗ ನನ್ನ ಜನ್ಮವು ಸಾರ್ಥಕವಾಯಿತು.

೩೬-೩೭. ಬ್ರಹ್ಮಾದಿಗಳಿಂದ ವಂದ್ಯನಾದ ನಿನ್ನ ಪಾದಗಳನ್ನು ಈಗ ನೋಡಿದೆನು ಎಂದನು. ಆಗ ಶಂಭುವು ನಾರದನನ್ನು ಕುರಿತು ಹಾಗೆಲ್ಲ ಹೇಳಬೇಡ. ಇವರು ನನ್ನನ್ನು ಗುರುತಿಸದಂತೆ ವ್ಯವಹಾರಮಾಡು. ಇಲ್ಲಿಂದ ಹರಿಯ ಬಳಿಗೆ ಹೋಗಿ ನಾನು ಬಂದಿರುವುದನ್ನು ಸಂಕ್ಷೇಪವಾಗಿ ತಿಳಿಸು ಎಂದನು.

೩೮-೩೯. ಆಮೇಲೆ ನಾರದನು ಬೇಗಹೋಗಿ ಹರಿಗೆ ಎಲ್ಲವನ್ನೂ ಹೇಳಿದನು. ಹರಿಯು ಅದನ್ನು ಕೇಳಿ ಪೂಜೆಯ ಸಾಮಗ್ರಿಗಳನ್ನು ತೆಗೆದುಕೊಂಡು ಲಕ್ಷ್ಮಿಯೊಡನೆಯೂ, ಅನೇಕರಾದ ಯೋಗಿಗಳೊಡನೆಯೂ, ನಾರದನ ಕೈಯನ್ನು ಹಿಡಿದುಕೊಂಡು ಹೊರಟನು.

ನಮೋ ನಮೋ ನಮೋಽಸ್ತ್ವಸ್ಮೈ ಶಂಕರಾಯೇತ್ಯುದೀರಯನ್ ।
ಅರ್ಘ್ಯಪಾದ್ಯಾದಿನಾ ಸರ್ವಾನ್ಪೂಜಯಾಮಾಸ ಕೇಶವಃ ॥ ४೦ ॥

ಪ್ರಾವೇಶಯದಮೇಯಾತ್ಮಾ ನಾರಾಯಣಪುರಂ ಶುಭಂ ।
ಗೃಹರಾಜೇ ತತಸ್ಸ್ಥಿತ್ವಾ ನಾರಾಯಣ ಉವಾಚ ಹ ॥ ४೧ ॥

॥ ನಾರಾಯಣ ಉವಾಚ ॥

ಕಥಮೇತೇ ಸಮಾಯಾತಾಃ ಕೋಽಯಂ ರಾಜಾ ಮಹಾಯಶಾಃ ।
ಅಮಾನುಷಪ್ರವೇಶೋಽಯಂ ಬ್ರಹ್ಮಾದೇರಪ್ಯಗೋಚರಃ ॥ ४೨ ॥

॥ ಶಂಭುರುವಾಚ ॥

ಮುನಿವೇಷಾ ಯಥಾ ಪ್ರಾಪ್ತಾ ವಯಮೇತೇ ನೃಪಸ್ತಥಾ ।
ತವಾಂಶೋ ನೃಪತಿಶ್ಚಾಯಂ ರಾಮಚಂದ್ರಃ ಪ್ರತಾಪವಾನ್ ॥ ४೩ ॥

ಏನಾಂ ಸಮೀಕ್ಷಿತುಂ ಪತ್ನೀಂ ತವ ಕೇಶವ ಕಾ ಕ್ಷತಿಃ ।
ನಾರಾಯಣಸ್ತಥೇತ್ಯುಕ್ತ್ವಾ ಪ್ರವಿಶೇತ್ಯಾಹ ರಾಘವಂ ॥ ४४ ॥

---

४೦. ಶಂಕರನಿಗೆ ನಮಸ್ಕಾರ ನಮಸ್ಕಾರವೆಂದು ಹೇಳುತ್ತಾ ಕೇಶವನು ಅರ್ಘ್ಯಪಾದ್ಯಾದಿಗಳಿಂದ ಎಲ್ಲರನ್ನೂ ಪೂಜಿಸಿದನು.

४೧. ಅವರೆಲ್ಲರನ್ನೂ ನಾರಾಯಣಪುರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಉತ್ತಮವಾದ ಮನೆಯಲ್ಲಿ ಕುಳಿತುಕೊಂಡ ಮೇಲೆ ನಾರಾಯಣನು ಇಂತೆಂದನು.

४೨. ನಾರಾಯಣನು ಹೇಳಿದನು :—ಇವರೆಲ್ಲರೂ ಇಲ್ಲಿಗೆ ಹೇಗೆ ಬಂದರು ? ಯಶಸ್ವಿಯಾದ ಈ ರಾಜನಾರು ? ಇದು ಮನುಷ್ಯರು ಪ್ರವೇಶಿಸದ ಜಾಗ. ಬ್ರಹ್ಮಾದಿಗಳೂ ಕಾಣದ ಸ್ಥಳ.

४೩. ಶಂಭುವು ಹೇಳಿದನು :—ಮುನಿಯ ವೇಷದಿಂದ ನಾನು ಬಂದಿದ್ದೇನೆ. ಈ ಋಷಿಗಳೂ ಮುನಿಯ ವೇಷದಿಂದ ಬಂದಿದ್ದಾರೆ. ನಿನ್ನ ಅಂಶದಿಂದುತ್ಪನ್ನನಾದವನು ಈ ರಾಜನು. ಇವನ ಹೆಸರು ರಾಮಚಂದ್ರ, ಪ್ರತಾಪಶಾಲಿಯು.

४४. ಎಲೈ ಕೇಶವನೇ, ಈ ರಾಘವನು ನಿನ್ನ ಹೆಂಡತಿಯನ್ನು ನೋಡುವುದರಲ್ಲಿ ಅಭ್ಯಂತರವೇನು ಎನ್ನಲು ನೋಡಬಹುದೆಂದು ಹೇಳಿ ವಿಷ್ಣುವು ರಾಮನನ್ನು ಬಾ ಎಂದನು.

ಅಥ ಪ್ರವಿಶ್ಯ ಭವನಂ ಲಕ್ಷ್ಮೀಂ ವೀಕ್ಷ್ಯ ನಮಸ್ಯ ಚ ।
ವಿನಯಾವನತೋ ಭೂತ್ವಾ ವಾಕ್ಯಮಾಹ ಸುಚಾರಿಣೀಂ ॥ ೪೫ ॥

॥ ಶ್ರೀರಾಮ ಉವಾಚ ॥

ಕೃತಾರ್ಥೋಽಸ್ಮಿ ನ ಸಂದೇಹೋ ವದ ತ್ವಂ ಕಿಂ ತು ಮನ್ಯಸೇ ॥ ೪೬ ॥

॥ ಶ್ರಿ ದೇವ್ಯುವಾಚ ॥

ತ್ವಂ ಯುವಾ ಕಾಮುಕೃಷ್ಟಶ್ಚ ರೂಪವಾನಸಿ ರಾಘವ ।
ಸೀತಾ ಸಾ ಚಾರುಸರ್ವಾಂಗೀ ತವ ಪತ್ನೀ ತಯಾ ಭವಾನ್ ॥ ೪೭ ॥

ವಿಯುಕ್ತೋಽಸಿ ಪುರಾ ವಾಸೀದತೀವ ವಿರಹಾಕುಲಃ ।
ಮಮಾಪಿ ವದ ಸರ್ವಂ ತದಥವಾ ನ ಚ ಲಪ್ಸ್ಯಸಿ ॥ ೪೮ ॥

ಸಹಾಸಾನ್ಯಥ ವಾಕ್ಯಾನಿ ಯೂನಾಂ ಚಿತ್ತಹರಾಣಿ ಚ ।
ಶ್ರುತ್ವಾ ತು ತಾನಿ ಸರ್ವಾಣಿ ರಾಮಭದ್ರೋ ಯತಾತ್ಮವಾನ್ ॥ ೪೯ ॥

---

೪೫. ರಾಘವನು ಮನೆಯೊಳಕ್ಕೆ ಹೋಗಿ ಲಕ್ಷ್ಮಿಯನ್ನು ನೋಡಿ ನಮಸ್ಕರಿಸಿ ವಿನಯದಿಂದ ಬಗ್ಗಿಕೊಂಡು ಈರೀತಿ ಒಳ್ಳೆಯತನದಿಂದ ಮಾತನಾಡಿದನು.

೪೬. ಶ್ರೀರಾಮನು ಹೇಳಿದನು :—ನಿನ್ನನ್ನು ನೋಡಿದುದರಿಂದ ಕೃತಾರ್ಥನಾದೆನು. ಸಂದೇಹವಿಲ್ಲ. ನಿನ್ನ ಮನಸ್ಸಿನಲ್ಲಿ ಏನಿದೆ, ಹೇಳು.

೪೭. ಶ್ರೀದೇವಿಯು ಹೇಳಿದಳು :—ಎಲೈ ರಾಘವನೇ, ನೀನು ಯುವಕನು. ಕಾಮಾಕುಲನು. ರೂಪವಂತನೂ ಆಗಿದ್ದೀಯೆ. ಸೀತೆಯು ಸುಂದರಳಾದ ನಿನ್ನ ಪತ್ನಿಯು. ನೀನೂ ಅವಳಿಗೆ ಸರಿಯಾದ ಪತಿಯು.

೪೮. ಆಗ ನೀನು ವಿಯೋಗವನ್ನು ಹೊಂದಿದ್ದೆ. ಬಹಳ ವಿರಹವನ್ನೂ ಹೊಂದಿದ್ದೆ. ಅದೆಲ್ಲವನ್ನೂ ನನಗೆ ಹೇಳು. ಅಥವಾ ಜ್ಞಾಪಕವಿಲ್ಲವೋ ?

೪೯. ಆಕೆಯು ಯುವಕರ ಚಿತ್ತವನ್ನು ಅಪಹರಿಸುವ ನಗುವಿನಿಂದ ಕೂಡಿದ ಮಾತುಗಳನ್ನು ಕೇಳಿ, ಇಂದ್ರಿಯನಿಗ್ರಹಿಯಾದ ರಾಮಚಂದ್ರನು ತಲೆಯನ್ನು ತಗ್ಗಿಸಿಕೊಂಡು ಹೊರಡಲುದ್ಯುಕ್ತನಾದನು.

ನಿರ್ಗಸ್ತುಂ ಕಾಂಕ್ಷತೇ ತತ್ರ ತ್ವಾಸಮ್ಯ ತಸ್ಮುಖಾಂಬುಜಂ ।
ಸ್ಮರಬಾಣೇನ ಪದ್ಮೇನ ಸಂಪೀಡ್ಯ ರಘುಶೇಖರಂ ॥ ೫೦ ॥

ಅನ್ವೇವ ನಿರ್ಯಯೌ ದೇವೀ ಪದ್ಮಾ ಪದ್ಮವನಪ್ರಿಯಾ ।
ಏಕಪತ್ನೀವ್ರತಂ ಜ್ಞಾತ್ವಾ ರಾಮಂ ತೇ ಸಮುಪಾಗಮನ್ ॥ ೫೧ ॥

ಅಥ ವೇಪಿತಸರ್ವಾಂಗಂ ಸ್ಖಲತ್ಪದಗತಿಂ ನೃಪಂ ।
ಶಿವನಾರಾಯಣೌ ದೃಷ್ಟ್ವಾ ವಿಸ್ಮಯಂ ಪರಮಂ ಗತೌ ॥ ೫೨ ॥

ಅಹೋಽಸ್ಯ ದೃಢಿಮಾ ಚಿತ್ತೇ ಮಾಯಿನೋಽಪ್ಯವಶಾತ್ಮನಃ ।
ಧೈರ್ಯಂ ಪಶ್ಯೇಹ ನಿಯತಂ ತೇನ ರಾಮಸ್ಸುಕೀರ್ತಿಮಾನ್ ॥ ೫೩ ॥

ಸರ್ವತಶ್ಶಿವಮೇವಾಸ್ಯ ನಾಶಿವಂ ವಿದ್ಯತೇ ಕ್ವಚಿತ್ ।
ಅಥ ರಾಮೋ ವಚಃ ಪ್ರಾಹ ಗಚ್ಛೇಽಹಂ ಭಗವನ್ಪ್ರಭೋ ॥ ೫೪ ॥

---

೫೦. ಸ್ಮರನ ಬಾಣವಂತಿರುವ ಪದ್ಮವನ್ನು ಅಲ್ಲಾಡಿಸಿಯೂ, ಆ ರಘುನಾಥನನ್ನು ಸ್ಮರಬಾಣದಿಂದ ಪೀಡಿತನಾಗುವಂತೆ ಮಾಡಿ ಆ ಲಕ್ಷ್ಮಿಯು ಆ ರಘುನಾಥನ ಹಿಂದೆಯೇ ಹೊರಟಳು.

೫೧. ರಾಮನು ಏಕಪತ್ನೀವ್ರತ ಉಳ್ಳವನೆಂದು ತಿಳಿದು ಮಿಕ್ಕವರೆಲ್ಲರೂ ಅವನ ಬಳಿಗೆ ಬಂದರು.

೫೨. ಶ್ರೀರಾಮನು ನಡುಗುತ್ತಿರುವುದನ್ನೂ, ಹೆಜ್ಜೆಯಿಡಲಾಗದಿರುವುದನ್ನೂ ನೋಡಿ ಆ ಶಿವನಾರಾಯಣರು ಪರಮಾಶ್ಚರ್ಯಪಟ್ಟರು.

೫೩. ಮಾಯೆಗೂ ಸಿಕ್ಕದಿರುವ ಈ ರಾಮಭದ್ರನ ಮನಸ್ಸಿನ ದೃಢವು ಅಸದೃಶವಾದುದು. ಇವನ ಸ್ಥಿರವಾದ ಧೈರ್ಯವು ಆಶ್ಚರ್ಯವನ್ನುಂಟುಮಾಡುತ್ತದೆ. ಆದ್ದರಿಂದಲೇ ರಾಮನು ಒಳ್ಳೆಯ ಕೀರ್ತಿವಂತನು ಎಂದರು.

೫೪. ಆದ್ದರಿಂದ ಇವನಿಗೆ ಎಲ್ಲೆಡೆಯಲ್ಲೂ ಮಂಗಳವುಂಟಾಗುವುದೇ ಹೊರತು ಒಂದೆಡೆಯಲ್ಲೂ ಕೆಟ್ಟದೆಂಬುದೇ ಇಲ್ಲ. ಎನ್ನಲು, ರಾಮನು ಸ್ವಾಮಿ ನಾನು ಹೋಗುತ್ತೇನೆ ಎಂದನು.

**ಅನುಜ್ಞಾತೋಽಥ ಹರಿಣಾ ಪುಷ್ಪಕೇಣ ಸ ರಾಘವಃ ।**
**ಸಮುನಿಸ್ಸಹಶಂಭುಶ್ಚ ಸಹನಾರಾಯಣೋ ಯಯೌ ॥ ೩೫ ॥**

**ಲೋಕಾಲೋಕಂ ಗತಶ್ಶೀಘ್ರಂ ತತಸ್ಸ್ವಾದೂದಧಿಂ ಗತಃ ।**
**ತತೋ ದ್ವೀಪಸಮುದ್ರಾಂಶ್ಚ ಜಂಬೂದ್ವೀಪಂ ಪುನರ್ಗತಃ ॥ ೩೬ ॥**

**ಭರದ್ವಾಜಾಶ್ರಮಪದೇ ತಸ್ಥಿವಾನ್ಗೌತಮೀತಟೇ ।**
**ಅಥ ಸ್ನಾತ್ವಾ ಮಹಾನದ್ಯಾಂ ಭರದ್ವಾಜೋ ಮುನೀಶ್ವರಃ ॥ ೩೭ ॥**

**ಶಿಷ್ಯೈಃ ಪರಿವೃತೋ ಶ್ರೀಮಾನ್ಪುಷ್ಪಕಂ ದೃಷ್ಟವಾನ್ಮುನಿಃ ।**
**ತತ್ರ ರಾಮಂ ಮಹಾಬಾಹುಂ ಶಿವನಾರಾಯಣಾವೃಷೀನ್ ॥ ೩೮ ॥**

**ಯಥಾವತ್ಪೂಜಯಿತ್ವಾ ತು ತಾನುವಾಚ ಮಹಾಮುನಿಃ ।**
**ಮಮಾಶ್ರಮಪದೇ ಯೂಯಂ ಭೋಕ್ತುಮರ್ಹಥ ಸತ್ತಮಾಃ ॥ ೩೯ ॥**

---

೩೫. ಹರಿಯು ಆಗಬಹುದೆನ್ನಲು, ಪುಷ್ಪಕದಲ್ಲಿ ಮುನಿಗಳನ್ನೂ, ಶಂಭುನಾರಾಯಣರನ್ನೂ ಕೂರಿಸಿಕೊಂಡು ಹೊರಟನು.

೩೬. ಅನಂತರ ಲೋಕಾಲೋಕಪರ್ವತವನ್ನು ಹೊಂದಿ, ಸ್ವಾದುಸಮುದ್ರವನ್ನು ಹೊಂದಿ, ಅನೇಕ ದ್ವೀಪ ಸಮುದ್ರಗಳನ್ನು ದಾಟಿ, ಮತ್ತೆ ಜಂಬೂದ್ವೀಪಕ್ಕೆ ಬಂದನು.

೩೭-೩೮. ಅಲ್ಲಿ ಭರದ್ವಾಜಾಶ್ರಮದಲ್ಲಿ ಗೌತಮೀನದಿಯ ದಡದಲ್ಲಿ ಪುಷ್ಪಕವನ್ನು ನಿಲ್ಲಿಸಿ ಇಳಿದನು. ಅಲ್ಲಿ ಭರದ್ವಾಜಋಷಿಯು ಸ್ನಾನಮಾಡಿ ನೋಡಲು ಪುಷ್ಪಕವಿಮಾನವಿದ್ದಿತು. ಅದನ್ನು ನೋಡಿ ಶಿಷ್ಯರೊಡನೆ ಪುಷ್ಪಕದ ಬಳಿಗೆ ಬಂದು ಅದರಲ್ಲಿ ರಾಮನನ್ನೂ ಶಿವನಾರಾಯಣರನ್ನೂ ಮುನಿಗಳನ್ನೂ ನೋಡಿದನು.

೩೯. ಅವರನ್ನು ಪೂಜಿಸಿ ನೀವು ನನ್ನ ಆಶ್ರಮದಲ್ಲಿ ಊಟಮಾಡಬೇಕೆಂದು ಅವರಿಗೆ ಭರದ್ವಾಜನು ಹೇಳಿದನು. ರಾಮನು ಋಷಿಯು ಮಾಡಿದ ಗೌರವದಿಂದ ಹಾಗೇ ಆಗಲೆಂದು ಕಷ್ಟದಿಂದ ಒಪ್ಪಿಕೊಂಡನು.

**ರಾಮಸ್ತು ಮುನಿವಾಕ್ಯೇನ ತಥೇತ್ಯಾಹ ಕಥಂಚನ ।**
**ಅಥ ಸ್ನಾತ್ವಾ ಮಹಾನದ್ಯಾಂ ಕೃತ್ವಾ ದೇವಾದಿತರ್ಪಣಂ ॥ ೬೦ ॥**

**ಭೋಕ್ತುಕಾಮಂ ತಥಾ ರಾಮಂ ವಸಿಷ್ಠೋ ವಾಕ್ಯಮುಕ್ತವಾನ್ ।**
**ಧರ್ಮತ್ಯಾಗೋ ಭವೇದ್ರಾಮ ನ ಶ್ರಾದ್ಧಂ ಕ್ರಿಯತೇ ಯದಿ ॥ ೬೧ ॥**

**॥ ರಾಮ ಉವಾಚ ॥**

**ಅಮಾಯಾಂ ಗ್ರಹಣೇ ತೀರ್ಥೇ ವ್ಯತೀಪಾತೇ ಚ ಸಂಕ್ರಮೇ ।**
**ವ್ಯತೀತಂ ಯದಿ ಚೇಚ್ಛ್ರಾದ್ಧಂ ಭಗವನ್ಕ್ರಿಯತೇ ಪುನಃ ॥ ೬೨ ॥**

**ನಿತ್ಯಶ್ರಾದ್ಧಂ ಪುನರ್ನೈವ ಕುರ್ಯಾದಿತಿ ವಚಸ್ತವ ।**
**ಯಥಾ ಮಮೈವ ಮಾತೄಣಾಂ ಮರಣೇ ಸಮುಪಸ್ಥಿತೇ ॥ ೬೩ ॥**

**ಆಶೌಚೇ ಚ ಸಮಾಯಾತೇ ನಿತ್ಯಶ್ರಾದ್ಧಂ ನ ವೈ ಕೃತಂ ।**
**ವ್ಯತೀಪಾತಾದಿಕಾಲೇಷು ಕೃತಂ ತು ವಚನಾತ್ತವ ॥ ೬೪ ॥**

---

೬೦-೬೧. ಆ ಮಹಾನದಿಯಲ್ಲಿ ಸ್ನಾನಮಾಡಿ ದೇವರ್ಷಿಪಿತೃತರ್ಪಣಗಳನ್ನು ಮಾಡಿ ಊಟಮಾಡಲು ಉದ್ಯುಕ್ತನಾದ ರಾಮನನ್ನು ಕುರಿತು ವಸಿಷ್ಠನು ಎಲೈ ರಾಮನೇ, ತೀರ್ಥಶ್ರಾದ್ಧವನ್ನು ನೀನು ಮಾಡದಿದ್ದರೆ ಧರ್ಮತ್ಯಾಗವನ್ನು ಮಾಡಿ ದಂತಾಗುತ್ತದೆ ಎಂದನು.

೬೨. ರಾಮನು ಹೇಳಿದನು :—ಅಮಾವಾಸ್ಯೆ, ಗ್ರಹಣ, ತೀರ್ಥ, ವ್ಯತೀಪಾತ, ಸಂಕ್ರಮಣಗಳಲ್ಲಿ ಶ್ರಾದ್ಧ ಮಾಡದಿದ್ದರೆ ಮತ್ತೆ ಶ್ರಾದ್ಧವನ್ನು ಮಾಡಬೇಕು.

೬೩-೬೪. ನಿತ್ಯಶ್ರಾದ್ಧವನ್ನು ಮತ್ತೆ ಮಾಡಬೇಕಾದುದಿಲ್ಲವೆಂದು ನೀನೇ ಹೇಳಿದ್ದೀಯೆ. ನಮ್ಮ ತಾಯಿಯು ಸತ್ತಾಗ ಆಶೌಚಬರಲು ನಿತ್ಯಶ್ರಾದ್ಧವನ್ನು ಮಾಡಲಿಲ್ಲ. ಆ ಶ್ರಾದ್ಧಗಳನ್ನು ನಿನ್ನ ಮಾತಿನಂತೆ ವ್ಯತೀಪಾತಾದಿ ಕಾಲಗಳಲ್ಲಿ ಮಾಡಿದೆವು.

॥ ವಸಿಷ್ಠ ಉವಾಚ ॥

ಏತೇ ಹಿ ಮುನಯಸ್ಸರ್ವೇ ತಥಾ ಶಂಭುರಯಂ ದ್ವಿಜಃ ।
ಏತನ್ಮುಖಾದಶೇಷೇಣ ನಿರ್ಣಯಸ್ತು ಭವಿಷ್ಯತಿ ॥ ೬೫ ॥

ತಹ ಸರ್ವೇ ವಿನಿಶ್ಚಿತ್ಯ ಮುನಯಶ್ಶಂಭುಮಬ್ರುವನ್ ।
ವದಾಸ್ಮಾಕಮಶೇಷಂ ತ್ವಂ ದ್ವಿಜವರ್ಯ ಮಹಾನಸಿ ॥ ೬೬ ॥

॥ ಶಂಭುರುವಾಚ ॥

ತ್ಯಕ್ತವ್ಯಂ ಯಚ್ಚ ವೈ ಶ್ರಾದ್ಧಂ ಪುನಃ ಕಾರ್ಯಮಥೈವ ಚ ।
ಸೂತಕೇ ಸಮನುಪ್ರಾಪ್ತೇ ವಿಘ್ನೇಷು ಚ ವದಾಮ್ಯಹಂ ॥ ೬೭ ॥

ಮಾಸಿಕಾನ್ಯುದಕುಂಭಾನಿ ಶ್ರಾದ್ಧಾನಿ ಪ್ರಸವೇಷು ಚ ।
ಪ್ರತಿಸಂವತ್ಸರಂ ಶ್ರಾದ್ಧಂ ಸೂತಕಾನಂತರಂ ವಿದುಃ ॥ ೬೮ ॥

ತ್ಯಕ್ತಾನ್ಯನ್ಯಾನಿ ಯಾವಂತಿ ಸೂತಕೇ ವಿಘ್ನಸಂಭವೇ ।
ಅನಂತರಂ ಹಿ ಕಾರ್ಯಾಣಿ ಸರ್ವಾಣಿ ಚ ನ ಸಂಶಯಃ ॥ ೬೯ ॥

---

೬೫. ವಸಿಷ್ಠನು ಹೇಳಿದನು :—ಈ ಋಷಿಗಳೆಲ್ಲರೂ ಇದ್ದಾರೆ. ಈ ಶಂಭುವೂ ಇದ್ದಾನೆ. ಇವರ ಮುಖದಿಂದಲೇ ಇದರ ನಿರ್ಣಯವೂ ಆಗಲಿ.

೬೬. ಮುನಿಗಳೆಲ್ಲರೂ ನಿಶ್ಚಯಿಸಿ ಶಂಭುವನ್ನು ಕುರಿತು ನಮ್ಮೆಲ್ಲರಿಗಿಂತ ನೀನು ಶ್ರೇಷ್ಠನು. ನೀನೇ ಈ ವಿಷಯವನ್ನು ನಿರ್ಣಯಿಸೆಂದರು.

೬೭. ಶಂಭುವು ಹೇಳಿದನು :—ಬಿಡಬೇಕಾದ ಶ್ರಾದ್ಧಗಳನ್ನೂ ಸೂತಕಾದಿಗಳೂ, ವಿಘ್ನಗಳೂ ಬಂದಾಗ ಮತ್ತೆ ಮಾಡಬೇಕಾದ ಶ್ರಾದ್ಧಗಳನ್ನೂ ಹೇಳುತ್ತೇನೆ ಕೇಳಿರಿ.

೬೮. ಮಾಸಿಕಗಳು, ಸೋದಕುಂಭ ಮತ್ತು ಸಾಂವತ್ಸರಿಕ ಶ್ರಾದ್ಧಗಳನ್ನು ಪ್ರಸವಾದಿ ಸೂತಕಗಳು ಬಂದರೆ, ಅದು ಕಳೆದ ಒಡನೆಯೇ ಮಾಡಬೇಕು.

೬೯. ಸೂತಕಗಳೂ, ವಿಘ್ನಗಳೂ, ಬಂದುದರಿಂದ ಇವು ಹೋದಷ್ಟು ಬಿಟ್ಟ ಮಿಕ್ಕ ಶ್ರಾದ್ಧಗಳನ್ನು ಆಮೇಲೆ ಮಾಡಬೇಕು. ಸಂಶಯವಿಲ್ಲ.

ಮಾಸಿಕಾನಿ ಸಮಸ್ತಾನಿ ಶ್ರಾದ್ಧಂ ಪ್ರತ್ಯಾಬ್ದಿಕಂ ತಥಾ ।
ಸೂತಕಾನಂತರಂ ಕಾರ್ಯಂ ವಿಘ್ನೇಽನ್ಯಸ್ಮಿನ್ಯತೋಽನ್ಯಥಾ ॥ ೭೦ ॥

ಏಕಾದಶ್ಯಾಂ ಕೃಷ್ಣಪಕ್ಷೇ ಕರ್ತವ್ಯಂ ಶುಭಮಿಚ್ಛತಾ ।
ತತ್ರ ವ್ಯತಿಕ್ರಮೇ ಹೇತಾವಮಾಯಾಂ ಕ್ರಿಯತೇ ತು ತತ್ ॥ ೭೧ ॥

ಯಥೋತ್ತರದಿನೇಷ್ವೇವ ಕರ್ತವ್ಯಂ ಯದ್ಯವಿಘ್ನತಃ ।
ಕೃಷ್ಣಪಕ್ಷೇ ತ್ವಮಾಯಾಂ ತು ಕರ್ತವ್ಯಂ ರಾಮ ನೋ ಕೃತಂ ॥ ೭೨ ॥

ಮೃತಾಹಸ್ಯ ಯದಾ ಮಾಸೋ ನ ಜ್ಞಾಯೇತ ಕಥಂಚನ ।
ಮಾರ್ಗಶೀರ್ಷೇಽಥವಾ ಮಾಘೇ ಶ್ರಾದ್ಧಂ ತದ್ದಿವಸೇ ಸ್ಮೃತಂ ॥ ೭೩ ॥

ಯದಾ ತು ವಾಸರಾಜ್ಞಾನಂ ಮಾಸಜ್ಞಾನಮಥೈವ ಚ ।
ಅಮಾಯಾಮೇವ ತನ್ಮಾಸೇ ಶ್ರಾದ್ಧಂ ಸಾಂವತ್ಸರಂ ಭವೇತ್ ॥ ೭೪ ॥

---

೭೦. ಸಮಸ್ತ ಮಾಸಿಕ ಮತ್ತು ಪ್ರತ್ಯಾಬ್ದಿಕಶ್ರಾದ್ಧಗಳನ್ನು ಸೂತಕ ಮುಗಿದೊಡನೆಯೇ ಮಾಡಬೇಕು. ಮತ್ತೆ ವಿಘ್ನವು ಬಂದರೆ ಅದೂ ಕಳೆದೊಡನೆ ಮಾಡಬೇಕು.

೭೧. ಶುಭವನ್ನು ಅಪೇಕ್ಷಿಸುವವನು ಕೃಷ್ಣಪಕ್ಷದ ಏಕಾದಶಿಯ ದಿನ ಮಾಡಬೇಕು. ಅದರಲ್ಲಿಯೂ ಆಗದಿದ್ದರೆ ಅಮಾವಾಸ್ಯೆಯ ದಿನ ಮಾಡಬೇಕು.

೭೨. ವಿಘ್ನವಿಲ್ಲದಿದ್ದರೆ ಮುಂದೆ ಬರತಕ್ಕ ದಿನಗಳಲ್ಲಿಯೇ ಮಾಡಬೇಕು. ನೀನು ಕೃಷ್ಣಪಕ್ಷದ ಏಕಾದಶಿಯಲ್ಲೂ, ಅಮಾವಾಸ್ಯೆಯಲ್ಲೂ, ಮಾಡಬೇಕಾದುದನ್ನು ಮಾಡಲಿಲ್ಲ.

೭೩. ಸತ್ತ ದಿನದ ತಿಂಗಳು ತಿಳಿಯದಿದ್ದರೆ ಮಾರ್ಗಶೀರ್ಷಮಾಸದಲ್ಲಿ ಆಗಲಿ ಮಾಘಮಾಸದಲ್ಲಿಯಾಗಲಿ ಆ ದಿವಸ ಆ ಶ್ರಾದ್ಧವನ್ನು ಮಾಡಬೇಕು.

೭೪. ಸತ್ತ ತಿಥಿಯೇ ಗೊತ್ತಿಲ್ಲದೆ ಹೋದರೆ, ಮಾಸದ ಜ್ಞಾನವಿದ್ದರೆ, ಆ ಮಾಸದ ಅಮಾವಾಸ್ಯೆಯ ದಿನ ಆ ಶ್ರಾದ್ಧವನ್ನು ಮಾಡಬೇಕು.

ದಿನಮಾಸಾಪರಿಜ್ಞಾನೇ ಪ್ರೋಷಿತಸ್ಯ ಮೃತಸ್ಯ ಚ ।
ತತ್ತಿಥ್ಯಾಂ ತದ್ದಿನಂ ಗ್ರಾಹ್ಯಂ ತತ್ರಾಜ್ಞಾನಂ ಯದಾ ಭವೇತ್ ॥ ೭೫ ॥

ಆಶ್ವಿನಾಮಾ ಚ ಮಾರ್ಗಾಮಾ ಮಾಘಾಮಾ ಚ ದಿನತ್ರಯಂ ।
ತತ್ರ ವಾನ್ಯತಮಂ ಗ್ರಾಹ್ಯಂ ದಿನಮಾಸಾಪ್ರತೀತಿತಃ ॥ ೭೬ ॥

ವೃದ್ಧೀಯಂ ಸಮುಸ್ಯಮಂತಪ್ರೇತಚ್ಛ್ರಾದ್ಧಾನುಮಾಸಿಕಂ ।
ನಿತ್ಯೋದಕುಂಭಶ್ರಾದ್ಧಂ ಚ ಮಾಸೇ ಸ್ಯುರಧಿಕೇಽಪಿ ಚ ॥ ೭೭ ॥

ಗ್ರಹಣೇ ಪುತ್ರಜನ್ಮಾದೌ ಕರ್ಮಣ್ಯಪಿ ಚ ಶಾಂತಿಕೇ ।
ಸಂಕಲ್ಪಿತೇ ಚ ಸರ್ವಸ್ಮಿನ್ನಧಿಮಾಸೇ ನ ದುಷ್ಯತಿ ॥ ೭೮ ॥

ರೋಗೀ ಯದಾ ಮನುಷ್ಯಸ್ಸ್ಯಾಚ್ಛ್ರಾದ್ಧಕರ್ಮಣ್ಯುಪಸ್ಥಿತೇ ।
ಭಾರ್ಯಾಂ ವಾ ಭ್ರಾತರಂ ವಾಪಿ ಶಿಷ್ಯಂ ಚಾಪಿ ನಿಯೋಜಯೇತ್ ॥ ೭೯ ॥

---

೭೫. ಹೊರಟುಹೋದವನ ಅಥವಾ ಮೃತನ ದಿನಮಾಸಗಳು ಗೊತ್ತಾಗದಿದ್ದರೆ ಅವನು ಯಾವ ದಿನ ಆ ವಿಷಯವನ್ನು ತಿಳಿಯುತ್ತಾನೋ ಅದೇ ದಿನವನ್ನು ಮೃತದಿನವನ್ನಾಗಿ ತಿಳಿಯಬೇಕು.

೭೬. ದಿನ ಮಾಸಗಳು ಗೊತ್ತಾಗದಿದ್ದರೆ ಆಶ್ವಯುಜದ ಅಮಾವ್ಯಾಸೆಯಲ್ಲಾಗಲಿ, ಮಾರ್ಗಶಿರ ಅಮಾವಾಸ್ಯೆಯಲ್ಲಾಗಲಿ, ಮಾಘಮಾಸದ ಅಮಾವಾಸ್ಯೆಯಾಗಲಿ ಈ ಮೂವರಲ್ಲಿ ಒಂದನ್ನು ಗೊತ್ತುಮಾಡಿಕೊಳ್ಳಬೇಕು.

೭೭. ಇದು ಸರಿಯಾದವರ ಶ್ರಾದ್ಧ, ಮಾಸಿಕ, ಊನ, ಏಕೋತ್ತರ ವೃದ್ಧಿಗಳಿಗೆ ಸೇರಿದುದು. ನಿತ್ಯಶ್ರಾದ್ಧ ಉದಕುಂಭಶ್ರಾದ್ಧಗಳು ಅಧಿಕಮಾಸಗಳಲ್ಲಿಯೂ ನಡೆಯಬೇಕು.

೭೮. ಗ್ರಹಣ, ಮಗನು ಹುಟ್ಟಿದಾಗ ಮಾಡುವುದು, ಶಾಂತಿಕರ್ಮ, ಸಂಕಲ್ಪ ಮಾಡಿಕೊಂಡಿದ್ದುದು, ಇವುಗಳ ಶ್ರಾದ್ಧಗಳು ಅಧಿಕಮಾಸದಲ್ಲಿಯೂ, ನಡೆಯಬಹುದು.

೭೯. ಶ್ರಾದ್ಧ ಬಂದಾಗ ಮನುಷ್ಯನಿಗೆ ರೋಗಬಂದಿದ್ದರೆ ಹೆಂಡತಿ, ಸೋದರ, ಶಿಷ್ಯ ಇವರಲ್ಲಿ ಯಾರನ್ನಾದರೂ ನೇಮಿಸಿ ಮಾಡಿಸಬಹುದು.

**ತಸ್ಯ ಭಾವೇ ನ ಹಾನಿಸ್ಸ್ಯಾತ್ಕರ್ಮಣಃ ಶ್ರಾದ್ಧಸಂಜ್ಞಿನಃ ।**
**ನಿತ್ಯಶ್ರಾದ್ಧೇ ಯಥಾಶಕ್ತಿ ಭೋಕ್ತಾರಂ ತು ನಿಯೋಜಯೇತ್ ॥ ೮೦ ॥**

**ಅಮಾವಾಸ್ಯಾಮಾಸಿಕಂ ಚ ಮೃತಾಹವ್ಯತಿರೇಕತಃ ।**
**ಸ್ವಯಂ ಕರ್ಮಣ್ಯಶಕ್ತಶ್ಚೇತ್ಸುತಂ ವಿಪ್ರಂ ನಿಯೋಜಯೇತ್ ॥ ೮೧ ॥**

**ರಾಜಕಾರ್ಯೇಣ ಯುಕ್ತಸ್ಯ ದಾಸ್ಯಗ್ರಹಣವರ್ತಿನಃ ।**
**ವ್ಯಸನೇಷು ಸಮುಸ್ತೇಷು ಶ್ರಾದ್ಧಂ ವಿಪ್ರೇಣ ಕಾರಯೇತ್ ॥ ೮೨ ॥**

**ಪ್ರಾತಃಕಾಲೇ ತು ನ ಶ್ರಾದ್ಧಂ ಪ್ರಕುರ್ವಂತಿ ದ್ವಿಜೋತ್ತಮಾಃ ।**
**ನೈಮಿತ್ತಿಕೇಷು ಶ್ರಾದ್ಧೇಷು ನ ಕಾಲನಿಯಮಸ್ಸ್ಮೃತಃ ॥ ೮೩ ॥**

**ಗೃಹಾದಿವ್ಯತಿರಿಕ್ತಸ್ಯ ಪ್ರಕ್ರಮಃ ಕುತಪಃ ಸ್ಮೃತಃ ।**
**ಕುತಪಾದಥವ್ಯಾಪ್ಯರ್ವಾಗಾಸನ್ನಕುತಪೋ ಭವೇತ್ ॥ ೮೪ ॥**

---

೮೦. ಹಾಗೆ ಮಾಡಿದರೆ ಶ್ರಾದ್ಧಮಾಡುವವನ ಕರ್ಮಕ್ಕೆ ಲೋಪಬರುವುದಿಲ್ಲ. ನಿತ್ಯಶ್ರಾದ್ಧದಲ್ಲಿ ತನ್ನ ಶಕ್ತಿಯಿದ್ದಷ್ಟು ಜನರನ್ನು ಊಟಕ್ಕೆ ಹೇಳಬಹುದು.

೮೧. ಸತ್ತ ದಿನ ತಪ್ಪಿದರೆ ಅಮಾವಾಸ್ಯೆಯ ದಿನ ಮಾಸಿಕವನ್ನು ಮಾಡಬೇಕು. ತಾನು ಮಾಡಲು ಶಕ್ತಿಯಿಲ್ಲದಿದ್ದರೆ ಮುಂಜಿಯಾದ ಮಗನನ್ನು ಮತ್ತು ಬ್ರಾಹ್ಮಣನನ್ನು ನಿಯೋಜಿಸಬಹುದು.

೮೨. ರಾಜಕಾರ್ಯದಲ್ಲಿದ್ದರೆ, ಆಳಾಗಿದ್ದರೆ, ವ್ಯಸನದಲ್ಲಿದ್ದರೆ, ಶ್ರಾದ್ಧವನ್ನು ಬ್ರಾಹ್ಮಣನಿಂದ ಮಾಡಿಸಬಹುದು. (ಮಾಡಿಸಬೇಕು).

೮೩. ಪ್ರಾತಃಕಾಲದಲ್ಲಿ ಶ್ರಾದ್ಧಮಾಡಬಾರದು. ನೈಮಿತ್ತಿಕ ಶ್ರಾದ್ಧಗಳಲ್ಲಿ ಕಾಲನಿಯಮವಿಲ್ಲ.

೮೪. ಮನೆಮಠಗಳಿಲ್ಲದವರು ಕುತುಪಕಾಲದಲ್ಲಿಯಾದರೂ ಶ್ರಾದ್ಧವನ್ನು ಉಪಕ್ರಮಿಸಬೇಕು. ಕುತಪಕ್ಕಿಂತ ಮುಂದೆಯೇ ಪ್ರಾರಂಭಿಸಿದರೆ ಅದಕ್ಕೆ ಆಸನ್ನ ಕುತುಪವೆಂದು ಹೆಸರು.

ಮಾಸೇ ಮಾಸೇ ಯಥಾ ಶ್ರಾದ್ಧೇಽಪರಾಹ್ಣಸ್ಪೃಗ್ಘಿಥಿರೀಯತೇ ।
ಅಪರಾಹ್ಣವ್ಯಾಪಿನೀ ಸ್ಯಾದುಭಯತ್ರ ಯದಾ ತ್ವಮಾ ॥ ೮೫ ॥

ಕ್ಷಯೇ ಪೂರ್ವಾ ತು ಕರ್ತವ್ಯಾ ವೃದ್ಧೌ ಸಾಮ್ಯೇ ಪರಾ ಸ್ಮೃತಾ ।
ಅಮಾವಾಸ್ಯಾ ತು ಯಾ ಹಿ ಸ್ಯಾದಪರಾಹ್ಣದ್ವಯೇ ಸಮಾ ॥ ೮೬ ॥

ಕ್ಷಯೇ ಪೂರ್ವಾ ಪರಾ ವೃದ್ಧೇ ಸಾಮ್ಯೇಽಪಿ ಚ ಪರಾ ಭವೇತ್ ।
ಕ್ಷೀಣಸ್ತು ಚಂದ್ರಮಾ ಯತ್ರ ತತ್ರ ಶ್ರಾದ್ಧಂ ತು ಪಾರ್ವಣಂ ॥ ೮೭ ॥

ಅಮಾಷ್ಟಭಾಗೇ ಸೂಕ್ಷ್ಮೋಽಸೌ ಭೂತಾಷ್ಟಾಂಶೇ ಸ ನಾಸ್ತಿ ಚೇತ್ ।
ಮಧ್ಯಾಹ್ನವ್ಯಾಪಿನೀ ಯಾ ಸ್ಯಾದೇಕೋದ್ದಿಷ್ಟೇ ತಿಥಿರ್ಭವೇತ್ ॥ ೮೮ ॥

---

೮೫. ಮಾಸಿಕಶ್ರಾದ್ಧಗಳು ಅಪರಾಹ್ಣವನ್ನನುಸರಿಸಿದ್ದಾಗಿರಬೇಕು. ಅಮಾವಾಸ್ಯೆಯು ಎರಡು ದಿನಗಳಲ್ಲಿದ್ದರೆ ಅಪರಾಹ್ಣವ್ಯಾಪಿನಿಯನ್ನೇ ಗ್ರಹಿಸಬೇಕು.

೮೬. ಅಮಾವಾಸ್ಯೆಯು ಎರಡು ದಿನಗಳಲ್ಲಿಯೂ ಸಮವಾಗಿದ್ದರೆ ಕ್ಷಯದಲ್ಲಿ ಪೂರ್ವದಿನದ್ದನ್ನೂ ವೃದ್ಧಿಯ ವಿಷಯದಲ್ಲಿ ಪರದಿನದ್ದನ್ನೂ ಗ್ರಹಿಸಬೇಕು.

೮೭. ಕ್ಷಯದಲ್ಲಿ ಪೂರ್ವದಿನದ್ದೂ ವೃದ್ಧಿಯಲ್ಲಿ ಪರದಿನದ್ದೂ ಸಮನಾಗಿದ್ದರೆ ಪರದಿನದ್ದನ್ನು ಗ್ರಹಿಸಬೇಕು. (ಕ್ಷಯವೆಂದರೆ ಕಾಲಶ್ರಾದ್ಧಾದಿಗಳು. ವೃದ್ಧಿಶ್ರಾದ್ಧವೆಂದರೆ ವೃದ್ಧಿಶ್ರಾದ್ಧವೆಂದರ್ಥ) ಪಾರ್ವಣಶ್ರಾದ್ಧವನ್ನು ಚಂದ್ರನು ಕ್ಷಯಿಸುತ್ತಿರುವ ದಿನದಲ್ಲಿ ಮಾಡಬೇಕು. ಎಂದರೆ ಪಾರ್ವಣಶ್ರಾದ್ಧಕ್ಕೆ ಕೃಷ್ಣಪಕ್ಷವು ಸೇರಿರುವ ಅಮಾವಾಸ್ಯೆ ಉತ್ತಮ. ಪಾಡ್ಯ ಬಂದಿರುವುದಿಲ್ಲ.

೮೮. ಅಮಾವಾಸ್ಯೆಯು ಹಿಂದಿನದಿನ ಮಧ್ಯಾಹ್ನದಲ್ಲಿ ಸೂಕ್ಷ್ಮವಾಗಿದೆ. ಮುಂದಿನದಿನ ಮಧ್ಯಾಹ್ನವ್ಯಾಪ್ತಿಯಾಗಿರದಿದ್ದರೆ ಮಧ್ಯಾಹ್ನವ್ಯಾಪಿನಿಯು ದಿನ ಏಕೋದ್ದಿಷ್ಟಶ್ರಾದ್ಧವನ್ನು ಮಾಡಬೇಕು. (ಭೂತವೆಂದರೆ ಚತುರ್ದಶಿಯು, ಆ ಚತುರ್ದಶಿಯ ಎಂಟನೇ ಅಂಶದಲ್ಲಿ ಕ್ಷೀಣಚಂದ್ರನಿಲ್ಲದಿದ್ದರೆ, ಮಧ್ಯಾಹ್ನವ್ಯಾಪಿನಿಯಾದ ಅಮಾವಾಸ್ಯೆಯೇ ಏಕೋದ್ದಿಷ್ಟಕ್ಕೆ ಯೋಗ್ಯವು.)

ಸಾಯಾಹ್ನವ್ಯಾಪಿನೀ ಯಾ ಸ್ಯಾತ್ಪಾರ್ವಣೇ ಸಾ ತಿಥಿರ್ಭವೇತ್ ।
ಅಲ್ಪಾಪರಾಹ್ಣಾ ಸಾ ಯಾಮಾ ಗ್ರಾಹ್ಯಾ ಶ್ರಾದ್ಧಾದಿಕೇ ಭವೇತ್ ॥ ೮೯ ॥

ಮೃತಾಹೇ ತ್ರಿಮುಹೂರ್ತಾ ಚ ಸಾಯಂಕಾಲೇ ತಿಥಿರ್ಭವೇತ್ ।
ಪರೇ ಹ್ಯಸ್ತಂ ಗತಾ ಯತ್ರ ತ್ರಿಮುಹೂರ್ತಂ ತು ಪೂರ್ವವತ್ ॥ ೯೦ ॥

ತತ್ರಾಪರೇದ್ಯುಃ ಶ್ರಾದ್ಧಂ ಸ್ಯಾಜ್ಜ್ಯೇಷ್ಠಪುತ್ರಸ್ಯ ನಾಶನಂ ।
ಅಮಾಶ್ರಾದ್ಧಂ ಯಥಾ ಕುರ್ಯಾನ್ಮೃತಾಹೇ ಸಮುಪಸ್ಥಿತೇ ।
ಮಧ್ಯಾಹ್ನವ್ಯಾಪಿನೀ ತತ್ರ ಹ್ಯದ್ವಿಜಸ್ಯ ವಿಧೀಯತೇ ॥ ೯೧ ॥

॥ ಶ್ರೀ ರಾಮ ಉವಾಚ ॥

ಶ್ರಾದ್ಧಕ್ರಮಮಶೇಷೇಣ ಮರ್ತ್ಯಕರ್ಮಕ್ರಮಂ ತಥಾ ।
ಪ್ರಾಸಂಗಿಕಾನಾಂ ಧರ್ಮಾಣಾಂ ನಿರ್ಣಯಂ ವಕ್ತುಮರ್ಹಸಿ ॥ ೯೨ ॥

---

೮೯. ಪಾರ್ವಣಶ್ರಾದ್ಧದಲ್ಲಿ ಸಾಯಂಕಾಲವ್ಯಾಪಿನಿಯಾಗಿರುವ ದಿನದ ಮೃತಾಹ ತಿಥಿಯನ್ನು ಗ್ರಹಿಸಬೇಕು. ಅಮಾವಾಸ್ಯೆಯು ಅಪರಾಹ್ಣದಲ್ಲಿ ಅಲ್ಪವಾಗಿದ್ದರೂ, ಅದನ್ನೇ ತೆಗೆದುಕೊಳ್ಳಬೇಕು.

೯೦. ಸತ್ತ ದಿನದಲ್ಲಿ ಮೂರು ಮುಹೂರ್ತಗಳು ಸಾಯಂಕಾಲಕ್ಕೆ ಸಿಕ್ಕಿದಂತೆ ತಿಥಿಯಿದ್ದರೆ ಮಾರನೆಯ ದಿನವೂ, ಅಸ್ತಕಾಲಕ್ಕೂ ಅದೇ ತಿಥಿಯು ಸಿಕ್ಕಿದರೆ ತ್ರಿಮೂರ್ತಮಧ್ಯಾಹ್ನವ್ಯಾಪಿನಿಯಾಗುತ್ತದೆ.

೯೧. ಆ ಸಂದರ್ಭದಲ್ಲಿ ಪರದಿನದಲ್ಲಿ ಶ್ರಾದ್ಧಮಾಡಿದರೆ ಜ್ಯೇಷ್ಠಮಗನು ಮೃತಿ ಹೊಂದುತ್ತಾನೆ. ಮೃತಾಹದ ದಿನ ಅಮಾವಾಸ್ಯೆಯಾಗಿದ್ದು ಆ ದಿನ ಎರಡು ಶ್ರಾದ್ಧಗಳು ಬಂದಂತಾಯಿತು. ಅಮಾಶ್ರಾದ್ಧವನ್ನು ಮಧ್ಯಾಹ್ನವ್ಯಾಪಿನಿಯಾದ ಅಮಾವಾಸ್ಯೆಯಿರುವಾಗ ಮುಂಜಿಯಾದವನಿಗೆ ಮಾಡಬೇಕು.

೯೨. ಶ್ರೀರಾಮನು ಹೇಳಿದನು :— ಶ್ರಾದ್ಧಕರ್ಮವನ್ನೂ, ಮನುಷ್ಯರು ಮಾಡಬೇಕಾದುದನ್ನೂ, ಅದರಲ್ಲಿ ಪ್ರಸಂಗದಿಂದ ಬರುವ ಧರ್ಮಗಳನ್ನೂ ಅವುಗಳ ನಿರ್ಣಯವನ್ನೂ ಹೇಳು.

॥ ಶಂಭುರುವಾಚ ॥

ಶ್ರಾದ್ಧಸ್ಯ ದಿವಸೇ ಪ್ರಾಪ್ತೇ ಪೂರ್ವೇದ್ಯುರ್ನಿಯಮಾನ್ವಿತಃ ।
ನಿಮಂತ್ರಯೀತ ವಿಪ್ರೇಂದ್ರಾನ್ವಿಪ್ರಲಕ್ಷಣಸಂಯುತಾನ್ ॥ ೯೩ ॥

ಏಕಭುಕ್ತಂ ಬ್ರಹ್ಮಚರ್ಯಮನ್ತ್ಯಜಾದ್ಯೈರಭಾಷಣಂ ।
ದನ್ತಧಾವನಮಭ್ಯಂಗನಖಕೇಶನಿಕೃಂತನಂ ॥ ೯೪ ॥

ಕರ್ತಾ ಕುರ್ವೀತ ಪೂರ್ವೇದ್ಯುಸ್ತ್ಯಕ್ತ್ವಾ ಚೈವ ಪರೇಽಹನಿ ।
ತ್ರಿಕಾಲಂ ಚೈವ ಪೂಜಾ ಚೇತ್ಪ್ರಾತರ್ದೇವಂ ಯಜೇತ್ಸ್ವಕಂ ॥ ೯೫ ॥

ಅರುಣೋದಯವೇಳಾಯಾಂ ಕರೋತಿ ಯದಿ ಪೂಜನಂ ॥ ೯೬ ॥

ಅಧಶ್ಶಾಯೀ ತಥಾಭೂತಃ ಪ್ರಾತರುತ್ಥಾಯ ಕರ್ಮವಿತ್ ।
ಪ್ರಾತಸ್ತ್ಯಮಪಿ ಯತ್ಕರ್ಮ ತತ್ಕೃತ್ವಾ ಸ್ನಾನಪೂರ್ವಕಂ ॥ ೯೭ ॥

---

೯೩. ಶಂಭುವು ಹೇಳಿದನು:—ಶ್ರಾದ್ಧದಿನ ಬಂದಾಗ ಹಿಂದಿನ ದಿನ ನಿಯಮದಿಂದಿದ್ದು ಬ್ರಾಹ್ಮಣಲಕ್ಷಣದಿಂದ ಕೂಡಿರುವ ಬ್ರಾಹ್ಮಣರನ್ನು ಕರೆಯಬೇಕು.

೯೪. ಕರ್ತೃವು ಹಿಂದನ ದಿನವೇ ಒಂದೇಹೊತ್ತು ಊಟಮಾಡಿ ಬ್ರಹ್ಮಚರ್ಯದಿಂದಿರಬೇಕು. ಅಂತ್ಯಜರೊಡನೆ ಮಾತನಾಡಬಾರದು. ಹಲ್ಲುಜ್ಜುವುದು. ನೀರು ಹಾಕಿಕೊಳ್ಳುವುದು, ಉಗುರು, ಕೂದಲುಗಳನ್ನು ತೆಗೆಸುವುದು (ಕ್ಷೌರ) ಇವನ್ನು ಹಿಂದಿನ ದಿನ ಮಾಡಿಸಿಕೊಳ್ಳಬೇಕು. ಶ್ರಾದ್ಧದ ದಿನ ಇವ್ಯೊಂದೂ ಬಾರದು.

೯೫. ಅವನು ತ್ರಿಕಾಲವಲ್ಲಿಯೂ ಪೂಜೆಯನ್ನಿಟ್ಟುಕೊಂಡಿದ್ದರೆ ಬೆಳಗಿನ ಪೂಜೆಯನ್ನು ಮಾತ್ರ ಶ್ರಾದ್ಧದ ದಿನ ಮಾಡಬೇಕು.

೯೬. ಆ ಪೂಜೆಯನ್ನು ಅರುಣೋದಯದಲ್ಲಿ ಮಾಡಬೇಕು.

೯೭. ನೆಲದ ಮೇಲೆ ಮಲಗಿರುವುದು, ಬೆಳಗ್ಗೆ ಎದ್ದು ಬೆಳಗಿನ ಕೃತ್ಯಗಳನ್ನು ಮುಗಿಸಿಕೊಂಡು ಸ್ನಾನಮಾಡಿ ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು ದೇವ ಋಷಿ ಪಿತೃಗಳ ಕಾರ್ಯವನ್ನು ಮಾಡಿದರೆ ಬ್ರಹ್ಮಲೋಕವನ್ನು ಹೊಂದುತ್ತಾನೆ.

ಋಣತ್ರಯವಿನಿರ್ಮುಕ್ತೋ ಯಾಸ್ಯತಿ ಬ್ರಹ್ಮ ತತ್ಪರಂ ।
ಸೂರ್ಯಸ್ಯೋದ್ಯಯವೇಳಾಯಾಂ ಶಿವಪೂಜಾಂ ಕರೋತಿ ಯಃ ॥ ೯೮ ॥

ಸೂರ್ಯೇಣ ಸಮತೇಜಸ್ವೀ ಶಿವಲೋಕೇ ಮಹೀಯತೇ ।
ಉದಿತೇ ಭಾಸ್ಕರೇ ಪಶ್ಚಾದ್ಘಟಿಕಾಂತರಪೂಜನಂ ॥ ೯೯ ॥

ರುದ್ರೇಣ ಸಮತೇಜಸ್ವೀ ಶಿವಲೋಕೇ ಮಹೀಯತೇ ।
ದ್ವಿತೀಯಘಟಿಕಾಯಾಂ ತು ಯದಿ ಪೂಜನಮೀಶಿತುಃ ॥ ೧೦೦ ॥

ವಾಯುನಾ ಸಮತೇಜಸ್ವೀ ಶಿವಲೋಕೇ ಮಹೀಯತೇ ।
ತೃತೀಯಘಟಿಕಾಯಾಂ ತು ಶಿವಪೂಜಾಂ ಸಮಾಚರೇತ್ ॥ ೧೦೧ ॥

ಕುಬೇರಸಮತೇಜಸ್ವೀ ಶಿವಲೋಕೇ ಮಹೀಯತೇ ।
ಚತುರ್ಥೀಪಂಚಮೀಷಷ್ಠೀಸಪ್ತಮೀಘಟಿಕಾಸು ಯಃ ॥ ೧೦೨ ॥

ಶಿವಂ ಪೂಜಯತೇ ಭಕ್ತ್ಯಾ ಶಿವಲೋಕೇ ಮರುತ್ಸಮಃ ॥
ತತ್ಕಾಲ ಏವ ಕ್ರಿಯತೇ ಪೂಜಾ ಯತ್ಕಾಲಚೋದಿತಾ ॥ ೧೦೩ ॥

---

೯೮. ಸೂರ್ಯೋದಯ ವೇಳೆಯಲ್ಲಿ ಶಿವಪೂಜೆಯನ್ನು ಮಾಡಿದವರೆ ಸೂರ್ಯನಂತೆ ತೇಜಸ್ವಿಯಾಗಿ ಶಿವಲೋಕವನ್ನು ಹೊಂದಿ ಸುಖಿಸುತ್ತಾನೆ.

೯೯. ಸೂರ್ಯೋದಯವಾದನಂತರ ಎರಡು ಘಳಿಗೆಯ ಮೇಲೆ ಪೂಜಿಸಿದರೆ ರುದ್ರನಿಗೆ ಸಮವಾದ ತೇಜಸ್ಸು ಹೊಂದಿ ಶಿವಲೋಕದಲ್ಲಿ ಸುಖಿಸುತ್ತಾನೆ.

೧೦೦. ಎರಡನೆಯ ಘಳಿಗೆಯಲ್ಲಿ ಪೂಜೆಮಾಡಿದರೆ ವಾಯುವಿನ ತೇಜಸ್ಸನ್ನು ಹೊಂದಿ ಶಿವಲೋಕವನ್ನು ಹೊಂದಿ ಸುಖಿಸುತ್ತಾನೆ.

೧೦೧. ಮೂರನೆಯ ಘಳಿಗೆಯಲ್ಲಿ ಪೂಜಿಸಿದರೆ ಕುಬೇರನ ತೇಜಸ್ಸನ್ನು ಹೊಂದಿ ಶಿವಲೋಕದಲ್ಲಿ ಸುಖಿಸುತ್ತಾನೆ.

೧೦೨. ನಾಲ್ಕು, ಐದು, ಆರು, ಏಳು ಇವುಗಳ ಘಳಿಗೆಯಲ್ಲಿ ಪೂಜಿಸಿದರೆ ಶಿವಲೋಕದಲ್ಲಿ ಮರುತ್ತಗಳ ಜೊತೆಯಲ್ಲಿ ಸುಖಿಸುತ್ತಾನೆ.

೧೦೩. ಅದಿಲ್ಲದಿದ್ದರೆ ಪೂಜೆಯು ಯಾವ ಕಾಲದಲ್ಲಿ ಹೇಳಲ್ಪಟ್ಟಿದೆಯೋ ಆ ಕಾಲದಲ್ಲಿ ಮಾಡಬೇಕು.

ಯಥಾಪ್ರತಿಜ್ಞಮಥವಾ ಗೃಹೀತನಿಯಮೋ ಭವೇತ್ ।
ಉಪಚಾರೇಷು ಶಕ್ತ್ಯಾ ವೈ ನಿಯಮಂ ಪರಿಪಾಲಯೇತ್ ।
ನಿಯಮಾತಿಕ್ರಮೇ ವಾಪಿ ಯಾಗಶ್ಚ ಸ್ಯಾದ್ವಿಭೋ ಯದಿ ॥ ೧೦೪ ॥

॥ ಶ್ರೀ ರಾಮ ಉವಾಚ ॥

ಕ್ವ ಪೂಜಾ ದೇವದೇವಸ್ಯ ಶಂಕರಸ್ಯಾಮಿತೌಜಸಃ ।
ಸ್ಮರಣಾತ್ಪಾಪನಾಶಸ್ಯ ಸ್ಮರಣಾನ್ಮೋಕ್ಷದಸ್ಯ ಚ ॥ ೧೦೫ ॥

ಶಿವಸ್ಯ ಶಿವರೂಪಸ್ಯ ಶಿವತತ್ತ್ವಾರ್ಥವೇದಿನಃ ।
ಸೋಮಸ್ಯ ಸೋಮಭೂಷಸ್ಯ ಸೋಮನೇತ್ರಸ್ಯ ರಾಜಿತುಃ ॥ ೧೦೬ ॥

ವೇದಮೂರ್ತೇರಮೂರ್ತೇಶ್ಚ ವೇದಸಾರಸ್ಯ ವೇದಿನಃ ।
ವೇದ ವೇದಾಂಗವಿಜ್ಞಸ್ಯ ವೇದ್ಯಾವೇದ್ಯಸ್ಯ ಯೋಗಿನಃ ॥ ೧೦೭ ॥

---

೧೦೪. ಅನಂತರ ಅವನ ಪ್ರತಿಜ್ಞೆಯಿರುವಂತೆ ನಿಯಮವನ್ನು ಆಚರಿಸಬೇಕು. ಉಪಚಾರಗಳಲ್ಲಿಯೂ, ನಿಯಮಗಳನ್ನು ಕಾಪಾಡಿಕೊಂಡಿರಬೇಕು. ಒಂದುವೇಳೆ ನಿಯಮವನ್ನು ಮೀರಿದರೂ ಅದು ಯಾಗದ ಫಲವನ್ನೂ ಕೊಡುತ್ತದೆ.

೧೦೫. ರಾಮನು ಕೇಳಿದನು :—ದೇವದೇವನಾದ, ಅಪಾರವಾದ ತೇಜಸುಳ್ಳ, ಸ್ಮರಣದಿಂದಲೇ ಪಾಪಗಳನ್ನು ನಾಶಮಾಡಿ ಮೋಕ್ಷವನ್ನು ಕೊಡುವ, ಶಂಕರನಿಗೆ ಪೂಜೆಯನ್ನು ಹೇಗೆಮಾಡಬೇಕು ?

೧೦೬. ಮಂಗಳರೂಪನು, ಮಂಗಳತತ್ತ್ವವನ್ನು ತಿಳಿದಿರತಕ್ಕವನು, ಉಮೆಯೊಡನೆ ಕೂಡಿದವನು, ಚಂದ್ರನನ್ನೇ ತಲೆಯಲ್ಲಿ ಅಲಂಕಾರವಾಗಿಟ್ಟುಕೊಂಡಿರುವವನು, ಚಂದ್ರನನ್ನೇ ಕಣ್ಣಾಗಿ ಉಳ್ಳವನು.

೧೦೭. ವೇದಗಳ ರೂಪನು, ಆಕಾರರಹಿತನು, ವೇದದ ಸಾರವನ್ನು ಬಲ್ಲವನು, ವೇದವೇದಾಂಗಗಳನ್ನು ಬಲ್ಲವನು, ತಿಳಿಯಲು ಸಾಧ್ಯನು, ಅಸಾಧ್ಯನು, ಯೋಗಿಯೂ ಆಗಿರುವನು.

ಗೋಕ್ಷೀರಸಮದೇಹಸ್ಯ ಗೋಕ್ಷೀರಸ್ನಾನಮೋದಿನಃ ।
ಗೋಪತ್ರಿಣಸ್ತ್ರೀಣೇತ್ರಸ್ಯ ತ್ರಯೀನೇತ್ರಸ್ಯ ಮಾಯಿನಃ ॥ ೧೦೮ ॥

ಪಶ್ನಮಧ್ಯೇ ತಥಾ ರಾಮಂ ಶಿವಜ್ಞಾನಮಥಾವಿಶತ್ ।
ಸ್ಥಾಣುಭೂತ ಇವಾಸೀನೋ ನಾಸಾಗ್ರನ್ಯಸ್ತಲೋಚನಃ ॥ ೧೦೯ ॥

ಆನಂದನಿಷ್ಯಂದವಿಲೋಚನಾಶ್ರು-
ಪ್ರವಾಹಸಂಸ್ಪೃಷ್ಟಕಪೋಲದೇಶಃ ।
ದಧಾರ ದೇವಂ ಗಿರಿಶಂ ಹೃದಂಬುಜೇ
ಗೋಕ್ಷೀರಸುಸ್ನಿಗ್ಧಸುಚಾರುಗಾತ್ರಂ ॥ ೧೧೦ ॥

ಪ್ರತಿಬಿಂಬಮಥೋ ಗಾತ್ರೇ ರಾಮಸ್ಯ ಸಮದೃಶ್ಯತ ।
ದೃಷ್ಟ್ವೈವ ಬಿಂಬಿತಂ ಶಂಭುಂ ಚತುರ್ಬಾಹುಂ ತ್ರಿಲೋಚನಂ ॥ ೧೧೧ ॥

ವಿಸ್ಮಯಂ ಪರಮಂ ಯಾತಾಃ ಸರ್ವೇ ಮುನಿಪರೀಶ್ವರಾಃ ।
ಶಂಭೋರ್ವಕ್ಷಃಸ್ಥಿತಂ ರಾಮಂ ದೃಷ್ಟ್ವಾ ದೀಪ್ತಾಕೃತಿಂ ಶುಭಂ ॥ ೧೧೨ ॥

---

೧೦೮. ಗೋವಿನ ಹಾಲಿನಂತೆ ಬೆಳ್ಳಗಿರುವ ದೇಹವುಳ್ಳವನು, ಗೋವಿನ ಹಾಲಿನಲ್ಲಿ ಬಹುವಾಗಿ ಸ್ನಾನಮಾಡುವವನು, ಎತ್ತಿನ ಮೇಲೆ ಕೂತುಕೊಳ್ಳುವವನು, ಮೂರು ಕಣ್ಣುಳ್ಳವನು, ವೇದಗಳೇ ಕಣ್ಣಾಗುಳ್ಳವನು, ಮಾಯೆಯನ್ನು ತೋರಿಸುವವನು, ಶಿವನು ಇಂತಹವನು.

೧೦೯. ಪ್ರಶ್ನೆಯ ಮಧ್ಯದಲ್ಲಿಯೇ ರಾಮನನ್ನು ಶಿವಜ್ಞಾನವು ಆವರಿಸಿತು. ಮೂಗಿನ ತುದಿಯಲ್ಲಿ ದೃಷ್ಟಿಯುಳ್ಳವನಾಗಿ ಅಚಲನಾದನು.

೧೧೦. ಆನಂದದಿಂದ ಹರಿಯುತ್ತಿರುವ ಕಣ್ಣೀರಿನ ಪ್ರವಾಹವು ರಾಮನ ಕಪೋಲಗಳಲ್ಲಿ ಹರಿಯುತ್ತಿದ್ದಿತು. ಹೀಗಿರಲು ಶುದ್ಧಸ್ಫಟಿಕಾಕಾರನಾದ ಮನೋಹರ ದೇಹವುಳ್ಳ ಶಿವನನ್ನು ಹೃತ್ಕಮಲದಲ್ಲಿ ಧ್ಯಾನಿಸಿ ಸ್ಥಿರವಾಗಿಕೊಂಡನು.

೧೧೧. ರಾಮನ ದೇಹದಲ್ಲಿ ಶಂಭುವಿನ ಪ್ರತಿಬಿಂಬವು ಕಂಡಿತು. ಪ್ರತಿಬಿಂಬಿತವಾದ ನಾಲ್ಕು ತೋಳು, ಮೂರು ಕಣ್ಣುಗಳೂ ಉಳ್ಳ ಶಂಭುವನ್ನು ನೋಡಿ ಅಲ್ಲಿದ್ದ ಋಷಿಗಳೂ, ಕಪೀಶ್ವರರೂ ಆಶ್ಚರ್ಯಭರಿತರಾದರು.

೧೧೨-೧೧೩. ಶಂಭುವಿನ ಎದೆಯಲ್ಲಿ ರಾಮನು ಪ್ರಕಾಶಿಸುತ್ತಿರುವುದನ್ನು

ತೂಷ್ಣೀಂ ಬಭೂವುರ್ವ್ಯಾಮಾರ್ಥಮಥ ರಾಮ ಉದೈಕ್ಷತ ।
ಸ್ವಪ್ರಶ್ನಮನುಸಂಧಾಯ ಪ್ರಾಹ ಸರ್ವಂ ವದೇತಿ ಚ ॥ ೧೧೪ ॥

॥ ಶಂಭುರುವಾಚ ॥

ಅಚಲೇಯಾ ಸದಾ ಪೂಜಾ ಚಲೇ ವಾಪಿ ಯಥೇಚ್ಛಯಾ ।
ಲಿಂಗೇ ಸಂಪೂಜನಂ ಮುಖ್ಯಮಲಾಭೇ ಪ್ರತಿಮಾದಿಷು ॥ ೧೧೪ ॥

ಅಧಿಕಾರವಿಶೇಷೇಣ ಯತ್ರ ಕುತ್ರಾಪಿ ಪೂಜನಂ ।
ನಿರ್ಗುಣಂ ಸಗುಣಂ ವಾಪಿ ಸಫಲಂ ಲಿಂಗಪೂಜನಂ ॥ ೧೧೫ ॥

ಪ್ರತಿಮಾದಿಕೃತಾ ಪೂಜಾ ನಿರ್ಗುಣಾ ಸಫಲಾ ನಹಿ ।
ಅಚಲೇ ವಾ ಚಲೇ ವಾಪಿ ಪೂಜಾ ಲಿಂಗೇ ಪ್ರಶಸ್ಯತೇ ॥ ೧೧೬ ॥

---

ಅವರೆಲ್ಲರೂ ನೋಡಿ ಕ್ಷಣಕಾಲ ನಿಶ್ಶಬ್ದರಾಗಿದ್ದರು. ಅನಂತರ ರಾಮನು ಕಂಡನು. ಅವನು ತನ್ನ ಪ್ರಶ್ನೆಯನ್ನು ಜ್ಞಾಪಿಸಿಕೊಂಡು ಎಲ್ಲವನ್ನೂ ಹೇಳೆಂದು ಕೇಳಿದನು.

೧೧೪. ಶಂಭುವು ಹೇಳಿದನು :—ಸ್ಥಾಪಿಸಿರುವ ಚಲಪ್ರತಿಮೆಗಳಲ್ಲಾಗಲಿ, ಚಲವಾದ ಸಾಲಿಗ್ರಾಮ ಮುಂತಾದುವುಗಳಲ್ಲಾಗಲಿ, ಇಷ್ಟಬಂದುದರಲ್ಲಿ ಪೂಜೆಯನ್ನು ಮಾಡಬೇಕು. ಇವುಗಳಲ್ಲಿ ಲಿಂಗದಲ್ಲಿ ಮಾಡುವ ಪೂಜೆಯು ಉತ್ತಮವು. ಆಲಿಂಗವು ಸಿಕ್ಕದಿದ್ದರೆ ಪ್ರತಿಮೆಗಳಲ್ಲಿ ಪೂಜೆಮಾಡಬೇಕು.

೧೧೫. ಯಾವ ಜಾತಿ, ಮನುಷ್ಯನಿಗೆ ಎಷ್ಟರಮಟ್ಟಿನ ಅಧಿಕಾರವಿದೆಯೋ ಅಷ್ಟರಮಟ್ಟಿನ ಪೂಜೆಯನ್ನು ಅಂತಹ ಲಿಂಗದಲ್ಲಿಯೇ ಪ್ರತಿಮೆಯಲ್ಲಿಯೇ ಮಾಡಬೇಕು. ಹಾಗೆ ಮಾಡಿದರೆ ಗುಣವನ್ನು ಕೊಡತಕ್ಕುದಾಗಿಯೂ, ವ್ಯತಿರಿಕ್ತವಾಗಿ ಮಾಡಿದರೆ ಫಲಕೊಡದಿರುವುದಾಗಿಯೂ, ಆಗುತ್ತದೆ. ಆದರೆ ಲಿಂಗವನ್ನು ಪೂಜಿಸಿದರೆ ಅದು ಹೇಗಿದ್ದರೂ ಅಧಿಕಾರಿ ಅನಧಿಕಾರಿಗಳನ್ನು ನೋಡದೆ ಫಲವನ್ನೇ ಕೊಡುತ್ತದೆ.

೧೧೬. ಪ್ರತಿಮೆಯಲ್ಲಿ ಶಂಭುವನ್ನು ಪೂಜಿಸಿದರೆ ಅದಕ್ಕೆ ಫಲವಿಲ್ಲ. ಚಲವಾಗಲಿ ಅಚಲವಾಗಲಿ ಆಗಿ ಅದು ಲಿಂಗವಾಗಿದ್ದರೆ ಪ್ರಶಸ್ತವಾದುದೇ ಆಗುತ್ತದೆ.

**ಚಲಸ್ಯ ಪೂಜನಂ ವಕ್ಷ್ಯೇ ಸ್ಥಾಪನೋದ್ವಾಸನೇ ತಥಾ ।**
**ತೇ ಉಭೇ ನ ವಿಜಾನಾತಿ ಕಶ್ಚಿನ್ಮುನಿರಪಿ ಕ್ವಚಿತ್ ॥ ೧೧೭ ॥**

**ಸ್ಥಾಪಯಂತಿ ಹೃದಬ್ಜೇ ವೈ ಗೋಪಯಂತಿ ಯಜಂತಿ ಚ ।**
**ಉದ್ವಾಸಯಂತಿ ದೇವೇಶಂ ಶಂಕರಂ ಯೋಗಿನಸ್ಸದಾ ॥ ೧೧೮ ॥**

**ಕ್ರಿಯಾ ಚಾತೀವ ಹೋತೄಣಾಂ ವಹ್ನೌ ದೇವಂ ತ್ರಿಯಂಬಕಂ ।**
**ಪೂಜಕಾನಾಮಶೇಷಾಣಾಂ ಶಿವಲಿಂಗೇ ಮಹೇಶ್ವರಂ ॥ ೧೧೯ ॥**

**ಲಿಂಗಸ್ಯ ಸ್ಥಾಪನಂ ಪೂಜಾಪ್ಯುದ್ವಾಸನಮಥೈವ ಚ ।**
**ಧಾರಣಂ ಶಂಕರಸ್ಯೈವ ಲಿಂಗಮೇವ ಮಹೇಶ್ವರಂ ॥ ೧೨೦ ॥**

**ಸಜ್ಜಿಕಂ ಪರಮೋತ್ಕೃಷ್ಟಂ ಸ್ವರ್ಣಂ ಚೈವ ವಿನಿರ್ಮಿತಂ ।**
**ರಾಜತೈರ್ವಾ ದಳೈಃ ಕಾರ್ಯಂ ರಾಜತೈರ್ವೈಣವೈಸ್ತು ಯಾ ॥ ೧೨೧ ॥**

**ಲತಾಸೂತ್ರೈರಥೋ ವಾಪಿ ರಚಿತಂ ದಾರುಣಾಥವಾ ।**
**ವಸ್ತ್ರೇಣ ವಾಥ ರಚಿತಂ ಮೃದಾ ವಿರಚಿತಂ ಭವೇತ್ ॥ ೧೨೨ ॥**

---

೧೧೭. ಚಲಪ್ರತಿಮೆಯಲ್ಲಿ ಸ್ಥಾಪನ, ಉದ್ವಾಸನಾದಿ ಪೂಜೆಗಳನ್ನು ಹೇಳುತ್ತೇನೆ. ಸ್ಥಾಪನೋದ್ವಾಸನೆಗಳನ್ನು ಯಾವ ಮುನಿಯೂ ಎಲ್ಲಿಯೂ ತಿಳಿದಿಲ್ಲ.

೧೧೮. ಯೋಗಿಗಳು ಹೃತ್ಪುಂಡರೀಕದಲ್ಲಿಯೇ ಸ್ಥಾಪಿಸಿ ಗುಟ್ಟಾಗಿ ಪೂಜೆ ಮಾಡುತ್ತಾರೆ. ಅನಂತರ ಸ್ವಾಮಿಯನ್ನು ಉದ್ವಾಸನೆ ಮಾಡುತ್ತಾರೆ.

೧೧೯. ಹೋತೃಗಳು, ಯಜ್ಞಯಾಗಾದಿ ಕ್ರಿಯೆಗಳ ರೂಪದಲ್ಲಿ ವಹ್ನಿಯಲ್ಲಿ ಶಿವನನ್ನೂ, ಮತ್ತೆಲ್ಲ ಪೂಜಕರೂ ಶಿವಲಿಂಗದಲ್ಲಿ ಶಿವನನ್ನೂ ಆವಾಹಿಸುತ್ತಾರೆ.

೧೨೦. ಲಿಂಗಕ್ಕೆ ಸ್ಥಾಪನ, ಪೂಜೆ, ಧಾರಣ, ಉದ್ವಾಸನೆಗಳೆಲ್ಲವನ್ನೂ ಮಾಡಬೇಕು.

೧೨೧. ಚಿನ್ನದಿಂದ ಮಾಡಿದ ಮಂಟಪವು ಉತ್ಕೃಷ್ಟವು. ಬೆಳ್ಳಿಯಲ್ಲಿ ಮಾಡಿದರೂ, ಬೆಳ್ಳಿ ಬಿದಿರುಗಳಿಂದ ಮಾಡಿದರೂ ಆಗಬಹುದು.

೧೨೨. ಲತೆಗಳ ನಾರಿನಿಂದಾಗಲಿ, ಮರದಿಂದಾಗಲಿ, ಬಟ್ಟೆಯಿಂದಾಗಲಿ, ಮಣ್ಣಿನಿಂದಾಗಲಿ ಪ್ರತಿಮೆಯನ್ನು ಇಡುವ ಮಂಟಪವನ್ನು ಮಾಡಬೇಕು.

ತತ್ರ ಸಂವೇಷ್ಟ್ಯ ವಸ್ತ್ರೇಣ ಸುಗಂಧೇನ ಸಮನ್ವಿತೇ ।
ಧೌತವಸ್ತ್ರಯುಗೇ ಶುದ್ಧೇ ಮದ್ವಾಸನಸಮನ್ವಿತೇ ॥ ೧೨೩ ॥

ಶೀತೋಷ್ಣರಹಿತೇ ಪಾದಚತುಷ್ಟಯಸಮನ್ವಿತೇ ।
ಪ್ರಾಪ್ತತ್ರಿಚ್ಛೇದಸೋಪೇತೇ ಕ್ರಿಮಿಕೀಟವಿವರ್ಜಿತೇ ॥ ೧೨೪ ॥

ಧೌತೇನ ಮೃದುವಸ್ತ್ರೇಣ ಸರ್ವತೋ ವೇಷ್ಟ್ಯ ತಂ ಶಿವಂ ।
ನಿನ್ಯಸ್ಯ ಸಜ್ಜಿಕಾಮಧ್ಯೇ ಪ್ರವೃತ್ಯ ಚ ಪುನರ್ವಿಭುಂ ॥ ೧೨೫ ॥

ಏಷಾ ಹಿ ಸಜ್ಜಿಕಾ ರಾಮ ದೇವಸ್ಯಾಗ್ರೇಽತಿ ಕೀರ್ತಿತಾ ।
ತಸ್ಯ ಚ ಸ್ಥಾಪನಂ ಪಾಠೋ ರಹಸ್ಯೇ ಚ ಮಹೇಶಿತುಃ ॥ ೧೨೬ ॥

ಅಥವಾ ಭಿತ್ತಿಮೂಲೇ ಸ್ಯಾದ್ದೇವವೇಶ್ಮಾಮಥಾಪಿ ವಾ ।
ಸುರಕ್ಷಿತೇ ತಥಾ ದೇಶೇ ರಕ್ಷಕಂ ಚ ನಿಯೋಜಯೇತ್ ॥ ೧೨೭ ॥

---

೧೨೩-೧೨೫. ಅವಕ್ಕೆ ಬಟ್ಟೆಗಳನ್ನು ಕಟ್ಟಿ ಸುಗಂಧಗಳಿಂದ ವಾಸನೆ ಬರುವಂತೆ ಮಾಡಬೇಕು. ಅಲ್ಲಿ ಬೆಳ್ಳಗಿರುವ ಬಟ್ಟೆಗಳೂ, ಸ್ವಾಮಿಯನ್ನು ನೋಡಿದಕೂಡಲೇ ತಿಳಿಯುವಂತೆ ಇರಬೇಕು. ನಿಲ್ಲಿಸುವುದಕ್ಕೂ, ತೆಗೆಯುವುದಕ್ಕೂ ಆಗತಕ್ಕದ್ದಾಗಿರಬೇಕು. ಹುಳುಗಳಿರಬಾರದು. ಅಂತಹ ಮಂಟಪದ (ಸಜ್ಜೆ) ಮಧ್ಯದಲ್ಲಿ ಶುದ್ಧವಾದ ಬಟ್ಟೆಯಿಂದ ಶಿವನನ್ನು ಸುತ್ತಿ ಇಡಬೇಕು.

೧೨೬. ಈ ಸಜ್ಜಿಕೆಯನ್ನು ದೇವನ ಮುಂದೆ ಬೇಕಾದರೂ ಇಡಬಹುದು. ಅಂತು ಆ ಸಜ್ಜೆಯನ್ನು (ಮಂಟಪ) ಮಾಡಬೇಕೆಂಬುದು ಶಿವನ ರಹಸ್ಯ. ಕೆಲವರು ಶಿವನಿಡುವ ಪಾಣಿಬಟ್ಟಲಿಗೆ ಸಜ್ಜಿಕೆಯೆನ್ನುತ್ತಾರೆ. ಆ ರೀತಿಯಲ್ಲಿ ಮೇಲೆ ಹೇಳಿದುವುಗಳಿಂದ ಪಾಣಿಬಟ್ಟಲನ್ನು ಮಾಡಿ ಮಧ್ಯದಲ್ಲಿ ಶಿವನನ್ನು ಸ್ಥಾಪಿಸಬೇಕೆಂದರ್ಥವು. ಇದನ್ನೇ ಶಿವಭಕ್ತರು ಕರಡಿಗೆ ಎಂದು ಹೇಳುತ್ತಾರೆ.

೧೨೭. ಅದಿಲ್ಲದಿದ್ದರೆ ಗೋಡೆಯ ಬುಡದಲ್ಲಿಯಾಗಲಿ, ದೇವರ ಜಗುಲಿಯಲ್ಲಾಗಲಿ ಅಥವಾ ತೊಂದರೆಬರದೆ ಸುರಕ್ಷಿತವಾಗಿರುವ ಜಾಗದಲ್ಲಿಡಬೇಕು. ಕಾಪಾಡತಕ್ಕವನನ್ನು ನಿಯಮಿಸಬೇಕು.

ಪ್ರಾಣಾದೇವಾವಿನಾಭಾವಂ ಕುರ್ವೀತ ನಿಯಮೈಸ್ಸಹ ।
ಏತದ್ಧಿ ರಾಜಸಂ ಪ್ರೋಕ್ತಂ ಸ್ಥಾಪನಂ ಪರಮಾತ್ಮನಃ ॥ ೧೨೮ ॥

ಸಾತ್ತ್ವಿಕಂ ಸ್ವಸಮೀಪಸ್ಥಂ ಧಾರಣಂ ತಾಮಸಂ ಪುನಃ ।
ಧಾರಣಂ ಗಾತ್ರಸಂಸ್ಪರ್ಶಮಥವಾ ದೇಹಗೋಪನಂ ॥ ೧೨೯ ॥

ಮಸ್ತಕೇ ಧಾರಣಂ ಮುಖ್ಯಂ ಬ್ರಹ್ಮಣಾ ಚ ತಥಾ ಕೃತಂ ।
ವಿನ್ಯಸ್ಯ ಮುಕುಟಸ್ಯಾಂತೇ ಧಾರಣಂ ಶುಭಮುಚ್ಯತೇ ॥ ೧೩೦ ॥

ಲಲಾಟೇ ಧಾರಣಂ ಶಸ್ತಂ ಯಥಾ ಲಕ್ಷ್ಮ್ಯಾ ಧೃತಂ ಶುಭಂ ।
ಬಾಣೇನ ಚ ಧೃತಂ ಮೂರ್ಧ್ನಿ ದಕ್ಷಿಣೋರಸಿ ವಾ ಪುನಃ ॥ ೧೩೧ ॥

ಕರ್ಣೇ ಚ ಹರಿಕರ್ಣೇನ ಮುನಿನಾ ಪರಮರ್ಷಿಣಾ ।
ವಿನಿರ್ಭಿದ್ಯ ತಥಾ ಗಾತ್ರಂ ಲೋಹಸ್ಥಾನಂ ಪ್ರಕಲ್ಪ್ಯ ಚ ॥ ೧೩೨ ॥

---

೧೨೮. ನಿಯಮದಿಂದ ಪ್ರಾಣಪ್ರತಿಷ್ಠಾಪನೆ ಮಾಡಬೇಕು. ಈ ಸ್ಥಾಪನೆಯು ರಾಜಸವಾದುದು.

೧೨೯. ತನ್ನ ಹತ್ತಿರದಲ್ಲೇ ಇರುವುದು ಸಾತ್ತ್ವಿಕವಾದುದು. ಧಾರಣೆಮಾಡಿಕೊಳ್ಳುವುದು ತಾಮಸವಾದುದು. ದೇಹಕ್ಕೆ ಸೇರಿಕೊಂಡಂತೆ ಇಟ್ಟುಕೊಳ್ಳುವುದು, ಅಲ್ಲದಿದ್ದರೆ ದೇಹದಲ್ಲಿ ಕಟ್ಟಿಕೊಂಡಿಟ್ಟುಕೊಳ್ಳುವುದೂ ತಾಮಸಗಳೇ.

೧೩೦. ತಲೆಯಲ್ಲಿ ಧರಿಸುವುದೇ ಮುಖ್ಯವು. ಬ್ರಹ್ಮನು ಹಾಗೆ ಮಾಡಿದ್ದಾನೆ. ಕಿರೀಟದಲ್ಲಿಟ್ಟು ಧಾರಣೆಮಾಡಿಕೊಳ್ಳುವುದು ಶುಭವಾಗಿರುತ್ತದೆ.

೧೩೧. ಹಣೆಯಲ್ಲಿ ಧರಿಸುವುದು ಪ್ರಶಸ್ತವು. ಲಕ್ಷ್ಮಿಯು ಹಾಗೆಯೇ ಮಾಡಿದ್ದಾಳೆ. ಬಾಣಾಸುರನು ತಲೆಯಲ್ಲಿ ಧರಿಸಿದ್ದಾನೆ. ಅಲ್ಲದಿದ್ದರೆ ಬಲಗಡೆಯ ಎದೆಯಲ್ಲಿ ಬೇಕಾದರೂ ಇರುವಂತೆ ಧರಿಸಬಹುದು.

೧೩೨. ಕಿವಿಯಲ್ಲಿ ಹರಿಕರ್ಣನೆಂಬ ಋಷಿಯು ಧರಿಸಿದ್ದನು. ಕೆಲವು ಜನ ಉತ್ತಮರಾದ ರಾಕ್ಷಸರು ದೇಹವನ್ನು ಕತ್ತರಿಸಿ ಅಲ್ಲಿ ಲೋಹದ ಘರಣಿಯನ್ನಿಟ್ಟುಕೊಂಡು ಅದರಲ್ಲಿ ಲಿಂಗವನ್ನು ಇಟ್ಟುಕೊಳ್ಳುತ್ತಾರೆ.

ಧಾರಯಂತಿ ತಥಾ ಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ ।
ಅನಿಕೇತನಮುತ್ಯಾನಾಮಶಕ್ತಾನಾಂ ಶಿರೋಧೃತಿಃ ॥ ೧೩೩ ॥

ಅಧಮಾಧಮಮಾಖ್ಯಾತಂ ನೀವೀಬಂಧಾದಿಧಾರಣಂ ।
ತೇಷು ತೂಚ್ಛಿಷ್ಟಸಂಪ್ರಾಪ್ತೌ ಮಸ್ತಕೇ ಧಾರಣಂ ಭವೇತ್ ॥ ೧೩೪ ॥

ಅಧಮಾಧಮವೃತ್ತೀನಾಂ ಸದಾ ವೈ ಲಿಂಗಧಾರಣಂ ।
ಪಾಪಿನಾಮಪಿ ಚಾಶ್ಚರ್ಯಂ ಯಮಲೋಕೋ ನ ವಿದ್ಯತೇ ॥ ೧೩೫ ॥

॥ ಶ್ರೀರಾಮ ಉವಾಚ ॥

ಚಿತ್ರಗುಪ್ತೇನ ಲಿಖಿತಾ ಲಲಾಟೇ ಯಾ ಲಿಪಿರ್ದೃಢಾ ।
ತಯಾ ಲಿಪ್ಯಾ ತು ನಿಯತಂ ನರಕಂ ಕಥಮನ್ಯಥಾ ॥ ೧೩೬ ॥

ಕರೋತಿ ಪೂಜನಂ ಶಂಭೋಃ ಪಾಪಂ ನಾಶಯತೇ ಕಥಂ ॥ ೧೩೭ ॥

---

೧೩೩. ಮನೆಯಿಲ್ಲದವರೂ ಅಶಕ್ತರೂ ತಲೆಯಲ್ಲಿ ಧರಿಸಿಕೊಳ್ಳಬಹುದು.

೧೩೪. ಉಟ್ಟುಕೊಳ್ಳುವ ಬಟ್ಟೆಯ ಗಂಟಿನಲ್ಲಿ ಕಟ್ಟಿಕೊಳ್ಳುವುದು ಅಧಮಾಧಮವು. ಅವರಿಗೆ ಅಶುಚಿಯಾದರೆ ತಲೆಯಲ್ಲಿಟ್ಟುಕೊಳ್ಳಬೇಕಾಗುವುದು.

೧೩೫. ಅಧಮಾಧಮ ವೃತ್ತಿಯುಳ್ಳವರೂ, ಸದಾಕಾಲದಲ್ಲಿಯೂ ಲಿಂಗವನ್ನು ಧರಿಸಿರುತ್ತಾರೆ. ಅಂತಹ ಪಾಪಿಗಳಿಗೆ ಯಮಲೋಕದಲ್ಲಿ ಜಾಗವೇ ಇಲ್ಲ.

೧೩೬. ಶ್ರೀರಾಮನು ಕೇಳಿದನು:—ಚಿತ್ರಗುಪ್ತನು ಹಣೆಯಲ್ಲಿ ಯಾವುದನ್ನು ಬರೆದಿದ್ದಾನೆಯೋ ಆ ಲಿಪಿಯಂತೆ ನಡೆಯಬೇಕು. ಖಂಡಿತ ಅವರಿಗೆ ನರಕವು ಹೇಗೆ ಬಂತು ?

೧೩೭. ಅವನು ಅದರಂತೆ ಶಂಭುವನ್ನು ಪೂಜಿಸುತ್ತಾನೆ. ಪಾಪವು ನಾಶವಾಗುತ್ತದೆ. ನರಕವು ಹೇಗೆ ?

॥ ಶಂಭುರುವಾಚ ॥

ಪಾಪಂ ನಾಶಯತೇ ಕೃತ್ಸ್ನಮಪಿ ಜನ್ಮಶತಾರ್ಜಿತಂ ।
ಭರ್ತ್ಸನಾತ್ಸರ್ವಪಾಪಾನಾಂ ಸ್ಮರಣಾಚ್ಚ ಮಹೇಶಿತುಃ ॥ ೧೩೮ ॥

ಭಸ್ಮೇತೀದೃಶಮಾಖ್ಯಾತಂ ತಸ್ಯ ಧಾರಣಮುತ್ತಮೇ ।
ಯಥಾವಿಧಿ ಲಲಾಟೇ ವೈ ವಹ್ನಿವೀರ್ಯಪ್ರಧಾರಣಾತ್ ॥ ೧೩೯ ॥

ನಾಶಯೇಲ್ಲಿಖಿತಾಂ ಯಾಮೀಂ ಪಟಿಸ್ಥಮಿವ ಹವ್ಯಭುಕ್ ।
ಕರ್ಣೋಪರಿ ಕೃತಂ ಪಾಪಂ ನಷ್ಟಂ ಸ್ಯಾನ್ಮುಖಧಾರಣಾತ್ ॥ ೧೪೦ ॥

ಕಂಠೇ ಚ ಧಾರಣಾತ್ಕಂಠಭೋಗಾದಿಕೃತಪಾತಕಂ ।
ಬಾಹ್ವೋರ್ಬಾಹುಕೃತಂ ಪಾಪಂ ವಕ್ಷಸಿ ಮನಸಾ ಕೃತಂ ॥ ೧೪೧ ॥

---

೧೩೮. ಶಂಭುವು ಹೇಳಿದನು :—ಅನೇಕ ಜನ್ಮಗಳಿಂದ ಸಂಪಾದಿಸಿದ ಪಾಪಗಳು ಮಹೇಶ್ವರನನ್ನು ಸ್ಮರಣೆಮಾಡುವುದರಿಂದ ನಾಶವಾಗುತ್ತವೆ. ಇದರಲ್ಲಿ ಭರ್ತ್ಸನವೂ ಸ್ಮರಣವೂ ಸೇರಿಕೊಂಡಿವೆ.

೧೩೯. ಅವೆರಡೂ ಸೇರಿ ಭಸ್ಮವೆಂದಾಗಿದೆ. ಅದರ ಧಾರಣವೇ ಉತ್ತಮವು. ಅಂತಹ ಉತ್ತಮವಾದ ಭಸ್ಮವನ್ನು ಧರಿಸಿರುವ ಹಣೆಯಲ್ಲಿ, ಆ ಹಣೆಯು ವಹ್ನಿಯ ಶಕ್ತಿಯನ್ನೂ ಧರಿಸಿರುವುದರಿಂದ ಭಸ್ಮವನ್ನು ಧರಿಸಲು ಶಕ್ತವಾಗಿದೆ. ಉತ್ತಮವೂ ಹೌದು.

೧೪೦. ಆ ಭಸ್ಮವು, ಹಣೆಯಲ್ಲಿ ಯಮಯಾತನೆಯು ಬರೆದಿದ್ದರೂ, ಅದನ್ನು ಬಟ್ಟೆಯಲ್ಲಿರುವ ಕೊಳಕನ್ನು ಬೆಂಕಿಯು ಸುಟ್ಟು ಹಾಳುಮಾಡುವಂತೆ ನಾಶಮಾಡುತ್ತದೆ. ಕಿವಿಯಿಂದ ಮೇಲೆ ಮಾಡಿದ ಪಾಪವನ್ನು ಮುಖದಲ್ಲಿ ಭಸ್ಮಧಾರಣ ಮಾಡುವಿಕೆಯು ನಾಶಮಾಡುತ್ತದೆ.

೧೪೧–೧೪೩. ಕಂಠದಲ್ಲಿ ಧರಿಸುವುದರಿಂದ ಭೋಗಾದಿಗಳ ಪಾಪವೂ, ತೋಳಿನಲ್ಲಿ ಧರಿಸುವುದರಿಂದ ತೋಳಿನಿಂದ ಮಾಡಿದ ಪಾಪವೂ, ಎದೆಯಲ್ಲಿ ಧರಿಸುವುದರಿಂದ ಮನಸ್ಸಿನಲ್ಲಿ ಮಾಡಿದ ಪಾಪವೂ, ನಾಭಿಯಲ್ಲಿ ಧರಿಸುವುದರಿಂದ ಶಿಶ್ನದಿಂದ ಮಾಡಿದಪಾಪವೂ, ಪೃಷ್ಠದಲ್ಲಿ ಧರಿಸುವುದರಿಂದ ಗುದದಲ್ಲಿ ಮಾಡಿದ

ನಾಭ್ಯಾಂ ಶಿಶ್ನಕೃತಂ ಪಾಪಂ ಪೃಷ್ಠೇ ಗುದಕೃತಂ ತಥಾ ।
ಪಾರ್ಶ್ವಯೋರ್ಧಾರಣಾದ್ಪಾಪಮ ಪರಸ್ತ್ರ್ಯಾಲಿಂಗನಾದಿಜಂ ॥ ೧೪೨ ॥

ತದ್ಭಸ್ಮಧಾರಣಂ ಶಸ್ತಂ ಸರ್ವತ್ರೈವ ತ್ರಿಪುಂಡ್ರಕಂ ।
ಬ್ರಹ್ಮವಿಷ್ಣುಮಹೇಶಾನಾಂ ತ್ರಯ್ಯಗ್ನೀನಾಂ ಚ ಧಾರಣಂ ॥ ೧೪೩ ॥

ಗುಪ್ತ್ಯೈ ಲೋಕತ್ರಯಾಣಾಂ ಚ ಧಾರಣಂ ತೇನ ವೈ ಕೃತಂ ।
ಧೃತಂ ಪಂಚದಶಸ್ಥಾನೇ ಶುದ್ಧಂ ಭಸ್ಮಾಭಿಮಂತ್ರಿತಂ ॥ ೧೪೪ ॥

ಕೋಷ್ಠಯುಗ್ಮೇ ಬಾಹುಯುಗ್ಮೇ ಕೋಷ್ಠೋಪರಿ ಯುಗೇ ತಥಾ ।
ಧಾರಣಂ ಸರ್ವದೇಹಾನಾಂ ಪೂಜಾಯೈ ಧರ್ಮಸಂಮತಂ ॥ ೧೪೫ ॥

ಭಸ್ಮಾಶನಾ ಭಸ್ಮಶಯ್ಯಾ ಭಸ್ಮೋದ್ಧೂಲಿತವಿಗ್ರಹಾಃ ।
ಭಸ್ಮಸ್ನಾನಾಸ್ಸದಾ ಪಾಪೈರ್ಮುಚ್ಯಂತೇ ನಾತ್ರ ಸಂಶಯಃ ॥ ೧೪೬ ॥

---

ಪಾಪವೂ, ಪಾರ್ಶ್ವದಲ್ಲಿ ಧರಿಸುವುದರಿಂದ ಪರಸ್ತ್ರೀ ಆಲಿಂಗನದಿಂದ ಬಂದ ಪಾಪವೂ ನಾಶವಾಗುತ್ತದೆ.

೧೪೩. ಭಸ್ಮಧಾರಣವನ್ನು ಎಲ್ಲಾ ಕಡೆಯಲ್ಲೂ ಮೂರು ಗೆರೆಗಳನ್ನು ಧರಿಸಬೇಕು. ಅದು ಮೂರೂ ಬ್ರಹ್ಮ, ವಿಷ್ಣು, ಶಿವಾತ್ಮಕಗಳೆಂದೂ, ಮೂರು ವೇದಗಳ ರೂಪವೆಂದೂ, ಮೂರು ಅಗ್ನಿಗಳ ರೂಪವಾದುದೆಂದೂ, ಮೂರು ಲೋಕಗಳ ಗೋಪನವೆಂದೂ ತಿಳಿಯಬೇಕು. ಎಂದರೆ ಅವುಗಳನ್ನೇ ಧರಿಸಿರುವನು ಎಂದರ್ಥ.

೧೪೪-೧೪೫. ಶುದ್ಧಭಸ್ಮವನ್ನು ಅಭಿಮಂತ್ರಿಸಿ ಹದಿನೈದು ಜಾಗಗಳಲ್ಲಿ ಇಟ್ಟುಕೊಳ್ಳಬೇಕು. ಮೊಳಕೈಗಳೆರಡಕ್ಕೂ ಮೊಳಕೈಕೀಲುಗಳೆರಡರ ಮೇಲೂ, ತೋಳೆರಡಕ್ಕೂ ಧರಿಸಬೇಕು. ಸರ್ವದೇಹಕ್ಕೂ ಬಳಿದುಕೊಂಡರೆ ಪೂಜೆಮಾಡಲು ಧರ್ಮಶಾಸ್ತ್ರದ ರೀತಿಯಿಂದ ಇಷ್ಟವು.

೧೪೬. ಭಸ್ಮದ ಆಸನ, ಭಸ್ಮದ ಹಾಸಿಗೆ, ಭಸ್ಮವನ್ನೇ ಮೈಗೆ ಬಳಿದುಕೊಳ್ಳುವುದು. ಭಸ್ಮದಿಂದಲೇ ಸ್ನಾನಮಾಡುವುದು. ಹೀಗೆ ಮಾಡಿದವರು ಸರ್ವಪಾಪಗಳಿಂದಲೂ, ಮುಕ್ತರಾಗುತ್ತಾರೆ. ಸಂಶಯವಿಲ್ಲ.

ಆದೌ ಬ್ರಾಹ್ಮಣದೀಕ್ಷಾಯಾಂ ತ್ರಿಯಾಯುಷಮಿತಿ ಸ್ಮೃತಂ ।
ಪ್ರಸವೇ ಚ ಮನುಷ್ಯಾಣಾಂ ಭೂತಾವೇಶೇಽಪಿ ರಕ್ಷಕಂ ॥ ೧೪೭ ॥

ಸರ್ಪಾದಿವಿಷಶಾನ್ತ್ಯರ್ಥಂ ಸರ್ವೇಷಾಂ ಸಾಧನಂ ತ್ವಿದಂ ।
ಅಪಿ ವಾ ವೈಷ್ಣವೋ ಮರ್ತ್ಯ ಅಪಿ ವಾಪೀತರೋ ಜನಃ ॥ ೧೪೮ ॥

ಭಸ್ಮಸ್ನಾಯೀ ಭಸ್ಮಯುಕ್ತಃ ಕರ್ಮಸ್ವಧಿಕರೋತಿ ವೈ ॥ ೧೪೯ ॥

॥ ರಾಮ ಉವಾಚ ॥

ಭಸ್ಮಮಾಹಾತ್ಮ್ಯಮಾದೌ ಮೇ ಭಸ್ಮಾಯುಷ್ಯಂ ಹಿ ಕಸ್ಯ ವೈ ।
ಕಥಂ ಹಿ ರಕ್ಷತೇ ಹ್ಯೇತತ್ಸರ್ವಮೇತದ್ವದಸ್ವ ಮೇ ॥ ೧೫೦ ॥

॥ ಶಂಭುರುವಾಚ ॥

ಆಯುಷ್ಯವರ್ಧನೇ ಹೇತುಸ್ತ್ರಿವಿಧಸ್ಯಾಪಿ ದೇಹಿನಃ ।
ಪಾಪಘ್ನಂ ಶೀತಮುಷ್ಣಂ ಚ ಸ್ಪರ್ಶಾಚ್ಛಿವಪದಪ್ರದಂ ॥ ೧೫೧ ॥

---

೧೪೭. ಬ್ರಾಹ್ಮಣನು ದೀಕ್ಷೆಯನ್ನು ಹೊಂದುವಾಗ ಬಳಿದುಕೊಂಡರೆ ಅವನಿಗೆ ತ್ರಿಯಾಯುಷವುಂಟು. ಚಿರಂಜೀವಿತ್ವವು ಎಂದರ್ಥ. ಹೆರಿಗೆ ಕಾಲದಲ್ಲಿ ಭೂತಾದಿ ಬರದಂತೆ ರಕ್ಷಕವಾಗಿರುತ್ತದೆ. ಸರ್ಪಾದಿವಿಷಗಳ ಶಾನ್ತಿಗೋಸ್ಕರ ಸರ್ವರಿಗೂ ಸಾಧನ ವಾಗಿರುತ್ತದೆ.

೧೪೮-೧೪೯. ವೈಷ್ಣವನೇ ಆಗಲಿ, ಮತ್ತಾವನು ಬೇಕಾದರೂ ಆಗಲಿ ಭಸ್ಮ ಸ್ನಾನಮಾಡಿಕೊಂಡರೆ ಅಥವಾ ಭಸ್ಮವನ್ನಿಟ್ಟುಕೊಂಡರೆ ಅವನು ಕರ್ಮಾನುಷ್ಠಾನಕ್ಕೆ ಯೋಗ್ಯನಾಗುತ್ತಾನೆ.

೧೫೦. ರಾಮನು ಹೇಳಿದನು :—ನನಗೆ ಮೊದಲು ಭಸ್ಮದ ಮಹಿಮೆಯನ್ನು ಹೇಳು. ಭಸ್ಮವು ಯಾವನಿಗೆ ಆಯುಷ್ಕರವು? ಯಾವನನ್ನು ರಕ್ಷಿಸುತ್ತದೆ? ಹೇಗೆ ರಕ್ಷಿಸುತ್ತದೆ? ಅದೆಲ್ಲವನ್ನೂ ನನಗೆ ಹೇಳು.

೧೫೧. ಶಂಭುವು ಹೇಳಿದನು :—ಸ್ವರ್ಗ ಮರ್ತ್ಯ ಪಾತಾಳದ ಜನರಿಗೆ ಆಯುಷ್ಯವನ್ನು ಹೆಚ್ಚಿಸುವ, ಪಾಪವನ್ನು ನಾಶಮಾಡುವ, ಸ್ಪರ್ಶದಿಂದಲೇ ಶಿವಪದ ವನ್ನೂ ಕೊಡುವುದು.

ತತ್ರ ತೇ ಕಥಯಿಷ್ಯಾಮಿ ಚೇತಿಹಾಸಂ ಪುರಾತನಂ ।
ಆಸೀದ್ವಸಿಷ್ಠವಂಶ್ಯಸ್ತು ಧನಂಜಯ ಇತಿ ದ್ವಿಜಃ ॥ ೧೫೨ ॥

ತಸ್ಯ ಭಾರ್ಯಾಶತಂ ಚಾಸೀದ್ರೂಪಲಾವಣ್ಯಸಂಯುತಂ ।
ತಾಸಾಮೇಕಾ ತು ಸುಷುವೇ ಶಾಭಾಕಾ ಕರುಣಂ ಮುನಿಂ ॥ ೧೫೩ ॥

ಭಾರ್ಯಾಣಾಂ ಸಂಖ್ಯಯಾ ರಾಮ ಸುತಾಶ್ಚಾಸಂಸ್ತಪಸ್ವಿನಃ ।
ತೇಷಾಂ ವಿಭಾಗಃ ಪಿತ್ರಾ ಚ ವಿಷಯಃ ಪರಿಕಲ್ಪಿತಃ ॥ ೧೫೪ ॥

ಭ್ರಾತೄಣಾಂ ಚ ತಥಾ ಹ್ಯೇವ ವೈರಬಂಧೋ ಮಹಾನಭೂತ್ ।
ಜ್ಞಾತಿತ್ವೇ ಚೈಕನಾಶಿತ್ವೇ ವೈರಂ ನಿಯತಮೇವ ತು ॥ ೧೫೫ ॥

ಅಥಾಸೌ ಕರುಣೋ ಗತ್ವಾ ಭವನಾಶಿನಿಕಾತಟೇ ।
ನಾನಾಮುನಿಗಣೈಸ್ಸಾರ್ಧಂ ನರಸಿಂಹದಿದೃಕ್ಷಯಾ ॥ ೧೫೬ ॥

---

೧೫೨. ಮೇಲೆ ಹೇಳಿದ ವಿಷಯಗಳಲ್ಲಿ ಒಂದು ಇತಿಹಾಸವನ್ನು ನಿನಗೆ ಹೇಳುತ್ತೇನೆ. ವಸಿಷ್ಠವಂಶದಲ್ಲಿ ಧನಂಜಯನೆಂಬ ಬ್ರಾಹ್ಮಣನಿದ್ದನು. ಅವನಿಗೆ ಲಾವಣ್ಯವತಿಯರಾದ ನೂರುಮಂದಿ ಹೆಂಡರಿದ್ದರು.

೧೫೩. ನೂರುಜನ ಹೆಂಡರಿಗೂ ಒಬ್ಬೊಬ್ಬರಂತೆ ಗಂಡುಮಕ್ಕಳಿದ್ದರು. ಅವರೊಳಗೆ ಶಾಭಕಳೆಂಬುವಳು ಒಬ್ಬ ಕರುಣನೆಂಬ ಋಷಿಯನ್ನು ಹೆತ್ತಳು.

೧೫೪. ತಂದೆಯಾದ ಧನಂಜಯನು ಎಲ್ಲರಿಗೂ ಪಾಲುಮಾಡಿ ಬೇರೆಯಾಗಿ ಮಾಡಿಟ್ಟಿದ್ದನು.

೧೫೫. ಅಣ್ಣತಮ್ಮಂದಿರಿಗೆ ಬಹಳವಾದ ವೈರವುಂಟಾಯಿತು. ನಾಶವನ್ನೇ ಗುರಿಯಾಗಿ ಉಳ್ಳ ಜ್ಞಾತಿವೈರವು ಅವರಲ್ಲಿ ನೆಲೆಗೊಂಡಿತು.

೧೫೬. ಆಮೇಲೆ ಈ ಕರುಣಋಷಿಯು ಭವನಾಶಿನಿಯ ದಡದಲ್ಲಿರುವ ನರಸಿಂಹಸ್ವಾಮಿಯ ದರ್ಶನಕ್ಕೋಸ್ಕರ ಅನೇಕ ಮುನಿಗಳೊಡನೆ ಹೋದನು.

**ನೃಸಿಂಹದರ್ಶನಾರ್ಥಂ ತು ಬ್ರಾಹ್ಮಣೇನ ಚ ಕೇನಚಿತ್ ।**
**ಉತ್ಕೃಷ್ಟಫಲಜಂಬೀರಮಾನೀತಂ ಗಂಧರೂಪವತ್ ॥ ೧೫೭ ॥**

**ಕರುಣಸ್ತು ತದಾದಾಯ ಆಜಿಘ್ರತ್ಫಲಮುತ್ತಮಂ ।**
**ತತ್ರ ಸ್ಥಿತಾ ದ್ವಿಜಗಣಾಃ ಶಾಪೇನ ತಮಯೋಜಯನ್ ॥ ೧೫೮ ॥**

**ಮಕ್ಷಿಕಾ ಭವ ಪಾಪಾತ್ಮನ್ವರ್ಷಾಣಾಂ ಶತಮುಷ್ಯತಃ ।**
**ಶಾಪಾವಸಾನಂ ಭವಿತಾ ದಧೀಚೇಸ ಮಹಾತ್ಮನಾ ॥ ೧೫೯ ॥**

**ಅಥ ಮಕ್ಷಿಕತಾಂ ಪ್ರಾಪ್ತೋ ಭಾರ್ಯಾಮಿದಮಭಾಷತ ।**
**ಮಕ್ಷಿಕಾತ್ವಮಹಂ ಪ್ರಾಪ್ತೋ ಮಾಂ ಶುಭೇ ಪಾಲಯಸ್ವ ಭೋಃ ॥ ೧೬೦ ॥**

**ಇತ್ಯುಕ್ತ್ವಾ ಸ ತಥಾಭೂತೋ ಬಭ್ರಾಮ ಚ ತತಸ್ತತಃ ।**
**ಅಥೈವಂವಿಧಮಾಜ್ಞಾಯ ಜ್ಞಾತಯಃ ಪಾಪನಿಶ್ಚಯಾಃ ॥ ೧೬೧ ॥**

---

೧೫೭. ಅವರಲ್ಲಿ ನೃಸಿಂಹಸ್ವಾಮಿಯ ದರ್ಶನಕ್ಕೋಸ್ಕರ ಒಬ್ಬ ಬ್ರಾಹ್ಮಣನು ಉತ್ತಮವಾದ ಒಂದು ನಿಂಬೆಯ ಹಣ್ಣನ್ನು ತಂದಿದ್ದನು.

೧೫೮. ಕರುಣನು ಆ ಹಣ್ಣನ್ನು ತೆಗೆದುಕೊಂಡು ಮೂಸಿನೋಡಿದನು. ಆಗ ಅಲ್ಲಿದ್ದ ಋಷಿಗಳೆಲ್ಲರೂ ಅವನಿಗೆ ಶಾಪಕೊಟ್ಟರು.

೧೫೯. ಎಲೈ ಪಾಪಿಯೇ, ನೂರು ವರ್ಷಗಳವರೆಗೂ ನೊಣವಾಗಿರು. ಅನಂತರ ದಧೀಚಿಋಷಿಯಿಂದ ನಿನ್ನ ಶಾಪವು ಕೊನೆಗಾಣಲಿ ಎಂದರು.

೧೬೦. ಅನಂತರ ನೊಣವಾಗಿ ಅವನು ತನ್ನ ಹೆಂಡತಿಯನ್ನು ಕುರಿತು ಇಂತೆಂದನು. ಎಲೈ ಮಂಗಳಳೇ! ನಾನು ನೊಣವಾಗುತ್ತೇನೆ. ನನ್ನನ್ನು ಕಾಪಾಡು ಎಂದು ಹೇಳಿ ಹಾಗೆಯೇ ನೊಣವಾಗಿ ಅಲ್ಲಲ್ಲಿ ಹಾರಾಡುತ್ತಿದ್ದನು.

೧೬೧-೧೬೨. ಆ ಕರುಣನು ನೊಣವಾದುದನ್ನು ತಿಳಿದು ಜ್ಞಾತಿಗಳು ಪಾಪದಲ್ಲಿ ನಿರತರಾಗಿ, ಅವನನ್ನು ಕೊಲ್ಲುವುದರಲ್ಲಿ ಆಸಕ್ತರಾಗಿ, ಎಣ್ಣೆಯ ಮಧ್ಯದಲ್ಲಿ ಅವನ್ನು

ತದ್ವಧೇ ಯತ್ನಮಾಸ್ಥಾಯ ಶೈಲಮಧ್ಯೇ ನ್ಯಪಾತಯನ್ ।
ಮೃತಂ ಪತಿಮಥಾದಾಯ ದುಃಖಿತಾ ಸಾ ಕೃಶೋದರೀ ॥ ೧೬೨ ॥

ತದ್ದುಃಖಶಮನಾರ್ಥಾಯ ಪ್ರಾಹ ದೇವೀ ತ್ವರುಂಧತೀ ।
ಅಮುಂ ಸಂಜೀವಯಾಮ್ಯದ್ಯ ಭಸ್ಮನೈವ ಶುಚಿಸ್ಮಿತೇ ॥ ೧೬೩ ॥

ಅಥಾಗ್ನಿಹೋತ್ರಜಂ ಭಸ್ಮ ಅರಂಧತ್ಯೈ ನ್ಯವೇದಯತ್ ।
ಮೃತ್ಯುಂಜಯೇನ ಮಂತ್ರೇಣ ಮೃತಜಂತೌ ತದಾಽಕ್ಷಿಪತ್ ॥ ೧೬೪ ॥

ಮಂದವಾಯುಸ್ತದಾ ಜಜ್ಞೇ ವ್ಯಜನೇನ ಶುಚಿಸ್ಮಿತಾ ।
ಉದತಿಷ್ಠತ್ತತೋ ಜಂತುರ್ಭಸ್ಮನೋಽಸ್ಯ ಪ್ರಭಾವತಃ ॥ ೧೬೫ ॥

ತತೋ ವರ್ಷಶತೇ ಪೂರ್ಣೇ ಜ್ಞಾತಿರೇಕೋ ಹ್ಯಮಾರಯತ್ ।
ಮೃತೇ ಭರ್ತರಿ ಸಾ ಸಾಧ್ವೀ ದುಃಖಿತಾ ಚ ಶುಚಿಸ್ಮಿತಾ ॥ ೧೬೬ ॥

---

ಹಾಕಿದರು. ಆ ನೊಣವು ಸತ್ತುಹೋಯಿತು. ಅನಂತರ ಆ ನೊಣರೂಪವಾದ ಕರುಣನನ್ನು ತೆಗೆದುಕೊಂಡು ಅವನ ಹೆಂಡತಿಯು ಅಳುತ್ತಿದ್ದಳು.

೧೬೩. ಅವಳ ದುಃಖವನ್ನು ನಾಶಮಾಡಲು ಅರುಂಧತಿಯು ಅಮ್ಮಾ! ಇವನನ್ನು ಈ ಬೂದಿಯಿಂದಲೇ ಬದುಕಿಸುತ್ತೇನೆಂದು ಹೇಳಿದಳು.

೧೬೪. ಅನಂತರ ಆ ಕರುಣನ ಹೆಂಡತಿಯು ಅರುಂಧತಿಗೆ ಅಗ್ನಿಹೋತ್ರದ ಬೂದಿಯನ್ನು ತಂದುಕೊಡಲು, ಆಕೆಯು ಮೃತ್ಯುಂಜಯಮಂತ್ರದಿಂದ ಆ ಭಸ್ಮವನ್ನು ಅಭಿಮಂತ್ರಿಸಿ ಸತ್ತ ಪ್ರಾಣಿಯಮೇಲೆ ಹಾಕಿದಳು.

೧೬೫. ಆಕೆಯು ಬೀಸಣಿಗೆಯಿಂದ ನಿಧಾನವಾಗಿ ಬೀಸುತ್ತಿರಲು ಆ ಭಸ್ಮದ ಪ್ರಭಾವದಿಂದ ಆ ನೊಣರೂಪವಾದ ಪ್ರಾಣಿಯು ಎದ್ದಿತು.

೧೬೬. ಅನಂತರ ನೂರು ವರ್ಷಗಳು ತುಂಬಿದ ಮೇಲೆ ಒಬ್ಬ ಜ್ಞಾತಿಯು ಆ ನೊಣವನ್ನು ಕೊಂದನು. ಆಗಲೂ ಗಂಡನು ಸಾಯಲು ಆ ಪತಿವ್ರತೆಯಾದ ಹೆಂಡತಿಯು ಅಳುತ್ತಿದ್ದಳು.

ದಧೀಚಂ ನಾಮ ವಿಪ್ರೇಂದ್ರಂ ಮಹಾಮಾಹೇಶ್ವರಂ ಮುನಿಂ ।
ಜಗಾಮ ಶರಣಂ ಸಾಧ್ವೀ ಮುನಿಃ ಸ ಹ ತಪೋಧನಃ ॥ ೧೬೭ ॥

ತ್ರಿಯಾಯುಷಾ ವಿಹೀನಂ ತು ಜಮದಗ್ನಿಂ ತಪೋನಿಧಿಂ ।
ಭಸ್ಮೈವ ಜೀವಯಾಮಾಸ ಕಶ್ಯಪಂ ಚ ತಥಾವಿಧಂ ॥ ೧೬೮ ॥

ದೇವಾನಪಿ ತಥಾ ಭೂತಾನ್ಮಾಮಪ್ಯೇತಾದೃಶಂ ಪುರಾ ।
ತಸ್ಮಾತ್ತು ಭಸ್ಮನಾ ಜಂತುಂ ಜೀವಯಾಮಿ ತವಾನಘೇ ॥ ೧೬೯ ॥

ಇತ್ಯೇವಮುಕ್ತ್ವಾ ಭಗವಾನ್ದಧೀಚೋ
ಮಹೇಶ್ವರಂ ವೈ ಶರಣಂ ಜಗಾಮ ।
ಭಸ್ಮಾಭಿಮಂತ್ರ್ಯಾಥ ಕರೇ ಗೃಹೀತ್ವಾ
ಸಂಜೀವಯಾಮಾಸ ಧವಂ ಸುಸಾಧ್ವ್ಯಾಃ ॥ ೧೭೦ ॥

ಮಾಹೇಶಸ್ಯ ಕರಸ್ಪರ್ಶಾದ್ವಿಶಾಪಃ ಕರುಣೋಽಭವತ್ ।
ಸ್ವರೂಪಂ ಚ ತತೋ ಗತ್ವಾ ಸ್ವಮಾಶ್ರಮಪದಂ ಯಯೌ ॥ ೧೭೧ ॥

---

೧೬೭-೧೬೮. ಅನಂತರ ಆ ಸಾಧ್ವಿಯು ಮಹಾಮಹೇಶ್ವರನಾದ ದಧೀಚಿ ಋಷಿಯನ್ನು ಮರೆಹೊಕ್ಕಳು. ಅವನು ಮಹಾತಪಸ್ವಿಯು. ಮಹೇಶ್ವರ ಭಕ್ತನು. ಆಯುರ್ವಿಹೀನನಾದ ಜಮದಗ್ನಿಯನ್ನೂ, ಕಶ್ಯಪನನ್ನೂ, ಅವನೇ ಭಸ್ಮದಿಂದ ಬದುಕಿಸಿದ್ದನು.

೧೬೯. ಆರೀತಿಯಾದ ದೇವತೆಗಳನ್ನು ಬದುಕಿಸಿದ್ದಾನೆ. ನನ್ನನ್ನು ಬದುಕಿಸಿದ್ದಾನೆ. ಆದ್ದರಿಂದ ಈ ಭಸ್ಮದಿಂದಲೇ ನಿನ್ನ ಈ ಪ್ರಾಣಿಯನ್ನೂ ಬದುಕಿಸುತ್ತೇನೆ.

೧೭೦. ಹೀಗೆಂದು ಹೇಳಿ ದಧೀಚನು ಮಹೇಶ್ವರನನ್ನು ಸ್ತೋತ್ರಮಾಡಿದನು. ಮತ್ತು ಬೂದಿಯನ್ನು ಮಂತ್ರಿಸಿ ಕೈಯ್ಯಲ್ಲಿ ಹಿಡಿದುಕೊಂಡು ಆಕೆಯ ಗಂಡನನ್ನು ಬದುಕಿಸಿದನು.

೧೭೧. ಆಗ ಆ ದಧೀಚಿಯು ಮುಟ್ಟಲು ಒಡನೆಯೇ ಶಾಪ ಮೋಕ್ಷವಾಯಿತು.

ದಧೀಚಮಪಿ ಸಾ ಸಾಧ್ವೀ ಗೃಹಮಾನೀಯ ಭೋಜನೇ ।
ಪ್ರಾರ್ಥಯಾಮಾಸ ವಿಪ್ರರ್ಷಿಮುಕ್ತವಾನಥ ಸ ದ್ವಿಜಃ ॥ ೧೭೨ ॥

ಭುಕ್ತವತ್ಯಥ ವಿಪ್ರೇಂದ್ರೇ ಕೋಟಿಶಿಷ್ಯಾಃ ಸಮಾಗತಾಃ ।
ಅಥ ದೇವಾಸ್ಸಮಾಯಾತಾ ಭಸ್ಮೋದ್ಧೂಳಿತವಿಗ್ರಹಾಃ
ನಮಸ್ಕೃತ್ವಾ ದಧೀಚಂ ತು ಪಪ್ರಚ್ಛುಃ ಶಿವಕಾಂಕ್ಷಯಾ ॥ ೧೭೩ ॥

॥ ದೇವಾ ಊಚುಃ ॥

ಅಸ್ಮಾಕಂ ತು ಪುರಾಜ್ಞಾನಂ ನಷ್ಟಮಾಸೀನ್ಮಹಾಮತೇ ।
ಗೌತಮಸ್ಯ ಚ ಭಾರ್ಯಾಂ ವೈ ದೃಷ್ಟ್ವಾ ಕಾಮಾತುರಾ ವಯಂ ॥ ೧೭೪ ॥

ತಥಾ ಚ ಧರ್ಷಿತಾ ದೇವೀ ವಿವಾಹಕೃತಮಂಗಳಾ ।
ತಾಂ ವೈ ಕಾಮಯಮಾನಾನಾಂ ನಷ್ಟಂ ಜ್ಞಾನಮಭೂಚ್ಚ ನಃ ॥ ೧೭೫ ॥

ತತಸ್ಸರ್ವೇ ವಯಂ ಭೀತಾ ಗತಾ ದುರ್ವಾಸಸಂ ಮುನಿಂ ।
ಸ ಉವಾಚಾಧುನಾ ಸರ್ವಮಪನೇಷ್ಯಾಮಿ ವೋ ಮಲಂ ॥ ೧೭೬ ॥

---

೧೭೨. ಆ ಕರುಣನೂ, ಕರುಣನ ಹೆಂಡತಿಯೂ, ದಧೀಚಿಯನ್ನು ಮನೆಗೆ ಊಟಕ್ಕೆ ಬರಬೇಕೆಂದು ಪ್ರಾರ್ಥಿಸಿದರು.

೧೭೩. ಆ ದಧೀಚಿಋಷಿಗೆ ಊಟವು ಮುಗಿದ ಮೇಲೆ ಕೋಟಿ ಶಿಷ್ಯರುಗಳೂ, ದೇವತೆಗಳೂ, ವಿಭೂತಿಯನ್ನು ಪೂಸಿಕೊಂಡು ಬಂದು ಆತನಿಗೆ ನಮಸ್ಕಾರಮಾಡಿ ಶಿವನ ವಿಷಯವಾಗಿ ಕೇಳಿದರು.

೧೭೪-೧೭೫. ದೇವತೆಗಳು ಹೇಳಿದರು :—ಎಲೈ ಮಹಾತ್ಮನೇ, ನಮಗೆ ಎಲ್ಲವನ್ನೂ ತಿಳಿಯುವ ಜ್ಞಾನಶಕ್ತಿಯು ಹೋಯಿತು. ಗೌತಮನ ಹೆಂಡತಿಯನ್ನು ನೋಡಿ ನಾವೆಲ್ಲರೂ, ಕಾಮಾತುರರಾದೆವು. ಅಂತೆಯೇ ವಿವಾಹವಾದ ಆಕೆಯನ್ನು ದಮಿಸಿ ಕೆಡಿಸಿದೆವು. ಅವಳನ್ನು ಕಾಮಿಸಿದಂದಿನಿಂದ ನಮ್ಮಗಳ ಪೂರ್ವಜ್ಞಾನವೇ ನಷ್ಟವಾಗಿ ಹೋಗಿದೆ ಎಂದರು

೧೭೬. ಆಗ ನಾವೆಲ್ಲರೂ ಹೆದರಿ ಶಂಭುವಿನ ಅಪರರೂಪವಾದ ದೂರ್ವಾಸ ಋಷಿಯನ್ನು ಮರೆಹೊಕ್ಕೆವು. ಅವನು ನಿಮ್ಮಗಳ ಪಾಪವನ್ನೆಲ್ಲಾ ಹೋಗಲಾಡಿಸುವೆನೆಂದು ಹೇಳಿದನು.

**ಶತರುದ್ರೀಯಮಂತ್ರೇಣ ಮಂತ್ರಿತಂ ಶಂಭುನಾ ಸ್ವಯಂ ।
ಮಮಾಪಿ ದತ್ತಂ ತೇನೈವ ಬ್ರಹ್ಮಹತ್ಯಾದಿಶಾಂತಯೇ** ॥ ೧೭೭ ॥

**ಇತ್ಯೇವಮುಕ್ತ್ವಾ ದುರ್ವಾಸಾ ದತ್ತವಾನ್ಭಸ್ಮ ಚೋತ್ತಮಂ ।
ಅಥ ತದ್ವಚನಾತ್ಸರ್ವೇ ವಯಂ ವೈ ಕೃತಚೇತನಾಃ ।
ಶತರುದ್ರೀಯಮಂತ್ರೇಣ ಭಸ್ಮೋದ್ಧೂಳಿತವಿಗ್ರಹಾಃ** ॥ ೧೭೮ ॥

**ನಿರ್ಧೂತಪಾತಕಾಸ್ಸರ್ವೇ ತತ್ಕ್ಷಣಾಚ್ಚೈವ ಹೇ ಮುನೇ ।
ಆಶ್ಚರ್ಯಮೇತಜ್ಜಾನೀಮೋ ಭಸ್ಮಸಾಮರ್ಥ್ಯಮೀದೃಶಂ** ॥ ೧೭೯ ॥

**॥ ದಧೀಚ ಉವಾಚ ॥**

**ಶೈವಸ್ಯ ಭಸ್ಮನಶ್ಶಕ್ತಿಂ ಸಂಕ್ಷೇಪೇಣ ವದಾಮಿ ವಃ ।
ವಿಸ್ತರೇಣ ನ ಶಕ್ಯಂ ವೈ ವಕ್ತುಂ ವರ್ಷಶತೈರಪಿ** ॥ ೧೮೦ ॥

**ಅತ್ರ ವಃ ಕೀರ್ತಯಿಷ್ಯಾಮಿ ಪುರಾವೃತ್ತಂ ತು ದೇವಯೋಃ ।
ಹರಿಶಂಕರಯೋಸ್ಸರ್ವೇ ಬ್ರಹ್ಮಹತ್ಯಾದಿನಾಶನಂ** ॥ ೧೮೧ ॥

---

೧೭೭. ಶತರುದ್ರೀಯ ಮಂತ್ರದಿಂದ ಶಂಭುವು ತಾನೇ ಮಂತ್ರಿಸಿರುವ ಭಸ್ಮವನ್ನು ಬ್ರಹ್ಮಹತ್ಯಾದಿಗಳ ನಾಶಕ್ಕೋಸ್ಕರ ನನಗೂ ಕೊಟ್ಟಿದ್ದಾನೆ.

೧೭೮. ಹೀಗೆಂದು ಹೇಳಿ ದುರ್ವಾಸಮಹರ್ಷಿಯು ನಮಗೆ ಭಸ್ಮವನ್ನು ಕೊಟ್ಟನು. ಅದನ್ನು ನಾವೆಲ್ಲರೂ ಬಳಿದುಕೊಳ್ಳಲು ನಮ್ಮ ಬುದ್ಧಿಯು ಮೊದಲಿನಂತೆ ಸರಿಹೋಯಿತು. ಆದ್ದರಿಂದ ನಾವೆಲ್ಲರೂ, ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡಿದ್ದೇವೆ.

೧೭೯. ಆ ಭಸ್ಮದಿಂದ ನಾವೆಲ್ಲರೂ ಪಾಪವನ್ನು ಕಳೆದುಕೊಂಡೆವು. ಇದು ಪರಮಾಶ್ಚರ್ಯ. ಭಸ್ಮದ ಮಹಿಮೆಯು ಈರೀತಿ ಇದೆ.

೧೮೦. ದಧೀಚನು ಹೇಳಿದನು:—ಶಿವನ ಭಸ್ಮದ ಮಹಿಮೆಯನ್ನು (ಶಕ್ತಿಯನ್ನು) ನಿಮಗೆ ಸಂಗ್ರಹವಾಗಿ ಹೇಳುತ್ತೇನೆ. ವಿಸ್ತಾರವಾಗಿ ನೂರು ವರ್ಷಗಳಿಂದಲೂ ಹೇಳಲು ಸಾಧ್ಯವಾಗುವುದಿಲ್ಲ.

೧೮೧. ಎಲ್ಲಾ ಬ್ರಹ್ಮಹತ್ಯೆಗಳನ್ನೂ ನಾಶಮಾಡುವ ಹರಿಶಂಕರರ ಒಂದು ಇತಿಹಾಸವನ್ನು ನಿಮಗೆ ಹೇಳುತ್ತೇನೆ ಕೇಳಿ.

ಪುರಾ ಚೈಕಾರ್ಣವೇ ಘೋರೇ ಬ್ರಹ್ಮಣಃ ಪ್ರಳಯೇ ಸತಿ ।
ಮಹಾವಿಷ್ಣುಸ್ತು ಭಗವಾನ್ ಶಯಿತೋ ವೈ ಮಹಾಂಭಸಿ ॥ ೧೮೨ ॥

ತಸ್ಯ ಪಾರ್ಶ್ವದ್ವಯಂ ಪ್ರಾಪ್ಯ ಬ್ರಹ್ಮಾಂಡಾನಾಂ ಶತದ್ವಯಂ ।
ವಿಂಶತಿಃ ಪಾದಯೋಃ ಪಾರ್ಶ್ವೇ ವಿಂಶತಿರ್ಮಸ್ತಕಾಂತರೇ ॥ ೧೮೩ ॥

ನಾಸಾಮೌಕ್ತಿಕಭಾವೇನ ಬ್ರಹ್ಮಾಂಡಮುದಧಾತ್ಪ್ರಭುಃ ।
ತನ್ನಾಭಿಮಂಡಲೇ ಕೇಚಿಲ್ಲೋಮಶಾದ್ಯಾ ಮುನೀಶ್ವರಾಃ ॥ ೧೮೪ ॥

ತಪಸ್ತಪನ್ತಸ್ಸುಮಹದೀಶ್ವರಂ ಪರ್ಯುಪಾಸತೇ ।
ಅಥ ವಿಷ್ಣುರ್ಮಹಾತೇಜಾಶ್ಚಿಂತಾಮಾಪ ಸಿಸೃಕ್ಷಯಾ ॥ ೧೮೫ ॥

ಧ್ಯಾನಯೋಗಪರೋ ಭೂತ್ವಾ ನ ಕಿಂಚಿತ್ಪರ್ಯಪಶ್ಯತ ।
ಅಥ ದುಃಖೇನ ಮಹತಾ ರುರೋದೋಚ್ಚೈಃ ಪುನಃ ಪುನಃ ॥ ೧೮೬ ॥

---

೧೮೨. ಪೂರ್ವದಲ್ಲಿ ಪ್ರಪಂಚವೆಲ್ಲವೂ ಒಂದೇರೀತಿಯಾದ, ಬ್ರಹ್ಮನ ಪ್ರಳಯ ರೂಪವಾದ ಜಲಪ್ರಳಯದಲ್ಲಿ ನಾಶವಾಗಲು, ಭಗವಂತನಾದ ಶ್ರೀ ವಿಷ್ಣುವು ನೀರಿನಲ್ಲಿ ಮುಳುಗಿಕೊಂಡನು.

೧೮೩. ಆ ಸ್ವಾಮಿಯ ಒಂದೊಂದು ಪಾರ್ಶ್ವದಲ್ಲಿಯೂ ನೂರು ನೂರು ಬ್ರಹ್ಮಾಂಡಗಳು ಬಂದು ಸೇರಿಕೊಂಡುವು. ಇಪ್ಪತ್ತು ಕಾಲುಗಳಲ್ಲಿಯೂ, ಇಪ್ಪತ್ತು ತಲೆಗಳಲ್ಲಿಯೂ, ಸೇರಿಕೊಂಡುವು. ಮೂಗುತಿಯಂತೆ ಆ ಸ್ವಾಮಿಯು ಬ್ರಹ್ಮಾಂಡ ವನ್ನು ಧರಿಸಿದನು.

೧೮೪. ಆ ಸ್ವಾಮಿಯ ನಾಭಿಕಮಲದಲ್ಲಿ ಲೋಮಶನೇ ಮುಂತಾದ ಕೆಲವರು ಋಷಿಗಳು ತಪಸ್ಸನ್ನು ಮಾಡುತ್ತಾ ಈಶ್ವರನನ್ನು ಆರಾಧಿಸುತ್ತಿದ್ದಾರೆ.

೧೮೫. ಅನಂತರ ವಿಷ್ಣುವು ಸೃಷ್ಟಿಮಾಡಬೇಕೆಂದು ಯೋಚಿಸಿ ಧ್ಯಾನ ಯೋಗ ಸಹಿತನಾಗಿ ಏನನ್ನೂ ತಿಳಿಯದವನಾದನು.

೧೮೬. ಅನಂತರ ದುಃಖದಿಂದ ಬಾರಿಬಾರಿಗೂ ಗಟ್ಟಿಯಾಗಿ ಅಳುತ್ತಿದ್ದನು.

ಏತಸ್ಮಿನ್ನಂತರೇ ದೀಪ್ತಿಃ ಕಾಚಿಲ್ಲೋಕವಿಲಕ್ಷಣಾ ।
ದೃಷ್ಟ್ವಾ ಚ ಹರಿಣಾ ಭೀತ್ಯಾ ಲೋಚನೇ ಚ ನಿಮೀಲಿತೇ ॥ ೧೮೭ ॥

ಆಗಮ್ಯಮಾನೋ ಗೋಕ್ಷೀರಸಮತೇಜಾಸ್ಸುಗಾತ್ರವಾನ್ ।
ಸಂಗ್ರಹ್ಯ ಕೋಟಿಬ್ರಹ್ಮಾಂಡದಾಮಯುಗ್ಮಂ ಕರದ್ವಯೇ ॥ ೧೮೮ ॥

ದಧಾನಮುರಸಾ ದಾಮ ಕೋಟಿಬ್ರಹ್ಮಾಂಡಕಲ್ಪಿತಂ ।
ಬ್ರಹ್ಮಾಂಡಮೇಕಂ ನ್ಯಪತದುತ್ಪತಚ್ಚ ಕರದ್ವಯೇ ॥ ೧೮೯ ॥

ಸರ್ವಾಭರಣಸಂಯುಕ್ತಂ ತಥಾಭೂತಂ ತಮವ್ಯಯಂ ।
ವಿಷ್ಣುಸ್ತುಷ್ಟಾವ ಚಾದೃಷ್ಟ್ವಾ ದರ್ಶನಾಯ ಚ ತಸ್ಯ ವೈ ॥ ೧೯೦ ॥

॥ ವಿಷ್ಣುರುವಾಚ ॥

ನಮಸ್ತೇ ದೇವದೇವೇಶ ನಮಸ್ತೇ ಶಾಶ್ವತಾವ್ಯಯ ।
ನ ಜಾನೇಽಹಂ ಭವಂತಂ ಭೋಸ್ತ್ವಂ ಚ ವೇತ್ಸಿ ನಮೋ ನಮಃ ॥ ೧೯೧ ॥

---

೧೮೭. ಇಷ್ಟರೊಳಗೆ ಒಂದು ಲೋಕವಿಲಕ್ಷಣವಾದ ಕಾಂತಿಯು ಕಂಡು ಬಂದಿತು. ಅದನ್ನು ನೋಡಿ ವಿಷ್ಣುವು ಹೆದರಿಕೆಯಿಂದ ಕಣ್ಣುಮುಚ್ಚಿಕೊಂಡನು.

೧೮೮. ಗೋವಿನ ಹಾಲಿನಂತೆ ಬೆಳ್ಳಗಿರುವ ಒಂದು ತೇಜಸ್ಸು ಕೋಟಿ ಬ್ರಹ್ಮಾಂಡಗಳ ಎರಡು ಮಾಲೆಗಳನ್ನು ಎರಡು ಕೈಗಳಲ್ಲಿ ಹಿಡಿದುಕೊಂಡು ಬಂದಿತು.

೧೮೯. ಆ ತೇಜಸ್ಸು ಕೋಟಿ ಬ್ರಹ್ಮಾಂಡದಿಂದ ಮಾಡಿದ ಮಾಲೆಯನ್ನು ಕತ್ತಿನಲ್ಲಿ ಹಾಕಿಕೊಂಡು ಬಂದಿತು. ಕೈಯನ್ನು ಅಲ್ಲಾಡಿಸುತ್ತಿದ್ದಾಗ ಆ ಕೈಯಿಂದ ಒಂದು ಬ್ರಹ್ಮಾಂಡವು ಕಳಚಿಬಿದ್ದಿತು.

೧೯೦. ಎಲ್ಲಾ ಆಭರಣಗಳನ್ನೂ ಹಾಕಿಕೊಂಡು ಆ ರೀತಿಯಾದ ತೇಜಸ್ಸನ್ನು ಹೊಂದಿರುವ, ಅವ್ಯಯವಾದ ತೇಜಸ್ಸನ್ನು ವಿಷ್ಣುವು ಕಾಣದೇ ಅದನ್ನು ನೋಡಲು ಸ್ತುತಿಸಿದನು.

೧೯೧. ವಿಷ್ಣುವು ಹೇಳಿದನು :—ಎಲೈ ದೇವದೇವನೇ, ನಿನಗೆ ನಮಸ್ಕಾರವು. ಶಾಶ್ವತನೂ, ಅವ್ಯಯನೂ ಆದ ನಿನಗೆ ನಮಸ್ಕಾರವು. ನಿನ್ನನ್ನು ನಾನು ತಿಳಿಯೆನು. ನೀನು ಮಾತ್ರ ನನ್ನನ್ನು ಬಲ್ಲೆ. ನಮಸ್ಕಾರವು.

ಜಾನಾಮಿ ನ ಚ ತೇ ಭಾವಂ ದುರ್ನಿರೀಕ್ಷ್ಯಾ ಚ ತೇ ದ್ಯುತಿಃ ।
ಮಾಣಿಕ್ಯಕುಂಡಲಂ ಹೇಮದಾಮಜಾಲವಿಭೂಷಿತಂ ॥ ೧೯೨ ॥

ರತ್ನಾಂಗುಳೀಯಂ ಸುಭಗಂ ಬಾಹುಕೋಷ್ಠಸುಭೂಷಣಂ ।
ತನುರಕ್ತೋತ್ತಮಾಕರ್ಣದೀರ್ಘಾಯತನಲೋಚನಂ ॥ ೧೯೩ ॥

ಬಾಣಲೋಚನಸಂಕಾಶಂ ಭಾಲಲೋಚನಮವ್ಯಯಂ ।
ಕಂದರ್ಪಕಾರ್ಮುಕಭ್ರಾಂತಿಜನಕಭ್ರುವಮೀಶ್ವರಂ ॥ ೧೯೪ ॥

ಸ್ನಿಗ್ಧೋನ್ನತಸುಚಾರ್ವಂಗನಾಸಮಚ್ಛಕಪೋಲಕಂ ।
ಮಂದಸ್ಮಿತಂ ಪ್ರಸನ್ನಾಸ್ಯಂ ಬಾಲೇಂದುದರ್ಶನಂ ವಿಭುಂ ॥ ೧೯೫ ॥

ವಿಜ್ಞಾನರಕ್ತವಸನಂ ವೇದಕಲ್ಪಿತಭೂಷಣಂ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಚಕ್ಷುರ್ಮೇ ದೀಯತಾಂ ವಿಭೋ ॥ ೧೯೬ ॥

---

೧೯೨. ನಿನ್ನ ಅಭಿಪ್ರಾಯವಾಗಲಿ, ರೀತಿಯಾಗಲಿ ಗೊತ್ತಾಗುವುದಿಲ್ಲ. ನಿನ್ನ ತೇಜಸ್ಸನ್ನು ನೋಡಲು ಸಾಧ್ಯವಿಲ್ಲ. ಮಾಣಿಕ್ಯದ ಕರ್ಣಾಭರಣ, ಚಿನ್ನದಸರ ಇವುಗಳಿಂದ ಕೂಡಿದ ನಿನ್ನ ದೇಹದ ತೇಜಸ್ಸು ಕಣ್ಣುಗಳನ್ನು ಚುಚ್ಚುತ್ತಿದೆ.

೧೯೩. ಕೆಂಪಗಿರುವ ಉಂಗುರದಿಂದ ಕೂಡಿ, ತೋಳು ಅಜಾನುಲಂಬಿಯಾಗಿ ಮನೋಹರವಾಗಿದೆ. ಕಣ್ಣುಗಳು ಸ್ವಲ್ಪ ಕೆಂಪಗಿದ್ದು ಕರ್ಣಗಳವರೆಗೂ ದೀರ್ಘವಾಗಿದೆ.

೧೯೪. ಬಾಣದ ಪುಷ್ಪದಂತೆ ಕಣ್ಣುಳ್ಳ, ಭಾಲಲೋಚನನಾದ, ಶಾಶ್ವತನಾದ, ಮನ್ಮಥನ ಬಿಲ್ಲೆಂಬ ಭ್ರಾಂತಿಯನ್ನು ಕೊಡುವ ಹುಬ್ಬುಗಳುಳ್ಳ ಈಶ್ವರನೇ, ನಿನ್ನನ್ನು ಶರಣುಹೊಂದಿದ್ದೇನೆ.

೧೯೫. ಮನೋಹರವಾಗಿ ಸ್ವಲ್ಪ ಎತ್ತರವಾಗಿರುವ ಅಂಗಗಳುಳ್ಳ ಮೂಗನ್ನು ಹೊಂದಿರುವ, ಸ್ವಚ್ಛವಾಗಿರುವ ಕಪೋಲವುಳ್ಳ, ಮುಗುಳುನಗೆಯುಳ್ಳ, ಪ್ರಸನ್ನ ಮುಖವುಳ್ಳ ಬಾಲಚಂದ್ರನು ಕಾಣುವ ಸ್ವಾಮಿಯೇ, ನಿನ್ನನ್ನು ಶರಣುಹೊಕ್ಕಿದ್ದೇನೆ.

೧೯೬. ವಿಜ್ಞಾನಗಳಿಂದ ಕೆಂಪಾದ ಬಟ್ಟೆಯುಳ್ಳ, ವೇದಗಳೇ ಒಡವೆಯಾಗಿವುಳ್ಳ ನಿನ್ನನ್ನು ಮರೆಹೊಕ್ಕಿದ್ದೇನೆ. ನನಗೆ ಕಣ್ಣುಗಳನ್ನು ಕೊಡು. ದೀನನಾಗಿಯೂ,

ದೀನಾಂಧಕೃಪಣಾಜ್ಞಾನನಷ್ಟಸ್ಯ ಶರಣಂ ಭವ ।
ಅಥ ದಿವ್ಯಂ ದದೌ ಚಕ್ಷುಃ ಸ್ವಾತ್ಮದರ್ಶನಶಕ್ತಿಮತ್ ॥ ೧೯೭ ॥

ಅಥ ದೃಷ್ಟ್ವಾ ಹರಿಶ್ಶಂಭುಂ ತ್ರಿಣೇತ್ರಂ ಪುರತಃ ಸ್ಥಿತಂ ।
ಕೋ ಭವಾ ನಿತ್ಯುವಾಚಾಥ ನ ಜಾನೇ ತ್ವಾಂ ಮಹಾಯಶಾಃ ॥ ೧೯೮ ॥

ಪ್ರಣಾಮಂ ಕೇವಲಂ ಕರ್ತುಂ ಶಕ್ತೋಽಸ್ಮಿ ನ ಹಿ ವೇದಿತುಂ ॥ ೧೯೯ ॥

॥ ಸದಾಶಿವ ಉವಾಚ ॥

ತವ ಜ್ಞಾನಂ ಪ್ರದಾಸ್ಯಾಮಿ ಕುರು ಸ್ನಾನಂ ಚ ವಾರುಣಂ ।
ಭಸ್ಮಸ್ನಾನಂ ತತಃ ಪಶ್ಚಾತ್ತತೋ ಜ್ಞಾನಂ ದದಾಮಿ ತೇ ॥ ೨೦೦ ॥

॥ ಭಗವಾನುವಾಚ ॥

ಮತ್ಸ್ನಾನಯೋಗ್ಯಂ ಸಲಿಲಂ ನ ಚ ತಿಷ್ಠತಿ ಕುತ್ರಚಿತ್ ।
ಇತ್ಯುಕ್ತೋಽಥ ನಿಷಣ್ಣಸ್ತು ಬ್ರಹ್ಮಾಂಡಾಸಕ್ತವಿಗ್ರಹಃ ॥ ೨೦೧ ॥

---

ಕುರುಡನಾಗಿಯೂ, ಕೃಪಣನಾಗಿಯೂ, ಅಜ್ಞಾನಿಯಾಗಿಯೂ ಇರುವ ನನಗೆ ರಕ್ಷಕನಾಗು.

೧೯೭. ಆಗ ಸ್ವಾಮಿಯು ತನ್ನನ್ನು ನೋಡಲು ಶಕ್ತಿಯುಳ್ಳ ದಿವ್ಯ ಚಕ್ಷುಸ್ಸುಗಳನ್ನು ದಯಪಾಲಿಸಿದನು.

೧೯೮-೧೯೯. ಅನಂತರ ಹರಿಯು ಎದುರಿಗಿರುವ ತ್ರಿಣೇತ್ರನಾದ ಶಂಭುವನ್ನು ನೋಡಿ ಎಲೈ ಸ್ವಾಮಿಯೇ, ನಿನ್ನನ್ನು ನಾನು ತಿಳಿಯೆ. ನೀನಾರು? ನಿನಗೆ ನಮಸ್ಕಾರವನ್ನು ಮಾತ್ರ ಮಾಡಬಲ್ಲೆ. ನಿನ್ನನ್ನು ತಿಳಿಯಲು ಶಕ್ತಿಯಿಲ್ಲ.

೨೦೦. ಸದಾಶಿವನು ಹೇಳಿದನು :—ನಿನಗೆ ಜ್ಞಾನವನ್ನು ಕೊಡುತ್ತೇನೆ. ಜಲದಲ್ಲಿ ಮೊದಲು ಸ್ನಾನಮಾಡು. ಅನಂತರ ಭಸ್ಮದಲ್ಲಿ ಸ್ನಾನಮಾಡು. ಅಮೇಲೆ ದಿವ್ಯಜ್ಞಾನವನ್ನು ಕೊಡುತ್ತೇನೆ.

೨೦೧-೨೦೨. ಭಗವಂತನು ಹೇಳಿದನು :—ಬ್ರಹ್ಮಾಂಡದಲ್ಲಿಯೇ ಮನಸ್ಸುಳ್ಳ ಈ ವಿಷ್ಣುವು, ನಾನು ಸ್ನಾನಮಾಡುವಷ್ಟು ನೀರು ಎಲ್ಲಿಯೂ ಇಲ್ಲ. ಹೀಗೆಂದು ಹೇಳಿ

ಊರುದಘ್ನಜಲೇ ಸ್ನಾನಂ ನ ಯೋಗ್ಯಮಭವದ್ಧರೇಃ ।
ಶಂಭುರ್ಜಹಾಸ ಸ್ನಾನಾಯ ಜಲಮತ್ಯಧಿಕಂ ತ್ವಹೋ ॥ ೨೦೨ ॥

॥ ದಧೀಚ ಉವಾಚ ॥

ಅಥ ದೇವಶ್ಶಿವೋ ವಿಷ್ಣುಂ ಭಾಲಾಕ್ಷೇಣ ವ್ಯಲೋಕಯತ್ ।
ವಿಲೀನಸೂಕ್ಷ್ಮಾವಯವಂ ವಾಮಾಕ್ಷೇಣ ವ್ಯಲೋಕಯತ್ ॥ ೨೦೩ ॥

ತತಸ್ಸೂಕ್ಷ್ಮತನುರ್ವಿಷ್ಣುಃ ಶೀತದೇಹಶ್ಚ ಶಂಭುನಾ ।
ಉಕ್ತಶ್ಚ ಸ್ನಾಹಿ ಭೋ ವಿಷ್ಣೋ ಹ್ರದ ಏಷ ವಿಕಲ್ಪಿತಃ ॥ ೨೦೪ ॥

ತತೋ ಹ್ರದೇ ಹರಿಸ್ಸ್ನಾತುಂ ಹರಾಂಕೇ ಕಲ್ಪಿತೇ ತಥಾ ।
ಪ್ರವೇಷ್ಟುಂ ನ ಶಶಾಕಾಥ ಗಂಭೀರೇ ತದ್ಧ್ರದೇಽಸ್ಯ ತು ॥ ೨೦೫ ॥

ಹರಿರಾಹ ಚ ನೋ ಪಂಥಾ ಹ್ರದಸ್ಯಾಸ್ಯ ಪ್ರವೇಶನೇ ।
ಮಾರ್ಗೋ ಮೇ ದೀಯತಾಂ ದೇವ ಹ್ಯಥ ಶಂಭುಸ್ತಮಬ್ರವೀತ್ ॥ ೨೦೬ ॥

---

ಕುಳಿತುಕೊಂಡನು. ಆದರೆ ಹರಿಗೆ ಆಗಿದ್ದ, ತೊಡೆಯುದ್ದ ನೀರಿನಲ್ಲಿ ಸ್ನಾನಮಾಡುವುದು ಯೋಗ್ಯವಾಗಿ ಕಂಡುಬರಲಿಲ್ಲ. ಆಗ ಶಂಭುವು ನಕ್ಕನು. ಒಡನೆಯೇ ನೀರು ಬಹಳ ಹೆಚ್ಚಾಯಿತು.

೨೦೩. ದಧೀಚಿಯು ಹೇಳಿದನು:—ಅನಂತರ ಶಿವನು ವಿಷ್ಣುವನ್ನು ಫಾಲನೇತ್ರದಿಂದ ನೋಡಲು ಆ ವಿಷ್ಣುವಿನ ಅಂಗಗಳೆಲ್ಲವೂ ಸೂಕ್ಷ್ಮಗಳಾದುವು. ಎಡಗಣ್ಣಿನಿಂದ ಅನಂತರ ನೋಡಿದನು.

೨೦೪. ವಿಷ್ಣುವು ಸೂಕ್ಷ್ಮದೇಹವುಳ್ಳವನಾಗಿಯೂ, ಶೀತದೇಹವುಳ್ಳವನಾಗಿಯೂ, ಆಗಲು ಶಂಭುವು ಎಲೈ ವಿಷ್ಣುವೇ, ಸ್ನಾನಮಾಡು. ನಿನಗೋಸ್ಕರ ಈ ಮಡುವನ್ನು ನಿರ್ಮಿಸಿದ್ದೇನೆ ಎಂದನು.

೨೦೫. ಹರಿಯು ಸ್ನಾನಮಾಡಲೆಂದು ನಿರ್ಮಿಸಿದ, ಹರನ ಹೆಸರುಳ್ಳ ಕೊಳವಲ್ಲಿ ಇಳಿಯಲು ಅದು ಬಹು ಆಳವಾದುದರಿಂದ ಇಳಿಯಲು ಹರಿಗೆ ಸಾಧ್ಯವಾಗಲಿಲ್ಲ.

೨೦೬. ಹರಿಯು, ಸ್ವಾಮಿ, ಈ ಕೊಳಕ್ಕೆ ಇಳಿಯಲು ನನಗೆ ದಾರಿಯಿಲ್ಲವಲ್ಲ. ದಾರಿಯನ್ನು ಮಾಡಿಕೊಡೆನ್ನಲು ಹರನು ಹರಿಗೆ ಇಂತೆಂದನು.

॥ ಶಂಭುರುವಾಚ ॥

ಕೋಟಿಯೋಜನಗಂಭೀರಂ ಜಲಮೇತನ್ಮಹತ್ಪುರಾ ।
ನಿವಿಷ್ಟಸ್ಯೈವ ಭವತ ಊರುದಘ್ನಂ ಜಲಂ ವಿಭೋ ॥ ೨೦೭ ॥

ಇದಾನೀಂ ತಿಷ್ಠತಶ್ಚಾಪಿ ನ ಪ್ರವೇಶೋ ಹ್ರದೇ ಕಥಂ ।
ಅಷ್ಟಾಂಗುಲಪ್ರಮಾಣೋಽಯಮೂರುಸ್ತಸ್ಮಿನ್ಹ್ರದೇ ಜಲೇ ॥ ೨೦೮ ॥

ಪಶ್ಯಾಮಿ ಪ್ರವಿಶ ತ್ವಂ ಚ ಪಾದಸ್ಪರ್ಶಂ ದದಾಮಿ ತೇ ।
ವಾಕ್ಯಮೇಕಂ ತು ಸೋಪಾನಂ ವೇದಂ ಮದ್ವಾಕ್ಯನಿಸ್ಸೃತಂ ॥ ೨೦೯ ॥

॥ ಹರಿರುವಾಚ ॥

ಶಬ್ದಾರೋಹಣಸಾಮರ್ಥ್ಯಂ ಕಸ್ಯಾಪೀಹ ನ ವಿದ್ಯತೇ ।
ಮೂರ್ತಸ್ಯಾರೋಹಣಂ ಶಕ್ಯಂ ಗ್ರಹಣಂ ವಾ ಕಥಂ ಶ್ರುತೇಃ ॥ ೨೧೦ ॥

---

೨೦೭. ಶಂಭುವು ಹೇಳಿದನು :—ಈ ಮಡುವು ಒಂದುಕೋಟಿ ಯೋಜನ ಆಳವಾಗಿದ್ದಿತು. ಆಗ ಕುಳಿತಿದ್ದ ನಿನಗೆ ಇದು ತೊಡೆಯುದ್ದವಿದ್ದಿತು.

೨೦೮-೨೦೯. ಈಗ ನೀನು ನಿಂತಿದ್ದರೂ ಕೂಡ ಕೊಳದಲ್ಲಿ ಪ್ರವೇಶಿಸಲಾರೆ ಯಲ್ಲಾ ಹೇಗೆ? ನನಗೆ ಈ ಮಡುವಿನಲ್ಲಿ ಇಳಿದರೆ ತೊಡೆಯು ಎಂಟು ಅಂಗುಲದಷ್ಟು ನೆನೆಯುತ್ತದೆ. ನೀನು ಇದಕ್ಕೆ ಇಳಿ ಕಾಲಿಗೆ ನೆಲಸಿಕ್ಕುವಂತೆ ಮಾಡುತ್ತೇನೆ. ನನ್ನ ಬಾಯಿಂದ ಹೊರಟ ವಾಕ್ಯಗಳು ಸೋಪಾನವಾಗುತ್ತವೆ. ಆ ಒಂದೊಂದು ವಾಕ್ಯವೂ ವೇದವೇ ಎಂದನು.

೨೧೦. ಹರಿಯು ಹೇಳಿದನು :—ಶಬ್ದಗಳ ಮೇಲೆ ಹತ್ತುವ ಶಕ್ತಿಯು ಯಾವನಿಗೂ ಇಲ್ಲವೇ ಇಲ್ಲ. ಆಕಾರವಿರುವ ಪದಾರ್ಥದ ಮೇಲೆ ಹತ್ತಬಹುದಲ್ಲವೇ? ಶಬ್ದಕ್ಕೆ ಆಕಾರವಿಲ್ಲವಲ್ಲ. ಶ್ರುತಿಯನ್ನು ಗ್ರಹಿಸುವುದು ತಾನೇ ಹೇಗೆ?

॥ ಶಂಭುರುವಾಚ ॥

ಪುಂಸಶ್ಶಕ್ತಿರ್ನ ವಸ್ತೂನಾಂ ಧಾರಣಾರೋಹಣಾದಿಷು ।
ಗೃಹಾಣೇಮಂ ಮಹಾವೇದಂ ಜಗ್ರಾಹ ಹರಿರಪ್ಯಥ ॥ ೨೧೧ ॥

ನಮ್ರೀಕರಶ್ಚಾಶಕ್ತೇರ್ಹಿ ಪತನ್ನಿವ ಜನಾರ್ದನಃ ।
ನ ಚ ಶಕ್ಯಂ ಮಯಾ ಧರ್ತುಮಿತಿ ಪ್ರಾಹ ಶಿವಂ ಹರಿಃ ॥ ೨೧೨ ॥

ಶಿವಃ ಪ್ರಹಸ್ಯ ನಿಪತೀಪಾತ್ಯತೀವ ಮಹಾಹ್ರದೇ ।
ತತ್ಸೋಪಾನಮಥಾರುಹ್ಯ ಸ್ನಾತುಮರ್ಹಸಿ ಕೇಶವ ॥ ೨೧೩ ॥

॥ ದಧೀಚ ಉವಾಚ ॥

ವೇದೇ ಸೋಪಾನಭೂತೇ ಹಿ ಊರುದಘ್ನೋಪಲಬ್ಧನಿ ।
ತತ್ರ ಸ್ನಾತ್ವಾ ಸ ವಿಧಿನಾ ಬಹಿರುತ್ತೀರ್ಯ ಚೋಕ್ತವಾನ್ ॥ ೨೧೪ ॥

---

೨೧೧. ಶಂಭುವು ಹೇಳಿದನು :--ಗ್ರಹಿಸುವುದು, ಹತ್ತುವುದು, ಇವುಗಳಲ್ಲಿ ಮನುಷ್ಯನಿಗೆ ಶಕ್ತಿಯಿಲ್ಲ. ಆದರೂ ಈ ವೇದವನ್ನು ತೆಗೆದುಕೋ ಎನ್ನಲು ಹರಿಯು ತೆಗೆದುಕೊಂಡನು.

೨೧೨. ಜನಾರ್ದನನು ಕೈಯಲ್ಲಿ ತೆಗೆದುಕೊಳ್ಳುತ್ತಲೂ, ಕೈಕೆಳಗೆ ಬಗ್ಗಿ ಅವನು ಬೀಳುವಂತಾದನು. ಆಗ ನನ್ನಿಂದ ಧರಿಸಲು ಸಾಧ್ಯವಿಲ್ಲವೆಂದು ಹೇಳಿದನು.

೨೧೩. ಶಿವನು ನಕ್ಕು, ಎಲೈ ಕೇಶವನೇ, ಈ ಮಡುವಿನಲ್ಲಿ ಸೋಪಾನಗಳನ್ನು ಹತ್ತಿ ಇಳಿಯುವಂತೆ ಕಾಲುಗಳನ್ನಾಡಿಸು. ಆಗ ನೀನು ಹತ್ತಿ ಇಳಿಯುತ್ತೀಯೆ. ಅನಂತರ ಸ್ನಾನಮಾಡು.

೨೧೪. ದಧೀಚಿಯು ಹೇಳಿದನು :—ವೇದವು ಸೋಪಾನವಾಗಲು ತೊಡೆ ಯುದ್ದದಲ್ಲಿ ನೆಲವು ಸಿಕ್ಕಿ ನಿಂತುಕೊಂಡು, ಅಲ್ಲಿ ವಿಧಿವತ್ತಾಗಿ ಸ್ನಾನಮಾಡಿ ಹೊರಗೆ ಬಂದು ಇಂತೆಂದನು.

ಸ್ನಾತೋಽಸ್ಮಿ ಕಿಮತಃ ಕಾರ್ಯಂ ಶಂಭುರಾಹ ಹರಿಂ ತತಃ ।
ಧ್ಯಾಯಸೇ ಹೃದಯೇ ಕಿಂ ತ್ವಂ ನ ಚ ಕಿಂಚಿದ್ವದಸ್ವ ಮೇ ॥ ೨೧೪ ॥

ಹರಿರ್ನ ಕಿಂಚಿದಿತ್ಯಾಹ ತ್ವಥ ಶಂಭುರುವಾಚ ಹ ।
ಭಸ್ಮಸ್ನಾನೇನ ಸಂಶುದ್ಧೋ ವೇತ್ಸ್ಯಸೇ ಪರಮಂ ಶುಭಂ ।
ದೀಕ್ಷಿತಸ್ಯ ಹಿ ತಚ್ಛ್ರೇಷ್ಠಂ ತದ್ರಕ್ಷಾಂ ಕರವಾಣ್ಯಹಂ ॥ ೨೧೬ ॥

॥ ದಧೀಚ ಉವಾಚ ॥

ಸ್ವವಕ್ಷಃಸ್ಥಿತಭಸ್ಮೈಕಂ ನಖೇನಾದಾಯ ಶಂಕರಃ ।
ಪ್ರಣವೇನಾಭಿಮಂತ್ರ್ಯಾಥ ಗಾಯತ್ರ್ಯಾ ಬ್ರಹ್ಮಭೂತಯಾ ॥ ೨೧೭ ॥

ಅಂಗುಲೀಭ್ಯಾಮಥೋ ಗೃಹ್ಯ ಶಿವಃ ಪಂಚಾಕ್ಷರೇಣ ವೈ ।
ಹರಿಮಸ್ತಕಗಾತ್ರೇಷು ಸರ್ವೇಷ್ವಪಿ ಸಮಾಕ್ಷಿಪತ್ ॥ ೨೧೮ ॥

ಶಾಂತದೃಷ್ಟ್ಯಾ ನಿರೀಕ್ಷ್ಯಾಥ ಜೀವೇತ್ಯಾಹ ಹರಿಂ ಹರಃ ।
ಧ್ಯಾಯಸ್ವ ಕಿಂ ತೇ ಹೃದಯೇ ಸ ಚ ಧ್ಯಾನಪರೋಽಭವತ್ ॥ ೨೧೯ ॥

---

೨೧೪. ಆಗ ಹರಿಯು ಸ್ನಾನಮಾಡಿದೆನು. ಏನುಮಾಡಲಿ ಎನ್ನಲು, ಶಂಭುವು ಹರಿಯನ್ನು ಕುರಿತು ಏನನ್ನೋ ಧ್ಯಾನಮಾಡುತ್ತಿರುತ್ತೀಯಲ್ಲಾ ನನಗೆ ಸ್ವಲ್ಪವನ್ನು ಹೇಳುವುದಿಲ್ಲವಲ್ಲ ಎಂದನು.

೨೧೬. ಹರಿಯು ಅದಕ್ಕೆ ಏನೂ ಇಲ್ಲವೆಂದನು. ಅನಂತರ ಶಂಭುವು ಭಸ್ಮ ಸ್ನಾನದಿಂದ ಶುದ್ಧನಾಗು. ಆಮೇಲೆ ಉತ್ತಮವಾದುದೆಲ್ಲವನ್ನೂ ತಿಳಿಯುತ್ತೀಯೆ. ನೀನು ದೀಕ್ಷೆಗೊಂಡಮೇಲೆ ನಿನಗೆ ಉತ್ತಮವಾದುದನ್ನು ಕೊಟ್ಟು ಅದರ ರಕ್ಷಣೆಯನ್ನೂ ಮಾಡುತ್ತೇನೆ ಎಂದನು.

೨೧೭-೨೧೮. ದಧೀಚನು ಹೇಳಿದನು :—ಆಗ ಶಿವನು ತನ್ನ ಎದೆಯಲ್ಲಿದ್ದ ಭಸ್ಮವನ್ನು ಉಗುರಿನಿಂದ ತೆಗೆದುಕೊಂಡು ಪ್ರಣವದಿಂದಲೂ, ಗಾಯಿತ್ರಿಯಿಂದಲೂ, ಅಭಿಮಂತ್ರಿಸಿ, ಬೆರಳಿನಿಂದ ಹಿಡಿದುಕೊಂಡು ಪಂಚಾಕ್ಷರಿಯನ್ನು ಹೇಳುತ್ತಾ ಹರಿಯ ತಲೆ ಮುಂತಾದ ಅವಯವಗಳಿಗೆ ಎಸೆದನು.

೨೧೯. ಶಾಂತದೃಷ್ಟಿಯಿಂದ ಶಿವನು ನೋಡಿ, ಜೀವಿಸೆಂದು ಹೇಳಿ, ನಿನ್ನ ಮನಸ್ಸಿನಲ್ಲಿರುವುದನ್ನು ಧ್ಯಾನಿಸೆಂದನು. ಹರಿಯು ಆಗ ಧ್ಯಾನಪರನಾದನು.

ಅಪಶ್ಯದ್ಧೃದಯೇ ದೀಪಂ ದೀರ್ಘಾಕಾರಮತಿಪ್ರಭಂ ।
ಹರಿರಾಹ ಶಿವಂ ಸಾಕ್ಷಾದ್ದೀಪೋ ದೃಷ್ಟೋ ಮಯೇತಿ ಚ ॥ ೨೨೦ ॥

ಶಿವಃ ಪ್ರಾಹ ನ ತೇ ಜ್ಞಾನಂ ಪರಿಪಕ್ವಮಘೋ ಹರೇ ।
ಭಸ್ಮ ಭಕ್ಷಯ ತೇ ಜ್ಞಾನಂ ಸಮಗ್ರಂ ಸಂಭವಿಷ್ಯತಿ ॥ ೨೨೧ ॥

॥ ಹರಿರುವಾಚ ॥

ಭಕ್ಷಯಿಷ್ಯೇ ಶುಭಂ ಭಸ್ಮ ಸ್ನಾತೋಽಹಂ ಭಸ್ಮನಾ ಪುರಾ ।
ದೃಷ್ಟ್ವೇಶ್ವರಂ ಭಕ್ತಿಗಮ್ಯಂ ಭಸ್ಮಾಭಕ್ಷಯದಚ್ಯುತಃ ॥ ೨೨೨ ॥

ತತ್ರಾಶ್ಚರ್ಯಮತೀವಾಸೀತ್ಪಕ್ವಬಿಂಬಸಮದ್ಯುತಿಃ ।
ವಾಸುದೇವಶ್ಶುದ್ಧಮುಕ್ತಾಫಲವರ್ಣೋಽಭವತ್ಕ್ಷಣಂ ॥ ೨೨೩ ॥

ತದಾಪ್ರಭೃತಿ ಶುಕ್ಲೋಽಸೌ ವಾಸುದೇವಃ ಪ್ರಸನ್ನವಾನ್ ।
ಪುನರ್ಧ್ಯಾನಪರೋ ಭೂತ್ವಾ ದೀಪಮಧ್ಯೇ ಚ ಪೂರುಷಂ ॥ ೨೨೪ ॥

---

೨೨೦. ಆಗ ಹರಿಯು ಹೃದಯದಲ್ಲಿ ದೀರ್ಘಾಕಾರವಾದ ಬಹು ಕಾಂತಿಯುಳ್ಳ ದೀಪವನ್ನು ಕಂಡು, ಒಂದು ದೀಪವನ್ನು ಕಂಡೆನೆಂದು ಹರನಿಗೆ ಹೇಳಿದನು.

೨೨೧. ಆಗ ಶಿವನು ನಿನ್ನ ಜ್ಞಾನವು ಇನ್ನೂ ಪರಿಪಕ್ವವಾಗಿಲ್ಲ. ಭಸ್ಮವನ್ನು ಭಕ್ಷಿಸು. ನಿನಗೆ ಜ್ಞಾನವು ಸಮಗ್ರವಾಗಿ ಬರುತ್ತದೆಂದನು.

೨೨೨. ಹರಿಯು ಹೇಳಿದನು :—ನಾನು ಮೊದಲು ಭಸ್ಮದಲ್ಲಿ ಸ್ನಾನಮಾಡಿದ್ದೇನೆ. ಈಗ ಆ ಪವಿತ್ರವಾದ ಭಸ್ಮವನ್ನು ತಿನ್ನುತ್ತೇನೆ. ಎಂದು ಹೇಳಿ ಭಕ್ತಿಯಿಂದ ಸಿಕ್ಕುವ ಹರನನ್ನು ನೋಡಿ ಅಚ್ಯುತನು ಭಸ್ಮವನ್ನು ತಿಂದನು.

೨೨೩. ಆಗ ಅಲ್ಲಿ ಒಂದು ದೊಡ್ಡ ಆಶ್ಚರ್ಯವಾಯಿತು. ವಾಸುದೇವನು ತೊಂಡೇಹಣ್ಣಿನಂತೆ ಕಾಂತಿಯುಳ್ಳವನಾಗಿ, ಶುದ್ಧವಾದ ಮುತ್ತಿನಂತೆ ಬಣ್ಣವುಳ್ಳವನಾಗಿ ಕ್ಷಣಕಾಲದಲ್ಲೇ ಆದನು.

೨೨೪. ಅದು ಮೊದಲುಗೊಂಡು ವಾಸುದೇವನು ಬೆಳ್ಳಗೆ ಪ್ರಸನ್ನನಾದನು. ಮತ್ತು, ಮತ್ತೆ ಧ್ಯಾನಪರನಾಗಿ ದೀಪದ ಮಧ್ಯದಲ್ಲಿ ಒಬ್ಬ ಮನುಷ್ಯನನ್ನು ಕಂಡನು.

ಶುದ್ಧಸ್ಫಟಿಕಸಂಕಾಶಂ ತ್ರಿನೇತ್ರಂ ದ್ವಿಭುಜಂ ಶಿವಂ ।
ವರದಂ ದಕ್ಷಿಣೇ ಹಸ್ತೇ ವಾಮೇ ಚಾಭಯದಂ ವಿಭುಂ ॥ ೨೨೫ ॥

ಪಂಚವರ್ಷೀಯವಪುಷಂ ಶರಚ್ಚಂದ್ರಾಯುತದ್ಯುತಿಂ ।
ಮಾಣಿಕ್ಯಕುಂಡಲಂ ಹೇಮದಾಮಜಾಲವಿಭೂಷಿತಂ ॥ ೨೨೬ ॥

ರತ್ನಾಂಗುಲೀಯಸುಭಗಂ ಬಾಹುಕೇಯೂರಭೂಷಣಂ ।
ತನುರಕ್ತೋಷ್ಠಮಾಕರ್ಣದೀರ್ಘಾಯತವಿಲೋಚನಂ ॥ ೨೨೭ ॥

ಬಾಣಲೋಚನಸಂಕಾಶಂ ಭಾಲಲೋಚನಮವ್ಯಯಂ ।
ಕಂದರ್ಪಕಾರ್ಮುಕಭ್ರಾಂತಿಜನಕಭ್ರೂವಮೀಶ್ವರಂ ॥ ೨೨೮ ॥

ಸ್ನಿಗ್ಧೋನ್ನತಸುಚಾರ್ವಂಗನಾಸಮಚ್ಛಕಪೋಲಕಂ ।
ಮಂದಸ್ಮಿತಂ ಪ್ರಸನ್ನಾಸ್ಯಂ ಬಾಲೇಂದುದರ್ಶನಂ ವಿಭುಂ ॥ ೨೨೯ ॥

---

೨೨೫. ಆ ಮನುಷ್ಯನು ಶುದ್ಧವಾದ ಸ್ಫಟಿಕದಂತಿರುತ್ತ, ಮೂರು ಕಣ್ಣು ಎರಡು ಭುಜಗಳೂ ಇದ್ದು, ಬಲಗಡೆಯ ಕೈ ವರದಮುದ್ರೆಯುಳ್ಳದ್ದಾಗಿಯೂ, ಎಡಗೈ ಅಭಯಮುದ್ರೆಯುಳ್ಳದ್ದಾಗಿಯೂ ಇದ್ದವು.

೨೨೬. ಐದು ವರ್ಷ ವಯಸ್ಸುಳ್ಳ, ಅಯುತಸಂಖ್ಯೆ ಚಂದ್ರರಂತೆ ಕಾಂತಿಯುಳ್ಳ ಮಾಣಿಕ್ಯದ ಕುಂಡಲ, ಚಿನ್ನದ ಸರಗಳಿಂದ ಭೂಷಿತನಾಗಿದ್ದನು.

೨೨೭. ರತ್ನದ ಉಂಗುರವನ್ನು ತೊಟ್ಟು ಭುಜಕೀರ್ತಿಯನ್ನು ತೊಟ್ಟಿದ್ದನು. ಸ್ವಲ್ಪ ಕೆಂಪಾದ ತುಟಿಗಳೂ, ಕಿವಿಯವರೆಗೂ ದೀರ್ಘವಾದ ಕಣ್ಣುಗಳೂ ಇದ್ದುವು.

೨೨೮. ಬಾಣಪುಷ್ಪದಂತೆ ಕಣ್ಣುಳ್ಳ, ಹಣೆಯಲ್ಲಿ ಕಣ್ಣುಳ್ಳ ನಾಶರಹಿತನಾದ, ಮನ್ಮಥನ ಬಾಣಗಳೆಂಬ ಭ್ರಾಂತಿಯನ್ನು ಕೊಡುವ ಹುಬ್ಬುಗಳನ್ನು ಹೊಂದಿದ ಈಶ್ವರನನ್ನು ನೋಡಿದನು.

೨೨೯. ಮೃದುವಾಗಿ ಸ್ವಲ್ಪ ಮೇಲಕ್ಕೆದ್ದಿರುವ ಮೂಗುಳ್ಳ, ನಿರ್ಮಲವಾದ ಕೆನ್ನೆಯುಳ್ಳ, ಮುಗುಳುನಗೆಯುಳ್ಳ, ಪ್ರಸನ್ನಮುಖವುಳ್ಳ, ಚಂದ್ರನಂತೆ ಮನೋಹರನಾದ ಸ್ವಾಮಿಯನ್ನು ನೋಡಿದನು.

ವಿಜ್ಞಾನರಕ್ತವಸನಂ ವೇದಕಲ್ಪಿತನೂಪುರಂ ।
ವಾಮಾಂಗುಳೀಯಮಧ್ಯಸ್ಥಮಣಿಪ್ರಣವಮವ್ಯಯಂ ॥ ೨೩೦ ॥

ದೃಷ್ಟವಾನಥ ತಂ ವಿಷ್ಣುಂ ಕೃತಕೃತ್ಯೋಽಭವತ್ತದಾ ।
ಅಥಾಹ ಶಂಭುರ್ಭೋ ವಿಷ್ಣೋ ಹೃದಿ ದುಷ್ಟಂ ಹಿ ಕಿಂ ತ್ವಯಾ ॥ ೨೩೧ ॥

ಹರಿರಾಹ ಪುರಾ ದೃಷ್ಟಃ ಪುರುಷಶ್ಶಾಂತವಿಗ್ರಹಃ ।
ಇತ್ಯುದೀರ್ಯ ಮಹಾವಿಷ್ಣುಃ ಶಿವಪಾದೇ ಪಪಾತ ಹ ॥ ೨೩೨ ॥

॥ ಹರಿರುವಾಚ ॥

ನ ಶಕ್ತಿಂ ಭಸ್ಮನೋ ಜಾನೇ ಪ್ರಭಾವಂ ತೇ ಕುತೋ ವಿಭೋ ।
ನಮಸ್ತೇಽಸ್ತು ನಮಸ್ತೇಽಸ್ತು ತ್ವಾಮೇವ ಶರಣಂ ಗತಃ ॥ ೨೩೩ ॥

---

೨೩೦. ವಿಜ್ಞಾನದಿಂದ ಕೆಂಪಾದ ಬಟ್ಟೆಯುಳ್ಳ, ವೇದಗಳಿಂದ ಮಾಡಲ್ಪಟ್ಟ ಕಾಲುಕಡಗವುಳ್ಳ, ಎಡದಬೆಟ್ಟಿನಲ್ಲಿ ಹಾಕಿಕೊಂಡಿರುವ ಜಪಸರವುಳ್ಳ, ಆ ಸ್ವಾಮಿಯನ್ನು ವಿಷ್ಣುವು ನೋಡಿದನು. ಆಗ ಕೃತಕೃತ್ಯನೂ ಆದನು.

೨೩೧. ಅನಂತರ ಶಂಭುವು ಎಲೈ ವಿಷ್ಣುವೇ, ಹೃದಯದಲ್ಲಿ ಏನನ್ನು ನೋಡಿದೆ? ಎಂದು ಕೇಳಿದದು.

೨೩೨. ಹರಿಯು ಹಿಂದೆ ನೋಡಿದ ಶಾಂತವಿಗ್ರಹವುಳ್ಳ ಪುರುಷನನ್ನು ನೋಡಿದೆನು ಎಂದು ಹೇಳಿ, ಶಿವನ ಪಾದಗಳಲ್ಲಿ ಬಿದ್ದನು.

೨೩೩. ಹರಿಯು ಹೇಳಿದನು:—ಭಸ್ಮದ ಮಹಿಮೆಯೇನೆಂದು ತಿಳಿಯೆನು. ನಿನ್ನ ಮಹಿಮೆಯನ್ನು ಹೇಗೆ ತಿಳಿಯಲಿ? ನಿನಗೆ ನಮಸ್ಕಾರ, ನಿನಗೆ ನಮಸ್ಕಾರ, ನಿನ್ನನ್ನೇ ಶರಣುಹೊಂದಿದ್ದೇನೆ.

॥ ಸದಾಶಿವ ಉವಾಚ ॥

ವರಂ ವೃಣು ಮಹಾಭಾಗ ಮನಸಾ ಯಂ ತ್ವಮಿಚ್ಛಸಿ ।
ಶಿವೇರಿತಮಥಾಕರ್ಣ್ಯ ಹರಿವ್ರರ್ವೇ ವರೋತ್ತಮಂ ॥ ೨೩೪ ॥

॥ ಹರಿರುವಾಚ ॥

ತ್ವತ್ಪಾದಯುಗಳೇ ಶಂಭೋ ಭಕ್ತಿರಸ್ತು ಸದಾ ಮಮ ।
ಅಥ ದತ್ತ್ವಾ ವರಂ ಶಂಭುರಿದಮಾಹ ವಚೋ ಹರಿಂ ॥ ೨೩೫ ॥

॥ ಶಂಭುರುವಾಚ ॥

ಭಸ್ಮಧಾರಣಸಂಪನ್ನೋ ಮಮ ಭಕ್ತೋ ಭವಿಷ್ಯಸಿ ॥ ೨೩೬ ॥

॥ ದಧೀಚ ಉವಾಚ ॥

ಇತ್ಥಮುಕ್ತಂ ಮಹಾಜ್ಞಾನಂ ಭಸ್ಮಸಂಭವಮಾದಿತಃ ।
ತಸ್ಮಾದ್ಯೂಯಂ ಸುರಾಸ್ಸರ್ವೇ ಧಾರಯಧ್ವಂ ತದಾದರಾತ್ ॥ ೨೩೭ ॥

---

೨೩೪. ಸದಾಶಿವನು ಹೇಳಿದನು:—ಎಲೈ ವಿಷ್ಣುವೇ, ವರವನ್ನು ಕೇಳಿಕೋ ಮನಸ್ಸಿನಲ್ಲಿ ಏನಿದೆಯೋ ಅದನ್ನೆಲ್ಲಾ ಕೇಳಿಕೋ ಎಂದು ಶಿವನು ಹೇಳಲು ಅದನ್ನು ಕೇಳಿ ಹರಿಯು ವರವನ್ನು ಕೇಳಿದನು.

೨೩೫. ಹರಿಯು ಹೇಳಿದನು:—ಎಲೈ ಶಂಭುವೇ, ನಿನ್ನ ಪಾದಯುಗಗಳಲ್ಲಿ ನನಗೆ ಸದಾ ಭಕ್ತಿಯಿರಲಿ ಎಂದನು. ಶಂಭುವು ಆ ವರವನ್ನು ಕೊಟ್ಟು ಮತ್ತೆ ಇಂತೆಂದನು.

೨೩೬. ಶಂಭುವು ಹೇಳಿದನು:—ಭಸ್ಮಧಾರಣದಿಂದ ಕೂಡಿಕೊಂಡು ನನ್ನ ಭಕ್ತನಾಗುತ್ತೀಯೆ ಎಂದನು.

೨೩೭. ದಧೀಚನು ಹೇಳಿದನು:—ಮಹಾಜ್ಞಾನವನ್ನು ಕೊಡುವ ಭಸ್ಮದ ಜ್ಞಾನವನ್ನು ಹೇಳಿದ್ದೇನೆ. ಆದ್ದರಿಂದ ಎಲೈ ದೇವತೆಗಳೇ, ನೀವೆಲ್ಲರೂ ಆದರದಿಂದ ಅದನ್ನು ಧರಿಸಿರಿ. ಆಗ ಆಶ್ಚರ್ಯದಿಂದ ಕೂಡಿದ ಕಣ್ಣುಳ್ಳವರಾಗಿ ಆ ದೇವತೆಗಳು ಹಾಗೇ ಆಗಲೆಂದು ಹೇಳಿದರು.

ವಿಸ್ಮಯೋತ್ಫುಲ್ಲನಯನಾ ದೇವಾಶ್ಚಾಸಂಸ್ತದಸ್ತ್ವಿತಿ ।
ಯ ಇದಂ ಶೃಣುಯಾನ್ನಿತ್ಯಂ ಪುಣ್ಯಾಖ್ಯಾನಮನುತ್ತಮಂ ।
ವಿಮುಕ್ತಸ್ಸರ್ವಪಾಪೇಭ್ಯೋ ಯಾತ್ಯಸೌ ಶಂಕರಂ ಪದಂ ॥ ೨೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವ ಸಂವಾದೇ
ಭಸ್ಮಮಾಹಾತ್ಮ್ಯೇ ಏಕಾಧಿಕಶತತಮೋಽಧ್ಯಾಯಃ



---

೨೩೮. ಈ ಪುಣ್ಯಾಖ್ಯಾನವನ್ನು ಯಾವನು ಸದಾಕಾಲದಲ್ಲಿಯೂ, ಕೇಳುತ್ತಾನೆಯೋ, ಅವನು ಪಾಪಗಳಿಂದ ಬಿಡಲ್ಪಟ್ಟು ಶಂಕರಸ್ಥಾನವನ್ನು ಹೊಂದುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ಭಸ್ಮಮಹಿಮೆಯೆಂಬ ನೂರೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವ್ಯಧಿಕಶತತಮೋಽಧ್ಯಾಯಃ

॥ ಶುಚಿಸ್ಮಿತೋವಾಚ ॥

ಆಯುಷ್ಯವರ್ಧನಂ ಭಸ್ಮಾಶನಂ ದೃಷ್ಟಂ ಮಹಾಮುನೇ ।
ಪರಲೋಕಗತಿಂ ದಾತುಂ ಶಕ್ತಮೇತಂ ಭವಾನ್ವದ ॥ ೧ ॥

॥ ದಧೀಚ ಉವಾಚ ॥

ಅತ್ರ ತೇ ಕಥಯಿಷ್ಯಾಮಿ ಇತಿಹಾಸಂ ಪುರಾತನಂ ।
ಚಿತ್ರಗುಪ್ತಯಮಾಭ್ಯಾಂ ಚ ಖ್ಯಾತಂ ಚ ಯದ್ಬಭೂವ ಚ ॥ ೨ ॥

ಮಿಥಿಲಾಯಾಂ ಪುರಾ ಕಶ್ಚಿಚ್ಛುನಃ ಪರ್ಯಟಿತೇ ಕ್ಷುಧಾ ।
ಪುರಾ ಜನ್ಮಶತಾತ್ಪೂರ್ವಂ ಬ್ರಾಹ್ಮಣಃ ಪಾಪನಿಶ್ಚಯಃ ॥ ೩ ॥

---

## ನೂರೆರಡನೆಯ ಅಧ್ಯಾಯವು

೧. ಶುಚಿಸ್ಮಿತನು ಹೇಳಿದನು:—ಭಸ್ಮವನ್ನು ತಿನ್ನುವುದು ಆಯುಷ್ಯವನ್ನು ಹೆಚ್ಚಿಸುತ್ತದೆಂದು ತಿಳಿಯಿತು. ಪರಲೋಕದಲ್ಲಿ ಸದ್ಗತಿಯನ್ನು ಹೇಗೆ ಕೊಡುತ್ತದೆಂಬುದನ್ನು ತಿಳಿಸು.

೨. ದಧೀಚನು ಹೇಳಿದನು :— ಚಿತ್ರಗುಪ್ತನೂ, ಯಮನೂ ಪ್ರಸಿದ್ಧಿಮಾಡಿದ ಮತ್ತು ನಡೆದ ಒಂದು ಕಥೆಯನ್ನು ಈ ವಿಷಯದಲ್ಲಿ ಹೇಳುತ್ತೇನೆ ಕೇಳು.

೩. ಮಿಥಿಲೆಯಲ್ಲಿ ಪೂರ್ವದಲ್ಲಿ ಒಂದು ನಾಯಿಯು ಹಸಿವಿನಿಂದ ಸುತ್ತಾಡುತ್ತಿದ್ದಿತು. ಹಿಂದಿನ ನೂರುಜನ್ಮಗಳ ಹಿಂದಿನ ಜನ್ಮದಲ್ಲಿ ಈ ನಾಯಿಯು ಬ್ರಾಹ್ಮಣ ಜನ್ಮದಲ್ಲಿದ್ದಿತು ಮತ್ತು ಪಾಪಮಾಡಿತು.

ಪೂರ್ವೇ ವಯಸಿ ವೇದಾಢ್ಯಃ ಶಾಸ್ತ್ರಾಢ್ಯಶ್ಚ ಸುಬುದ್ಧಿಮಾನ್ ।
ಸ ಸ್ನಾತುಂ ಜಾಹ್ನವೀಂ ಗತ್ವಾ ಸ್ನಾನಂ ಕೃತ್ವಾ ಪಿತೄನಪಿ ॥ ೪ ॥

ದೇವಾನೃಷೀನ್ಸಮಭ್ಯರ್ಚ್ಯ ಯಯೌ ಪ್ರಾತ್ತಲಿಕಾಪುರಂ ।
ಪ್ರತಿಶ್ರಾಯಮಥೋ ಚಕ್ರೇ ಬ್ರಾಹ್ಮಣಸ್ಯ ನಿವೇಶನೇ ॥ ೫ ॥

ತತ್ರೈಕಾ ಕ್ಷತ್ರಿಯಸುತಾ ಯೌವನಸ್ಥಾ ಹತಪ್ರಿಯಾ ।
ಪ್ರಭ್ರಷ್ಟರಾಜ್ಯಾ ಷಟ್ಕೋಟಿನಿಷ್ಕದ್ರವ್ಯೇಣ ಸಂಯುತಾ ॥ ೬ ॥

ಭುಕ್ತ್ವಾಥ ಶಯಿತಂ ವಿಪ್ರಂ ಸರ್ವಾವಯವಸುಂದರಂ ।
ರಾತ್ರೌ ಚಂದ್ರೋದಯೇ ಶುದ್ಧೇ ಜ್ಯೋತ್ಸ್ನಾಹಸಿತದಿಙ್ಮುಖೇ ॥ ೭ ॥

ಬ್ರಾಹ್ಮಣಾಭ್ಯಾಶಮಾಗತ್ಯ ಉದ್ವೀಕ್ಷ್ಯೇದಮಥಾಬ್ರವೀತ್ ।
ಕುತಸ್ತ್ವಮಾಗತೋ ವಿಪ್ರ ಕಿಂ ವಾ ದೇಶಂ ಗಮಿಷ್ಯಸಿ ॥ ೮ ॥

---

೪-೫. ಈತನು ಯೌವನದಲ್ಲಿ ವೇದಾಧ್ಯಯನಸಂಪನ್ನನಾಗಿ, ಶಾಸ್ತ್ರಗಳನ್ನು ಓದಿದವನಾಗಿ ಬುದ್ಧಿವಂತನಾಗಿದ್ದನು. ಇವನು ಒಂದುಸಾರಿ ಗಂಗೆಯಲ್ಲಿ ಸ್ನಾನ ಮಾಡಿ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ಪ್ರಾತ್ತಳಿಕಾಪಟ್ಟಣಕ್ಕೆ ಹೋಗಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಬಿಡಾರಮಾಡಿದನು.

೬. ಅಲ್ಲಿಗೆ ಒಬ್ಬಳು ಕ್ಷತ್ರಿಯ ಹುಡುಗಿಯು ಬಂದಿದ್ದಳು. ಆಕೆಯು ಯೌವನವತಿ. ಗಂಡನು ಸತ್ತುಹೋಗಿದ್ದನು. ರಾಜ್ಯವು ಶತ್ರುಗಳ ಪಾಲಾದುದರಿಂದ ಒಂದುಕೋಟಿ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಬಂದಿದ್ದಳು.

೭. ಆ ಬ್ರಾಹ್ಮಣನು ಊಟಮಾಡಿ ಮಲಗಿದನು. ಅವನು ಎಲ್ಲಾ ವಿಧದಲ್ಲಿಯೂ ಸುಂದರನಾಗಿದ್ದನು. ಇವನನ್ನು ನೋಡಿ ಆಕೆಯು ರಾತ್ರಿ ಶುದ್ಧವಾದ ಬೆಳದಿಂಗಳು ಬೆಳಸುತ್ತಿರುವಾಗ ಅವನ ಬಳಿಗೆ ಬಂದು ಸಂತೋಷದಿಂದ ಆತನನ್ನು ನೋಡುತ್ತಾ ಇಂತೆಂದಳು.

೮. ಎಲೈ ಬ್ರಾಹ್ಮಣನೇ, ನೀನು ಎಲ್ಲಿಂದ ಏತಕ್ಕೋಸ್ಕರ ಬಂದೆ? ಎಲ್ಲಿಗೆ ಹೋಗುತ್ತೀಯೆ? ಎಂದು ಕೇಳಿದಳು.

॥ ಬ್ರಾಹ್ಮಣ ಉವಾಚ ॥

ಅಕಾಲಚರ್ಯಾ ಸರ್ವೇಷಾಂ ಶಂಕಾಮುತ್ಪಾತಯೇದ್ಧ್ರುವಂ ।
ವಯಃಸ್ಥಯೋರ್ಮಿಥೋ ವಾದೋ ರಹಸ್ಯೇ ಹಾಸ್ಯಮಂದಿರಂ ॥ ೯ ॥

॥ ಕ್ಷತ್ರಿಯೋವಾಚ ॥

ಕಥಾಪ್ರಸಂಗೇ ಯಾತ್ರಾಯಾಂ ತೀರ್ಥೇ ದೇಶಾದಿವಿಪ್ಲವೇ ।
ದುರ್ಭಿಕ್ಷಗ್ರಾಮದಹನೇ ರಹೋವಾದೋ ನ ದೂಷಿತಃ ॥ ೧೦ ॥

ಪ್ರತಿಶ್ರಯಸ್ತು ಮದ್ಗೇಹೇ ಭವತ್ಯೈವ ಕೃತಃ ಪುರಾ ।
ಮದ್ಗೇಹವಾಸಿನೀ ಚಾಹಂ ನ ಶಂಕಾ ತ್ವಿಹ ಕಸ್ಯಚಿತ್ ॥ ೧೧ ॥

॥ ಬ್ರಾಹ್ಮಣ ಉವಾಚ ॥

ತೂಷ್ಣೀಂಭಾವೋ ಮಯಾ ಕಾರ್ಯೋ ಗಚ್ಛ ತ್ವಂ ಸದ್ಮ ಚಾತ್ಮನಃ ।
ಇತ್ಯುಕ್ತಾ ಬ್ರಾಹ್ಮಣೇನಾಸೌ ಮನಸಾ ಚಿಂತಯತ್ತ್ವಿದಂ ॥ ೧೨ ॥

---

೯. ಬ್ರಾಹ್ಮಣನು ಹೇಳಿದನು:—ಕಾಲವಲ್ಲದ ಕಾಲದಲ್ಲಿ ಸಂಚರಿಸಿದರೆ ಎಲ್ಲರಿಗೂ ಖಂಡಿತವಾಗಿ ಸಂದೇಹವನ್ನು ಹುಟ್ಟಿಸುತ್ತದೆ. ಯೌವನದಲ್ಲಿರುವ ಯುವಕ ಯುವತಿಯರು ಏಕಾಂತದಲ್ಲಿ ಮಾತನಾಡುವುದು ಹಾಸ್ಯಕ್ಕೆ ತವರುಮನೆಯಲ್ಲವೇ?

೧೦. ಕ್ಷತ್ರಿಯಳು ಹೇಳಿದಳು:—ಕಥೆಯನ್ನು ಹೇಳುವಾಗ, ಯಾತ್ರೆಯಲ್ಲಿ, ತೀರ್ಥದಲ್ಲಿ, ದೇಶಕ್ಕೆ ತೊಂದರೆ ಬಂದಾಗ, ಕ್ಷಾಮದಲ್ಲಿ, ಊರಿಗೆ ಬೆಂಕಿಬಿದ್ದಾಗ, ಗುಟ್ಟಿನಲ್ಲಿ ಮಾತನಾಡುವುದು ದೂಷಿತವಲ್ಲ.

೧೧. ನೀನು ಮೊದಲೇ ನನ್ನ ಮನೆಯಲ್ಲಿ ಆಶ್ರಯವನ್ನು ಹೊಂದಿದ್ದೀಯೆ. ನಾನು ನನ್ನ ಮನೆಯಲ್ಲಿಯೇ ಇದ್ದುಕೊಂಡಿರುತ್ತೇನೆ. ಯಾರಿಗೂ ಸಂದೇಹಕ್ಕೆ ಕಾರಣವಿರುವುದಿಲ್ಲ.

೧೨. ಬ್ರಾಹ್ಮಣನು ಹೇಳಿದನು:—ನಾನು ಮೌನವಾಗಿರಬೇಕು. ನೀನು ನಿನ್ನ ಮನೆಗೆ ಹೋಗೆಂದು ಹೇಳಲು ಅವಳು ಮನಸ್ಸಿನಲ್ಲಿ ಈರೀತಿ ಯೋಚಿಸಿದಳು.

ಅನೇನ ಸಂಗಮೋ ಮಹ್ಯಂ ಯಥಾ ತತ್ತ್ವಂ ತಥಾಪ್ಯಹಂ।
ರೋದನಂ ತು ಕರಿಷ್ಯಾಮಿ ತಥಾ ಚಾಯಾತಿ ಸಾಂತ್ವಿತುಂ ॥ ೧೩ ॥

ಮಾಂ ಚ ಸಾಂತ್ವಯಿತುಂ ಪ್ರಾಪ್ತೋ ಮಾಂ ಸಮುತ್ಥಾಪಯಿಷ್ಯತಿ।
ಅಹಮುತ್ತಿಷ್ಠಮಾನೈವ ದೋರ್ಲತಾಕಂಠಸಂಗಿನೀ ॥ ೧೪ ॥

ಕುಚಯುಗ್ಮಂ ಹಿ ತದ್ಗಾತ್ರಂ ಸ್ಪರ್ಶಯನ್ನಿವ ಮೂರ್ಛಿತಾ।
ಗತಭಾನಾಂ ಹಿ ಮಾಂ ದೃಷ್ಟ್ವಾ ವಿಷಣ್ಣಃ ಸ್ವಯಮೇವ ಸಃ ॥ ೧೫ ॥

ಅಂಕಯೋರ್ಮಾಮಕಂ ದೇಹಂ ನಿಧಾಸ್ಯತಿ ದ್ವಿಜಾಗ್ರಣೀಃ।
ಅಚೇತನೇವ ವಚನಮುಪಾಸ್ಯ ರುದತೀವ ಚ ॥ ೧೬ ॥

ಸುಸ್ನಿಗ್ಧಂ ರೋಮರಹಿತಂ ಪಕ್ವಾಶ್ವತ್ಥದಳಾಕೃತಿ।
ದರ್ಶಯಿಷ್ಯಾಮಿ ತತ್ಸ್ಥಾನಂ ಕಾಮಗೇಹಂ ಸುಗಂಧಿ ಚ ॥ ೧೭ ॥

ಮಯ್ಯೈವ ವಿಲುಠಂತ್ಯಾಂಗೆ ತಸ್ಯ ವಸ್ತ್ರಮುಪಾಸ್ಯತೇ।
ಲೋಲುಪ್ಯ ಚಿತ್ತಂ ತಸ್ಯೇತ್ಥಮಾತ್ಮಾಧೀನಂ ಕರೋಮಿ ತಂ ॥ ೧೮ ॥

---

೧೩. ಇವನೊಡನೆ ನಾನು ಸೇರಬೇಕು ಆರೀತಿ ನಾನು ಮಾಡಬೇಕಾಗಿರುವುದರಿಂದ ಅಳುತ್ತೇನೆ. ಆಗ ಆತನು ಸಮಾಧಾನಮಾಡಲು ಬರುತ್ತಾನೆ.

೧೪-೧೫. ಆಗ ಈತನು ನನ್ನನ್ನು ಸಮಾಧಾನಮಾಡಲು ಬರುತ್ತಾನೆ. ನನ್ನನ್ನು ಎಬ್ಬಿಸುತ್ತಾನೆ. ನಾನು ಮೇಲಕ್ಕೇಳುತ್ತಿರುವಾಗಲೇ ತೋಳುಗಳನ್ನು ಕತ್ತಿನಲ್ಲಿಡುತ್ತೇನೆ. ಸ್ತನಗಳು ಅವನಿಗೆ ತಗಲುವಂತೆ ಮಾಡಿಕೊಂಡು ಮೂರ್ಛೆಹೋದವಳಂತಾಗುತ್ತೇನೆ. ಪ್ರಜ್ಞೆಯಿಲ್ಲದಿರುವ ನನ್ನನ್ನು ನೋಡಿ ದುಃಖಪಟ್ಟು ಅವನು ಕುಳಿತುಕೊಂಡು ನನ್ನನ್ನು ತೊಡೆಯ ಮೇಲೆ ಇಟ್ಟುಕೊಳ್ಳುತ್ತಾನೆ.

೧೬-೧೭. ಜ್ಞಾನವಿಲ್ಲದವಳಂತೆ ನಟಿಸುತ್ತಾ ಮಾತನಾಡದೇ ಅಳುತ್ತಾ, ಮೃದುವಾಗಿ ಕೂದಲಿಲ್ಲದ ಹಣ್ಣಾದ ಅರಳಿಯೆಲೆಯಂತಿರುವ ಸುಗಂಧವುಳ್ಳ ಆ ಕಾಮನ ಮನೆಯನ್ನು ಮರ್ಮಸ್ಥಾನವನ್ನು ಅವನಿಗೆ ತೋರಿಸುತ್ತೇನೆ.

೧೮. ಅವನ ತೊಡೆಯ ಮೇಲೆ ಹೊರಳಾಡುತ್ತಾ ನಾನೇ ಅವನ ಬಟ್ಟೆಯನ್ನು ತೆಗೆದುಹಾಕುತ್ತೇನೆ. ಈರೀತಿ ಅವನ ಮನಸ್ಸನ್ನು ತಲ್ಲಣಗೊಳಿಸಿ ನನ್ನ ಅಧೀನವನ್ನಾಗಿ ಮಾಡಿಕೊಳ್ಳುತ್ತೇನೆ.

ಅದೃಷ್ಟ್ವಾ ಯಾದೃಶಂ ಚಿತ್ತಂ ದೃಷ್ಟ್ವಾ ನೈತಾದೃಶಂ ಭವೇತ್ ।
ದರ್ಶನೇ ಯಾದೃಶಂ ಚಿತ್ತಂ ಸಂಲ್ಲಾಪೇ ನೈವ ತಾದೃಶಂ ॥ ೧೯ ॥

ಸಂಲಾಪೇ ಯಾದೃಶಂ ಚಿತ್ತಂ ಹಾಸ್ಯೋಕ್ತ್ಯಾ ನೈವ ತಾದೃಶಂ ।
ಹಾಸ್ಯೋಕ್ತ್ಯಾ ಯಾದೃಶಂ ಚಿತ್ತಂ ಸ್ಪರ್ಶನೇ ನೈವ ತಾದೃಶಂ ॥ ೨೦ ॥

ಸ್ಪರ್ಶನೇ ಯಾದೃಶಂ ಚಿತ್ತಂ ಯೋನಿದೃಷ್ಟ್ವಾ ನ ತಾದೃಶಂ ।
ತದ್ದೃಷ್ಟ್ವಾ ಯಾದೃಶಂ ಚಿತ್ತಂ ಯೋನಿಸ್ಪರ್ಶೇ ನ ತಾದೃಶಂ ॥ ೨೧ ॥

ಬಾಹುಮೂಲಕುಚದ್ವಂದ್ವಸ್ವಯೋನಿಸ್ಪರ್ಶದರ್ಶನಾತ್ ।
ಕಸ್ಯ ನ ಸ್ಖಲತೇ ಚಿತ್ತಂ ರೇತಃ ಸ್ಕಂನ್ನಂ ಚ ನೋ ಭವೇತ್ ॥ ೨೨ ॥

॥ ದಧೀಚ ಉವಾಚ ॥

ಇತಿ ಸಂಚಿಂತ್ಯ ಮನಸಾ ಕ್ಷತ್ರಿಯಾ ಗೃಹಮಭ್ಯಗಾತ್ ।
ಸ್ವಗೃಹದ್ವಾರಮಾಸಾದ್ಯ ಮಂದಪೂರ್ವಂ ರುರೋದ ಹ ॥ ೨೩ ॥

---

೧೯—೨೨. ನೋಡದಿದ್ದಾಗ ಇದ್ದ ಮನಸ್ಸು ನೋಡಿದ ಮೇಲೆ ಬದಲಾಯಿಸುತ್ತದೆ. ನೋಡಿದ ಮೇಲಿದ್ದ ಮನಸ್ಸು ಮಾತನಾಡುವಾಗ ಬದಲಾಯಿಸುತ್ತದೆ. ಮಾತನಾಡುವಾಗ ಇದ್ದ ಮನಸ್ಸು ಹಾಸ್ಯದ ಮಾತಿನಲ್ಲಿ ಬದಲಾಯಿಸುತ್ತದೆ. ಹಾಸ್ಯದಲ್ಲಿದ್ದ ಮನಸ್ಸು ಮುಟ್ಟಿದರೆ ಬದಲಾವಣೆ ಹೊಂದುತ್ತದೆ. ಮುಟ್ಟಿದಾಗಿದ್ದ ಮನಸ್ಸು ಗುಹ್ಯಸ್ಥಾನವನ್ನು ನೋಡಿದಾಗ ಬದಲಾಯಿಸುತ್ತದೆ. ಅದನ್ನು ನೋಡಿದಾಗಿದ್ದ ಮನಸ್ಸು ಮುಟ್ಟಿದಾಗ ಬದಲಾಯಿಸುತ್ತದೆ. ತೋಳಿನ ಮೂಲ, ಸ್ತನಯುಗ್ಮ, ಗುಹ್ಯಸ್ಥಾನದ ದರ್ಶನ ಸ್ಪರ್ಶನಗಳಿಂದ ಯಾವನ ಚಿತ್ತವು ವಶನಾಗುವುದಿಲ್ಲ? ಯಾವನ ಇಂದ್ರಿಯವು ತಾನೇ ಸ್ಖಲನವಾಗುವುದಿಲ್ಲ?

೨೩. ದಧೀಚನು ಹೇಳಿದನು :—ಈರೀತಿ ಮನಸ್ಸಿನಲ್ಲಿ ಯೋಚಿಸಿಕೊಂಡು ಆಕೆಯು ಮನೆಗೆ ಬಂದಳು. ಮನೆಯ ಬಾಗಿಲನ್ನು ಸೇರಿ ನಿಧಾನವಾಗಿ ಅಳಲು ಮೊದಲಿಟ್ಟಳು.

ಚಿರಂ ಕಾಲಂ ಚ ರುದಿತೇ ಬ್ರಾಹ್ಮಣಃ ಕರುಣಾನಿಧಿಃ ।
ಸ್ತ್ರೀಬಾಲವೃದ್ಧಾತುರರಾಜಯೋಗಿನೀ-
ವಿಷಾಗ್ನಿತೋಯಾದಿನಿಪಾತನಾನಾಂ ।
ದುಃಖಸ್ಯ ಚೈವೋದ್ಧರಣಂ ಪ್ರಶಸ್ಯತೇ
ಕೂಪಸ್ಯ ಖಾತೇನ ಸಮಂ ವದಂತಿ ॥ ೨೪ ॥

ಇತ್ಥಂ ವಿಚಾರ್ಯ ವಿಪ್ರೋಽಸೌ ಶುಚಿಭೂತಃ ಪ್ರಸನ್ನಧೀಃ ।
ತಸ್ಯಾಸ್ಸಮೀಪಮಗಮತ್ತಾಮುವಾಚ ತತೋ ದ್ವಿಜಃ ॥ ೨೫ ॥

ಅಲಂ ಶೋಕೇನ ಮಹತಾ ಇಹಾಮುತ್ರವಿರೋಧಿನಾ ।
ಶರೀರಶೋಷಣಂ ಹ್ಯೇತಚ್ಚಿತ್ತವಿಧ್ವಂಸನಂ ತಥಾ ॥ ೨೬ ॥

ತ್ಯಜ ಶೋಕಮಿಮಂ ಬಾಲೇ ನ ಚಾರ್ಥಃ ಶೋಚಿತೇನ ವೈ ।
ಶೋಕಸ್ಯ ಕಾರಣಂ ಕಿಂ ವಾ ಯೇನೇತ್ಥಂ ರುದ್ಯತೇ ತ್ವಯಾ ॥ ೨೭ ॥

---

೨೪. ಹೀಗೆ ಬಹಳ ಹೊತ್ತು ಅವಳು ಅತ್ತಮೇಲೆ ಆ ಕರುಣಾನಿಧಿಯಾದ ಬ್ರಾಹ್ಮಣನು ಹೆಂಗಸರು, ಬಾಲರು, ವೃದ್ಧರು, ರೋಗಿಗಳು, ರಾಜರು, ಯೋಗಿನಿಯರುಗಳ ವಿಷ, ಅಗ್ನಿ, ನೀರಿನ ತೊಂದರೆಗೆ ಸಿಕ್ಕಿದವರ ದುಃಖವನ್ನು ನಾಶಮಾಡಬೇಕು. ಹಾಗೆ ಮಾಡಿದರೆ ಅದು ಭಾವಿಯನ್ನು ತೋಡಿಸಿದುದಕ್ಕೆ ಸಮವೆಂದು ಹೇಳುತ್ತಾರೆ.

೨೫. ಆ ಬ್ರಾಹ್ಮಣನು ಹೀಗೆ ಯೋಚಿಸಿ ಶುಚಿಯಾಗಿ ಒಳ್ಳೆಯ ಮನಸ್ಸುಳ್ಳವನಾಗಿ ಅವಳ ಬಳಿಗೆ ಹೋದನು. ಅವಳನ್ನು ಕುರಿತು ಇಂತೆಂದನು.

೨೬. ಎಲೈ ಮಂಗಳೆಯೇ, ಇಹಪರಲೋಕಗಳಿಗೆ ತೊಂದರೆಯನ್ನುಂಟುಮಾಡುವ ದುಃಖವನ್ನು ಮಾಡಬೇಡ. ಈ ದುಃಖವು ಶರೀರವನ್ನು ಕ್ಷಯಿಸುವಂತೆ ಮಾಡುತ್ತದೆ. ಮನಸ್ಸನ್ನು ಚಂಚಲಪಡಿಸುತ್ತದೆ.

೨೭. ಎಲೈ ಬಾಲೆಯೇ, ಈ ಶೋಕವನ್ನು ಬಿಡು. ಈ ಶೋಕದಿಂದ ಪ್ರಯೋಜನವಿಲ್ಲ. ಈ ಶೋಕಕ್ಕೆ ಕಾರಣವೇನು ? ನೀನೇಕೆ ಹೀಗೆ ಅಳುತ್ತೀಯೆ ?

॥ ದಧೀಚ ಉವಾಚ ॥

ಏವಮುಕ್ತ್ವಾ ದ್ವಿಜೇನಾಥ ನ ಚ ಕಿಂಚಿದುವಾಚ ಹ ।
ಮೂರ್ಛಿತೇವಾಪತದ್ಭೂಮೌ ತಮುದೃಷ್ಟ್ವೈವ ವೀಕ್ಷತೀ ॥ ೨೮ ॥

ತಾಮುತ್ಥೋತ್ಥಾಪಯಾಮಾಸ ಬ್ರಾಹ್ಮಣಃ ಪರಮಾರ್ಥವಿತ್ ।
ಉತ್ಥಾಪಿತಾಪಿ ತೇನಾಸೌ ನಿಪಪಾತ ಪುನಃ ಪುನಃ ॥ ೨೯ ॥

ಪತಿತಾಂ ಪತಿತಾಂ ವಿಪ್ರೋ ನಿಷಿದ್ಧ್ಯೋತ್ಥಾಪ್ಯ ತಾಂ ಪುನಃ ।
ಅಂಕಮಾರೋಪಯಾಮಾಸ ಪ್ರಮಮಾರ್ಜ ವಿಲೋಚನೇ ॥ ೩೦ ॥

ಅಥ ಸಾ ಮೂರ್ಛಿತೇವಾಶು ವಸನಂ ಪರಿಮುಚ್ಯ ತಂ ।
ದರ್ಶಯನ್ತೀ ಸ್ತನೌ ಗುಹ್ಯಂ ಬಾಹುಮೂಲೇ ವಿಲೋಚನೇ ॥ ೩೧ ॥

ಆಲಂಬ್ಯ ಕಂಠೇ ಬಾಹುಭ್ಯಾಂ ಸ್ತನಾಭ್ಯಾಮಸ್ಪೃಶದ್ದ್ವಿಜಂ ।
ಚಂದ್ರಾತಪಶ್ಚ ವಿಶದೋ ಮಂದಮಾರುತಸಂಭವಃ ॥ ೩೨ ॥

---

೨೮. ದಧೀಚನು ಹೇಳಿದನು:—ಬ್ರಾಹ್ಮಣನು ಹೀಗೆ ಹೇಳಲು ಬಾಲೆ ಮಾತನ್ನು ಆಡಲೇ ಇಲ್ಲ. ಆ ಬ್ರಾಹ್ಮಣನನ್ನು ನೋಡುತ್ತಿರುವಂತೆಯೇ ನೋಡದಂತೆ ಮೂರ್ಛೆ ಬಂದವಳಂತೆ ಬಿದ್ದುಬಿಟ್ಟಳು.

೨೯. ಇದು ಯಥಾರ್ಥವೆಂದು ತಿಳಿದ ಆ ಬ್ರಾಹ್ಮಣನು ಆಕೆಯನ್ನು ಎತ್ತಿದನು. ಎತ್ತಿ ನಿಲ್ಲಿಸಿದರೂ ಕೂಡ ಮತ್ತೆ ಮತ್ತೆ ಬೀಳುತ್ತಲೇ ಇದ್ದಳು.

೩೦. ಬೀಳುತ್ತ ಬೀಳುತ್ತಿದ್ದ ಹಾಗೆಲ್ಲಾ ಆಕೆಯನ್ನು ಮತ್ತೆ ಮತ್ತೆ ಹಿಡಿದು ನಿಲ್ಲಿಸುತ್ತ ಕೊನೆಗೆ ತೊಡೆಯ ಮೇಲಿಟ್ಟುಕೊಂಡನು. ಕಣ್ಣುಗಳನ್ನು ಒರಸಿದನು.

೩೧-೩೨. ಅನಂತರ ಆಕೆಯು ಮೂರ್ಛೆಗೊಂಡವಳಂತೆ ಬಟ್ಟೆಯನ್ನು ಬಿಚ್ಚಿಬಿಟ್ಟು ಮೊಲೆಗಳನ್ನೂ ಗುಹ್ಯವನ್ನೂ ತೋರಿಸುತ್ತಾ ತೋಳನ್ನು ಮೇಲಕ್ಕೆತ್ತಿರುತ್ತ ಕತ್ತನ್ನು ತೋಳುಗಳಿಂದ ಹಿಡಿದುಕೊಂಡು ಸ್ತನಗಳಿಂದ ಅಪ್ಪಿಕೊಂಡಳು. ಆಗ ಚಂದ್ರಿಕೆಯು ಬೆಳಗುತ್ತಿದ್ದಿತಲ್ಲದೆ ಮಂದಮಾರುತವು ಬೀಸುತ್ತಿತ್ತು.

ಅಥ ಚಿಂತಾಪರೋ ವಿಪ್ರೋ ನ ಚ ಕಾರ್ಯಮಿದಂ ಮಮ ।
ಪಿತುರ್ವಾ ಮಾತುರುಚಿತಂ ಪತ್ಯುರ್ವಾಥ ಗುರೋಸ್ತಥಾ ॥ ೩೩ ॥

ಅಸಂಬುದ್ಧಸ್ಯ ಮೇ ಸರ್ವಂ ವಿಪರೀತಂ ವಿಭಾತಿ ವೈ ।
ಅಥ ಕಾಮಸ್ಸಮಾಯಾತೋ ರಹಸ್ಯೇ ಸ್ಥಿತಯೋಸ್ತಯೋಃ ॥ ೩೪ ॥

ವಿವ್ಯಾಧ ನಿಶಿತೈರ್ಬಾಣೈರ್ದ್ವಿಜಂ ಕಾಮೋ ದುರಾತ್ಮವಾನ್ ।
ಸ್ಮರಬಾಣಾತುರೋ ವಿಪ್ರಶ್ಚಿಂತಯಾಮಾಸ ಕಾಮುಕಃ ॥ ೩೫ ॥

ಇಯಂ ಸುಚಾರುಸರ್ವಾಂಗೀ ಕಾಮಿನೀವ ಪ್ರದೃಶ್ಯತೇ ।
ನೋ ಚೇದ್ಯೋನಿಮುಖೇ ಹ್ಯಸ್ಯಾ ಧ್ರುವಂ ನಾಃಪಾಂಸುನಿರ್ಗಮಃ ॥ ೩೬ ॥

ತದೇತಸ್ಯಾಃ ಕುಚಸ್ಪರ್ಶಾತ್ಸರ್ವಂ ವ್ಯಕ್ತಂ ಭವಿಷ್ಯತಿ ।
ಇತಿ ಸಂಚಿಂತ್ಯ ಮನಸಾ ಕುಚೌ ಯೋನಿಮಥಾಸ್ಪೃಶತ್ ॥ ೩೭ ॥

---

೩೩. ಆಗ ಆ ಬ್ರಾಹ್ಮಣನು ನಾನು ಈಕೆಗೆ ಉಪಚಾರಮಾಡಬಾರದು. ಈ ಉಪಚಾರವು ತಾಯಿ, ತಂದೆ, ಗುರು, ಗಂಡ, ಇವರಿಗೆ ಯೋಗ್ಯವಾದುದೆಂದು ಯೋಚಿಸುತ್ತಿದ್ದನು.

೩೪. ಈಕೆಯ ವಿಷಯವನ್ನೇ ತಿಳಿಯದ ನನಗೆ ಎಲ್ಲವೂ ವ್ಯತ್ಯಾಸವಾಗಿ ಕಾಣುವುದು. ಅವರಿಬ್ಬರೂ ಹೀಗೆ ಏಕಾಂತದಲ್ಲಿರಲು ಕಾಮನು ಬಂದನು.

೩೫. ಆಗ ದುಷ್ಟನಾದ ಕಾಮನು ಬಾಣಗಳಿಂದ ಆತನನ್ನು ಹೊಡೆದನು. ಆಗ ಆ ಬ್ರಾಹ್ಮಣನು ಅವನ ಬಾಣಕ್ಕೆ ಅಧೀನನಾಗಿ ಇಂತೆಂದು ಚಿಂತಿಸಿದನು.

೩೬. ಸುಂದರಿಯಾದ ಈಕೆಯು ಕಾಮವುಳ್ಳವಳಂತೆ ತೋರುತ್ತದೆ. ಹಾಗಿಲ್ಲದಿದ್ದರೆ ಈಕೆಯ ಗುಹ್ಯದಿಂದ ಹೊರಕ್ಕೆ ದ್ರವವು ಹೊರಡುತ್ತಿರಲಿಲ್ಲ. ಆ ವಿಷಯವು ಈಕೆಯು ಕುಚಗಳನ್ನು ನನಗೆ ತಗುಲಿಸುವುದರಿಂದಲೇ ಗೊತ್ತಾಗುತ್ತದೆ.

೩೭. ಹೀಗೆಂದು ಯೋಚಿಸಿ ಆಕೆಯ ಕುಚಗಳನ್ನೂ ಯೋನಿಯನ್ನೂ ಸಹ ಮುಟ್ಟಿದನು.

**ಸಾಪಿ ಮೂರ್ಛಿತರೂಪೈವ ಮಂದಸ್ಮಿತಮುಖ್ಯಾಭವತ್ ।**
**ಆಲಿಲಿಂಗೇ ದ್ವಿಜಂ ಗಾಢಮಾನನಂ ಚ ಚುಚುಂಬ ಹ ॥ ೩೮ ॥**

**ತಯೋರಥ ಸಮಾಯೋಗೋ ವರ್ಷಾಣಾಂ ಶತಮಪ್ಯಭೂತ್ ।**
**ಗತೇ ವರ್ಷಶತೇ ಪಶ್ಚಾದೇಕಸ್ಮಿನ್ದಿವಸೇ ದ್ವಿಜಃ ॥ ೩೯ ॥**

**ಸ್ನಾತುಂ ಯಯೌ ನದೀಂ ಪ್ರಾತಃಸ್ನಾಯಿವಿಪ್ರಪ್ರಸಂಗತಃ ।**
**ಸ್ನಾನಂ ತತ್ರ ತಥಾ ಚಕ್ರೇ ಪುರಾಣಂ ಶ್ರುತವಾನಥ ॥ ೪೦ ॥**

**ಕೌರ್ಮಂ ಸಮಸ್ತಪಾಪಾನಾಂ ನಾಶನಂ ಶಿವಭಕ್ತಿದಂ ।**
**ಇದಂ ಪದ್ಯಂ ಚ ಶುಶ್ರಾವ ಪುರಾಣಜ್ಞೇನ ಭಾಷಿತಂ ॥ ೪೧ ॥**

**ಬ್ರಹ್ಮಹಾ ಮದ್ಯಪಃ ಸ್ತೇನಸ್ತಥೈವ ಗುರುತಲ್ಪಗಃ ।**
**ಕೌರ್ಮಂ ಪುರಾಣಂ ಶ್ರುತ್ವೈವ ಮುಚ್ಯತೇ ಪಾತಕಾತ್ತತಃ ॥ ೪೨ ॥**

**ಶ್ರುತ್ವೈತದ್ವಚನಂ ವಿಪ್ರಃ ಪೌರಾಣಿಕಮಭಾಷತ ॥**
**ಮಯಾ ಕೃತಾನಾಂ ಪಾಪಾನಾಂ ನ ಚ ಸಂಖ್ಯಾಸ್ತಿ ಕಾಚನ ॥ ೪೩ ॥**

---

೩೮. ಆಕೆಯು ಮೂರ್ಛೆಗೊಂಡಿದ್ದಂತೆಯೇ ನಗುತ್ತ ಆತನನ್ನು ಗಟ್ಟಿಯಾಗಿ ಆಲಿಂಗಿಸಿಕೊಂಡಳು. ಚುಂಬಿಸಿಯೂ ಚುಂಬಿಸಿದಳು. ಹೀಗೆ ಸೇರಿದ ಇವರು ಒಂದುನೂರು ವರ್ಷಗಳವರೆಗೂ ಕೂಡ ಜೊತೆಯಾಗಿದ್ದರು.

೩೯-೪೦. ಹೀಗೆ ನೂರು ವರ್ಷಗಳು ಕಳೆಯಲು ಆ ಬ್ರಾಹ್ಮಣನು ಒಂದು ದಿನ ಸ್ನಾನಮಾಡುವವರ ಜೊತೆಯಲ್ಲಿ ಹೋಗಿ ಸ್ನಾನಮಾಡಿ ಬಂದು ಅಲ್ಲಿ ಹೇಳುತ್ತಿದ್ದ, ಸಮಸ್ತ ಪಾಪಗಳನ್ನೂ ನಾಶಮಾಡಿ ಶಿವಭಕ್ತಿಯನ್ನು ಕೊಡುವ ಕೂರ್ಮ ಪುರಾಣವನ್ನು ಕೇಳಿದನು.

೪೧-೪೨. ಬ್ರಾಹ್ಮಣನನ್ನು ಕೊಂದವನು, ಮದ್ಯವನ್ನು ಕುಡಿದವನು, ಗುರು ಭಾರ್ಯೆಯನ್ನು ರಮಿಸಿದವನು, ಇಂತಹವರೂ ಕೂರ್ಮಪುರಾಣವನ್ನು ಕೇಳಿದರೆ ಆ ಪಾಪಗಳಿಂದ ಮುಕ್ತರಾಗುತ್ತಾರೆ. ಎಂಬ ಈ ಪದ್ಯವನ್ನು ಪೌರಾಣಿಕನು ಹೇಳುತ್ತಿರುವುದನ್ನು ಕೇಳಿದನು.

೪೩-೪೪. ಅದನ್ನು ಕೇಳಿ ಆ ಬ್ರಾಹ್ಮಣನು ಪೌರಾಣಿಕನನ್ನು ಕುರಿತು ನಾನು

ಅಶೇಷಪಾಪಸಂದೋಹನಾಶನಂ ತದಿಹೋಚ್ಯತಾಂ ॥ ೪೪ ॥

॥ ಪೌರಾಣಿಕ ಉವಾಚ ॥

ಆರಾಧಯಸ್ವ ದೇವೇಶಂ ಶಂಕರಂ ತ್ರಿದಶೇಶ್ವರಂ ।
ತಸ್ಯ ಸಂಪೂಜನಾದ್ವಿಪ್ರ ಸರ್ವಂ ಪಾಪಂ ವಿನಶ್ಯತಿ ॥ ೪೫ ॥

ಪಾಪಮೇವ ತಮಃ ಪ್ರೋಕ್ತಂ ಜ್ಞಾನದೀಪೇನ ನಶ್ಯತಿ ।
ಅಥವಾ ಪೂಜಯಾ ವಿಪ್ರ ಸಮಸ್ತಾಘವಿನಾಶನಂ ॥ ೪೬ ॥

ಜ್ಞಾನಪೂಜಾವಿಹೀನಾನಾಂ ನರಕೇ ಪತನಂ ಧ್ರುವಂ ॥ ೪೭ ॥

॥ ದಧೀಚ ಉವಾಚ ॥

ಅಥ ದ್ವಿಜೋ ಹ್ಯಭ್ಯಗಮಚ್ಛಿವಾಲಯಮನುತ್ತಮಂ ।
ದ್ರೋಣಪುಷ್ಪಸಹಸ್ರೇಣ ಪೂಜಯಾಮಾಸ ಶಂಕರಂ ॥ ೪೮ ॥

ಗೃಹಂ ಜಗಾಮ ಚ ತತೋ ಭೋಜನಂ ಕೃತವಾನಥ ।
ವಿಹಾಯ ಕ್ಷತ್ರಿಯಾಂ ವಿಪ್ರೋ ಜಗಾಮೇಷ್ಟಾಂ ಭುವಂ ತತಃ ॥ ೪೯ ॥

---

ಮಾಡಿರುವ ಪಾಪಗಳಿಗೆ ಲೆಕ್ಕವೇ ಇಲ್ಲ. ಸಮಸ್ತ ಪಾಪಗಳನ್ನೂ ನಾಶಮಾಡತಕ್ಕದ್ದೊಂದನ್ನು ಹೇಳು.

೪೫. ಪೌರಾಣಿಕನು ಹೇಳಿದನು:—ಎಲೈ ಬ್ರಾಹ್ಮಣನೇ, ಶಿವನನ್ನು ಪೂಜಿಸು. ಅವನನ್ನು ಪೂಜಿಸುವುದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ.

೪೬-೪೭. ಪಾಪವೆಂಬುದೇ ಕತ್ತಲೆಯು. ಜ್ಞಾನವೆಂಬುದೇ ದೀಪವು. ಆ ಜ್ಞಾನದಿಂದ ಪಾಪವು ಹೋಗುತ್ತದೆ. ಅದಿಲ್ಲದಿದ್ದರೆ ಪೂಜೆಯಿಂದ ಸಮಸ್ತ ಪಾಪಗಳೂ ಹೋಗುತ್ತವೆ. ಜ್ಞಾನ, ಅಥವಾ ಪೂಜೆಗಳಿಲ್ಲದವರು ನರಕದಲ್ಲಿ ಬೀಳುತ್ತಾರೆ ನಿಶ್ಚಯವು.

೪೮. ದಧೀಚನು ಹೇಳಿದನು:—ಆಮೇಲೆ ಆ ಬ್ರಾಹ್ಮಣನು ಶಿವಾಲಯಕ್ಕೆ ಬಂದು ಸಾವಿರ ತುಂಬೆ ಹೂಗಳನ್ನು ತೆಗೆದುಕೊಂಡು ಶಂಕರನನ್ನು ಪೂಜಿಸಿದನು.

೪೯. ಅನಂತರ ಮನೆಗೆ ಬಂದು ಊಟಮಾಡಿ ಆ ಕ್ಷತ್ರಿಯಳನ್ನು ಬಿಟ್ಟುಬಿಟ್ಟು, ತನಗೆ ಇಷ್ಟಬಂದಲ್ಲಿಗೆ ಹೊರಟುಹೋದನು.

**ಹವಿಷ್ಯಮನ್ನಮಾದಾಯ ಭುಕ್ತ್ಯೈಶಕ್ತ್ಯೇಶ್ಶಿವಾಲಯಂ ।**
**ಗತ್ವಾ ದೀಪಸ್ಥಿತಾಜ್ಯೇನ ಭೋಜನಂ ಕೃತವಾನ್ಬಹಿಃ ॥ ೫೦ ॥**

**ಅಥ ಮೃತ್ಯುವಶಂ ಪ್ರಾಪ್ತೋ ಯಮಲೋಕಂ ಜಗಾಮ ವೈ ॥ ೫೧ ॥**

**॥ ಯಮ ಉವಾಚ ॥**

**ತ್ವಯಾ ಕೃತಾನಾಂ ಪಾಪಾನಾಂ ಫಲಂ ನರಕಪಾತನಂ ।**
**ವರ್ಷಕೋಟಿದ್ವಯಂ ವಿಪ್ರ ಶ್ವಾನಜನ್ಮಶತಂ ಪುನಃ ॥ ೫೨ ॥**

**ಶಿವದೀಪಾಜ್ಯಹರಣಾತ್ಫಲಂ ನರಕಸೇವನಂ ।**
**ನರಕೇ ಚ ಸ್ಥಿತಿಸ್ತಸ್ಯ ಶತವರ್ಷಂ ಸುಭೀಷಣಂ ॥ ೫೩ ॥**

**ಕುಂಭೀಪಾಕೇ ಚ ಕಾಷ್ಠತ್ವಂ ಭಸ್ಮ ಭೂತ್ವಾ ಪುನಃ ಪುನಃ ।**
**ವರ್ಷಾಣಾಂ ದಶಕಂ ತ್ವೇವಂ ಕ್ರಿಮಿಭುಕ್ತಿಃ ಪರಂ ದಶ ॥ ೫೪ ॥**

---

೫೦-೫೧. ದೇವಸ್ಥಾನದಲ್ಲಿ ನೈವೇದ್ಯದ ಅನ್ನವನ್ನು ತೆಗೆದುಕೊಂಡು ಅದಕ್ಕೆ ಏನೂ ಇಲ್ಲದಿರಲು ಅಲ್ಲೇ ದೀಪಕ್ಕೆ ಹಾಕಿದ್ದ ತುಪ್ಪವನ್ನು ತೆಗೆದುಕೊಂಡು ಹೊರಗೆ ಬಂದು ಊಟಮಾಡಿದನು. ಅನಂತರ ಮೃತ್ಯುವು ಒದಗಲು ಯಮಲೋಕಕ್ಕೆ ಹೋದನು.

೫೨. ಯಮನು ಹೇಳಿದನು:—ಎಲೈ ಬ್ರಾಹ್ಮಣನೇ ನೀನು ಪಾಪಮಾಡಿದುದಕ್ಕೆ ಫಲವು ನರಕದಲ್ಲಿ ಬೀಳುವಿಕೆಯು. ಆ ನರಕದಲ್ಲಿ ಎರಡುಕೋಟಿ ವರ್ಷಗಳು ಕಷ್ಟಪಟ್ಟು ಅನಂತರ ಭೂಮಿಯಲ್ಲಿ ನೂರುಜನ್ಮಗಳಲ್ಲಿ ನಾಯಾಗಿ ಹುಟ್ಟಬೇಕು.

೫೩. ಶಿವದೀಪದಲ್ಲಿದ್ದ ತುಪ್ಪವನ್ನು ಕದ್ದುದಕ್ಕೆ ಫಲವು ನರಕವೇ. ಆ ನರಕದಲ್ಲಿ ಅದಕ್ಕೋಸ್ಕರ ನೂರು ವರ್ಷಗಳು ಭಯಂಕರ ಕಷ್ಟವನ್ನು ಅನುಭವಿಸಬೇಕು.

೫೪. ಕುಂಭೀಪಾಕದಲ್ಲಿ ಕಟ್ಟಿಗೆಯಾಗಿದ್ದು ಸುಡಿಸಿಕೊಂಡು ಬೂದಿಯಾಗುತ್ತಿರಬೇಕು. ಹೀಗೆ ಹತ್ತುವರ್ಷ ಕಳೆಯಬೇಕು. ಅನಂತರ ಕ್ರಿಮಿಗಳಿಗೆ ಆಹಾರವಾಗಿ ಹತ್ತು ವರ್ಷಗಳಿರಬೇಕು.

ಪುನರ್ಶ್ವಾ ದೀಪವರ್ತಿತ್ವಂ ವರ್ಷಾಣಾಂ ಚ ತಥಾ ದಶ ।
ಶ್ಲೇಷ್ಮಾಮೇಧ್ಯಪುರೀಷೇಷು ಮೂತ್ರರೇತೋಹ್ರದೇಷು ಚ ॥ ೫೫ ॥

ಉಸ್ಸೃಜ್ಯ ಚ ನಿಮಜ್ಯಾಥ ಶ್ಲೇಷ್ಮವಿಣ್ಮಲಭೋಜನಂ ।
ತತೋ ನರಕಶೇಷೇಣ ಶ್ವಾನಜನ್ಮಶತಂ ಪರಂ ॥ ೫೬ ॥

ಯಮವಾಕ್ಯಮಿತಿ ಶ್ರುತ್ವಾ ಬ್ರಾಹ್ಮಣೋ ನಿಪಪಾತ ಚ ।
ಅಥ ತಸ್ಯ ಪ್ರಿಯಾ ಭಾರ್ಯಾ ಪತಿಚಿಂತಾಪರಾಭವತ್ ॥ ೫೭ ॥

ಏತಸ್ಮಿನ್ನಂತರೇ ತಸ್ಯಾಃ ಸಮೀಪಂ ನಾರದೋಽಭ್ಯಗಾತ್ ।
ನಾರದಸ್ಯ ಪಪಾತಾಸೌ ಪಾದಯೋರತಿದುಃಖಿತಾ ॥ ೫೮ ॥

ತಾಮುತ್ಥಾಪ್ಯ ಮುನಿಶ್ಶುದ್ಧಾಂ ಗತಾಯುಷಮಭಾಷತ ।
ಅಯಿ ಮುಗ್ಧೇ ವಿಶಾಲಾಕ್ಷಿ ಭರ್ತಾರಂ ಗಂತುಮರ್ಹಸಿ ॥ ೫೯ ॥

ಭರ್ತಾ ತೇ ಹಿ ವಿಶಾಲಾಕ್ಷೀ ಮೃತೋ ಬಂಧುವಿವರ್ಜಿತಃ ।
ನ ರೋದಿತವ್ಯಂ ತೇ ಭದ್ರೇ ಜ್ವಲನಂ ಪ್ರವಿಶಾವ್ಯಯೇ ॥ ೬೦ ॥

---

೫೫-೫೬. ಆಮೇಲೆ ದೀಪದಬತ್ತಿಯಾಗಿ ಹತ್ತು ವರ್ಷಗಳಿರಬೇಕು. ಶ್ಲೇಷ್ಮ, ಅಮೇಧ್ಯ, ಹೇಲು, ಮೂತ್ರ, ರೇತಸ್ಸುಗಳ ಮಡುಗಳಲ್ಲಿ ಮುಳುಗುತ್ತಾ, ಏಳುತ್ತಾ ಅವನ್ನೇ ತಿನ್ನುತ್ತಾ ಇದ್ದು, ಪಾಪವು ಮತ್ತೂ ಉಳಿಯಲು, ಅನಂತರ ನಾಯಿಯ ನೂರುಜನ್ಮಗಳನ್ನು ತಾಳಬೇಕು.

೫೭. ಯಮನ ಈ ಮಾತನ್ನು ಕೇಳಿ ಬ್ರಾಹ್ಮಣನು ಬಿದ್ದುಬಿಟ್ಟನು. ಇಷ್ಟರೊಳಗೆ ಈ ಬ್ರಾಹ್ಮಣನ ಹೆಂಡತಿಯು ಗಂಡನ ಗತಿಯೇನಾಯಿತೆಂದು ಚಿಂತಿಸುತ್ತಿದ್ದಳು.

೫೮. ಇಷ್ಟರೊಳಗೆ ನಾರದನು ಅವಳ ಬಳಿಗೆ ಬಂದನು. ಆಕೆಯು ದುಃಖಿಸುತ್ತಾ ಆತನ ಪಾದಗಳ ಮೇಲೆ ಬಿದ್ದಳು.

೫೯-೬೦. ಶುದ್ಧಳಾದ ಆಕೆಯನ್ನು ಮೇಲಕ್ಕೆಬ್ಬಿಸಿ ಅವನು ಸತ್ತುಹೋಗಿರುವನೆಂದು ಹೇಳಿದನು. ಅಮ್ಮಾ ಸುಂದರಿ! ನೀನು ನಿನ್ನ ಗಂಡನ ಬಳಿಗೆ ಹೋಗುವುದು ಯುಕ್ತವು. ನಿನ್ನ ಗಂಡನು ಬಂಧುಗಳನ್ನು ಬಿಟ್ಟುಹೋಗಿ ಸತ್ತಿದ್ದಾನೆ. ನೀನು ದುಃಖಪಡಬೇಡ, ಅಗ್ನಿಪ್ರವೇಶವನ್ನು ಮಾಡು.

॥ ಬ್ರಾಹ್ಮಣ್ಯುವಾಚ ॥

ಅಶಕ್ಯಂ ಯದಿ ವಾ ಶಕ್ಯಂ ಮಯಾ ಗಂತುಂ ಮುನೇ ವದ ।
ಅಗ್ನಿಪ್ರವೇಶಕಾಲೋ ನೈ ವ್ಯತೀತೋ ನ ಭವೇತ್ತಥಾ ॥ ೬೧ ॥

॥ ನಾರದ ಉವಾಚ ॥

ಯೋಜನಾನಾಂ ಶತಂ ತ್ವೇಕಮಿತಃಸ್ಥಾನಾತ್ಪರಂ ಹಿ ತತ್ ।
ಶ್ವೋ ದಾಹಃ ಕಿಲ ವಿಪ್ರಸ್ಯ ಭವಿತಾ ಗಂತುಮರ್ಹಸಿ ॥ ೬೨ ॥

॥ ಅವ್ಯಯೋವಾಚ ॥

ದೂರಸ್ಥಿತಂ ಕಾಯನಾಥಂ ಗನ್ತುಮರ್ಹಾಮಿ ಹೇ ಮುನೇ ।
ತದ್ವಚಸ್ತು ಸಮಾಕರ್ಣ್ಯ ನಾರದಸ್ತಾಮಥಾಬ್ರವೀತ್ ॥ ೬೩ ॥

॥ ನಾರದ ಉವಾಚ ॥

ವಿಪಂಚೀನಾಳಸಂಸ್ಥಾ ತ್ವಂ ಭವ ಗಚ್ಛಾಮ್ಯಹಂ ಕ್ಷಣಾತ್ ।
ಇತ್ಯುದೀರ್ಯ ತತೋ ಗತ್ವಾ ತ್ವರಾಂ ಚಕ್ರೇ ಗತಂ ಚ ತಂ ॥ ೬೪ ॥

---

೬೧. ಬ್ರಾಹ್ಮಣಿಯು ಹೇಳಿದಳು :—ಎಲೈ ಋಷಿಯೇ, ಅದು ಸಾಧ್ಯವಿರಲಿ ಇಲ್ಲದಿರಲಿ ನಾನು ಅಲ್ಲಿಗೆ ಹೋಗಬೇಕು. ಅಗ್ನಿಪ್ರವೇಶ ಕಾಲವು ಅತಿಕ್ರಮಿಸದಂತೆ ಹೇಳು.

೬೨. ನಾರದನು ಹೇಳಿದನು :—ಇಲ್ಲಿಗೆ ಆ ಊರು ನೂರು ಯೋಜನಗಳಿವೆ. ಹೋಗು, ನಾಳೆ ಆ ಬ್ರಾಹ್ಮಣನ ದಹನವಾಗುತ್ತದೆ.

೬೩. ಅವ್ಯಯೆಯು ಹೇಳಿದಳು :—ದೇಹನಾಥನು ದೂರದಲ್ಲಿದ್ದರೂ ಹೋಗಬೇಕಲ್ಲ ಎಂದಳು. ಆ ಮಾತನ್ನು ಕೇಳಿ ನಾರದನು ಅವಳನ್ನು ಕುರಿತಿಂತೆಂದನು.

೬೪. ನಾರದನು ಹೇಳಿದನು :—ನನ್ನ ಈ ವೀಣೆಯ ನಾದದೊಳಗೆ ಕುಳಿತುಕೋ. ಅದನ್ನು ತೆಗೆದುಕೊಂಡು ನಾನು ಒಂದುಕ್ಷಣದಲ್ಲಿ ಅಲ್ಲಿಗೆ ಹೋಗುತ್ತೇನೆ. ಎಂದು ಹೇಳಿ ಅವನು ಸತ್ತಿರುವಲ್ಲಿಗೆ ಹೋದನು.

ದೇಶಂ ನಷ್ಟದ್ವಿಜಸ್ಥಾನಂ ತಾಮುವಾಚಾವ್ಯಯಾಂ ಮುನಿಃ ।
ರೋದನಂ ನೇಹ ಕರ್ತವ್ಯಂ ಯದಿ ತತ್ರಾಗ್ನಿಮೇಷ್ಯಸಿ ॥ ೬೫ ॥

ಪಾಪಂ ಯದಿ ಕೃತಂ ಭದ್ರೇ ಪರಪೂರುಷಸೇವನಂ ।
ಏತದ್ವಿಶುದ್ಧಯೇ ಪುತ್ರಿ ಪ್ರಾಯಶ್ಚಿತ್ತಂ ಸಮಾಚರ ॥ ೬೬ ॥

ತವೋಪಪಾತಕವ್ರಾತನಾಶೋ ವಹ್ನಿಪ್ರವೇಶನಾತ್ ।
ನಾನ್ಯತ್ಪಶ್ಯಾಮಿ ನಾರೀಣಾಂ ಸರ್ವಪಾಪೋಪಶಾಂತಯೇ ॥ ೬೭ ॥

ಅಗ್ನಿಪ್ರವೇಶಂ ಮುಕ್ತ್ವೈಕಂ ಪ್ರಾಯಶ್ಚಿತ್ತಂ ಜಗತ್ರಯೇ ॥ ೬೮ ॥

॥ ದಧೀಚ ಉವಾಚ ॥

ಅಥ ನಾರದವಾಕ್ಯೇನ ಚೋದಿತೋವಾಚ ಸಾ ತ್ವಿದಂ ।
ಅಗ್ನಿಪ್ರವೇಶೇ ನಾರೀಣಾಂ ಕಿಂ ಕರ್ತವ್ಯಂ ಮಹಾಮುನೇ ॥ ೬೯ ॥

॥ ನಾರದ ಉವಾಚ ॥

ಸ್ನಾನಂ ಮಂಗಳಸಂಸ್ಕಾರೋ ಭೂಷಣಾಂಜನಧಾರಣಂ ।
ಗಂಧಪುಷ್ಪಂ ತಥಾ ಧೂಪಂ ಹರಿದ್ರಾಕ್ಷತಧಾರಣಂ ॥ ೭೦ ॥

---

೬೫. ಅಲ್ಲಿಗೆ ಹೋಗಲು ಅಲ್ಲಿ ಬ್ರಾಹ್ಮಣರೇ ಇರಲಿಲ್ಲ. ಆಗ ನಾರದನು ಎಲೈ ಅವ್ವಯೆಯೇ, ನೀನು ಅಗ್ನಿಪ್ರವೇಶ ಮಾಡುವಂತಿದ್ದರೆ ದುಃಖಿಸಬೇಡ.

೬೬. ಪರಪುರುಷನ ಸಂಗದ ಪಾಪವನ್ನು ಮಾಡಿದ್ದರೆ ಅದರ ಶುದ್ಧಿಗೋಸ್ಕರ ಪ್ರಾಯಶ್ಚಿತ್ತವನ್ನು ಮಾಡಿಕೋ.

೬೭-೬೮. ನಿನಗೆ ಉಪಪಾಪಗಳೂ ಕೂಡ ಅಗ್ನಿಪ್ರವೇಶದಿಂದ ನಾಶವಾಗುತ್ತವೆ. ಹೆಂಗಸರಿಗೆ ಸರ್ವಪಾಪಗಳೂ ನಾಶವಾಗಲು ಅಗ್ನಿಪ್ರವೇಶ ಒಂದನ್ನು ಬಿಟ್ಟು ಮೂರು ಲೋಕದಲ್ಲಿಯೂ, ಮತ್ತೊಂದು ಪ್ರಾಯಶ್ಚಿತ್ತವನ್ನು ತಿಳಿಯೆನು. ಇಲ್ಲವೇ ಇಲ್ಲ.

೬೯. ದಧೀಚನು ಹೇಳಿದನು :—ನಾರದನು ಹೀಗೆಂದು ಹೇಳಲು ಆಕೆಯು ಎಲೈ ನಾರದನೇ, ಅಗ್ನಿಪ್ರವೇಶಮಾಡಲು ಹೆಂಗಸರು ಏನುಮಾಡಬೇಕೆಂದಳು.

೭೦—೭೨. ನಾರದನು ಹೇಳಿದನು :—ಮಂಗಳಸ್ನಾನಮಾಡಿ ಒಡವೆಯನ್ನು ತೊಟ್ಟುಕೊಳ್ಳಬೇಕು. ಕಪ್ಪನ್ನು ಹಚ್ಚಿಕೊಳ್ಳಬೇಕು. ಗಂಧ, ಹೂ, ಧೂಪ, ಅರಶಿನ,

**ಮಂಗಳಂ ಚ ತಥಾ ಸೂತ್ರಂ ಪಾದಾಲಕ್ತಕಮೇವ ಚ ।**
**ಶಕ್ತ್ಯಾ ದಾನಂ ಪ್ರಿಯೋಕ್ತಿಶ್ಚ ಪ್ರಸನ್ನಾಸ್ಯತ್ವಮೇವ ಚ** ॥ ೭೧ ॥

**ನಾನಾಮಂಗಳವಾದ್ಯಾನಾಂ ಶ್ರವಣಂ ಗೀತಕಸ್ಯ ಚ ।**
**ವ್ಯಭಿಚಾರಕೃತೇ ಪಾಪೇ ತತ್ಪಾಪಸ್ಯ ಪ್ರಶಾಂತಯೇ** ॥ ೭೨ ॥

**ಅತೀತಂ ಪಾತಕಂ ದೃಷ್ಟ್ವಾ ಪ್ರಾಯಶ್ಚಿತ್ತಂ ತದೀರಿತಂ ।**
**ಕುರ್ಯಾದಥ ಸ್ವಕಾಂ ಭೂಷಾಂ ವಿಪ್ರಾಯ ಪ್ರತಿಪಾದಯೇತ್** ॥ ೭೩ ॥

**ಭೂಷಾಭಾವೇ ಸ್ವಕೀಯೇನ ಪ್ರಾಯಶ್ಚಿತ್ತಂ ತು ಕಾರಯೇತ್ ।**
**ನಾನ್ಯಥಾ ತಸ್ಯ ಪಾಪಸ್ಯ ನಾಶನಂ ವೇತಿ ಕುತ್ರಚಿತ್** ॥ ೭೪ ॥

**॥ ಅವ್ಯಯೋವಾಚ ॥**

**ಸರ್ವಮೇತತ್ಕರಿಷ್ಯಾಮಿ ಹರಿದ್ರಾ ಮೇ ನ ವಿದ್ಯತೇ ।**
**ಭೂಷಣಂ ಕಿಮು ತದ್ಬ್ರಹ್ಮನ್ಸರ್ವಮೇತತ್ಪ್ರದೀಯತಾಂ** ॥ ೭೫ ॥

---

ಅಕ್ಷತೆಗಳನ್ನು ಧರಿಸಬೇಕು. ಮಂಗಳಸೂತ್ರವನ್ನು ಧರಿಸಿರಬೇಕು. ಕಾಲಿಗೆ ಲಾಕ್ಷಾರಸವನ್ನು ಹಚ್ಚಿಕೊಳ್ಳಬೇಕು. ಯಥಾಶಕ್ತಿ ದಾನಮಾಡಬೇಕು. ಒಳ್ಳೆಯ ಮಾತುಗಳನ್ನಾಡಬೇಕು. ಮುಗುಳುನಗೆಯಿಂದಿರಬೇಕು. ಮಂಗಳವಾದ್ಯವನ್ನು ಕೇಳುತ್ತಾ ಹಾಡನ್ನು ಕೇಳುತ್ತಿರಬೇಕು. ಇವೆಲ್ಲವೂ ವ್ಯಭಿಚಾರದ ಪಾಪವನ್ನು ನಾಶಮಾಡುತ್ತವೆ. ಅಗ್ನಿಪ್ರವೇಶದಿಂದ ಪಾಪವೆಲ್ಲವೂ ಹೋಗುವುದೆಂದು ತಿಳಿದು ಈ ಪ್ರಾಯಶ್ಚಿತ್ತವನ್ನು ಹೇಳಿದೆ.

೭೩-೭೪. ತನ್ನ ಒಡವೆಯೆಲ್ಲವನ್ನೂ ತೊಟ್ಟುಕೊಂಡು ಅದನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಒಡವೆಯಿಲ್ಲದಿದ್ದರೆ ತನ್ನ ಕೈಯ್ಯಿಂದಲೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ಆ ಪಾಪವು ಎಂದೂ ಹೋಗುವುದಿಲ್ಲ.

೭೫. ಅವ್ಯಯೆಯು ಹೇಳಿದಳು:—ಎಲ್ಲವನ್ನೂ ಮಾಡಿಕೊಳ್ಳುತ್ತೇನೆ. ಅರಶಿನ ಮಾತ್ರ ನನಗಿಲ್ಲ. ಒಡವೆಗಳು ಏನೇನು ಬೇಕೋ ಎಲ್ಲವನ್ನೂ ನನಗೆ ಕೊಡು.

॥ ನಾರದ ಉವಾಚ ॥

ನೇಹಾಸ್ತಿ ಕಿಂಚಿತ್ಸೌಭಾಗ್ಯದ್ರವ್ಯಮನ್ಯತ್ತ್ವಪೇಕ್ಷ್ಯಯಾ ॥ ೭೬ ॥

॥ ದಧೀಚ ಉವಾಚ ॥

ಅಥ ಕ್ಷಣೇನಾಭ್ಯಗಮತ್ಕೈಲಾಸಂ ಶಿವಮಂದಿರಂ ।
ಗಿರಿಜಾಮಥ ದೃಷ್ಟ್ವಾಽಸೌ ಪ್ರಣಿಪತ್ಯೇದಮಬ್ರವೀತ್ ॥ ೭೭ ॥

ಹರಿದ್ರಾ ದೀಯತಾಂ ಮಾತರ್ಭೂಷಣಾನಿ ಚ ಸೂತ್ರಕಂ ॥ ೭೮ ॥

॥ ಪಾರ್ವತ್ಯುವಾಚ ॥

ವಿಧವಾಯೈ ಮಯಾ ಕಿಂಚಿದ್ಭೂಷಣಂ ದೀಯತೇ ಕಥಂ ।
ಮಯಾ ದತ್ತೇ ಹಿ ತಸ್ಮಿಂಸ್ತು ವೈಧವ್ಯಂ ನೋಪಪದ್ಯತೇ ॥ ೭೯ ॥

॥ ನಾರದ ಉವಾಚ ॥

ಮಾತರ್ನೋ ವಿಧವಾ ತಾವದ್ಧವಾಂಗಂ ಯಾವದಸ್ತಿ ವೈ ।
ಆದಾಹಾತ್ಸೂತಕಂ ನಾಸ್ತಿ ತಿಷ್ಠೇತ್ಸೌಭಾಗ್ಯಮುತ್ತಮಂ ॥ ೮೦ ॥

---

೭೬. ನಾರದನು ಹೇಳಿದನು:—ಇಲ್ಲಿ ಸೌಭಾಗ್ಯದ್ರವ್ಯಗಳೊಂದೂ ಇಲ್ಲ ಬೇರೆಯುದನ್ನು ಕೇಳು.

೭೭-೭೮. ದಧೀಚನು ಹೇಳದನು:—ನಾರದನು ಒಡನೆಯೇ ಕೈಲಾಸಕ್ಕೆ ಹೋದನು. ಗಿರಿಜೆಯನ್ನು ಕುರಿತು ಅಮ್ಮ! ಅರಶಿನ, ಒಡವೆಗಳು, ಮಂಗಳ ಸೂತ್ರಗಳನ್ನು ಕೊಡೆಂದನು.

೭೯. ಪಾರ್ವತಿಯು ಹೇಳಿದಳು:—ವಿಧವೆಗೆ ಭೂಷಣಗಳನ್ನು ಹೇಗೆ ಕೊಡಲಿ? ಅವನ್ನು ನಾನು ಕೊಟ್ಟರೆ ಆಗ ಅವಳಿಗೆ ವೈಧವ್ಯವೇ ಬರುವುದಿಲ್ಲವಲ್ಲ.

೮೦. ನಾರದನು ಹೇಳಿದನು:—ಅಮ್ಮಾ! ಗಂಡನ ದೇಹವಿರುವರೆಗೂ ಹೆಂಗಸು ವಿಧವೆಯಾಗುವುದಿಲ್ಲ. ಅದನ್ನು ಸುಡುವವರೆಗೂ ಸೂತಕಬರುವುದಿಲ್ಲ. ಸೌಭಾಗ್ಯವಿರುತ್ತದೆ.

॥ ಪಾರ್ವತ್ಯುವಾಚ ॥

ನ ಚಾನ್ಯದೇಹೋ ಮದ್ಭೂಷಾಂ ಹರಿದ್ರಾಂ ಧರ್ತುಮರ್ಹತಿ ।
ಭೂಷಣಾದೌ ಮಯಾ ದತ್ತೇ ಚಿರಂ ಜೀವಿತಮಿಷ್ಯತೇ ॥ ೮೧ ॥

ದೀಯತೇ ಹಿ ಜಯಂತ್ಯೈವ ಸರ್ವಮೇತತ್ತ್ವಯೇರಿತಂ ।
ಜಯನ್ತೀಂ ಸ ಜಗಾಮಾಥ ತಯಾ ದತ್ತಮಥಾಹರತ್ ॥ ೮೨ ॥

ಸ್ನಾಪಂತ್ಯಾ ಅವ್ಯಯಾಯಾಸ್ತು ಹರಿದ್ರಾಂ ದತ್ತವಾನ್ಮುನಿಃ ।
ತತಸ್ಸುಸೂಕ್ಷ್ಮವಸ್ತ್ರಂ ಚ ಭೂಷಣಂ ಚ ದದೌ ಮುನಿಃ ।
ಆಹ ಚೈನಾಂ ತವಾಂತೇಷ್ಟಿಂ ಕಃ ಕರೋತಿ ನಿಯುಂಕ್ಷ್ವ ತಂ ॥ ೮೩ ॥

॥ ಅವ್ಯಯೋವಾಚ ॥

ತ್ವಮೇವ ಮೇ ಸಮಸ್ತಾನಾಂ ಕ್ರಿಯಾಣಾಂ ಕಾರಣಂ ಮುನೇ ।
ಪಿತಾಸಿ ಸರ್ವಂ ಕುರ್ವದ್ಯ ನಮಸ್ತೇ ಮುನಿಪುಂಗವ ॥ ೮೪ ॥

---

೮೧. ಪಾರ್ವತಿಯು ಹೇಳಿದಳು:—ನನ್ನ ಒಡವೆಗಳನ್ನೂ, ಅರಿಸಿನವನ್ನೂ ಮತ್ತೊಂದು ದೇಹವು ಧರಿಸಲು ಯೋಗ್ಯವಲ್ಲ. ಒಡವೆಯನ್ನು ನಾನು ಕೊಟ್ಟರೆ ಚಿರಂಜೀವಿತನ ಬರುತ್ತದೆ.

೮೨. ಈ ಜಯಂತಿಯು ನೀನು ಹೇಳಿದುದನ್ನೆಲ್ಲಾ ಕೊಡುತ್ತಾಳೆ ಹೋಗು ಎಂದು ಹೇಳಿದಳು. ಜಯನ್ತಿಯ ಬಳಿಗೆ ಹೋಗಲು ಆಕೆಯು ಎಲ್ಲವನ್ನೂ ಕೊಟ್ಟಳು. ನಾರದನು ಅವೆಲ್ಲವನ್ನೂ ತೆಗೆದುಕೊಂಡು ಬಂದನು.

೮೩. ಆ ಅವ್ಯಯಳು ಮಂಗಳಸ್ನಾನಮಾಡುತ್ತಿದ್ದಾಗ ಅರಿಸಿನವನ್ನು ಕೊಟ್ಟನು. ಅನಂತರ ಚೆನ್ನಾಗಿರುವ ಬಟ್ಟೆ ಆಭರಣಗಳನ್ನೂ ಕೊಟ್ಟನು. ಓಯೀ ಅಮ್ಮಾ! ನಿನಗೆ ಉತ್ತರಕ್ರಿಯೆಗಳನ್ನು ಮಾಡುವವನನ್ನು ನಿಯಮಿಸೆಂದನು.

೮೪. ಅವ್ಯಯಳು ಹೇಳಿದಳು:—ಎಲೈ ಮುನಿಯೆ! ನನ್ನ ಎಲ್ಲಾ ಕರ್ಮಗಳಿಗೂ ಕಾರಣನು ನೀನೆ. ತಂದೆಯಾಗಿದ್ದೀಯೆ. ಈಗ ಎಲ್ಲಾ ಕ್ರಿಯೆಗಳನ್ನೂ ನೀನೇ ಮಾಡು. ನಿನಗೆ ನಮಸ್ಕಾರವು.

॥ ದಧೀಚ ಉವಾಚ ॥

ಅಥ ತಂ ಬ್ರಾಹ್ಮಣಂ ದಗ್ಧ್ವಾ ನಾರದಸ್ತಾಮುವಾಚ ಹ
ಅಶ್ವಯೇ ಗಚ್ಛ ದಹನಂ ಪವಿಶ ತ್ವಂ ಯದಿಚ್ಛಸಿ ॥ ೮೫ ॥

ಅಥ ಸಾ ಭೂಷಿತಾ ಸಾಧ್ವೀ ತ್ರಿಃ ಪ್ರದಕ್ಷಿಣಪೂರ್ವಕಂ ।
ನಾರದಂ ತು ನಮಸ್ಕೃತ್ಯ ಗೌರಾಂಗೀಮರ್ಪಯನ್ಮನಃ ॥ ೮೬ ॥

ಸುಸೂಕ್ಷ್ಮಂ ಮಂಗಳಂ ಸೂತ್ರಂ ಹರಿದ್ರಾಮಕ್ಷತಾಂಸ್ತಥಾ ।
ಕುಸುಮಾನಿ ಚ ವಾಸಾಂಸಿ ಕಸ್ತೂರೀಂ ಚಂದನಂ ತಥಾ ॥ ೮೭ ॥

ಸೌವರ್ಣಕಂಕತಿಕಾಂ ಚ ಫಲಾನಿ ವಿವಿಧಾನಿ ಚ ।
ಸ್ವದಕ್ಷಿಣಾದಿವಸ್ತ್ರಾಸ್ತಂ ಸ್ಪರ್ಶಯಿತ್ವಾ ಪೃಥಕ್ಪೃಥಕ್ ॥ ೮೮ ॥

ಪಾರ್ವತೀಪ್ರೀತಿಕಾಮಾ ಸಾ ಪುರಂಧ್ರೀಭ್ಯೋಽಖಿಲಂ ದದೌ ।
ಜ್ವಾಲಾಮಾಲಾಭಿರಾಕಾಶಂ ದಹನ್ತಮಿವ ಚಾನಲಂ ॥ ೮೯ ॥

---

೮೫. ದಧೀಚನು ಹೇಳಿದನು :—ಆಮೇಲೆ ಆ ನಾರದನು ಬ್ರಾಹ್ಮಣನ ಶವವನ್ನು ಸುಟ್ಟು, ಅವ್ಯಯಳನ್ನು ಕುರಿತು ಬೆಂಕಿಯ ಬಳಿಗೆ ಬಾ. ಇಷ್ಟವಿದ್ದರೆ ಅಗ್ನಿ ಪ್ರವೇಶಮಾಡು ಎಂದನು.

೮೬. ಆ ಮೇಲೆ ಆಕೆಯು ಅಲಂಕಾರಮಾಡಿಕೊಂಡು ನಾರದನನ್ನು ಮೂರು ಬಾರಿ ನಮಸ್ಕರಿಸಿ ಮನಸ್ಸನ್ನು ಗೌರಿಯಲ್ಲಿಟ್ಟಳು.

೮೭-೮೮. ಸೂಕ್ಷ್ಮವಾದ ಮಂಗಳಸೂತ್ರವನ್ನೂ, ಅರಶಿನವನ್ನೂ, ಅಕ್ಷತೆಗಳನ್ನೂ, ಹೂ, ಬಟ್ಟೆಗಳನ್ನೂ, ಕಸ್ತೂರಿ, ಚಂದನಗಳನ್ನೂ, ಚಿನ್ನದ ಬಾಚಣಿಗೆಗಳನ್ನೂ, ಅನೇಕಬಗೆಯ ಫಲಗಳನ್ನೂ, ಅವುಗಳ ಜೊತೆಗೆ ದಕ್ಷಿಣೆಗಳನ್ನೂ ಬೇರೆ ಬೇರೆಯಾಗಿ ಮುಟ್ಟಿ ಪಾರ್ವತಿಗೆ ಪ್ರೀತಿಯಾಗಲೆಂದು ಎಲ್ಲವನ್ನೂ ಮುತ್ತೈದೆಯರಿಗೆ ಕೊಟ್ಟಳು.

೮೯-೯೦. ಜ್ವಾಲೆಗಳ ಗುಂಪಿನಿಂದ ಆಕಾಶವನ್ನು ಸುಡುವಂತಿರುವ ಅಗ್ನಿ

ತ್ರಿಃಪ್ರದಕ್ಷಿಣಮಾಗತ್ಯ ಸ್ಥಿತ್ವಾಗ್ನೇಃ ಪುರತಸ್ಸತೀ ।
ಇದಂ ತ್ವಾಹ ತದಾ ವಾಕ್ಯಂ ಪ್ರಾಂಜಲಿಃ ಪ್ರಹಸನ್ಮುಖೀ　　　॥ ೯೦ ॥

॥ ಅವ್ಯಯೋವಾಚ ॥

ಇಂದ್ರಾದಯೋ ದಿಶಾಂ ಪಾಲಾ ಮಾತರ್ಮೇದಿನಿ ಭಾಸ್ಕರ ।
ಧರ್ಮಾದಯಸ್ಸುರಾಸ್ಸರ್ವೇ ಶೃಣುಧ್ವಂ ಮಮ ಭಾಷಿತಂ　　　॥ ೯೧ ॥

ಪಾಣಿಪೀಡನಮಾರಭ್ಯ ಚೈತದಂತಮಹರ್ನಿಶಂ ।
ವಾಙ್ಮನಃಕರ್ಮಭಿರ್ಭರ್ತಾ ಸೇವಿತೋ ಯದಿ ಭಕ್ತಿತಃ　　　॥ ೯೨ ॥

ವ್ಯಭಿಚಾರೋ ಯಥಾ ನ ಸ್ಯಾದವಸ್ಥಾತ್ರಿತಯೇ ಮಮ ।
ತೇನ ಸತ್ಯೇನ ಮೇ ಪತ್ಯಾ ಸಾರ್ಧಂ ಯಾನಂ ಪ್ರಯಚ್ಛತ　　　॥ ೯೩ ॥

ಇತ್ಯುಕ್ತ್ವಾ ತು ಸ್ವಹಸ್ತಾಗ್ರಪುಷ್ಪಕಂ ದ್ರುತಮಾಕ್ಷಿಪತ್ ।
ಪ್ರವಿಷ್ಟಾ ಜ್ವಲನಂ ದೀಪ್ತಮಥಾಪಶ್ಯದ್ವಿಮಾನಕಂ　　　॥ ೯೪ ॥

---

ಯನ್ನು ಮೂರುಬಾರಿ ಪ್ರದಕ್ಷಿಣೆಮಾಡಿ, ಅಗ್ನಿಯ ಮುಂದೆ ನಿಂತು ಕೈಮುಗಿದು ಕೊಂಡು ಸಂತೋಷದಿಂದ ಇಂತೆಂದಳು.

೯೧. ಅವ್ಯಯಳು ಹೇಳಿದಳು:—ಇಂದ್ರಾದಿ ದಿಕ್ಪಾಲಕರಿರ, ತಾಯಿ ಭೂದೇವಿಯೆ, ಸ್ವಾಮಿಯಾದ ಸೂರ್ಯನೇ, ಧರ್ಮರಾಯನೇ ಮುಂತಾದ ದೇವತೆಗಳೇ, ನನ್ನ ಮಾತನ್ನು ಕೇಳಿರಿ.

೯೨-೯೩. ಮದುವೆಯಾದಂದಿನಿಂದ ಮೊದಲುಗೊಂಡು ಇಲ್ಲಿಯವರೆಗೂ, ಹಗಲು ರಾತ್ರಿಯಲ್ಲಿಯೂ, ಮನೋವಾಕ್ಕಾಯಗಳಿಂದ ಭಕ್ತಿಯಿಂದ ಪತಿಯನ್ನು ಸೇವಿಸಿದ್ದರೆ, ಯೌವನ ಕೌಮಾರ ವಾರ್ಧಕ್ಯಗಳಲ್ಲಿ ವ್ಯಭಿಚಾರಿಣಿಯಲ್ಲದಿದ್ದರೆ ಅದೇ ಸತ್ಯದಿಂದ ನನ್ನ ಗಂಡನೊಡನೆ ನನಗೆ ಪ್ರಯಾಣವನ್ನು ಕೊಡಿರಿ.

೯೪. ಹೀಗೆಂದು ಹೇಳಿ ತನ್ನ ಕೈಯಲ್ಲಿದ್ದ ಹೂವನ್ನು ಎರಚಿ ಜಾಗ್ರತೆಯಾಗಿ ಅಗ್ನಿಪ್ರವೇಶಮಾಡಿದಳು. ಒಡನೆಯೇ ಪ್ರಕಾಶವಾದ ವಿಮಾನವನ್ನು ನೋಡಿದಳು.

ಸೂರ್ಯೇಣ ಸಮಮುತ್ಕೃಷ್ಟಮಪ್ಸರೋಗೀತಶೋಭಿತಂ ।
ಆರುರೋಹ ವಿಮಾನಂ ಸಾ ಭರ್ತ್ರಾ ಸಾಕಂ ದಿವಂ ಯಯೌ ॥ ೯೫ ॥

ಯಮಃ ಪ್ರಾಹಾಥ ಸಂಪೂಜ್ಯ ವನಿತಾಂ ತಾಂ ಪತಿವ್ರತಾಂ ।
ಅಕ್ಷಯಸ್ಸ್ವರ್ಗ ಏವೇಹ ನ ಚ ಪಾಪಂ ತವಾಸ್ತಿ ವೈ ॥ ೯೬ ॥

ಕೋಟಿದ್ವಯಸಮಾಸ್ತತ್ರ ನರಕೇ ಹನ್ತ ಪಾತಕಂ ।
ನ್ಯೃಷ್ಟಮೇವ ನ ಸಂದೇಹಃ ಕಿಂ ತು ಪಾತಕಮೇವ ತು ॥ ೯೭ ॥

ಏಕಂ ಶಿವಸ್ಯ ದೀಪಾಜ್ಯಭಕ್ಷಣೇನ ಸ ಭರ್ಜಿತಂ ।
ನ ಚಾಪಿ ನರಕೇ ಪಾತಃ ಶ್ವಾನಜನ್ಮಶತಂ ಭವೇತ್ ॥ ೯೮ ॥

॥ ಅವ್ಯಯೋವಾಚ ॥

ಅಗ್ನಿಪ್ರವೇಶಶುದ್ಧಾನಾಂ ಪುನಶ್ಚ ನರಕಃ ಕಥಂ ।
ಅಗ್ನಿಪ್ರವೇಶಾತ್ಸರ್ವೇಷಾಂ ಪಾಪಾನಾಂ ನಾಶನಂ ಭವೇತ್ ॥ ೯೯ ॥

---

೯೫. ಆ ವಿಮಾನವು ಸೂರ್ಯನಂತೆ ಪ್ರಕಾಶವಾಗಿಯೂ, ಉತ್ಕೃಷ್ಟವಾಗಿಯೂ, ಅಪ್ಸರಸ್ತ್ರೀಯರ ಗಾನದಿಂದ ಕೂಡಿಯೂ ಇದ್ದಿತು. ಇಂತಹ ವಿಮಾನವನ್ನು ಗಂಡ ನೊಡನೆ ಹತ್ತಿ ಕುಳಿತುಕೊಂಡು ಸ್ವರ್ಗವನ್ನು ಹೊಂದಿದಳು.

೯೬. ಯಮನು ಆಕೆಯನ್ನು ಪೂಜಿಸಿ ಆ ಪತಿವ್ರತೆಯನ್ನು ಕುರಿತು ನಿನಗೆ ಅಕ್ಷಯ ಸ್ವರ್ಗವೇ ಹೊರತು ಪಾಪವು ಇಲ್ಲವೇ ಇಲ್ಲ. ಆದುದರಿಂದ ನಿನಗೆ ನರಕ ಯಾತನೆಯಿಲ್ಲ.

೯೭-೯೮. ಅಮ್ಮಾ, ನೀನು ಮಾಡಿದ ಕೆಲಸದಿಂದ ಈತನ ಎರಡುಕೋಟಿ ವರ್ಷಗಳು ಅನುಭವಿಸಬೇಕಾದ ನರಕವು ನಾಶವಾಯಿತು. ಆದರೆ ಶಿವದೇವಸ್ಥಾನದಲ್ಲಿ ತುಪ್ಪವನ್ನು ತೆಗೆದು ತಿಂದ ಪಾಪವೊಂದು ಮಾತ್ರ ಉಳಿದಿದೆ. ಅದಕ್ಕಾಗಿ ನರಕದಲ್ಲಿ ಹಾಕುವುದಿಲ್ಲ. ನೂರು ಜನ್ಮಗಳವರೆಗೆ ನಾಯಾಗಿ ಹುಟ್ಟಬೇಕು ಎಂದನು.

೯೯. ಅವ್ಯಯಳು ಹೇಳಿದಳು :—ಅಗ್ನಿಪ್ರವೇಶದಿಂದ ಸುಟ್ಟವರಿಗೆ ನರಕವೆಲ್ಲಿ ಬಂದೀತು ? ಅಗ್ನಿಪ್ರವೇಶದಿಂದ ಎಲ್ಲಾ ಪಾಪಗಳೂ ನಾಶವಾಗುತ್ತವಷ್ಟೆ.

॥ ಯಮ ಉವಾಚ ॥

ಶಿವದ್ರವ್ಯಾಪಹಾರಸ್ಯ ಘಾತಕಂ ನೈವ ಪಶ್ಯತಿ ।
ಇತ್ಥಮಾಹ ಪುರಾ ಶಂಭುರನ್ಯೇಷಾಂ ನಾಶನಂ ಭವೇತ್ ॥ ೧೦೦ ॥

ಅಥ ಸ ಶ್ವಾನತಾಮಾಪ್ಯ ಶತಾಬ್ದಂ ಸ್ಯಾತ್ತತಃ ಪರಂ ।
ದಧೀಚಮಂದಿರಂ ಪ್ರಾಪ್ತೋ ಮೃತ್ಯೋರಾಸ್ಯಗತೋ ಹಿ ಸಃ ॥ ೧೦೧ ॥

ತಸ್ಯ ಭಿತ್ತಿಸಮೀಪೇ ತು ಭಸ್ಮಾಸ್ತೇ ಹ್ಯಭಿಮಂತ್ರಿತಂ ।
ಭಸ್ಮನಿ ಶ್ವಾ ಪಪಾತಾಸ್ಮಿನ್ಮಮಾರ ಚ ಗತೋ ಯಮಂ ॥ ೧೦೨ ॥

ಯಮಸ್ಸಂಪೂಜ್ಯಾವನತೋ ಭವಾನ್ಪುಣ್ಯತಮೋ ಮುನಿಃ ।
ಮದ್ಗೇಹೇ ಭವತಸ್ಸ್ಥಾನಂ ನ ಯೋಗ್ಯಂ ಗಮ್ಯತಾಂ ಬಹಿಃ ॥ ೧೦೩ ॥

ಅಥ ಗತ್ವಾ ಬಹಿಸ್ತಸ್ಥೌ ಸಾರಮೇಯೋ ಯಮೋದಿತಃ ।
ಸಂತಾಪಾವಸ್ಥಿತಂ ತಂ ಚ ನಾರದೋ ದೃಷ್ಟವಾನಮುಂ ॥ ೧೦೪ ॥

---

೧೦೦. ಯಮನು ಹೇಳಿದನು:—ಶಿವನ ದ್ರವ್ಯವನ್ನು ಕದ್ದರೆ ಯಾವ ನರಕವೆಂದೇ ಗೊತ್ತಿಲ್ಲ. ಅಷ್ಟು ಪಾಪಕರವು. ಮಿಕ್ಕ ಪಾಪಗಳು ನಾಶನಾಗುತ್ತವೆ ಎಂದು ಶಂಭುವು ಹೇಳಿದ್ದಾನೆ.

೧೦೧. ಆದರಿಂದ ಅವನು ನಾಯಿಯಾಗಿ, ನೂರು ವರ್ಷಗಳ ಮೇಲೆ ನಾಯಿ ಯಾಗ ದಧೀಚನ ಮನೆಗೆ ಹೋಗುತ್ತಾನೆ.

೧೦೨. ಅವನ ಮನೆಯ ಗೋಡೆಯ ಬಳಿ ಮಂತ್ರಿಸಿದ್ದ ಭಸ್ಮವು ಬಿದ್ದಿರಲು ಈ ನಾಯಿಯು ಅದರ ಮೇಲೆ ಬಿದ್ದು ಸತ್ತುಹೋಯಿತು. ಆಗ ಅದು ಯಮನ ಬಳಿಗೆ ಹೋಯಿತು.

೧೦೩. ಯಮನು ಪೂಜಿಸಿ ಕೈಕಟ್ಟಿಕೊಂಡು, ನೀನು ಪೂಜ್ಯನಾದ ಮುನಿಯು. ನನ್ನ ಮನೆಯಲ್ಲಿ ನಿನಗೆ ಜಾಗವಿಲ್ಲ ಹೊರಗೆ ಹೋಗೆಂದನು.

೧೦೪. ಆ ಮೇಲೆ ಆ ನಾಯಿಯು ಹೊರಗೆ ಬಂದು ನಿಂತು ದುಃಖಿಸುತ್ತಿರಲು, ನಾರದನು ಅದನ್ನು ನೋಡಿದನು.

ಸಪ್ರಚ್ಛ ಚ ಕಿಮರ್ಥಂ ತ್ವಮಿಹ ತಿಷ್ಠಸಿ ದೀಪ್ತಿಮಾನ್ ।
ಶಿವಭಸ್ಮಸ್ಥಿತಮೃತಂ ಶೈವಂ ಜಾನೇ ಮಹಾಮತೇ ॥ ೧೦೫ ॥

ಶೈವಾನಾಂ ಪಾಪಿನಾಂ ಚಾಪಿ ಸಾಹಸೇನ ತನುತ್ಯಜಾಂ ।
ಯಮಲೋಕೋ ನ ಚಾಸ್ತೀತಿ ಶಿವಾಜ್ಞಾ ಶಿವಚೋದಿತಾ ॥ ೧೦೬ ॥

॥ ದಧೀಚ ಉವಾಚ ॥

ಇತ್ಥಮಾಭಾಷ್ಯ ತಂ ಶ್ವಾನಂ ಕೈಲಾಸಮಗಮನ್ಮುನಿಃ ।
ದಂಡವತ್ಪ್ರಣಿಪತ್ಯೇಶಂ ವ್ಯಜ್ಞಾಪಯದಥೋ ಹರಂ ॥ ೧೦೭ ॥

ದೇವ ಕಶ್ಚಿದ್ಯಮಪುರಾದ್ಬಹಿರಾಸ್ತೇ ಸುಕುಕ್ಕುರಃ ।
ಭಸ್ಮನ್ಯೇವ ಮೃತಸ್ತಸ್ಮಾದ್ಭವಲೋಕಂ ಸ ಚಾರ್ಹತಿ ॥ ೧೦೮ ॥

ಅಥೋ ಮುಖ್ಯಗಣಾವಿಷ್ಟೋ ವೀರಭದ್ರಃ ಶಿವೇರಿತಃ ।
ಆನಯಾಮಾಸ ತಂ ಶ್ವಾನಂ ದಿವ್ಯರೂಪಧರಂ ತದಾ ॥ ೧೦೯ ॥

---

೧೦೫. ಅಯ್ಯಾ, ಕಾಂತಿಯಿಂದ ಕೂಡಿದ ನೀನೇಕೆ ಇಲ್ಲಿ ನಿಂತಿರುವೆ? ಶಿವನ ಭಸ್ಮದಲ್ಲಿ ಸತ್ತ ನೀನು ಶೈವನಿರಬೇಕೆಂದು ಕಾಣುತ್ತದೆ.

೧೦೬. ಶೈವರಾಗಿ ಪಾಪಿಗಳಾಗಿದ್ದರೂ ಹಠದಿಂದ ಪ್ರಾಣಬಿಟ್ಟರೆ ಯಮಲೋಕವು ಅವರಿಗಿಲ್ಲ ಎಂದು ಶಿವನಿಂದಲೇ ಹೇಳಲ್ಪಟ್ಟ ಶಿವಾಜ್ಞೆಯಿದೆ.

೧೦೭. ದಧೀಚನು ಹೇಳಿದನು :—ಈರೀತಿ ಆ ನಾಯಿಗೆ ಹೇಳಿ, ನಾರದನು ಕೈಲಾಸಕ್ಕೆ ಹೋಗಿ ದೀರ್ಘದಂಡ ನಮಸ್ಕಾರಮಾಡಿ ಹರನನ್ನು ಕುರಿತು ವಿಜ್ಞಾಪಿಸಿದನು.

೧೦೮. ಸ್ವಾಮಿ, ಒಂದು ನಾಯಿಯು ಯಮಪುರದಿಂದ ಹೊರಗೆ ನಿಂತಿದೆ. ಅದು ಭಸ್ಮದಲ್ಲಿ ಸತ್ತಿರುವುದರಿಂದ ಶಿವಲೋಕಕ್ಕೆ ಬರುವುದಕ್ಕೆ ಯೋಗ್ಯವಾಗಿದೆ.

೧೦೯. ಆಮೇಲೆ ವೀರಭದ್ರನು ಮುಖ್ಯ ಗಣಗಳಿಂದ ಕೂಡಿಕೊಂಡು ಶಿವನ ಅಪ್ಪಣೆಯಂತೆ ದಿವ್ಯರೂಪವನ್ನು ಧರಿಸಿದ ಆ ನಾಯಿಯನ್ನು ಕರೆತಂದನು.

**ಮಹೇಶಪಾದಪ್ರಣತಂ ದೇವಾಯಾಥ ವ್ಯಜಿಜ್ಞಪತ್ ।**
**ಆಹ ಮಾಹೇಶ್ವರೋ ದೇವಂ ಕುರುಷ್ವೈಸಂ ಗಣಂ ಸ್ಥಿತಂ ॥ ೧೧೦ ॥**

**ತಥೇತಿ ಚ ಶಿವಃ ಪ್ರಾಹ ಗಣಃ ಶ್ವಾನಮುಖೋಽಭವತ್ ।**

**॥ ದಧೀಚ ಉವಾಚ ॥**

**ಅತುಲಂ ಭಸ್ಮಮಾಹಾತ್ಮ್ಯಂ ಮಯೋಕ್ತಂ ತೇ ಶುಚಿಸ್ಮಿತೇ ।**
**ಇತಃ ಪರಂ ಹಿ ಕಿಂ ಭೂಯಃ ಶ್ರೋತುಮಿಚ್ಛಸಿ ಸುವ್ರತೇ ॥ ೧೧೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ ಭಸ್ಮಮಾಹಾತ್ಮ್ಯೇ ದ್ವ್ಯಧಿಕಶತತಮೋಽಧ್ಯಾಯಃ**



---

೧೧೦. ಮಹೇಶನ ಪಾದಕ್ಕೆ ನಮಸ್ಕರಿಸಿ ವಿಜ್ಞಾಪಿಸಿದನು. ಇದನ್ನು ಮಹೇಶ್ವರನ ಗಣಕ್ಕೆ ಮುಖ್ಯವಾದುದನ್ನಾಗಿ ಮಾಡೆಂದನು. ಅದರಂತೆ ಶಿವನ ಗಣಕ್ಕೆ ಮುಖ್ಯನನ್ನಾಗಿ ಮಾಡಲು ಆ ಗಣವು ಶ್ವಾನಮುಖವೆಂದು ಹೆಸರನ್ನು ಹೊಂದಿತು.

೧೧೧. ದಧೀಚನು ಹೇಳಿದನು :—ಎಲೈ ಮಂಗಳಳೇ, ಶ್ರೇಷ್ಠವಾದ ಭಸ್ಮದ ಮಹಿಮೆಯನ್ನು ಹೇಳಿದೆನು. ಇನ್ನು ಮತ್ತೆ ಏನನ್ನು ಕೇಳುತ್ತೀಯೆ, ಹೇಳು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ವಿಭೂತಿಮಹಿಮೆಯೆಂಬ ನೂರೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರ್ಯಧಿಕಶತತಮೋಽಧ್ಯಾಯಃ

॥ ಶುಚಿಸ್ಮಿತೋವಾಚ ॥

ಕಶ್ಯಪಂ ಜಮದಗ್ನಿಂ ಚ ದೇವಾನಾಂ ಚ ಪುರಾ ಕಥಂ ।
ಭಸ್ಮ ರಕ್ಷತಿ ಚ ಬ್ರಹ್ಮಂಸ್ತನ್ಮಮಾಚಕ್ಷ್ವ ಭೋ ಮುನೇ ॥ ೧ ॥

ದಧೀಚ ಉವಾಚ ॥

ಕಶ್ಯಪಾದಿಯುತಾ ದೇವಾಃ ಪೂರ್ವಮಭ್ಯಗಮನ್ಗಿರಿಂ ।
ಶೌಕರಂ ನಾಮ ವಿಖ್ಯಾತಮದ್ರಿಮಧ್ಯೇ ಸುಶೋಭನಂ ॥ ೨ ॥

ನಾನಾವಿಹಂಗಸಂಕೀರ್ಣಂ ನಾನಾಮುನಿಗಣಾಶ್ರಯಂ ।
ವಾಸುದೇವಾಶ್ರಯಂ ರಮ್ಯಮಪ್ಸರೋಗಣಸೇವಿತಂ ॥ ೩ ॥

---

## ನೂರಮೂರನೆಯ ಅಧ್ಯಾಯವು

೧. ಶುಚಿಸ್ಮಿತಳು ಹೇಳಿದಳು :—ಪೂರ್ವದಲ್ಲಿ ಕಶ್ಯಪ, ಜಮದಗ್ನಿ, ದೇವತೆಗಳು ಇವರನ್ನು ಭಸ್ಮವು ಹೇಗೆ ರಕ್ಷಿಸಿತು ಎಂಬುದನ್ನು ದಯವಿಟ್ಟು ನನಗೆ ಹೇಳು.

೨. ದಧೀಚನು ಹೇಳಿದನು :—ಕಶ್ಯಪನೇ ಮುಂತಾದ ದೇವತೆಗಳು ಪರ್ವತಗಳೊಳಗೆ ಪ್ರಸಿದ್ಧವಾದ ಶೌಕರವೆಂಬ ಬೆಟ್ಟಕ್ಕೆ ಬಂದರು.

೩-೪. ನಾನಾಬಗೆಯಾದ ಪಕ್ಷಿಗಳಿಂದ ಕೂಡಿ, ಅನೇಕ ಮುನಿಗಳಿಗೆ ಆಶ್ರಯವಾಗಿ, ವಾಸುದೇವನಿಗೂ ಆಶ್ರಯವಾಗಿ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಾ ಅನೇಕ

**ವಿಚಿತ್ರವೃಕ್ಷಸಂಪನ್ನಂ ಸರ್ವರ್ತುಕುಸುಮೋಜ್ಜ್ವಲಂ ।**
**ತಥಾವಿಧಂ ಪ್ರವಿಶ್ಯೈತೇ ವಯಂ ಗಿರಿಮುಥಾಪರೇ ॥ ೪ ॥**

**ಸ್ತುವಂತಃ ಕೇಶವಂ ತತ್ರ ಗತಾಸ್ಸ್ಮ ಗಿರಿಶೇಶ್ವರಂ ।**
**ದೃಷ್ಟ್ವಾ ತತ್ರ ಮಹಾಜ್ವಾಲಾಂ ಪ್ರವಿಷ್ಟಾಶ್ಚ ವಯಂ ಚ ತಾಂ ॥ ೫ ॥**

**ಮಾಮೇಕಂ ತು ತಿರಸ್ಕೃತ್ಯ ಹ್ಯದಹದ್ದೇವತಾಮುನೀನ್ ।**
**ಮಾಂ ದದಾಹ ತತಃ ಪಶ್ಚಾದ್ಭಸ್ಮಭೂತಾ ವಯಂ ಶುಭೇ ॥ ೬ ॥**

**ಅಸ್ಮಾನೇತಾದೃಶಾನ್ದೃಷ್ಟ್ವಾ ವೀರಭದ್ರಃ ಪ್ರತಾಪವಾನ್ ।**
**ಕೇನಾಪಿ ಕಾರಣೇನಾಸೌ ಗತವಾನ್ಪರ್ವತಂ ತ್ವಮುಂ ॥ ೭ ॥**

**ಭಸ್ಮೋದ್ಧೂಳಿತಸರ್ವಾಂಗೋ ಮಸ್ತಕಸ್ಥಶಿವಶ್ಶುಚಿಃ ।**
**ಏಕಾಕೀ ನಿಸ್ಪೃಹಶ್ಶಾಂತೋ ಹಾಹಾಶಬ್ದಮಥಾಶೃಣೋತ್ ॥ ೮ ॥**

---

ಬಗೆಯ ಮರಗಳಿಂದಲೂ, ಎಲ್ಲಾ ಋತುಗಳ ಹೂಗಳಿಂದಲೂ ಪ್ರಕಾಶಮಾನವಾಗಿ ಆ ಗಿರಿಯಿದ್ದಿತು. ಅದನ್ನು ನಾನೂ ದೇವತೆಗಳೂ, ಪ್ರವೇಶಿಸಿದೆವು.

೫. ಆ ಬೆಟ್ಟಕ್ಕೆ ಹೋಗಿ ಅಲ್ಲಿ ಕೇಶವನನ್ನು ಸ್ತುತಿಸುತ್ತಾ ಇರಲು. ಅಲ್ಲಿ ಒಂದು ಮಹಾಜ್ವಾಲೆಯು ಕಂಡುಬರಲು ಅದನ್ನು ಒಳಹೊಕ್ಕೆವು.

೬. ನನ್ನೊಬ್ಬನನ್ನು ಬಿಟ್ಟು ಉಳಿದ ದೇವತೆಗಳನ್ನೂ ಮುನಿಗಳನ್ನೂ ಸುಟ್ಟುಬಿಟ್ಟಿತು. ಆ ಮೇಲೆ ನನ್ನನ್ನೂ ಸುಟ್ಟಿತು. ಕೊನೆಗೆ ನಾವೆಲ್ಲರೂ ಬೂದಿಯಾದೆವು.

೭. ಏನೋ ಕಾರಣದಿಂದ ಈ ಪರ್ವತಕ್ಕೆ ಬಂದ ಪ್ರತಾಪಶಾಲಿಯಾದ ವೀರಭದ್ರನು ಹೀಗೆ ನಾವೆಲ್ಲರೂ ಭಸ್ಮವಾದುದನ್ನು ಕಂಡನು.

೮. ಭಸ್ಮವನ್ನು ಬಳಿದುಕೊಂಡಿರುವ ಅಂಗಗಳುಳ್ಳ, ಶಿವನನ್ನು ತಲೆಯಲ್ಲಿ ಉಳ್ಳ, ಶುಚಿಯಾದ, ಏಕಾಕಿಯೂ, ನಿಸ್ಪೃಹನೂ ಆದ, ಶಾಂತನಾದ ಆತನು ಹಾಹಾಕಾರವನ್ನು ಕೇಳಿದನು.

ಅಥ ಚಿಂತಾಪರಶ್ಚಾಸೀನ್ಮ್ರಿಯಮಾಣಶವಧ್ವನಿಃ ।
ಶವಾನಾಮಿವ ಗಂಧಶ್ಚ ದೃಶ್ಯತೇ ತನ್ನಿರೀಕ್ಷಣೇ ॥ ೯ ॥

ಇತಿ ನಿಶ್ಚಿತ್ಯ ಮನಸಾ ಜಗಾಮಾಗ್ನಿಮತಿಪ್ರಭಂ ।
ಸ ವಹ್ನಿರ್ವೀರಭದ್ರಂ ತು ದಗ್ಧುಮಾರಬ್ಧವಾನಥ ॥ ೧೦ ॥

ತೃಣಾಗ್ನಿರಿವ ಶಾನ್ತೋऽಭೂಜ್ಜ್ವಲಮಾಸಾದ್ಯ ತಂ ಚ ಸಃ ।
ತತೋऽಪರಾಂ ಮಹಾಜ್ವಾಲಾಂ ವೀರಭದ್ರಸ್ತು ದೃಷ್ಟವಾನ್ ॥ ೧೧ ॥

ಖಂ ಗಚ್ಛನ್ತೀಂ ಮಹಾಕಾಲೋ ಜ್ವಾಲಾಂ ನಿಪತಿತಾಮಪಿ ।
ಮನಸಾऽಚಿಂತಯಚ್ಚಾಪಿ ವೀರಭದ್ರಃ ಪ್ರತಾಪವಾನ್ ॥ ೧೨ ॥

ಸರ್ವೇಷಾಂ ನಾಶಿನೀ ಜ್ವಾಲಾ ಪ್ರಾಣಿನಾಂ ಶತಕೋಟಿಶಃ ।
ತತ್ಸರ್ವರಕ್ಷಣಾರ್ಥಂ ಹಿ ಪಿಪಾಸುಶ್ಚಾಪ್ಯಹಂ ತ್ವಿಮಾಂ ॥ ೧೩ ॥

---

೯. ಸಾಯುತ್ತಿರುವ ಶವಗಳ ಧ್ವನಿಯನ್ನು ಕೇಳುತ್ತಾ ಶವಗಳ ನಾತವನ್ನು ಆಘ್ರಾಣಿಸುತ್ತಾ, ಅದೇನೆಂದು ನೋಡಬೇಕೆಂದು ಆತುರವುಳ್ಳವನಾಗಿದ್ದನು.

೧೦. ನೋಡಬೇಕೆಂಬ ಆಸೆಯಿಂದ ಅತ್ಯಂತ ಕಾಂತಿಯುಳ್ಳ ಆ ಅಗ್ನಿಯನ್ನು ಒಳಹೊಕ್ಕನು. ಆ ಅಗ್ನಿಯು ಆ ವೀರಭದ್ರನನ್ನು ಸುಡಲು ಮೊದಲಿಟ್ಟಿತು.

೧೧. ಆ ವೀರಭದ್ರನು ಬೆಂಕಿಯೊಳಕ್ಕೆ ಹೋಗಲು ಅದು ನೀರು ಬಿದ್ದಂತೆ ಆರಿಯೋಯಿತು. ಅನಂತರ ವೀರಭದ್ರನು ಮತ್ತೊಂದು ಮಹಾಜ್ವಾಲೆಯನ್ನು ನೋಡಿದನು.

೧೨. ಆ ಜ್ವಾಲೆಯು ಆಕಾಶದಲ್ಲೆಲ್ಲಾ ಕಪ್ಪಗೆ ಹರಡಿಕೊಂಡಿದ್ದಿತು. ಆಗ ಪ್ರತಾಪಿಯಾದ ವೀರಭದ್ರನು ಹೀಗೆಂದು ಯೋಚಿಸಿದನು.

೧೩. ಈ ಜ್ವಾಲೆಯು ಎಲ್ಲಾ ಪ್ರಾಣಿಗಳನ್ನೂ ಕೋಟಿಗಟ್ಟಲೆಯಾಗಿ ನಾಶ ಮಾಡುತ್ತಿದೆ. ಅವೆಲ್ಲವನ್ನೂ ಕಾಪಾಡಲು ನಾನು ಇದನ್ನು ನುಂಗುತ್ತೇನೆ.

ಪ್ರಾಶ್ನಾಮಿ ಮಹತೀಂ ಜ್ವಾಲಾಂ ಜಲಂ ತು ತೃಷಿತೋ ಯಥಾ ।
ಏತಸ್ಮಿನ್ನಂತರೇ ವೀರಂ ವಾಗಾಹ ಚಾಶರೀರಿಣೀ ॥ ೧೪ ॥

॥ ಭಾರತ್ಯುವಾಚ ॥

ವೀರ ಮಾ ಸಾಹಸಂ ಕಾರ್ಷೀಃ ಕ್ವ ತೃಷಾ ಕ್ವಾಶುಶುಕ್ಷಣಿಃ ।
ತೃಷಿತಾನಾಂ ಜಲೇನಾರ್ಥೋ ವಿಪರೀತೇನ ನಾಗ್ನಿನಾ ॥ ೧೫ ॥

ನಿಕಾಮಂ ಯೋಜನಶಿರಾಃ ಪ್ರನಷ್ಟೋ ರಾಕ್ಷಸೇಶ್ವರಃ ।
ಶತಯೋಜನವಕ್ತ್ರಶ್ಚ ಶತಬಾಹುಸ್ತಥಾಽಪರಃ ॥ ೧೬ ॥

ಅಗಸ್ತ್ಯಶ್ಚ ಮಹಾಬಾಹೋ ನಿಶ್ಶೇಷಂ ಪೀತಸಾಗರಃ ।
ಏತಾನನ್ಯಾನಸಂಖ್ಯಾತಾನ್ಜ್ವಾಲೇಯಂ ತಾನಮಾರಯತ್ ॥ ೧೭ ॥

॥ ವೀರಭದ್ರ ಉವಾಚ ॥

ಭೀಷಿಕೇಯಂ ಮಹಾಜ್ವಾಲಾ ತ್ವದುಕ್ತಾ ನ ಹಿ ಜಾಯತೇ ।

---

೧೪. ಬಾಯಾರಿಕೆಯುಳ್ಳವನು ನೀರನ್ನು ಕುಡಿಯುವಂತೆ ಈ ದೊಡ್ಡ ಜ್ವಾಲೆಯನ್ನು ನಾನು ಕುಡಿದುಬಿಡುತ್ತೇನೆ. ಎಂದು ಉದ್ಯುಕ್ತನಾಗಲು ಅಷ್ಟರೊಳಗೆ ಅಶರೀರವಾಕ್ಕು ಈ ರೀತಿ ನುಡಿಯಿತು.

೧೫. ಎಲೈ ವೀರನೇ, ಶಕ್ತಿಮೀರಿದ ಕೆಲಸವನ್ನು ಮಾಡಬೇಡ. ಬಾಯಾರಿಕೆಗೂ, ಬೆಂಕಿಗೂ ಸಂಬಂಧವೇನು? ಬೆಂಕಿಯ ಜ್ವಾಲೆಯನ್ನು ಕುಡಿದರೆ ಬಾಯಾರಿಕೆ ಹೋಗುವುದಿಲ್ಲ. ಬಾಯಾರಿಕೆಯುಳ್ಳವರಿಗೆ ನೀರು ಬೇಕಾದುದು. ಅದಕ್ಕೆ ಪ್ರತಿಯಾದ ಬೆಂಕಿಯಿಂದ ಉಪಯೋಗವೇನು?

೧೬-೧೭. ಯೋಜನದಗಲದ ತಲೆಯುಳ್ಳ ರಾಕ್ಷಸನೂ, ನೂರು ಯೋಜನ ಮುಖವುಳ್ಳ ಮತ್ತು ನೂರು ತೋಳುಗಳುಳ್ಳ ರಾಕ್ಷಸನೂ, ಸಮುದ್ರವನ್ನೇ ಪೂರ್ತಿಯಾಗಿ ಕುಡಿದ ಅಗಸ್ತ್ಯನೂ ಇನ್ನೂ ಅನೇಕರು ಈ ಜ್ವಾಲೆಗೆ ತುತ್ತಾದರು ಅವರನ್ನು ಈ ಜ್ವಾಲೆಯು ಕೊಂದಿತು.

೧೮. ವೀರಭದ್ರನು ಹೇಳಿದನು:—ಈ ಜ್ವಾಲೆಯು ಹೆದರಿಕೆಯನ್ನುಂಟು ಮಾಡತಕ್ಕುದಷ್ಟೆ. ನೀನು ಹೇಳಿದ ಜ್ವಾಲೆಯಲ್ಲ. ಅಲ್ಲದೆ ಎಲೈ ಆಕಾಶವಾಣಿಯೇ

**ಸರಸ್ವತಿ ಭವತ್ಯಾಂ ಚ ಮಮ ರೋಷಶ್ಚ ಜಾಯತೇ ।**
**ಸರ್ವದೇವಾರ್ಚಿತಪದಂ ವೀರಭದ್ರಮವೇಹಿ ಮಾಂ ॥ ೧೮ ॥**

**॥ ಭಾರತ್ಯುವಾಚ ॥**

**ಮಯೋಕ್ತಂ ಹಿತಭಾವೇನ ನ ದೋಷಾನ್ಮಾನ್ಯತೋ ಮುನೇ ।**
**ಕೋಪಮುತ್ಸೃಜ್ಯ ವೀರ ತ್ವಮಾತ್ಮನೋ ಹಿತಮಾಚರ ॥ ೧೯ ॥**

**ಇತ್ಯುಕ್ತ್ವಾಂತರ್ದಧೇ ದೇವೀ ಭಾರತೀ ವೀರಭೀತಿತಃ ।**
**ಅಥ ವೀರೋ ಮಹಾಜ್ವಾಲಾಮಪಾಸೀಲ್ಲೀಲಯೈವ ತು ॥ ೨೦ ॥**

**ಕ್ಷಣೇನ ಮಹತೀ ಜ್ವಾಲಾ ಶತಯೋಜನವಿಸ್ತೃತಾ ।**
**ಏಕೇನ ವೀರಭದ್ರೇಣ ಪೀತಾ ಪರಮದುಸ್ಸಹಾ ॥ ೨೧ ॥**

**ಅಥ ಚೇಂದ್ರಮುಖಾನಾಂ ಚ ಮುನೀನಾಂ ಭಸ್ಮರಾಶಯಃ ।**
**ದೃಷ್ಟ್ವಾ ವೈ ವೀರಭದ್ರೇಣ ಆಹೂತಾಶ್ಚ ಮಹಾತ್ಮನಾ ॥ ೨೨ ॥**

---

ನಿನ್ನ ಮೇಲೂ, ನನಗೆ ಕೋಪಬರುತ್ತಿದೆ. ನಾನು ಎಲ್ಲ ದೇವತೆಗಳಿಂದಲೂ, ನಮಸ್ಕರಿಸಲ್ಪಡುವ ವೀರಭದ್ರನೆಂದು ತಿಳಿ.

೧೯. ಭಾರತಿಯು ಹೇಳಿದಳು:—ನಾನು ನಿನಗೆ ಹಿತವನ್ನು ಮಾಡಬೇಕೆಂಬ ಭಾವನೆಯಿಂದ ಹೇಳಿದೆನು. ಬೇರೆ ಅಭಿಪ್ರಾಯದಿಂದಲ್ಲ. ನಿನ್ನಲ್ಲಿ ಯಾವ ದೋಷವನ್ನೆಣಿಸಿಯೂ ಅಲ್ಲ. ಎಲೈ ವೀರನೇ, ಕೋಪವನ್ನು ಬಿಟ್ಟು ನಿನಗೆ ನೀನು ಹಿತವಾದುದನ್ನು ಮಾಡಿಕೋ.

೨೦. ಹೀಗೆಂದು ಆಕಾಶವಾಣಿಯು ಹೇಳಿ ವೀರನ ಹೆದರಿಕೆಯಿಂದ ಅಂತರ್ಧಾನಳಾದಳು. ಅನಂತರ ಆ ವೀರನು ಆ ಮಹಾಜ್ವಾಲೆಯನ್ನು ಲೀಲೆಯಿಂದಲೇ ಹೋಗಲಾಡಿಸಿದನು.

೨೧. ನೂರುಯೋಜನದ ಅಗಲವಿದ್ದ ಆ ಮಹಾಜ್ವಾಲೆಯನ್ನು ಕ್ಷಣಕಾಲದಲ್ಲಿ ಆ ವೀರಭದ್ರನು ಪಾನಮಾಡಿದನು.

೨೨. ಅನಂತರ ಇಂದ್ರನೇ ಮುಂತಾದ ದೇವತೆಗಳ ಮತ್ತು ಮುನಿಗಳ ಭಸ್ಮರಾಶಿಗಳು ಕಣ್ಣಿಗೆ ಬಿದ್ದುವು. ಅದನ್ನು ನೋಡಿ ವೀರಭದ್ರನು ಅವರನ್ನು ಕರೆದನು.

**ನ ಚಾಬ್ರುವನ್ಪ್ರತಿವಚೋ ಮೃತತ್ವಾದೃಷಿದೇವತಾಃ ।**
**ವೀರಭದ್ರಸ್ತು ತಂ ಜ್ಞಾತ್ವಾ ನಾಶಂ ಮುನಿದಿವೌಕಸಾಂ** ॥ ೨೩ ॥

**ದಧ್ಯಾವಮೂನ್ಕಥಂ ಸರ್ವಾನ್ಜೀವಯಾಮ್ಯದ್ಯ ಕೋವಿದಃ ।**
**ಧ್ಯಾನೇನ ದೃಷ್ಟವಾಂಶ್ಚಾಪಿ ಜೀವನಂ ಭಸ್ಮ ದೇಹಿನಾಂ** ॥ ೨೪ ॥

**ಅಥಾಚಮ್ಯ ಮೃತಾನಾಂ ತು ಭಸ್ಮಾನ್ಯಥ ಚ ಭಸ್ಮನಾ ।**
**ಮೃತ್ಯುಂಜಯೇನ ಮಂತ್ರೇಣ ಮಂತ್ರಿತೇನ ಹ್ಯಮಂತ್ರಯತ್** ॥ ೨೫ ॥

**ಅಥೋತ್ಥಿತಾ ಮುನಿವರಾಃ ಸ್ವಂ ಸ್ವಂ ರೂಪಮುಪಾಶ್ರಿತಾಃ ।**
**ಅಥ ತೇ ಗತವಂತಶ್ಚ ಗಿರೇಃ ಪಾರ್ಶ್ವಂ ಮಹಾಪ್ರಭಂ** ॥ ೨೬ ॥

**ತತ್ರಾಪಿ ಭಕ್ಷಿತಾಸ್ಸರ್ವೇ ಸರ್ಪೇಣಾತಿಶರೀರಿಣಾ ।**
**ಅಥ ವೀರೋ ಮಹಾಸರ್ಪಸಮೀಪಮಗಮತ್ಪ್ರಭುಃ** ॥ ೨೭ ॥

**ವೀರಮಾಗತಮಾಲೋಕ್ಯ ಭುಜಗೋ ಯೋದ್ಧುಮಾರಭತ್ ।**
**ಯುಯುಧೇ ವರ್ಷಮೇಕಂ ತು ನಾನಾರೂಪಧರಃ ಫಣೀ** ॥ ೨೮ ॥

---

೨೩-೨೪. ಆ ದೇವತೆಗಳೂ ಋಷಿಗಳೂ ಸತ್ತುಹೋಗಿದ್ದುದರಿಂದ ಉತ್ತರ ನಾಡಲಿಲ್ಲ. ವೀರಭದ್ರನು ಆ ದೇವಾದಿಗಳ ನಾಶವನ್ನು ತಿಳಿದು ಇವರೆಲ್ಲರನ್ನು ಹೇಗೆ ಬದುಕಿಸಲಿ ಎಂದು ಯೋಚಿಸಿದನು. ಯೋಚನೆಮಾಡಿ ಭಸ್ಮದ ದೇಹಪ್ರೋಕ್ಷ ಅವರನ್ನು ಜೀವಿಸುವ ಬಗೆಯನ್ನು ತಿಳಿದನು.

೨೫. ಅನಂತರ ಆಚಮನಮಾಡಿ ಸತ್ತವರ ಭಸ್ಮವನ್ನೂ ಬೇರೆ ಭಸ್ಮವನ್ನೂ ತೆಗೆದುಕೊಂಡು ಮೃತ್ಯುಂಜಯಮಂತ್ರದಿಂದ ಅಭಿಮಂತ್ರಿಸಿ ಅವನ್ನೂ ಮಂತ್ರಿಸಿದನು.

೨೬. ಆ ಮೇಲೆ ಆ ಋಷಿಗಳು ಮೇಲಕ್ಕೆದ್ದು ತಮ್ಮ ತಮ್ಮ ರೂಪವನ್ನು ಆಶ್ರಯಿಸಿ ಗಿರಿಯ ಪಕ್ಕದಲ್ಲಿದ್ದ ಮಹಾಪ್ರಭೆಗೆ ಹೋದರು.

೨೭. ಅಲ್ಲಿ ಒಂದು ಮಹಾಸರ್ಪವಿದ್ದು ಅವರನ್ನೆಲ್ಲಾ ಕೊಂದುಬಿಟ್ಟಿತು. ಅನಂತರ ಈ ವೀರಭದ್ರನು ಆ ಸರ್ಪದ ಬಳಿಗೆ ಹೋದನು.

೨೮. ವೀರನಾದ ಈತನು ಬಂದುದನ್ನು ನೋಡಿ ಈ ಸರ್ಪವು ಯುದ್ಧ ಮಾಡಲು ಮೊದಲಿಟ್ಟಿತು. ಈ ರೀತಿ ನಾನಾರೂಪವನ್ನು ಧರಿಸಿ ಸರ್ಪವು ಒಂದು ವರ್ಷ ಯುದ್ಧಮಾಡಿತು.

ಅಥ ವೀರಃ ಪ್ರಗೃಹ್ಯೋಷ್ಠಯುಗ್ಮಂ ಕರಯುಗೇನ ತು ।
ದ್ವಿಧಾ ಚಕ್ರೇ ಸಮುತ್ಥಾಂಗಂ ದೇವಾಂಸ್ತತ್ರ ಗತಾಯುಷಃ ॥ ೨೯ ॥

ದೃಷ್ಟ್ವಾಥ ಭಸ್ಮನೈವೈತಾನ್ಜೀವಯಾಮಾಸ ಶಂಕರಃ ।
ಅಥ ದೇವಾಸ್ಸಮುನಯೋ ವೀರಭದ್ರಂ ಪ್ರಣಮ್ಯ ತು ॥ ೩೦ ॥

ಗತವನ್ತೋ ಯಥಾಮಾರ್ಗಂ ದದರ್ಶುಃ ರಕ್ಷ ಆಗತಂ ।
ಪಂಚವಕ್ತ್ರಂ ಮಹಾಕಾಯಂ ದೋರ್ಭಿಶ್ಚ ದಶಭಿರ್ಯುತಂ ॥ ೩೧ ॥

ಪಂಚಪಾದಸಮೋಪೇತಂ ಶಿರೋಭಿಶ್ಚಾಷ್ಟಭಿರ್ಯುತಂ ।
ಕಾಂಕ್ಷಮಾಣಂ ಮಹಾಹಾರಂ ಯುದ್ಧ್ಯಮಾನೋ ಹಿ ವಾಲಿನಾ ॥ ೩೨ ॥

ಮಹಾವರಾಹವಪುಷೋ ವಾಸುದೇವಸ್ಯ ಯದ್ಬಲಂ ।
ತಾದೃಶಂ ದ್ವಿಗುಣೀಭೂತಂ ಕಪೌ ವಾಲಿನಿ ನಿಶ್ಚಿತಂ ॥ ೩೩ ॥

ತಾದೃಶಂ ವಾನರಶ್ರೇಷ್ಠಂ ಸಸುಗ್ರೀವಂ ಸ ರಾಕ್ಷಸಃ ।
ಮುಷ್ಟಿಯುದ್ಧೇ ಪಂಚಪಾದೈಃ ಸಹಸಾಹತ್ಯ ವಾಲಿನಂ ॥ ೩೪ ॥

---

೨೯. ಅನಂತರ ವೀರಭದ್ರನು ದವಡೆಯನ್ನು ಹಿಡಿದು ಉದ್ದಕ್ಕೂ ದೇಹವನ್ನು ಎರಡಾಗಿ ಸೀಳಿದನು. ಅಲ್ಲಿ ದೇವತೆಗಳು ಸತ್ತಿರುವುದನ್ನು ನೋಡಿ ಅವರನ್ನು ಭಸ್ಮದಿಂದಲೇ ಬದುಕಿಸಿದನು.

೩೦—೩೩. ಅನಂತರ ದೇವತೆಗಳೂ, ಮುನಿಗಳೂ, ವೀರಭದ್ರನಿಗೆ ನಮಸ್ಕರಿಸಿ, ಮಾರ್ಗದಲ್ಲಿ ಹೊರಟರು. ಅಲ್ಲೊಬ್ಬ ರಾಕ್ಷಸನು ಬರುತ್ತಿದ್ದನು. ಅವನಿಗೆ ಐದು ತಲೆಗಳಿದ್ದುವು, ದೊಡ್ಡ ಶರೀರ, ಹತ್ತು ತೋಳುಗಳು, ಐದು ಕಾಲು, ಎಂಟು ತಲೆಗಳೂ ಇದ್ದುವು. ಬಹು ಹೆಚ್ಚಾದ ಆಹಾರವನ್ನು ಅಪೇಕ್ಷಿಸುತ್ತಿದ್ದನು. ವಾಲಿಯೊಡನೆ ಯುದ್ಧಮಾಡುತ್ತಿದ್ದನು. ಮಹಾ ವರಾಹಾವತಾರಿಯಾದ ವಾಸುದೇವನಿಗೆ ಎಷ್ಟು ಬಲವಿದ್ದಿತೋ ಅದರ ಎರಡಷ್ಟು ಬಲವು ಕಪಿಯಾದ ವಾಲಿಗಿರುವುದು. ಅಂತಹವನೊಡನೆ ಯುದ್ಧಮಾಡುತ್ತಿದ್ದನು.

೩೪-೩೫. ಅಂತಹ ವಾನರಶ್ರೇಷ್ಠನಾದ ವಾಲಿಸುಗ್ರೀವರೊಡನೆ ಯುದ್ಧಮಾಡಿ ಮುಷ್ಟಿಯುದ್ಧದಲ್ಲಿ ಐದು ಕಾಲುಗಳಿಂದಲೂ ವಾಲಿಯನ್ನು ಕೆಡವಿ, ಸುಗ್ರೀವನನ್ನು

**ಸುಗ್ರೀವಂ ಚ ಕರಾಭ್ಯಾಂ ಸ ಹಸ್ತಾಭ್ಯಾಂ ಪ್ರಚಕ್ರಮೇ ।**
**ಆಸ್ಯೇ ನಿಕ್ಷಿಪ್ಯ ಸುಗ್ರೀವಮಗ್ರಸೀತ್ಕಬಲಂ ಯಥಾ ॥ ೩೫ ॥**

**ವಾಲೀ ಸುಗ್ರೀವಗಮನಂ ದೃಷ್ಟ್ವಾ ಚಿಂತಾಮವಾಪ ಹ ।**
**ಕಥಮೇನಂ ಹನಿಷ್ಯಾಮಿ ರಕ್ಷಯಿಷ್ಯೇ ಕಥಂ ಕಪಿಂ ॥ ೩೬ ॥**

**ಏವಂ ಹಿ ಚಿಂತಯಾನಂ ತಂ ವಾನರಂ ರಾಕ್ಷಸೇಶ್ವರಃ ।**
**ಅಗ್ರಸೀದೇಕಯತ್ನೇನ ತಥಾಭೂತಂ ಚ ರಾಕ್ಷಸಂ ॥ ೩೭ ॥**

**ದೃಷ್ಟ್ವಾ ದೇವರ್ಷಯಸ್ಸರ್ವೇ ಪಲಾಯನಪರಾಸ್ತಥಾ ।**
**ಪಲಾಯಮಾನಾಂಸ್ತಾನ್ ದೃಷ್ಟ್ವಾ ಪಂಚಮೋಽಥ ಸ್ತು ರಾಕ್ಷಸಃ ॥ ೩೮ ॥**

**ಹಸ್ತೈಸ್ಸಮಸ್ತೈಸ್ತಾನ್ಸರ್ವಾನಾದಾಯಾಭಕ್ಷಯತ್ತದಾ ।**
**ವೀರಭದ್ರಸ್ತತೋ ದೃಷ್ಟ್ವಾ ವಾನರರ್ಷಿಸುರಾದನಂ ॥ ೩೯ ॥**

**ಪಂಚಾಶದ್ಯೋಜನಶಿಲಾಂ ಕರೇಣಾದಾಯ ತಂ ರುಷಾ ।**
**ನಿಜಘಾನ ಶಿರೋಮಧ್ಯೇ ಪತಿತಂ ಮಧ್ಯಮಂ ಶಿರಃ ॥ ೪೦ ॥**

---

ಹೊಡೆಯಲು ಮೊದಲುಮಾಡಿ ಕೊನೆಗೆ ಬಾಯಲ್ಲಿಟ್ಟುಕೊಂಡು ತುತ್ತನ್ನು ನುಂಗುವಂತೆ ಅವನನ್ನು ನುಂಗಿದನು.

೩೬-೩೭. ವಾಲಿಯು, ಸುಗ್ರೀವನನ್ನು ನುಂಗುತ್ತಿರುವ ರಾಕ್ಷಸನನ್ನು ನೋಡಿ ದುಃಖಿಗೊಂಡು ಕಪಿಯನ್ನು ಹೇಗೆ ಬದುಕಿಸಲಿ ರಾಕ್ಷಸನನ್ನು ಹೇಗೆ ಕೊಲ್ಲಲಿ ಎಂದು ಚಿಂತಿಸುತ್ತಿರಲು, ಆ ರಾಕ್ಷಸನು ಒಂದೇಸಾರಿಗೆ ಆ ವಾಲಿಯನ್ನೂ ನುಂಗಿದನು. ಈರೀತಿ ವಾಲಿಯನ್ನು ನುಂಗಿದ ರಾಕ್ಷಸನನ್ನು ನೋಡಿ ಋಷಿಗಳು ತಪ್ಪಿಸಿಕೊಳ್ಳಲು ಓಡುವುದಕ್ಕೆ ಮೊದಲಿಟ್ಟರು.

೩೮. ಓಡುತ್ತಿರುವ ಋಷಿಗಳನ್ನು ನೋಡಿ ಆ ರಾಕ್ಷಸನು ಎಲ್ಲಾ ಕೈಗಳಿಂದಲೂ, ಅವರನ್ನು ಹಿಡಿದುಕೊಂಡು ಎಲ್ಲರನ್ನೂ ತಿಂದುಬಿಟ್ಟನು.

೩೯-೪೦. ಅದನ್ನು ವೀರಭದ್ರನು ನೋಡಿ ಐವತ್ತುಯೋಜನ ಅಗಲವುಳ್ಳ ಒಂದು ಕಲ್ಲನ್ನು ತೆಗೆದುಕೊಂಡು ತಲೆಗಳ ಮಧ್ಯದಲ್ಲಿ ಹಾಕಲು ಮಧ್ಯದ ಒಂದು ತಲೆಯು ಒಡೆದುಹೋಯಿತು.

ತತ ಆಹಾಯ ಶೈಲಸ್ಯ ಶೃಂಗಂ ತಚ್ಛತಯೋಜನಂ ।
ಸ್ಥಾಪಯಿತ್ವಾ ದೃಢತರಂ ರಾಕ್ಷಸೇಂದ್ರಂ ತಥಾಹರತ್ ॥ ೪೧ ॥

ರಾಕ್ಷಸೋಽಥ ಬಭಾಷೇದಂ ವೀರಭದ್ರಂ ತ್ರಿಲೋಚನಂ ।
ಮಮ ಬಾಹುಬಲಂ ಪಶ್ಯ ವೀಕ್ಷಿತಂ ತ್ವದ್ಬಲಂ ಮಯಾ ॥ ೪೨ ॥

ಅಸಿದ್ವಯಮಿದಂ ಧೌತಂ ಪಂಚಾಶದ್ಯೋಜನೋನ್ನತಂ ।
ಏಕಯೋಜನವಿಸ್ತಾರಂ ಸುದೃಢಂ ಲಕ್ಷಣಾನ್ವಿತಂ ॥ ೪೩ ॥

ಏಕಂ ಗೃಹಾಣಾಭಿಮತಂ ವಶಿಷ್ಟಂ ತನ್ಮಮ ಪ್ರಿಯಂ ।
ವೀರಭದ್ರಸ್ತಥೇತ್ಯುಕ್ತ್ವಾ ಗೃಹೀತ್ವಾಸಿಂ ಮಹಾಬಲಃ ॥ ೪೪ ॥

ಕರೇಣಾಚಾಲಯತ್ತೀಕ್ಷ್ಣಂ ಕ್ಷ್ವೇಳಾಂ ಚಕ್ರೇ ತತಃ ಕ್ರುಧಾ ।
ಗೃಹೀತ್ವಾಸಿಸ್ತಥಾ ಕ್ಷ್ವೇಳಾಂ ಚಕ್ರೇ ರಾಕ್ಷಸಪುಂಗವಃ ॥ ೪೫ ॥

ವೀರಭದ್ರಂ ಸಮಭ್ಯೇತ್ಯ ಕಂಠಂ ಪ್ರತಿ ಸಮರ್ಪಯತ್ ।
ತದ್ಗಾತ್ರಂ ಭಿನ್ನಮಭವಚ್ಛೋಣಿತಂ ನಿರ್ಗತಂ ಬಹು ॥ ೪೬ ॥

---

೪೧. ಅನಂತರ ವೀರಭದ್ರನು ನೂರುಯೋಜನ ಅಗಲವುಳ್ಳ ಒಂದು ಬೆಟ್ಟದ ಶಿಖರವನ್ನು ತೆಗೆದುಕೊಂಡು ಆ ರಾಕ್ಷಸನ ತಲೆಯ ಮೇಲೆ ಬಿಗಿಯಾಗಿ ಹೇರಿದನು.

೪೨. ವೀರಭದ್ರನನ್ನು ಕುರಿತು ರಾಕ್ಷಸನು ಎಲೈ ವೀರಭದ್ರನೇ, ನಿನ್ನ ಬಲವನ್ನು ನಾನು ನೋಡಿದುದಾಯಿತು. ನನ್ನ ಬಾಹುಬಲವನ್ನು ಈಗ ನೋಡೆಂದನು.

೪೩. ಬೆಳ್ಳಗಿರುವ, ಐವತ್ತುಯೋಜನ ಎತ್ತರವಿರುವ, ಒಂದುಯೋಜನ ಅಗಲವಿರುವ, ಗಟ್ಟಿಯಾಗಿ ಲಕ್ಷಣದಿಂದ ಕೂಡಿರುವ ಈ ಎರಡು ಕತ್ತಿಗಳು ನನ್ನಲ್ಲಿವೆ. ನಿನಗೆ ಬೇಕಾದುದನ್ನು ಒಂದನ್ನು ತೆಗೆದುಕೋ. ನೀನು ಬಿಟ್ಟಿದ್ದು ನನಗಿರಲಿ ಎಂದನು.

೪೪-೪೫. ವೀರಭದ್ರನು ಹಾಗೇ ಆಗಲೆಂದು ಆ ಕತ್ತಿಯನ್ನು ತೆಗೆದುಕೊಂಡು ಕೈಯಿಂದ ವೇಗವಾಗಿ ತಿರುಗಿಸಿ ಸಿಂಹನಾದ ಮಾಡಿದನು. ರಾಕ್ಷಸನೂ, ಕತ್ತಿಯನ್ನು ಹಿಡಿದು ಸಿಂಹನಾದವನ್ನು ಮಾಡಿದನು.

೪೬. ವೀರಭದ್ರನನ್ನು ಹೊಂದಿ ಅವನ ಕತ್ತನ್ನು ಕಡಿದನು. ಆಗ ಅವನ ದೇಹವು ಕತ್ತರಿಸಿ ಗಾಯವಾಯಿತು. ಅದರಿಂದ ಬಹಳವಾಗಿ ರಕ್ತ ಹರಿಯಿತು.

ರಾಕ್ಷಸಸ್ತ್ವೇಕಹಸ್ತೇನ ಪಪೌ ತಚ್ಛೋಣಿತಂ ತತಃ ।
ವೀರಭದ್ರಃ ಕಂಠದೇಶೇ ರಾಕ್ಷಸಂ ಪ್ರಾಹರದ್ರುಷಾ ॥ ೪೭ ॥

ಶಿರೋದ್ವಯಂ ತಥಾ ಛಿನ್ನಂ ಪತಮಾನಂ ತತೋಽಗ್ರಹೀತ್ ।
ನೃಭಕ್ಷಯದಮೇಯಾತ್ಮಾ ಸಿಂಹನಾದಂ ಚಕಾರ ಹ ॥ ೪೮ ॥

ತೇನ ನಾದೇನ ಮಹತಾ ಕ್ಷುಬ್ಧಮಾಸೀಜ್ಜಗತ್ರಯಂ ।
ಅನ್ಯೋನ್ಯಮಸಿಘಾತೇನ ಭಿನ್ನಗಾತ್ರೌ ವಿಕಸ್ವರೌ ॥ ೪೯ ॥

ಕಿಂಶುಕಾವಿವ ದೃಶ್ಯೇತೇ ಪುಷ್ಪಿತೌ ರುಧಿರೋಕ್ಷಿತೌ ।
ವರ್ಷಮೇಕಂ ತು ಸಂಯುಧ್ಯ ನಾಸೀ ದೇವಾಸುರೌ ತದಾ ॥ ೫೦ ॥

ಅತಶ್ಚ ವರ್ಷಮೇಕಂ ತು ಗದಾಯುದ್ಧಮಭೂತ್ತದಾ ।
ಅಸಿಪುತ್ರಿಕಯಾ ಪಶ್ಚಾದ್ವರ್ಷಮೇಕಂ ತತಃ ಪರಂ ॥ ೫೧ ॥

ಪುನರ್ಗೃಹೀತ್ವಾಸಿಯುಗಂ ಯುಯುಧಾತೇ ಪರಸ್ಪರಂ ।
ಶಂ ಬ್ರುವಾಣೋ ಮಹಾಖಡ್ಗಂ ದಂಷ್ಟ್ರಾಕರಾಲೋ ಗಣೇಶ್ವರಃ ॥ ೫೨ ॥

---

೪೭. ರಾಕ್ಷಸನು ಒಂದು ಕೈಯಿಂದ ಅವನ ರಕ್ತವನ್ನು ತುಂಬಿಕೊಂಡು ಕುಡಿದನು. ವೀರಭದ್ರನು ರಾಕ್ಷಸನ ಕುತ್ತಿಗೆಗೆ ಗುರಿಕಟ್ಟಿ ಹೊಡೆದನು.

೪೮. ಎರಡು ತಲೆಗಳನ್ನು ಕತ್ತರಿಸಿದನು. ಬೀಳುತ್ತಿರಲು ಅದನ್ನು ತೆಗೆದು ಕೊಂಡು ತಿಂದುಬಿಟ್ಟು ಅನಂತರ ಸಿಂಹನಾದ ಮಾಡಿದನು.

೪೯-೫೦. ಆ ಸದ್ದಿನಿಂದ ಮೂರು ಲೋಕವು ತಲ್ಲಣಿಸಿತು. ಒಬ್ಬರಿಗೊಬ್ಬರು ಕತ್ತಿಯಿಂದ ಕಡಿದುಕೊಂಡು ಗಾಯವುಳ್ಳ ಶರೀರವುಳ್ಳವರಾಗಿ, ಹೆದರಿಕೆಯಾಗುವಂತೆ ಕೂಗುತ್ತಾ, ರಕ್ತದಿಂದ ತೋದು ಹೂಬಿಟ್ಟ ಮುತ್ತುಗದ ಮರದಂತೆ ಕಾಣುತ್ತಿದ್ದರು. ಹೀಗೆ ಕತ್ತಿಯ ಯುದ್ಧವು ಆ ರಾಕ್ಷಸವೀರಭದ್ರರಿಗೆ ಒಂದು ವರ್ಷಗಳ ಕಾಲ ನಡೆಯಿತು.

೫೧. ಆಮೇಲೆ ಒಂದು ವರ್ಷಕಾಲ ಗದಾಯುದ್ಧವು ನಡೆಯಿತು ಆ ಮೇಲೆ ಚೂರಿಯಿಂದ ಒಂದು ವರ್ಷಕಾಲ ಯುದ್ಧ ನಡೆಯಿತು.

೫೨-೫೩. ಮತ್ತೆ ಕತ್ತಿಗಳನ್ನು ತೆಗೆದುಕೊಂಡು ಪರಸ್ಪರ ಯುದ್ಧಮಾಡಿದರು.

ಸರೋಷರಕ್ತನಯನಶ್ಚಾಲಯಿತ್ವಾಽಸಿಮುಗ್ರತಃ ।
ತಸ್ಯ ಕಂಠವನಂ ಸರ್ವಂ ಚಿಚ್ಛೇದ ಕದಲೀರ್ಯಥಾ ॥ ೫೩ ॥

ಶಿರಾಂಸಿ ಸರ್ವಾಣ್ಯಾದಾಯ ಬಭಕ್ಷ ಭಗನೇತ್ರಹಾ ।
ತಸ್ಯ ಗಾತ್ರಂ ಕರರುಹೈರ್ವಿದಾರ್ಯಾಹೃತ್ಯ ದೇವತಾಃ ॥ ೫೪ ॥

ಕಪೀಂದ್ರೌ ಚ ತಥಾ ಚಾನ್ಯಾ ಅಪಶ್ಯತ್ ಪರಮೇಶ್ವರೀಂ ।
ಏತದ್ಯುದ್ಧಂ ಮಹಾಘೋರಂ ನಾರದೋ ವೀಕ್ಷ್ಯ ಚಾಭ್ಯಗಾತ್ ॥ ೫೫ ॥

ಬ್ರಹ್ಮಣೇ ವಾಸುದೇವಾಯ ಶಂಕರಾಯ ವ್ಯಜಿಜ್ಞಪತ್ ।
ಮುನಯೋ ರಕ್ಷಿತಾ ದೇವಾ ವಾಲಿಸುಗ್ರೀವವಾನರೌ ॥ ೫೬ ॥

ಏತೌ ಸಂಜೀವಯಾಮಾಸ ಬ್ರಹ್ಮವಿಷ್ಣುಶಿವಾತ್ಮಕಃ ।
ರಕ್ಷಸೇ ಶಂಭುನಾ ದತ್ತೋ ವರಃ ಪರಮದಾರುಣಃ ॥ ೫೭ ॥

---

ಆಗ ವೀರಭದ್ರನು ಮಂಗಳವನ್ನು ಹೇಳುತ್ತಾ ದಂಷ್ಟ್ರಾಕಾರವಾದ ಖಡ್ಗವನ್ನು ಕೋಪದಿಂದ ಝಳಪಿಸಿ ಆ ರಾಕ್ಷಸನ ತಲೆಯನ್ನು ಬಾಳೆಯ ಕಂಬದಂತೆ ಕತ್ತರಿಸಿದನು.

೫೪. ವೀರಭದ್ರನು ಆ ಕತ್ತರಿಸಿದ ತಲೆಗಳನ್ನು ತೆಗೆದುಕೊಂಡು ತಿಂದು ಬಿಟ್ಟನು. ಆಗ ಆ ರಾಕ್ಷಸನ ದೇಹವನ್ನು ಉಗುರಿನಿಂದ ಸೀಳಿ, ದೇವತೆಗಳನ್ನೂ, ವಾಲಿಸುಗ್ರೀವರನ್ನೂ, ಮಿಕ್ಕವರನ್ನೂ ನೋಡಿದನು ಮತ್ತು ಪರಮೇಶ್ವರಿಯನ್ನು ಅಲ್ಲಿ ನೋಡಿದನು.

೫೫. ಈ ಘೋರಯುದ್ಧವನ್ನು ನಾರದನು ನೋಡಿ ಬಂದು ಬ್ರಹ್ಮ, ವಿಷ್ಣು, ಶಂಕರರಿಗೆ ತಿಳಿಸಿದನು.

೫೬-೫೭. ಬ್ರಹ್ಮವಿಷ್ಣುಶಿವಾತ್ಮಕನಾದ ವೀರಭದ್ರನು ಮುನಿಗಳನ್ನೂ, ವಾಲಿ ಸುಗ್ರೀವರನ್ನೂ, ಕಾಪಾಡಿದನು. ಶಂಭುವು ಆ ಪಂಚಮೇಢ್ರನಿಗೆ ಅಂತಹ ದಾರುಣ ವಾದ ವರವನ್ನು ಕೊಟ್ಟಿದ್ದನು.

**ಹಿರಣ್ಯಕಶಿಪೋ ರಾಜ್ಯೇ ಬಲವಾನೇಕರಾಕ್ಷಸಃ ।**
**ದೇವೈಸ್ಸಾರ್ಧಂ ತು ಯುಯುಧೇ ವರ್ಷಾಣಾಂ ಶತಮದ್ಭುತಂ　॥ ೫೮ ॥**

**ಪಲಾಯಿತಾಶ್ಚ ಬಹುಧಾ ಮೃತಾಶ್ಚ ಶತಶೋಽಸುರಾಃ ।**
**ಶುಕ್ರೇಣ ರಕ್ಷಿತಸ್ಸೋಽಥ ಗುರುಣಾಽಚಿಂತಯತ್ತ್ವಿದಂ　॥ ೫೯ ॥**

**ಮೃತೋಽಸ್ಮಿ ಶತಶಃ ಶುಕ್ರ ಜೀವಿತೋಽಸ್ಮಿ ತ್ವಯೈವ ಹಿ ।**
**ಅಮೃತ್ಯವೇ ತ್ವಮೇತಸ್ಮಾದುದರಸ್ಥಮೃತಾಯ ಚ　॥ ೬೦ ॥**

**ಅನ್ಯಥಾ ಮರಣಂ ಮಹ್ಯಂ ಭವಿಷ್ಯತಿ ನ ಸಂಶಯಃ ।**
**ಗುರೋ ಯಮೇನ ಸಾಕಂ ಮೇ ಯುದ್ಧಮಾಸೀತ್ಸುದಾರುಣಂ　॥ ೬೧ ॥**

**ಮಯಾಽಸೌ ಗ್ರಸಿತೋ ಯುದ್ಧೇ ಯಮರಾಜಃ ಪ್ರತಾಪವಾನ್ ।**
**ಮಮೋದರಂ ಪ್ರವಿಶ್ಯಾಸೌ ಬಿಭೇದ ಚ ನನಾದ ಚ　॥ ೬೨ ॥**

---

೫೮. ಹಿರಣ್ಯಕಶಿಪುವಿನ ರಾಜ್ಯದಲ್ಲಿ ಬಲಿಷ್ಠನಾದವನು ಒಬ್ಬನೇ ರಾಕ್ಷಸನು. ಅವನು ದೇವತೆಗಳೊಡನೆ ಯುದ್ಧಮಾಡಿದನು. ಆ ಯುದ್ಧವು ನೂರು ವರ್ಷಗಳವರೆಗೆ ನಡೆಯಿತು. ಅದ್ಭುತವಾಗಿದ್ದಿತು.

೫೯. ಆಗ ಅನೇಕಜನ ರಾಕ್ಷಸರು ಸತ್ತರು. ಅನೇಕರು ಓಡಿಹೋದರು. ಆಗ ಅವನನ್ನು ಶುಕ್ರನು ಕಾಪಾಡಿದನು. ಆಗ ಗುರುವಿನೊಡನೆ ಇದನ್ನು ಯೋಚಿಸಿದನು.

೬೦. ಎಲೈ ಶುಕ್ರನೇ, ನಾನು ಯುದ್ಧಮಾಡುತ್ತಿದ್ದಾಗ ನೂರಾರುಬಾರಿ ಸತ್ತಿದ್ದೇನೆ. ನೂರಾರುಬಾರಿ ಬದುಕಿಸಿದ್ದೀಯೆ. ಆದ್ದರಿಂದ ಎಲೈ ಗುರುವೇ, ನನಗೆ ಮೃತ್ಯುಬಾರದಂತೆ ಆಗುವುದಕ್ಕೆ ನೀನೇ ಕಾರಣನಾಗಿದ್ದೀಯೆ. ಮತ್ತು ಹೊಟ್ಟೆಯಲ್ಲಿರುವವರ ಸಾಯುವಿಕೆಗೂ ನೀನೇ ಕಾರಣನಾಗಿದ್ದೀಯೆ. ನೀನು ಹಾಗೆ ಮಾಡದಿದ್ದರೆ ನನಗೆ ಖಂಡಿತವಾಗಿಯೂ, ಮರಣವು ಬರುತ್ತಿತ್ತು.

೬೧-೬೨. ಎಲೈ ಗುರುವೆ, ಯಮನೊಡನೆ ಬಹು ಭಯಂಕರವಾದ ಯುದ್ಧವು ನಡೆಯಿತು. ಆಗ ಆ ಘೋರವಾದ ಯಮರಾಜನನ್ನು ತಿಂದುಬಿಟ್ಟೆನು. ಆಗ ಆ ಯಮನು ನನ್ನ ಹೊಟ್ಟೆಯನ್ನು ಸೇರಿ ಅಲ್ಲಿಂದಲೇ ನನ್ನನ್ನು ಸೀಳಿಹಾಕಿದನು. ಈಚೆಗೆ ಬಂದು ಸಿಂಹನಾದವನ್ನೂ ಮಾಡಿದನು.

ಅಹಂ ಮೃತಸ್ತದಾ ಚಾಸಂ ತ್ವಯಾ ಸಂಜೀವಿತಃ ಪುನಃ ।
ತಸ್ಮಾದುದರಸಂಸ್ಥಾನಾಂ ಮರಣಾಯ ತಪೇ ತಪಃ ॥ ೬೩ ॥

॥ ಶುಕ್ರ ಉವಾಚ ॥

ಏವಮೇತನ್ನ ಸಂದೇಹೋ ಯಥಾವತ್ತ್ವಂ ಸಮಾಚರ ।
ಸ್ಯಮಂತಪಂಚಕಂ ತೀರ್ಥಂ ತತ್ರ ತ್ವಂ ತಪ್ತುಮರ್ಹಸಿ ॥ ೬೪ ॥

॥ ರಾಕ್ಷಸ ಉವಾಚ ॥

ತಪೇ ಮಹತ್ತಪ್ತೋ ಘೋರಂ ಯನ್ನ ಚೀರ್ಣಂ ಸುರಾಸುರೈಃ ।
ಗುಲ್ಫಪ್ರದೇಶೇ ಪಾದಾಂತೇ ತ್ವಯಃಪಾಶೈಃ ಪ್ರಬಧ್ಯ ಚ ॥ ೬೫ ॥

ಅಯಸ್ತಂಭಯುಗಂ ಕೃತ್ವಾ ಹ್ಯಯಃಪಟ್ಟಿಕಯಾನ್ವಿತಂ ।
ಪಟ್ಟಿಕಾಯಾಂ ಪಾದಬಂಧಂ ಕೃತ್ವಾಽಧಃಶೀರ್ಷತಾಂ ತಥಾ ॥ ೬೬ ॥

ವಿವೃತ್ತಾಸ್ಯಂ ತಥಾ ಕಲ್ಪಂ ಕೃತ್ವಾಽಧೋ ಮುಖಮುಚ್ಚಕೈಃ ।
ಸ್ತಂಭೋತ್ತರೇಣ ಜ್ವಾಲಾಯಾಂ ವಕ್ರಿಕಾಯಾಮಿತಸ್ತತಃ ॥ ೬೭ ॥

---

೬೩. ಆಗ ನಾನು ಸತ್ತುಹೋದೆನು. ಮತ್ತೆ ನೀನು ಬದುಕಿಸಿದೆ. ಆದ್ದರಿಂದ ಹೊಟ್ಟೆಗೆ ಹೋದವರು ಸಾಯುವಂತೆ ತಪಸ್ಸುಮಾಡುತ್ತೇನೆ ಎಂದನು.

೬೪. ಶುಕ್ರನು ಹೇಳಿದನು :—ಅದು ಹಾಗೆಯೇ ಸರಿ. ನೀನು ಕ್ರಮವಾಗಿ ಮಾಡು. ಸ್ಯಮಂತಕಪಂಚಕವೆಂಬ ತೀರ್ಥವಿದೆಯಲ್ಲ, ಅಲ್ಲಿ ಹೋಗಿ ತಪಸ್ಸುಮಾಡು.

೬೫—೬೭. ರಾಕ್ಷಸನು ಹೇಳಿದನು :—ಸುರಾಸುರರಾರೂ ಮಾಡದಿರುವ ಘೋರವಾದ ತಪಸ್ಸನ್ನು ಮಾಡುತ್ತೇನೆ. ಮುಂಡಿ ಹೆಜ್ಜೆಗಳನ್ನು ಕಬ್ಬಿಣದ ಸರಪಣಿಯಿಂದ ಕಟ್ಟುತ್ತೇನೆ. ಎರಡು ಕಬ್ಬಿಣದ ಕಂಬಗಳನ್ನು ಮಾಡುತ್ತೇನೆ. ಅದಕ್ಕೆ ಒಂದು ಪಟ್ಟಿಯನ್ನು ಸೇರಿಸುತ್ತೇನೆ. ಆ ಪಟ್ಟಿಯಲ್ಲಿ ಕಾಲನ್ನು ಕಟ್ಟಿ ತಲೆಯನ್ನು ಕೆಳಗಡೆಗೆ ಮಾಡಿಕೊಳ್ಳುತ್ತೇನೆ. ತಲೆಯನ್ನು ತಿರುಗಿಸಿಕೊಂಡು ಒಂದುರೀತಿಯಿಂದಲೂ, ಅದೇ ತಲೆಯನ್ನು ಮೇಲಕ್ಕೆ ಸ್ವಲ್ಪ ಎತ್ತಿಕ್ಕೊಂಡು ತಳಮುಖವಾಗಿಯೇ ಕಂಬದಂತೆ ಆಚೆಕಡೆಗಿರುವ ಅಗ್ನಿಷ್ಟಿಕೆಯಲ್ಲಿ ತಲೆಯನ್ನು ಇಟ್ಟು ಕಣ್ಣುಮುಚ್ಚಿಕೊಂಡು ತಪಸ್ಸು ಮಾಡುತ್ತೇನೆ. ಆಗ ಯಾವನಾದರೂ ವರಕೊಡುತ್ತಾನೆ.

ಅಧಃ ಶಿರಾಸ್ತಥಾತಿಷ್ಠನ್ನಿಮೀಲ್ಯೈವ ವಿಲೋಚನೇ ।
ಏವಂ ತಪಶ್ಚರಿಷ್ಯಾಮಿ ವರದಃ ಕೋಽಪಿ ಮೇ ಭವೇತ್ ॥ ೬೮ ॥

ಬ್ರಹ್ಮಾ ವಾ ವರದಸ್ಯೋಽಸ್ತು ಶಂಕರೋ ವಿಷ್ಣುರೇವ ಚ ।
ವರದೇನ ತು ಮೇ ಭಾವ್ಯಂ ಯೋ ವಾ ಕೋ ವಾ ವರಪ್ರದಃ ॥ ೬೯ ॥

ಇತ್ಥಮಾಭಾಷ್ಯ ಮುನಿನಾ ಗುರುಣಾ ಭಾರ್ಗವೇಣ ಸಃ ।
ತಥಾಽತಪಚ್ಚ ಷಣ್ಮಾಸಂ ಪುನರನ್ಯಚ್ಚಕಾರ ಹ ॥ ೭೦ ॥

ನಖಾಭ್ಯಾಂ ಸ್ವಶಿರಶ್ಛಿತ್ವಾ ಜುಹಾವಾಗ್ನೌ ಸಮಂತ್ರಕಂ ।
ನಮೋ ಭದ್ರಾಯಮಂತ್ರೇಣ ಚತ್ವಾರಿ ಚ ಶಿರಾಂಸಿ ಸಃ ॥ ೭೧ ॥

ಪಂಚಮಂ ಚ ಶಿರೋ ಹೋತುಂ ಯತಮಾನೇ ಚ ರಾಕ್ಷಸೇ ।
ವಹ್ನಿಮಧ್ಯೇ ಸಮುತ್ತಸ್ಥೌ ಭಗವಾನಂಬಿಕಾಪತಿಃ ॥ ೭೨ ॥

ಶುದ್ಧಸ್ಫಟಿಕಸಂಕಾಶೋ ಭಾಲಚಂದ್ರವಿಭೂಷಣಃ ।
ಅಧಶ್ಶಿರಸ್ಕಂ ತದ್ರಕ್ಷ ಇದಮಾಹ ಮಹೇಶ್ವರಃ ॥ ೭೩ ॥

---

೬೮-೬೯. ಆಗ ವರವನ್ನು ಕೊಡತಕ್ಕವನು ಬ್ರಹ್ಮನೇ ಆಗಲಿ, ಶಂಕರನಾಗಲಿ, ವಿಷ್ಣುವೇ ಆಗಲಿ, ಯಾವನಾದರೂ ನನಗೆ ವರವನ್ನು ಕೊಟ್ಟೇಕೊಡಬೇಕು.

೭೦. ಇಂತೆಂದು ಗುರುವಾದ ಶುಕ್ರನೊಡನೆ ಯೋಚಿಸಿ, ಅದೇರೀತಿ ಆರು ತಿಂಗಳು ಒಂದೇರೀತಿಯ ತಪಸ್ಸನ್ನು ಮಾಡಿ ಮತ್ತೊಂದನ್ನೂ ಮಾಡಿದನು.

೭೧. ಆ ತಪಸ್ಸಿನಲ್ಲಿ ಅಗ್ನಿಯನ್ನು ಸ್ಥಾಪಿಸಿಕೊಂಡು ಉಗುರಿನಿಂದ ತಲೆಯನ್ನು ಕತ್ತರಿಸುತ್ತಾ ನಮೋಭದ್ರಾಯ ಎಂಬ ಮಂತ್ರದಿಂದ ನಾಲ್ಕು ತಲೆಗಳನ್ನು ಹೋಮಮಾಡಿದನು.

೭೨. ಐದನೆಯ ತಲೆಯನ್ನು ಹೋಮಮಾಡಲು ಯತ್ನಿಸಿದಾಗ ಬೆಂಕಿಯ ಮಧ್ಯದಿಂದ ಸ್ವಾಮಿಯಾದ ಶಂಕರನು ಹೊರಗೆ ಬಂದನು.

೭೩-೭೪. ಶುದ್ಧವಾದ ಸ್ಫಟಿಕದಂತೆ ಬಣ್ಣವುಳ್ಳ, ತಲೆಯಲ್ಲಿ ಚಂದ್ರನುಳ್ಳ, ಆ ಮಹೇಶ್ವರನು ತಲೆಯನ್ನು ಕೆಳಗೆಮಾಡಿ ತಪಸ್ಸುಮಾಡುತ್ತಿರುವ ಆ ರಾಕ್ಷಸನನ್ನು

ಮಾ ಸಾಹಸಂ ಕೃಥಾ ರಕ್ಷೋ ವರದೋಽಸ್ಮಿ ವರಂ ವೃಣು ॥ ೭೪ ॥

॥ ರಾಕ್ಷಸ ಉವಾಚ ॥

ಬಹೂನಾಂ ಚ ವರಾಣಾಂ ತು ದಾತಾ ನೂನಂ ಮಹೇಶ್ವರಃ ।
ಹತಶೀರ್ಷಸಮುತ್ಪತ್ತಿಂ ಗ್ರಸ್ತಜೀವಮೃತಿಸ್ತಥಾ ॥ ೭೫ ॥

ವರಾಹವಪುಷೋ ವಿಷ್ಣೋರಸ್ತು ಶಕ್ತಿಶ್ಚತುರ್ಗುಣಾ ।
ಮಯಿ ತೇ ನ ಹಿ ರೋಷಸ್ಸ್ಯಾತ್ಸನ್ನಿಧಿಸ್ತು ಸದಾ ಮಮ ॥ ೭೬ ॥

ತ್ವಜ್ಜಟೋತ್ಪಾಟನೇನೈಕಪುರುಷಸ್ಸಂಭವಿಷ್ಯತಿ ।
ತೇನೈವ ಮರಣಂ ಸಾನ್ಯೈರಿದಂ ಮೇಽಸ್ತು ಕೃತಂ ಶಿವ ॥ ೭೭ ॥

ಭವಿಷ್ಯತ್ಯೇವಮೇವೈತದಿತ್ಯುಕ್ತ್ವಾಂತರಧೀಯತ ।
ಏವಂ ಲಬ್ಧವರಃ ಪಾಪೀ ರಾಕ್ಷಸೋ ನಿಹತಸ್ತ್ವಯಾ ॥ ೭೮ ॥

---

ನೋಡಿ ಎಲೈ ರಾಕ್ಷಸನೇ, ಮಿತಿಮೀರಿದ ಕೆಲಸವನ್ನು ಮಾಡಬೇಡ ವರವನ್ನು ಕೊಡುತ್ತೇನೆ. ಕೇಳಿಕೋ ಎಂದನು.

೭೫. ರಾಕ್ಷಸನು ಹೇಳಿದನು:—ಮಹೇಶ್ವರನು ಬಹಳವಾದ ವರವನ್ನು ಕೊಡಲು ಶಕ್ತನು. ಆದ್ದರಿಂದ ನನಗೆ ಹೋದ ತಲೆಗಳು ಹುಟ್ಟುವಂತೆಯೂ, ನಾನು ನುಂಗಿದ ಜೀವಿಗಳು ಸಾಯುವಂತೆಯೂ, ವರಾಹಾವತಾರದಲ್ಲಿ ವಿಷ್ಣುವಿಗಿದ್ದ ನಾಲ್ಕರಷ್ಟು ಬಲಬರುವಂತೆಯೂ ವರವನ್ನು ಕೊಡು.

೭೬. ನನ್ನಲ್ಲಿ ನಿನಗೆ ಕೋಪವಿಲ್ಲದಿದ್ದರೆ ನನ್ನ ಹತ್ತಿರ ನೀನು ಯಾವಾಗಲೂ ಇರು.

೭೭. ನಿನ್ನ ಜಟೆಯನ್ನು ಕೀಳುವುದರಿಂದ ಒಬ್ಬ ಮನುಷ್ಯನು ಹುಟ್ಟುತ್ತಾನೆ. ಅವನಿಂದಲೇ ನನಗೆ ಮರಣವಾಗಲಿ ಮಿಕ್ಕವರಿಂದ ಬೇಡ.

೭೮. ಶಂಭುವು ಹಾಗೆಯೇ ಆಗಲೆಂದು ಹೇಳಿ ಅಂತರ್ಧಾನನಾದನು. ಈ ರೀತಿ ವರವನ್ನು ಹೊಂದಿದ್ದ ಪಾಪಿಯಾದ ರಾಕ್ಷಸನನ್ನು ಈಗ ನೀನು ಕೊಂದೆ.

**ಅಥಾಲಿಂಗ್ಯ ಹರಿರ್ವೀರಂ ಶಂಕರಶ್ಚ ಪಿತಾಮಹಃ ।**
**ಯಥಾಗತಮಥೋ ಜಗ್ಮುರಥ ದೇವಾದಿಯೋಷಿತಃ ॥ ೭೯ ॥**

**ನಿಪತ್ಯ ದಂಡವದ್ಭೂಮೌ ವೀರಭದ್ರಮಥಾಬ್ರುವನ್ ।**
**ನಮಸ್ತೇ ದೇವದೇವೇಶ ನಮಸ್ತೇ ಕರುಣಾಕರ ।**
**ನಮಸ್ತೇ ಶಾಶ್ವತಾನಂತ ನಮಸ್ತೇ ವರದೋ ಭವ ॥ ೮೦ ॥**

**॥ ವೀರಭದ್ರ ಉವಾಚ ॥**

**ಭಸ್ಮನಾ ಜೀವಯಿಷ್ಯಾಮಿ ಸುರಾನ್ಸಮುನಿವಾನರಾ್ ।**
**ಭವತೀಭಿಃ ಪ್ರತೋಷ್ಟವ್ಯಂ ಶೋಕಃ ಕಾರ್ಯೋ ನ ಚಾಧುನಾ ॥ ೮೧ ॥**

**ಇತ್ಯುಕ್ತ್ವಾ ವೀರಭದ್ರಸ್ತು ಭಸ್ಮನಾ ಜೀವಯತ್ಸ ತಾ್ ।**
**ಉತ್ಥಿತಾ ಮುನಿದೇವಾಶ್ಚ ವಾನರಾ ಪ್ರಭವತ್ಯುತ ॥ ೮೨ ॥**

**ಇದಮೂಚುರ್ವಚೋ ಹೃಷ್ಟಾಃ ಶಿರಸ್ಯಾಂಜಲಯೋಽಸಮನ್ ।**
**ತ್ವಯಾತ್ರ ಜೀವಿತಾಸ್ತಾತ ಪಿತಾ ತ್ವಂ ಧರ್ಮತೋ ಹಿ ನಃ ॥ ೮೩ ॥**

---

೭೯. ಅನಂತರ ಹರಿಯು ಆ ವೀರನಾದ ವೀರಭದ್ರನನ್ನು ಆಲಿಂಗಿಸಿಕೊಂಡನು ಶಂಕರನೂ ಬ್ರಹ್ಮನೂ ಆಲಿಂಗಿಸಿಕೊಂಡನಂತರ ಹೊರಟುಹೋದರು. ಅನಂತರ ದೇವಾದಿಗಳೂ, ಅವರ ಸ್ತ್ರೀಯರೂ ಸಾಷ್ಟಾಂಗ ನಮಸ್ಕಾರಮಾಡಿ ವೀರಭದ್ರನನ್ನು ಕುರಿತು ಇಂತೆಂದರು.

೮೦. ದೇವದೇವೇಶನೇ, ನಮಸ್ಕಾರವು. ಕರುಣಾಕರನೇ, ನಮಸ್ಕಾರವು. ಶಾಶ್ವತನೇ, ಅನಂತನೇ ನಿನಗೆ ನಮಸ್ಕಾರವು. ವರವನ್ನು ಕೊಡು.

೮೧. ವೀರಭದ್ರನು ಹೇಳಿದನು :—ದೇವತೆಗಳನ್ನೂ, ಮುನಿಗಳನ್ನೂ, ಕಪಿಗಳನ್ನೂ, ಭಸ್ಮದಿಂದ ಬದುಕಿಸುತ್ತೇನೆ. ನೀವು ಸಂತೋಷವಾಗಿರಿ, ದುಃಖಪಡಬೇಡಿ.

೮೨. ಹೀಗೆಂದು ಹೇಳಿ ವೀರಭದ್ರನು ಅವರೆಲ್ಲರನ್ನೂ ಭಸ್ಮದಿಂದ ಬದುಕಿಸಿದನು. ಮುನಿಗಳೂ, ದೇವತೆಗಳೂ, ವಾನರರೂ ಎದ್ದರು.

೮೩. ಅವರು ತಲೆಯಲ್ಲಿ ಕೈಕಟ್ಟಿಕೊಂಡು ನಮಸ್ಕರಿಸುತ್ತಾ ನೀನು ನಮ್ಮನ್ನು ಬದುಕಿಸಿದುದರಿಂದ ಧರ್ಮದಿಂದ ನಮಗೆ ತಂದೆಯಾದೆ ಎಂದರು.

ಅಸ್ಮಾಕಂ ಶರಣಂ ನಿತ್ಯಂ ಭವ ಶಂಕರಸಂಭವ ।
ಶಿಶೂನಾಂ ದುಷ್ಟಚರಿತಂ ದೃಷ್ಟ್ವಾ ಶಿಕ್ಷೇತ್ತಥಾ ಚ ತಾನ್ ॥ ೮೪ ॥

ರಕ್ಷೇತ್ಪರಕೃತಾಬಾಧಾವ್ಯಾಧಿಭಿಶ್ಚ ಯಥೌರಸಾನ್ ।
ದಕ್ಷಾಧ್ವರೇ ಕೃತಾಗಸ್ಕಾಃ ಶಿಕ್ಷಿತಾ ಭವತಾಽನಘ ॥ ೮೫ ॥

ಇದಾನೀಂ ರಕ್ಷಿತಾಸ್ತ್ರಾತ ವಯಂ ಶಿಶುವದೇವ ತೇ ॥ ೮೬ ॥

॥ ವೀರಭದ್ರ ಉವಾಚ ॥

ಸತ್ಯಮೇತನ್ನ ಸಂದೇಹೋ ಯತ್ರ ಬಾಧಾ ಭವೇತ್ತು ವಃ ।
ತತ್ರ ಮಾಂ ಸ್ಮರತ ಕ್ಷಿಪ್ರಂ ಬಾಧಾ ನಾಶಂ ಗಮಿಷ್ಯತಿ ॥ ೮೭ ॥

ವೀರಭದ್ರಪದಂ ಯೋಽಪಿ ಪಠಂತ್ಯಷ್ಟಶತಂ ತತಃ ।
ಪ್ರಣವಾದಿನಮೋನ್ತಂ ಚ ಚತುರ್ಥೀಸಹಿತಂ ತಥಾ ॥ ೮೮ ॥

---

೮೪-೮೬. ಎಲೈ ವೀರಭದ್ರನೇ, ನಮಗೆ ಯಾವಾಗಲೂ ರಕ್ಷಕನಾಗಿರು. ಮಕ್ಕಳ ದುಷ್ಟತನವನ್ನು ನೋಡಿ ಅವರನ್ನು ಶಿಕ್ಷಿಸುವಂತೆಯೂ, ಪರರ ತೊಂದರೆ ರೋಗಗಳಿಂದ ಅವರನ್ನು ರಕ್ಷಿಸುವಂತೆಯೂ, ದಕ್ಷಯಾಗದಲ್ಲಿ ತಪು ಮಾಡಿದ ನಮ್ಮನ್ನು ಶಿಕ್ಷಿಸಿದೆ. ಈಗ ಕಷ್ಟದಲ್ಲಿದ್ದ ನಮ್ಮನ್ನು ಕಾಪಾಡಿದ್ದೀಯೆ ನಾವು ನಿನಗೆ ಮಕ್ಕಳಂತಾಗಿದ್ದೇವೆ.

೮೭. ವೀರಭದ್ರನು ಹೇಳಿದನು:—ನೀವು ಹೇಳುವುದು ಸತ್ಯವು. ಸಂದೇಹವಿಲ್ಲ. ನಿಮಗೆ ಎಲ್ಲಿ ತೊಂದರೆಯುಂಟಾಗುವುದೋ ಅಲ್ಲಿ ನನ್ನನ್ನು ಸ್ಮರಿಸಿರಿ. ಆ ತೊಂದರೆಯು ನಾಶವಾಗುತ್ತದೆ.

೮೮. ವೀರಭದ್ರಪದಕ್ಕೆ ಚತುರ್ಥಿಯ ವಿಭಕ್ತಿಯನ್ನು ಸೇರಿಸಿ ಆದಿಯಲ್ಲಿ ಪ್ರಣವವನ್ನು ಅಂತ್ಯದಲ್ಲಿ ನಮಃ ಪದವನ್ನು ಎಂದರೆ " ಓಂ ವೀರಭದ್ರಾಯನಮಃ " ಎಂಬುದನ್ನು ಉಚ್ಚರಿಸಿದರೆ ಅವರಿಗೆ ರಾಕ್ಷಸರ ಪೀಡೆಯು ನಾಶವನ್ನು ಹೊಂದುತ್ತದೆ.

ತೇಷಾಂ ರಾಕ್ಷಸಪೀಡಾಯಾ ನಾಶನಂ ಚ ಭವಿಷ್ಯತಿ ।
ಬ್ರಹ್ಮರಾಕ್ಷಸಪೀಡಾಸು ಪಿಶಾಚಾದಿಭಯೇಷು ಚ ।
ನಾಮಾನುಸ್ಮರಣಾತ್ಸರ್ವಬಾಧನಾಂ ತು ವಿನಾಶನಂ ॥ ೮೯ ॥

ವಿದ್ಯುತ್ಪ್ರಭಾಲೋಚನಮುಗ್ರಮೀಶಂ
ಬಾಲೇಂದುದಂಷ್ಟ್ರಾರುಣಶೋಭಿತಾಧರಂ ।
ಸುನೀಲಗಾತ್ರಂ ಚ ಜಟಾಕೃತಸ್ರಜಂ
ಪಂಚಾವಶಾಂಗೇ ಭಸಿತಂ ತ್ರಿಪುಂಡ್ರಕಂ ॥ ೯೦ ॥

ಬ್ರಹ್ಮರಾಕ್ಷಸಮುಕ್ತ್ಯರ್ಥಂ ಸ್ಮರಣಂ ತ್ವಿದಮೀರಿತಂ ।
ಮಂತ್ರೇ ಚ ವೀರಭದ್ರಸ್ಯ ಸರ್ವಮೇತದುದೀರಿತಂ ॥ ೯೧ ॥

॥ ದಧೀಚ ಉವಾಚ ॥

ಅಥೈವಂ ವಿದಧೇ ವೀರೋ ಮುನಿದೇವಾಸ್ತಥಾ ಗತಾಃ ।
ಏತತ್ತ್ರಿಯಾಯುಷಂ ಪ್ರೋಕ್ತಂ ಭಸ್ಮಮಾಹಾತ್ಮ್ಯಮುತ್ತಮಂ ॥ ೯೨ ॥

---

೮೯. ಬ್ರಹ್ಮರಾಕ್ಷಸರ ಪೀಡೆಯಲ್ಲೂ ಪಿಶಾಚಾದಿಗಳ, ಭಯಬಂದಾಗಲೂ ವೀರಭದ್ರನಾದ ನನ್ನ ನಾಮವನ್ನು ಸ್ಮರಿಸಿದ ಕೂಡಲೇ ಆ ಬಾಧೆಯು ನಾಶವಾಗುತ್ತದೆ.

೯೦. ಮಿಂಚಿನಂತಿರುವ ಕಣ್ಣುಗಳುಳ್ಳ, ಉಗ್ರವಾದ ಅರ್ಧಚಂದ್ರನಂತೆ ವಕ್ರವಾದ ಕೋರೆದಾಡೆಗಳುಳ್ಳ, ಕಪ್ಪಾದ ಜಟೆಗಳನ್ನೇ ಮಾಲೆಯಾಗಿ ಉಳ್ಳ, ಹಣೆಯಲ್ಲಿ ತ್ರಿಪುಂಡ್ರವಾಗಿ ವಿಭೂತಿಯನ್ನು ಪೂಸಿಕೊಂಡಿರುವ ನನ್ನನ್ನು ಧ್ಯಾನಿಸಬೇಕು.

೯೧. ಬ್ರಹ್ಮರಾಕ್ಷಸನ ಬಿಡುಗಡೆಗೋಸ್ಕರ ಈರೀತಿ ಸ್ಮರಣಮಾಡಬೇಕು. ವೀರಭದ್ರನ ಮಂತ್ರದಲ್ಲಿ ಇದೆಲ್ಲವೂ ಹೇಳಲ್ಪಟ್ಟಿದೆ.

೯೨. ದಧೀಚನು ಹೇಳಿದನು:—ಆ ವೀರಭದ್ರನು ಹೀಗೆ ಮಾಡಿದನು. ದೇವತೆಗಳೂ ಋಷಿಗಳೂ ಅನಂತರ ಹೊರಟುಹೋದರು. ಇದೇನೆ ತ್ರ್ಯಾಯುಷವು. ಉತ್ತಮವಾದ ಭಸ್ಮ ಮಹಿಮೆಯು.

ಪಠತಶ್ಶೃಣ್ವತೋ ವಾಪಿ ಸ್ಮರತೋಽಘವಿನಾಶನಂ ।
ಶಿವಭಕ್ತಿಪ್ರದಂ ಪುಣ್ಯಮಾಯುರಾರೋಗ್ಯವರ್ಧನಂ ॥ ೯೩ ॥

॥ ಶುಚಿಸ್ಮಿತೋಽವಾಚ ॥

ಅಹಂ ಕೃತಾರ್ಥಾ ಧನ್ಯಾ ಚ ನಾರೀಣಾಮುತ್ತಮಾಸ್ಮ್ಯಹಂ ।
ಹತಪಾಪಾ ತಥಾ ಚಾಸ್ಮಿ ನಮಸ್ತೇ ಮುನಿಪುಂಗವ ॥ ೯೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವ ಸಂವಾದೇ
ವಿಭೂತಿಮಾಹಾತ್ಮ್ಯೇ ತ್ರ್ಯಧಿಕಶತತಮೋಽಧ್ಯಾಯಃ

---

೯೩. ಈ ಭಸ್ಮಮಾಹಾತ್ಮ್ಯವನ್ನು ಓದಿದರೂ, ಕೇಳಿದರೂ, ಸ್ಮರಿಸಿದರೂ, ಪಾಪವನ್ನು ಕಳೆದುಕೊಳ್ಳುತ್ತಾನೆ. ಶಿವನಲ್ಲಿ ಭಕ್ತಿಯನ್ನು ಹುಟ್ಟಿಸುತ್ತದೆ. ಆಯುಸ್ಸು ಆರೋಗ್ಯಗಳನ್ನು ಹೆಚ್ಚಿಸುತ್ತದೆ.

೯೪. ಶುಚಿಸ್ಮಿತಳು ಹೇಳಿದಳು:—ಎಲೈ ಋಷಿಯೇ, ನಾನು ಕೃತಾರ್ಥಳೂ, ಧನ್ಯಳೂ ಆಗಿದ್ದೇನೆ. ಹೆಂಗಸರಲ್ಲಿ ಉತ್ತಮಳೂ ಆದೆನು. ಪಾಪಗಳೆಲ್ಲವೂ ಹೋದುವು. ನಿನಗೆ ನಮಸ್ಕಾರವು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ವಿಭೂತಿಮಹಿಮೆಯೆಂಬ ನೂರಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಚತುರಧಿಕಶತತಮೋಽಧ್ಯಾಯಃ

---

॥ ಶ್ರೀರಾಮ ಉವಾಚ ॥

ಭಸ್ಮೋತ್ಪತ್ತಿಂ ಮಹಾಭಾಗ ಭಸ್ಮಮಾಹಾತ್ಮ್ಯಮೇವ ಚ ।
ಭಸ್ಮಸಂಧಾರಣೇ ಪುಣ್ಯಂ ಭಸ್ಮದಾನೇ ಚ ತದ್ವದ ॥ ೧ ॥

॥ ಶಂಭುರುವಾಚ ॥

ಭಸ್ಮೋತ್ಪತ್ತಿಂ ಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಸ್ಮರಣಾತ್ಕೀರ್ತನಾದ್ರಾಮ ತಾಂ ಶೃಣುಷ್ವ ನರಾಧಿಪ ॥ ೨ ॥

ಯ ಏಕಶ್ಶಾಶ್ವತೋ ದೇವೋ ಬ್ರಹ್ಮವಂದ್ಯಸ್ಸದಾಶಿವಃ ।
ತ್ರಿಲೋಚನೋ ಗುಣಾಧಾರೋ ಗುಣಾತೀತೋಽಕ್ಷರೋಽವ್ಯಯಃ ॥ ೩ ॥

---

## ನೂರನಾಲ್ಕನೆಯ ಅಧ್ಯಾಯವು

೧. ಶ್ರೀರಾಮನು ಹೇಳಿದನು :—ಎಲೈ ಮಹಾನುಭಾವನೇ, ಭಸ್ಮ ಹುಟ್ಟಿದು ದನ್ನೂ, ಅದರ ಮಹಿಮೆಯನ್ನೂ, ಅದನ್ನು ಧರಿಸುವ ಬಗೆಯನ್ನೂ, ಅದನ್ನು ತೆಗೆದು ಕೊಳ್ಳುವ ರೀತಿಯನ್ನೂ ಹೇಳು.

೨. ಶಂಭುವು ಹೇಳಿದನು :—ಸರ್ವಪಾಪಹರವಾದ ಭಸ್ಮದ ಉತ್ಪತ್ತಿಯನ್ನು ಹೇಳುತ್ತೇನೆ. ಅದರ ಸ್ಮರಣದಿಂದಲೂ, ಉಚ್ಚಾರದಿಂದಲೂ, ಕೂಡ ಪಾಪನಾಶ ವಾಗುತ್ತದೆ.

೩-೪. ಶಾಶ್ವತವಾದ, ಬ್ರಹ್ಮವಂದ್ಯನೂ, ಸದಾಶಿವನೂ ಆದ, ತ್ರಿಲೋಚನ ನಾಗಿ ಗುಣಗಳಿಗೆ ಆಧಾರನಾದ, ಗುಣಗಳಿಗೆ ಸಿಕ್ಕದವನೂ, ಅವ್ಯಯನೂ, ನಾಶರಹಿತನೂ

ಸಿಸೃಕ್ಷಾ ತಸ್ಯ ಜಾತಾಥ ವೀಕ್ಷ್ಯಾತ್ಮಸ್ಥಂ ಗುಣತ್ರಯಂ ।
ವೇದತ್ರಯಮಿದಂ ಜ್ಞೇಯಂ ಗುಣತ್ರಯಮಿದಂ ಹಿ ಯತ್ ॥ ४ ॥

ಪೃಥಕ್ಕೃತ್ವಾತ್ಮನಸ್ತಾತ ತತ್ರ ಸ್ಥಾನಂ ವಿಭಜ್ಯ ಚ ।
ದಕ್ಷಿಣಾಂಗೇಽಸೃಜತ್ಪುತ್ರಂ ಬ್ರಹ್ಮಾಣಂ ವಾಮತೋ ಹರಿಂ ॥ ೫ ॥

ಪೃಷ್ಠದೇಶೇ ಮಹೇಶಾಸಂ ತ್ರೀನ್ಪುತ್ರಾನಸೃಜದ್ವಿಭುಃ ।
ಜಾತಮಾತ್ರಾಸ್ತು ತೇ ಪುತ್ರಾ ಬ್ರಹ್ಮವಿಷ್ಣುಮಹೇಶ್ವರಾಃ ॥ ೬ ॥

ಇದಮೂಚುರ್ವಚಸ್ಸ್ಪಷ್ಟಂ ಕೋ ಭವಾನ್ಕೇ ವಯಂ ತ್ವಿತಿ ।
ತಾನಾಹ ಚ ಶಿವಃ ಪುತ್ರಾನ್ಯೂಯಂ ಪುತ್ರಾ ಅಹಂ ಪಿತಾ ।
ಇದಂ ಗುಣತ್ರಯಂ ಪುತ್ರಾ ಭಜಧ್ವಂ ಕರ್ಮಹೇತುಕಂ ॥ ೭ ॥

॥ ಪುತ್ರಾ ಊಚುಃ ॥

ಕಂ ವಾ ಗುಣಂ ಕೋ ಭಜತೇ ಕಿಯಂತಂ ಕಾಲಮೀಶ್ವರ ।
ಕಥಂ ಗುಣನಿವೃತ್ತಿಶ್ಚ ಭವೇದೇತದ್ವದಸ್ವ ನಃ ॥ ೮ ॥

---

ಆದ, ಆ ಈಶ್ವರನಿಗೆ ತನ್ನಲ್ಲಿರುವ ಮೂರು ಗುಣಗಳನ್ನೂ ನೋಡಿ ಸೃಷ್ಟಿಸಬೇಕೆಂಬ ಅಪೇಕ್ಷೆಯುಂಟಾಯಿತು. ಈ ತ್ರಿಗುಣಗಳೇ ಮೂರು ವೇದಗಳೆಂದು ತಿಳಿಯಬೇಕು.

೫. ತನ್ನನ್ನು ವಿಭಾಗಿಸಿಕೊಂಡು ಅಲ್ಲಿಯೂ ಸ್ಥಾನಗಳನ್ನು ಭಾಗಮಾಡಿ, ಬಲಗಡೆಯಲ್ಲಿ ಬ್ರಹ್ಮನನ್ನೂ, ಎಡಗಡೆಯಲ್ಲಿ ಹರಿಯನ್ನೂ ಸೃಷ್ಟಿಸಿದನು.

೬. ಪೃಷ್ಠದೇಶದಲ್ಲಿ ಮಹೇಶ್ವರನನ್ನೂ ಆ ಸ್ವಾಮಿಯು ಸೃಷ್ಟಿಮಾಡಿದನು. ಈರೀತಿ ಮೂರುಜನ ಮಕ್ಕಳನ್ನು ಸೃಷ್ಟಿಸಿದನು. ಹುಟ್ಟಿದೊಡನೆಯೇ ಆ ಮಕ್ಕಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ನೀನಾರು ನಾವಾರು? ಎಂದು ಸ್ಪಷ್ಟವಾಗಿ ಕೇಳಿದರು.

೭. ಆಗ ಶಿವನು ಅವರಿಗೆ ನೀವು ಮಕ್ಕಳು, ನಾನು ತಂದೆ ಎಂದು ಹೇಳಿದನು. ಮತ್ತು ಕರ್ಮಹೇತುಕವಾದ ಈ ಗುಣತ್ರಯಗಳನ್ನು ಹೊಂದಿರೆಂದನು.

೮. ಮಕ್ಕಳು ಹೇಳಿದರು:—ಯಾವ ಗುಣವನ್ನು ಯಾರು ಹೊಂದಬೇಕು? ಅದು ಎಷ್ಟುರವರೆಗೆ ಇರಬೇಕು? ಆ ಗುಣವು ಹೇಗೆ ಹೋಗುತ್ತದೆ? ಇವೆಲ್ಲವನ್ನೂ ಹೇಳು.

॥ ಶಿವ ಉವಾಚ ॥

ಯಾವಜ್ಜ್ಞಾನಂ ಹಿ ಭವತಾಂ ಯಾವದಾಯುರಥಾಪಿ ವಾ ।
ಧಾರಣಂ ತಾವದೇವ ಸ್ಯಾದೇಕೈಕಸ್ಯ ಗುಣಸ್ಯ ಚ ॥ ೧೦ ॥

ಸತ್ತ್ವಂ ಬ್ರಹ್ಮಾ ರಜೋ ವಿಷ್ಣುರ್ಭರ್ಜೇನ್ಮಾಹೇಶ್ವರಸ್ತಮಃ ।
ಇತ್ಯುಕ್ತಮಾತ್ರೇ ದೇವೇಶೇ ಬ್ರಹ್ಮಾ ಸತ್ತ್ವಮಥಾಗ್ರಹೀತ್ ॥ ೧೧ ॥

ನ ಚ ಚಾಲಯಿತುಂ ಶಕ್ತೋ ಧಾರಣೇ ಕಿಮು ಶಕ್ತಿಮಾನ್ ।
ತಂ ಗುಣಂ ಚ ತಿರಸ್ಕೃತ್ಯ ರಜೋಗುಣಮಥಾಗ್ರಹೀತ್ ॥ ೧೨ ॥

ನ ಚ ಚಾಲಯಿತುಂ ಶಕ್ತೋ ಜಗ್ರಾಹಾಥ ತಮೋಗುಣಂ ।
ನ ಚ ಚಾಲಯಿತುಂ ಶಕ್ತೋ ನಿಪಪಾತ ರುರೋದ ಚ ॥ ೧೩ ॥

---

೧೦. ಶಿವನು ಹೇಳಿದನು :—ನಿಮಗೆ ಜ್ಞಾನೋತ್ಪತ್ತಿಯಾಗುವವರೆಗೂ, ಅದಿಲ್ಲದಿದ್ದರೆ ಆಯಸ್ಸು ಪೂರ್ತಿಯಾಗುವವರೆಗೆ ನಿಮ್ಮಲ್ಲಿರುತ್ತದೆ. ಮತ್ತು ಒಂದೊಂದಕ್ಕೆ ಒಬ್ಬೊಬ್ಬನು ಧಾರಕನಾಗುತ್ತಾನೆ.

೧೧. ಬ್ರಹ್ಮನು ಸತ್ವಗುಣವನ್ನೂ, ವಿಷ್ಣುವು ರಜೋಗುಣವನ್ನೂ, ಮಹೇಶ್ವರನು ತಮೋಗುಣವನ್ನೂ ಹೊಂದಬೇಕು.

೧೨. ಹೀಗೆ ಹೇಳಿದೊಡನೆಯೇ ಬ್ರಹ್ಮನು ಸತ್ವಗುಣವನ್ನು ಹಿಡಿದುಕೊಂಡನು. ಅದನ್ನು ಅಲ್ಲಾಡಿಸುವುದಕ್ಕೆ ಸಾಧ್ಯವಾಗಲಿಲ್ಲ. ಹೊರುವುದೆಲ್ಲಿ ಬಂದೀತು? ಆಗ ಆ ಗುಣವನ್ನು ಬಿಟ್ಟು ರಜೋಗುಣವನ್ನು ಹಿಡಿದನು.

೧೩. ಅದನ್ನು ಅಲ್ಲಾಡಿಸಲಾರದೆ ತಮೋಗುಣವನ್ನು ಹಿಡಿದು ಅದನ್ನೂ ಅಲ್ಲಾಡಿಸಲಾರದೆ ಕೆಳಕ್ಕೆ ಬಿದ್ದು ಅತ್ತನು.

ವಿಷ್ಣುಶ್ಚ ವಾಮಹಸ್ತೇನ ರಜೋಗುಣಮಧಾರಯತ್ ।
ಅಂಗುಲೀಭ್ಯಾಂ ಮಹೇಶೋಽಪಿ ತಮೋಗುಣಮಧಾರಯತ್ ॥ ೧೪ ॥

ಸತ್ತ್ವಮೇಕೋಂಗುಲೀಭ್ಯಾಂ ಚ ಸತ್ತ್ವಂ ವಿಷ್ಣುಮಥಾದಧಾತ್ ।
ಬ್ರಹ್ಮಾಣಂ ಪಾದಪೀಠೇ ಚ ದಧಾರ ಚ ನನರ್ತ ಚ ॥ ೧೫ ॥

ನೃತ್ಯಂತಮತ್ಯಂತವಿಲಾಸರೂಪಂ
ಗೋಕ್ಷೀರರೂಪಂ ತರುಣಂ ತ್ರಿಣೇತ್ರಂ ।
ಸರ್ವಂ ದಧಾನಂ ಕೃತಕೌತುಕಂ ಶಿವಂ
ಸಮೀಕ್ಷ್ಯ ಪುತ್ರಾನ್ವರದೋಽಭಾಷೇ ॥ ೧೬ ॥

॥ ಶಿವ ಉವಾಚ ॥

ಪ್ರೀತೋಽಸ್ಮಿ ತವ ಪುತ್ರಾಹಂ ವರಂ ವೃಣು ಯಥೇಪ್ಸಿತಂ ।
ಅಥಾಹ ಪಿತರಂ ಪುತ್ರೋ ವರಮೇತಂ ವದಸ್ವ ಮೇ ॥ ೧೭ ॥

---

೧೪. ವಿಷ್ಣುವು ಎಡಗೈಯಿಂದ ರಜೋಗುಣವನ್ನೂ ಹಿಡಿದುಕೊಂಡನು. ಮಹೇಶನು ತಮೋಗುಣವನ್ನು ಹಿಡಿದುಕೊಂಡನು.

೧೫. ಆ ಮಹೇಶ್ವರನು ಬೆಟ್ಟುಗಳಿಂದಲೇ ಸತ್ವಗುಣವನ್ನೂ ಧರಿಸಿದನು. ವಿಷ್ಣುವನ್ನು ಬೆರಳುಗಳಿಂದ ಹಿಡಿದುಕೊಂಡನು. ಆ ಮಹೇಶ್ವರನು ಬ್ರಹ್ಮನನ್ನು ಪಾದದ ಪೀಠದಲ್ಲಿಟ್ಟುಕೊಂಡನು. ಮತ್ತೂ ನರ್ತನಮಾಡಿದನು.

೧೬. ಹಸುವಿನ ಹಾಲಿನಂತೆ ಬೆಳ್ಳಗಿರುವ ಕಾಂತಿಯಿಂದ ಕೂಡಿದ ತರುಣನಾಗಿ, ಮುಕ್ಕಣ್ಣನಾಗಿ, ಸತ್ವರಜಸ್ತಮೋಗುಣಗಳನ್ನೂ ಬ್ರಹ್ಮ, ವಿಷ್ಣುಗಳನ್ನೂ ಹಿಡಿದು ಕೊಂಡು ಅಲಂಕೃತನಾಗಿ ಕುಣಿಯುತ್ತಿರುವ ಶಿವನನ್ನು ನೋಡಿ ಮೂಲಶಿವನು ಇಂತೆಂದನು.

೧೭. ಶಿವನು ಹೇಳಿದನು :—ಎಲೈ ಮಗನೆ, ನಿನಗೆ ನಾನು ಪ್ರೀತಿಯನ್ನು ಹೊಂದಿದ್ದೇನೆ (ಪ್ರೀತನಾಗಿದ್ದೇನೆ). ಬೇಕಾದ ವರಗಳನ್ನು ಕೇಳಿಕೋ ಎನ್ನಲು, ತಂದೆಯನ್ನು ಕುರಿತು ಮಗನು ಈ ವರವನ್ನು ಕೊಡೆಂದು ಇಂತೆಂದನು.

ಮಾಮುದ್ದಿಶ್ಯ ಕೃತಾ ಪೂಜಾ ತವ ಪೂಜಾ ಭವೇಚ್ಛಿವ ।
ತಿಷ್ಠೇರ್ಮಯಿ ಸದಾ ತ್ವಂ ಚ ತ್ವಮೇವಾಹಂ ಚ ವಾವ್ಯಯ ॥ ೧೮ ॥

॥ ಶಿವ ಉವಾಚ ॥

ಏವಮೇವ ಮಹಾಭಾಗ ಭವಿಷ್ಯತಿ ನ ಸಂಶಯಃ ।
ರಕ್ತಗೌರಾವಿಮೌ ಪುತ್ರೌ ಬ್ರಹ್ಮವಿಷ್ಣೂ ಮಮೈವ ತು ॥ ೧೯ ॥

ಬಾಹುಮೂಲಸ್ಥರೋಮಾ್ಯ ಚ ಮಮಾಕಾರೌ ತಥಾನಘ ।
ಅಥ ಬ್ರಹ್ಮಾಣಮಾಹೇದಂ ಭಜತ್ವೇಕಂ ಗುಣಂ ಭವಾನ್ ॥ ೨೦ ॥

॥ ಬ್ರಹ್ಮೋವಾಚ ॥

ತ್ವನ್ನಿರ್ದಿಷ್ಟಂ ಗುಣಮಹಂ ಧರ್ತುಂ ಶಕ್ತೋ ನ ಹೀಶ್ವರ ।
ಧಾರಯಿಷ್ಯೇ ರಜೋ ದೇವ ಸತ್ತ್ವಂ ಭಜತು ವೈ ಹರಿಃ ॥ ೨೧ ॥

ಅವಶಿಷ್ಟಂ ಗುಣಂ ಚಾಯಮೀಶ್ವರೋ ಧಾರಯಿಷ್ಯತಿ ॥ ೨೨ ॥

---

೧೮. ನನ್ನನ್ನು ಕುರಿತು ಮಾಡುವ ಪೂಜೆಯು ನಿನಗೇ ಪ್ರೀತಿಯಾಗಲಿ. ನೀನು ಯಾವಾಗಲೂ ನನ್ನಲ್ಲಿಯೇ ಇರು. ನೀನೇ ನಾನಾಗಿರಬೇಕು.

೧೯-೨೦. ಶಿವನು ಹೇಳಿದನು:—ಎಲೈ ಮಹಾನುಭಾವನೇ, ನೀನು ಕೇಳಿದಂತೆಯೇ ಆಗಲಿ. ಕೆಂಪು ಬಿಳುಪು ಬಣ್ಣಗಳುಳ್ಳ ಈ ಬ್ರಹ್ಮವಿಷ್ಣುಗಳು ನನ್ನ ಮಕ್ಕಳೇ ಇವರು. ನನ್ನಿಂದ ನನ್ನ ಆಕಾರವನ್ನು ಹೊಂದಿದ ಕಂಕುಳಿನ ರೋಮಗಳು. ಆಮೇಲೆ ಬ್ರಹ್ಮನನ್ನು ಕುರಿತು ಒಂದು ಗುಣವನ್ನು ನೀನು ಹೊಂದು ಎಂದನು.

೨೧-೨೨. ಬ್ರಹ್ಮನು ಹೇಳಿದನು.—ಎಲೈ ಈಶ್ವರನೇ! ನೀನು ಹೇಳಿದ ಗುಣವನ್ನು ಧರಿಸಲು ನಾನು ಶಕ್ತನಲ್ಲ. ಆದ್ದರಿಂದ ರಜೋಗುಣವನ್ನು ನಾನು ಧರಿಸುತ್ತೇನೆ ಸತ್ವಗುಣವನ್ನು ಹರಿಯು ಧರಿಸಲಿ. ಉಳಿದ ತಮೋಗುಣವನ್ನು ಈಶ್ವರನು ಧರಿಸುತ್ತಾನೆ.

॥ ಶಂಭುರುವಾಚ ॥

ಗುಣಾನಾದಾಯ ತೇ ದೇವಾ ನ ಶೇಕುರ್ನಿತ್ಯಧಾರಣಂ ।
ಕರ್ತುಂ ಭರಣಶಕ್ತ್ಯರ್ಥಂ ಶಿವಮಿತ್ಯವದನ್ಯುತಾಃ ॥ ೨೩ ॥

ಗುಣತ್ರಯಂ ಸರ್ವಕಾಲಂ ನ ಚ ಧಾರಯಿತುಂ ಕ್ಷಮಾಃ ।
ದೀಯತಾಂ ಭಗವನ್ ಶಕ್ತಿಂ ಯದಿ ಭೋಸ್ತ್ವಂ ವರಪ್ರದಃ ॥ ೨೪ ॥

ಅಥ ತದ್ವಚನಂ ಶ್ರುತ್ವಾ ಶಿವೋ ವಾಕ್ಯಮಭಾಷತ ।
ವಿದ್ಯಾಶಕ್ತಿಸ್ಸಮಸ್ತಾನಾಂ ಶಕ್ತಿರಿತ್ಯಭಿಧೀಯತೇ ॥ ೨೫ ॥

ಗುಣತ್ರಯಾಶ್ರಯಾ ವಿದ್ಯಾ ತ್ವವಿದ್ಯಾ ಚ ತದಾಶ್ರಯಾ ।
ಗುಣತ್ರಯಂ ಚ ದಗ್ಧ್ವೈವ ತತ್ಸಾರಂ ಧರ್ತುಮರ್ಹಥ ॥ ೨೬ ॥

ಯಚ್ಚ ಕಿಂಚಿದ್ಭವೇತ್ತತ್ರ ಭವದ್ಭಿರ್ಧ್ರಿಯತಾಂ ಹಿ ತತ್ ।
ಅಥಾಹುಸ್ತತ್ಸುತಾ ವಾಕ್ಯಂ ನ ದಾಹೋ ಜ್ವಲನಂ ವಿನಾ ॥ ೨೭ ॥

---

೨೩. ಶಂಭುವು ಹೇಳಿದನು :—ಆ ದೇವತೆಗಳು ಆ ಗುಣಗಳನ್ನು ತೆಗೆದುಕೊಂಡು ನಿತ್ಯವೂ ಧರಿಸಲು ಸಮರ್ಥರಾಗಲಿಲ್ಲ. ಅಲ್ಲದೇ ಅವರು ಮೂವರು ಸೇರಿ ಧರಿಸುವುದಕ್ಕೆ ಶಕ್ತಿಯನ್ನು ಕೊಡೆಂದು ಕೇಳಿದರು.

೨೪. ಮೂರು ಗುಣಗಳನ್ನೂ ಯಾವಾಗಲೂ ಧರಿಸಲು ನಾವು ಶಕ್ತರಲ್ಲ. ಸ್ವಾಮಿ, ಅದನ್ನು ಧರಿಸುವ ಶಕ್ತಿಯನ್ನು ಕೊಡು. ಅದೇ ನೀನು ನಮಗೆ ಕೊಡತಕ್ಕ ವರವೆಂದರು.

೨೫. ಅದನ್ನು ಕೇಳಿ ಶಿವನು ಎಲ್ಲರಿಗೂ ವಿದ್ಯಾಶಕ್ತಿಯೆಂಬುದೇ ಶಕ್ತಿಯೆಂದು ಹೇಳುತ್ತಾರೆ ಎಂದನು.

೨೬. ವಿದ್ಯೆಯೆಂಬುದು ಗುಣತ್ರಯಗಳನ್ನು ಆಶ್ರಯಿಸಿದೆ. ಆ ವಿದ್ಯೆಯು ಕೂಡ ಅವನ್ನೇ ಆಶ್ರಯಿಸಿದೆ. ಆದ್ದರಿಂದ ಆ ಗುಣತ್ರಯಗಳ ವಿದ್ಯೆಗಳನ್ನು ಹಿಂಡಿ ಅದರ ಸಾರವನ್ನು ಧರಿಸಿರಿ.

೨೭. ಅದರಲ್ಲಿ ಸಿಕ್ಕಿದುದನ್ನು ನೀವು ಧರಿಸಿರಿ. ಆಮೇಲೆ ಆ ಮಕ್ಕಳು ಬೆಂಕಿಯಿಲ್ಲದೆ ಸುಡುವುದಿಲ್ಲ ಎಂದರು.

**ಶಿವಃ ಪ್ರಾಹ ಮಹೇಶಸ್ಯ ಲೋಚನೇ ವಹ್ನಿರಸ್ತಿ ವೈ ।**
**ಗುಣತ್ರಯಮಿದಂ ಧೇನುರ್ವಿದ್ಯಾ ಸ್ಯಾದ್ಗೋಮಯಂ ಶುಭಂ ॥ ೨೮ ॥**

**ಮೂತ್ರಂ ಚೋಪನಿಷತ್ಪ್ರೋಕ್ತಂ ಕುರ್ಯಾದ್ಭಸ್ಮ ತತಃ ಪರಂ ।**
**ವತ್ಸಾಸ್ತು ಸ್ಮೃತಯೋ ಯಸ್ಯಾಸ್ತತ್ಸಂಭೂತಂ ಸುಗೋಮಯಂ ॥ ೨೯ ॥**

**ಆ ಗಾವ ಇತಿ ಮಂತ್ರೇಣ ಧೇನುಂ ತತ್ರಾಭಿಮಂತ್ರಯೇತ್ ।**
**ಗಾವೋ ಭಗೋ ಗಾವ ಇತಿ ಪ್ರಾಶಯೇತ್ತು ತೃಣಂ ಜಲಂ ॥ ೩೦ ॥**

**ಉಪೋಷ್ಯ ಚ ಚತುರ್ದಶ್ಯಾಂ ಶುಕ್ಲೇ ಕೃಷ್ಣೇಽಥವಾ ವ್ರತೀ ।**
**ಪರೇದ್ಯುಃ ಪ್ರಾತರುತ್ಥಾಯ ಶುಚಿರ್ಭೂತ್ವಾ ಸಮಾಹಿತಃ ॥ ೩೧ ॥**

**ಕೃತಸ್ನಾನೋ ಧೌತವಸ್ತ್ರೋ ಗೋಮಯಾರ್ಥಂ ವ್ರಜೇತು ಗಾಂ ।**
**ಉತ್ಥಾಪ್ಯ ತಾಂ ಪ್ರಯತ್ನೇನ ಗಾಯತ್ರ್ಯಾ ಮೂತ್ರಮಾಹರೇತ್ ॥ ೩೨ ॥**

---

೨೮. ಶಿವನು, ಮಹೇಶ್ವರನ ಕಣ್ಣಿನಲ್ಲಿ ಬೆಂಕಿಯಿದೆಯಲ್ಲವೆ? ಈಗ ಸತ್ವ ರಜಸ್ತಮೋಗುಣಗಳೇ ಹಸುವು. ವಿದ್ಯೆಯೇ ಶುಭನಾದ ಸಗಣಿಯು ಎಂದನು.

೨೯. ಉಪನಿಷತ್ತುಗಳೇ ಆ ಹಸುವಿನ ಗಂಜಲವು. ಆಮೇಲೆ ಅದನ್ನು ಭಸ್ಮವನ್ನಾಗಿ ಮಾಡಬೇಕು. ಸ್ಮೃತಿಗಳೇ ಕರುಗಳು. ಅಂತಹ ಹಸುವಿನಿಂದ ಹುಟ್ಟಿದುದೇ ಒಳ್ಳೆಯ ಸಗಣಿಯು.

೩೦. ಆಗಾವ ಎಂಬ ಮಂತ್ರದಿಂದ ಹಸುವನ್ನು ಮಂತ್ರಿಸಬೇಕು. ಗಾವೋ ಭಗೋ ಗಾವ ಎಂಬ ಮಂತ್ರದಿಂದ ಹುಲ್ಲನ್ನು ಹಾಕಿ ನೀರನ್ನು ಕುಡಿಸಬೇಕು.

೩೧-೩೨. ಶುಕ್ಲ ಅಥವಾ ಕೃಷ್ಣ ಚತುರ್ದಶಿಯ ದಿನ ಉಪವಾಸಮಾಡಬೇಕು. ಮಾರನೆಯ ದಿನ ಬೆಳಗ್ಗೆ ಎದ್ದು ಶುಚಿಯಾಗಿ ನಿಯಮದಿಂದ ಸ್ನಾನಮಾಡಿ ಮಡಿಬಟ್ಟೆಯನ್ನುಟ್ಟುಕೊಂಡು ಗೋಮಯಕ್ಕೋಸ್ಕರ ಹಸುವಿನ ಬಳಿಗೆ ಹೋಗಬೇಕು ಅದನ್ನು ಎಬ್ಬಿಸಿ ಗಾಯಿತ್ರಿಯಿಂದ ಗಂಜಲವನ್ನು ಶೇಖರಿಸಿಕೊಳ್ಳಬೇಕು.

**ಸೌವರ್ಣೇ ರಾಜತೇ ತಾಮ್ರೇ ಧಾರಯೇನ್ಮೃಣ್ಮಯೇ ಘಟೇ ।**
**ಪೌಷ್ಕರೇ ವಾ ಪಲಾಶೇ ವಾ ಪಾತ್ರೇ ಗೋಶೃಂಗ ಏವ ವಾ ॥ ೩೩ ॥**

**ಆದಧೀತ ಹಿ ಗೋಮೂತ್ರಂ ಗಂಧದ್ವಾರೇತಿ ಗೋಮಯಂ ।**
**ಅಸ್ಪೂಮಿಪಾತಂ ಗೃಹ್ಣೀಯಾತ್ಪಾತ್ರೇ ಪೂರ್ವೋದಿತೇಽಧಿಕೇ ॥ ೩೪ ॥**

**ಗೋಮಯಂ ಶೋಧಯೇದ್ವಿದ್ವಾಂ ಚ್ಛ್ರೀರ್ಮೇ ಭಜತು ಮಂತ್ರತಃ ।**
**ಅಲಕ್ಷ್ಮೀರ್ಮ ಇತಿ ಮಂತ್ರೇಣ ಗೋಮಯಸ್ಯಾಪಮಾರ್ಜನಂ ॥ ೩೫ ॥**

**ಸಂ ತ್ವಾ ಸಿಂಚಾಮಿ ಮಂತ್ರೇಣ ಗೋಮೂತ್ರಂ ಗೋಮಯೇ ಕ್ಷಿಪೇತ್ ।**
**ಪಂಚಾನಾಂ ತ್ವೇತಿ ಮಂತ್ರೇಣ ಪಿಂಡಾಂಶ್ಚೈವ ಚತುರ್ದಶ ॥ ೩೬ ॥**

**ಕುರ್ಯಾತ್ಸಂಶೋಷ್ಯ ಕಿರಣೈಸ್ತರಣೇರಾಹರೇತ್ತು ತಾನ್ ।**
**ನಿದಧ್ಯಾದಥ ಪೂರ್ವೋಕ್ತಪಾತ್ರೇ ಗೋಮಯಪಿಂಡಕಾನ್ ॥ ೩೭ ॥**

**ಸ್ವಗೃಹ್ಯೋಕ್ತವಿಧಾನೇನ ಪ್ರತಿಷ್ಠಾಪ್ಯಾಗ್ನಿಮಿಂಧಯೇತ್ ।**
**ಪಿಂಡಾನ್ನಿನಿಕ್ಷಿಪೇತ್ತತ್ರ ತದರ್ಣದೇವಾಯ ಪಿಂಡಕಾನ್ ॥ ೩೮ ॥**

---

೩೩-೩೪. ಚಿನ್ನ, ಬೆಳ್ಳಿ, ತಾಮ್ರ, ಮಡಕೆ, ತಾವರೆ ಎಲೆ, ಮುತ್ತುಗದೆಲೆ, ಗೋವಿನ ಕೊಂಬು ಇವುಗಳಾವುದರಲ್ಲಾದರೂ ಒಂದರಲ್ಲಿ ಗಂಜಲವನ್ನು ಭೂಮಿಗೆ ಬೀಳುವುದರೊಳಗೆ ಹಿಡಿದಿಟ್ಟುಕೊಳ್ಳಬೇಕು. ಗಂಧದ್ವಾರವೆಂಬ ಮಂತ್ರದಿಂದ ಗೋಮಯವನ್ನು ಭೂಮಿಗೆ ಬೀಳುವುದರೊಳಗೆ ತೆಗೆದು ಇಡಬೇಕು.

೩೫. ಶ್ರೀರ್ಮೇ ಭಜತು ಎಂಬ ಮಂತ್ರದಿಂದ ಗೋಮಯವನ್ನು ಶೋಧಿಸಬೇಕು. ಅಲಕ್ಷ್ಮೀರ್ಮೇ ಎಂಬ ಮಂತ್ರದಿಂದ ಅದನ್ನು ಪ್ರೋಕ್ಷಿಸಬೇಕು.

೩೬-೩೭. "ಸಂತ್ವಾಸಿಂಚಾಮಿ" ಎಂಬ ಮಂತ್ರದಿಂದ ಸಗಣಿಯನ್ನು ಗಂಜಲದಲ್ಲಿ ಹಾಕಬೇಕು. "ಪಂಚಾನಾಂತ್ವಾ" ಎಂಬ ಮಂತ್ರದಿಂದ ಹದಿನಾಲ್ಕು ಉಂಡೆಗಳನ್ನು ಮಾಡಬೇಕು. ಅನಂತರ ಅವನ್ನು ಸೂರ್ಯನ ಬಿಸಿಲಿನಲ್ಲಿ ಒಣಗಿಸಿ ತರಬೇಕು. ಅವುಗಳನ್ನು ಹಿಂದೆ ಹೇಳಿದ ಯಾವುದಾದರೂ ಪಾತ್ರೆಯಲ್ಲಿಡಬೇಕು.

೩೮. ತನ್ನ ಶಾಖೆಯ ವಿಧಾನದಿಂದ ಅಗ್ನಿಯನ್ನು ಪ್ರತಿಷ್ಠೆಮಾಡಿ ಹತ್ತಿಸಬೇಕು. ಆಮೇಲೆ ಅಗ್ನಿಯಲ್ಲಿ ಈ ಉಂಡೆಗಳನ್ನು ಹೋಮಮಾಡಬೇಕು.

ಆಘಾರಾವಾಜ್ಯಭಾಗೌ ಚ ಪ್ರಕ್ಷಿಪ್ಯ ದ್ವೌ ಹುನೇತ್ಸುಧೀಃ ।
ತತೋ ನಿಧನಪತಯೇ ತ್ರಯೋದಶ ಜಯಾದಯಃ ॥ ೩೯ ॥

ಹೋತವ್ಯಾಃ ಪಂಚ ಬ್ರಹ್ಮಾಣಿ ನಮೋ ಹಿರಣ್ಯಬಾಹವೇ ।
ಇತಿ ಸರ್ವಾಹುತೀರ್ಹುತ್ವಾ ಚತುರ್ಥ್ಯಂತೈಸ್ತು ಮಂತ್ರಕೈಃ ॥ ೪೦ ॥

ಋತಸರ್ವಃ ಕದ್ರುದ್ರಾಯ ಯಸ್ಯ ಚೈಕಂಕತೀತಿ ಚ ।
ಏತೈಸ್ತು ಜುಹುಯಾದ್ವಿದ್ವಾನನಾಜ್ಞಾತತ್ರಯಂ ತಥಾ ॥ ೪೧ ॥

ವ್ಯಾಹೃತೀರಥ ಹುತ್ವಾ ತು ತತಃ ಸ್ವಿಷ್ಟಕೃತಂ ಹುನೇತ್ ।
ಇಧ್ಮಶೇಷಂ ತು ನಿರ್ವರ್ತ್ಯ ಪೂರ್ಣಪಾತ್ರೋದಕಂ ತತಃ ॥ ೪೨ ॥

ಪೂರ್ಣಮಾಸಾಂತ್ಯಯಜುಷಾ ಜಲೇನಾನ್ಯೇನ ಬೃಂಹಯೇತ್ ।
ಬ್ರಾಹ್ಮಣೇಷ್ವಮೃತಮಿತಿ ತಜ್ಜಲಂ ಶಿರಸಿ ಕ್ಷಿಪೇತ್ ॥ ೪೩ ॥

---

೩೯. ಆಘಾರ ಆಜ್ಯಭಾಗಗಳನ್ನೂ ಮಾಡಿ ಅನಂತರ "ನಿಧನಪತಯೇ ನಮಃ" ಎಂಬ ಮಂತ್ರದಿಂದ ಅವೆಲ್ಲವನ್ನೂ ಒಂದೊಂದಕ್ಕೆ ಒಂದೊಂದರಂತೆ ಹೋಮಮಾಡಿ ಆ ಹದಿನಾಲ್ಕು ಉಂಡೆಗಳನ್ನೂ ಹಾಕಿ ಹೋಮಮಾಡಿ, ಆಮೇಲೆ ಜಯಾದಿಯನ್ನು ಮಾಡಬೇಕು.

೪೦-೪೧. ಐದು ಬ್ರಹ್ಮರುಗಳನ್ನುದ್ದೇಶಿಸಿ ಹೋಮಮಾಡಿ ಅನಂತರ ನಮೋಹಿರಣ್ಯಬಾಹವೇ ಎಂದು ಸರ್ವಾಹುತಿ (ಪೂರ್ಣಾಹುತಿ) ಯನ್ನು ಕೊಡಬೇಕು. ಇವುಗಳನ್ನೆಲ್ಲಾ ಚತುರ್ಥ್ಯಂತವಾಗಿ ಹೇಳಬೇಕು. "ಋತಸರ್ವಃ" ಕದ್ರುದ್ರಾಯ "ಯಸ್ಯಚೈಕಂಕತೀ" "ಅನಾಜ್ಞಾತಂ" ಎಂಬ ಮೂರು ಮಂತ್ರಗಳನ್ನು ಹೇಳಿ ಹೋಮಮಾಡಬೇಕು.

೪೨-೪೩. ಆಮೇಲೆ ವ್ಯಾಹೃತಿಗಳಿಂದ ಹೋಮಮಾಡಬೇಕು. ಆಮೇಲೆ ಸ್ವಿಷ್ಟಕೃದ್ಧೋಮವನ್ನೂ, ಅನಂತರ ಇಧ್ಮವನ್ನೂ ಹೋಮಮಾಡಬೇಕು. ಆಮೇಲೆ ಪೂರ್ಣಪಾತ್ರೆಯ ನೀರಿಗೆ ಬೇರೆ ನೀರನ್ನು ಹಾಕಿ ಪೂರ್ಣಮಾಶಬ್ದವೇ ಕೊನೆಯಲ್ಲಿರುವ ಯಜುಸ್ಸಿನಿಂದ ಹೆಚ್ಚಿಸಬೇಕು. "ಬ್ರಾಹ್ಮಣೇಷ್ವಮೃತಗ್‌ಂಹಿತಂ" ಎಂಬ ಮಂತ್ರದಿಂದ ತಲೆಯಲ್ಲಿ ಪ್ರೋಕ್ಷಿಸಿಕೊಳ್ಳಬೇಕು.

ಪ್ರಾಚ್ಯಾಮಿತಿ ದಿಶಾಂ ಲಿಂಗೈರ್ದಿಕ್ಷು ತೋಯಂ ವಿನಿಕ್ಷಿಪೇತ್ ।
ಬ್ರಹ್ಮಣೇ ದಕ್ಷಿಣಾಂ ದತ್ವಾ ಶಾನ್ತೇ ಪುಲಕಮಾಹರೇತ್ ॥ ೪೪ ॥

ಆಪರಿಷ್ಯಾಮಿ ದೇವಾನಾಂ ಸರ್ವೇಷಾಂ ಕರ್ಮಗುಪ್ತಯೇ ।
ಜಾತವೇದಸಮೇನೇ ತ್ವಾಂ ಪುಲಕೈಶ್ಛಾದಯಾಮ್ಯಹಂ ॥ ೪೫ ॥

ಮಂತ್ರೇಣಾನೇನ ತಂ ವಹ್ನಿಂ ಪುಲಕೈಶ್ಛಾದಯೇತ್ತತಃ ।
ತ್ರಿದಿನಂ ಜ್ವಲನಾಸ್ಥಿತ್ಯೈ ಛಾದನಂ ಪುಲಕೈಸ್ಸ್ಮೃತಂ ॥ ೪೬ ॥

ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಸ್ವಯಂ ಭುಂಜೀತ ವಾಗ್ಯತಃ ।
ಭಸ್ಮಾಧಿಕಮಭೀಪ್ಸಂಸ್ತು ಹ್ಯಧಿಕಂ ಗೋಮಯಂ ಹರೇತ್ ॥ ೪೭ ॥

ದಿನತ್ರಯೇಣ ಯದಿ ವಾ ಏಕಸ್ಮಿನ್ದಿವಸೇ ಬಹು ।
ತೃತೀಯೇ ವಾ ಚತುರ್ಥೇ ವಾ ಪ್ರಾತಃ ಸ್ನಾತ್ವಾ ಸಿತಾಂಬರಃ ॥ ೪೮ ॥

---

೪೪. ಪ್ರಾಚ್ಯಾಂದಿಶಿದೇವಾ ಇತ್ಯಾದಿ ಮಂತ್ರಗಳಿಂದ ದಿಕ್ಕುಗಳಿಗೆ ನೀರನ್ನು ಎರಚಬೇಕು. ಬ್ರಹ್ಮನಿಗೆ ದಕ್ಷಿಣೆಯನ್ನು ಕೊಟ್ಟು ಶಾಂತಿಯಾದ ಮೇಲೆ ಹೊಟ್ಟನ್ನು ತರಬೇಕು.

೪೫-೪೬. ದೇವತೆಗಳು ಪಿತೃಗಳು ಮುಂತಾದ ಕರ್ಮವನ್ನು ಕಾಪಾಡಲು ನಿನ್ನನ್ನು ಉತ್ಪತ್ತಿಮಾಡುತ್ತೇನೆ ಎಂದು ಹೇಳಬೇಕು. ಅಗ್ನಿಗೆ ಸಮಾನನಾದ ನಿನ್ನನ್ನು ಹೊಟ್ಟನಿಂದ ಮುಚ್ಚುತ್ತೇನೆ ಎಂಬ ಮಂತ್ರದಿಂದ ಆ ಬೆಂಕಿಯನ್ನು ಹೊಟ್ಟಿನಿಂದ ಮುಚ್ಚಬೇಕು. ಮೂರು ದಿನಗಳು ಬೆಂಕಿಯು ಇರುವುದಕ್ಕೋಸ್ಕರ ಹೊಟ್ಟು ಹಾಕಿ ಮುಚ್ಚಬೇಕು.

೪೭. ಆಮೇಲೆ ಬ್ರಾಹ್ಮಣರಿಗೆ ಸಂತರ್ಪಣೆಮಾಡಿಸಬೇಕು. ತಾನೂ ಮೌನದಿಂದ ಊಟಮಾಡಬೇಕು. ಭಸ್ಮವು ಹೆಚ್ಚಾಗಿ ಬೇಕಾದರೆ ಹೆಚ್ಚಾಗಿ ಗೋಮಯವನ್ನು ಹಾಕಬೇಕು.

೪೮-೪೯. ಹೆಚ್ಚಿಗೆಯ ಭಸ್ಮಕ್ಕೆ ಉಂಡೆಗಳನ್ನು ಮೂರು ದಿನಗಳವರೆಗೂ ಹಾಕಬಹುದು. ಇಲ್ಲದಿದ್ದರೆ ಒಂದೇದಿನವಾದರೂ ಹಾಕಬಹುದು. ಆಮೇಲೆ ಮೂರನೆಯ ಅಥವಾ ನಾಲ್ಕನೆಯ ದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಮಡಿಬಟ್ಟೆ

ಶುಕ್ಲಯಜ್ಞೋಪವೀತೀ ಚ ಶುಕ್ಲಮಾಲ್ಯಾನುಲೇಪನಃ ।
ಶುಕ್ಲದಂತೋ ಭಸ್ಮದಿಗ್ಧೋ ಮಂತ್ರೇಣಾನೇನ ಮಂತ್ರವಿತ್ ॥ ೪೯ ॥

ತದ್ವ್ರತೀತಿಚೋಚ್ಚಾರ್ಯಯಿತ್ವಾ ಕಂ ಭಸ್ಮ ಸತ್ಯಂ ನ ಸಂತ್ಯಜೇತ್ ।
ತತ ಆವಾಹನಮುಖಾ ಉಪಚಾರಾಸ್ತು ಷೋಡಶ ॥ ೫೦ ॥

ಕರ್ತವ್ಯಾಹುತಿದಾನೇನ ತತೋಽಗ್ನಿಮುಪಸಂಹರೇತ್ ।
ಅಗ್ನೇರ್ಭಸ್ಮೇತಿಮಂತ್ರೇಣ ಗೃಹ್ಣೀಯಾದ್ಭಸ್ಮ ಚೋದ್ಭವಂ ॥ ೫೧ ॥

ಅಗ್ನಿರಸ್ಮೀತಿಮಂತ್ರೇಣ ಪ್ರಮೃಜ್ಯ ಚ ತತಃ ಪರಂ ।
ಸಂಯೋಜ್ಯ ಗಂಗಾಸಲಿಲೈಃ ಕಪಿಲಾಪಯಸಾಥವಾ ॥ ೫೨ ॥

ಚಂದ್ರಕುಂಕುಮಕಾಶ್ಮೀರಮುಶೀರಂ ಚಂದನಂ ತಥಾ ।
ಅಗುರುದ್ವಿತಯಂ ಚೈವ ಚೂರ್ಣಯಿತ್ವಾ ತು ಸೂಕ್ಷ್ಮತಃ ॥ ೫೩ ॥

ಕ್ಷಿಪೇದ್ಭಸ್ಮನಿ ತಚ್ಚೂರ್ಣಮೋಮಿತಿ ಬ್ರಹ್ಮಮಂತ್ರತಃ ।
ತತಃ ಪಯಃಸೇಚನೇ ಚ ಗದಿತಃ ಕಪಿಲಾಮನುಃ ॥ ೫೪ ॥

---

ಯನ್ನುಟ್ಟು ಹೊಸ ಜನಿವಾರವನ್ನು ಹಾಕಿಕೊಂಡು, ಬಿಳಿಯ ಹೂವನ್ನು ಧರಿಸಿಕೊಂಡು, ಹಲ್ಲನ್ನು ಬೆಳ್ಳಗೆ ಉಜ್ಜಿಕೊಂಡು, ವಿಭೂತಿ ಧಾರಣೆಮಾಡಿಕೊಂಡು, ಮುಂದಿನ ಮಂತ್ರದಿಂದ ಮಂತ್ರಿಸಬೇಕು.

೫೦-೫೧. ತದ್ವ್ರತವೆಂಬ ಮಂತ್ರವನ್ನು ಹೇಳಬೇಕು. ಮತ್ತು ಜಲಮಿತಿ ಭಸ್ಮ, ಸತ್ಯಮಿತಿ ಭಸ್ಮ ಇದೆಲ್ಲವನ್ನೂ ಹೇಳಿ ಆವಾಹನಾದಿ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಅನಂತರ ಹೋಮಮಾಡಿ ಅಗ್ನಿಯನ್ನು ಶಮನಬೇಕು. ಅನಂತರ ಅಗ್ನಿರಿತಿಭಸ್ಮವೆಂಬ ಮಂತ್ರದಿಂದ ಭಸ್ಮವನ್ನು ತೆಗೆದುಕೊಳ್ಳಬೇಕು.

೫೨-೫೪. ಅಗ್ನಿರಸ್ಮಿ ಎಂಬ ಮಂತ್ರದಿಂದ ಅದೆಲ್ಲವನ್ನೂ ಶೋಧಿಸಬೇಕು. ಅನಂತರ ಗಂಗೆಯ ಉದಕದಿಂದಾಗಲಿ, ಕಪಿಲಾಹಸುವಿನ ಹಾಲಿನಿಂದಾಗಲಿ ಕಲಸಬೇಕು. ಅನಂತರ ಪಚ್ಚಕರ್ಪೂರ, ಕುಂಕುಮಕೇಸರಿ, ಲಾಮಂಚ, ಚಂದನ, ಬಿಳಿ ಮತ್ತು ಕಪ್ಪು ಅಗುರುಗಳನ್ನು ಪುಡಿಮಾಡಿ ಭಸ್ಮದೊಡನೆ ಹಾಕಬೇಕು. ಇವುಗಳನ್ನು ಹಾಕುವಾಗ ಓಂ ಎಂದುಚ್ಚರಿಸಬೇಕು. ಇದೆಲ್ಲ ಆದಮೇಲೆ ಕಪಿಲಾಹಸುವಿನ ಹಾಲನ್ನು ಹಾಕಬೇಕು. ಅದಕ್ಕೆ ಮಂತ್ರಮನ್ನು ಹೇಳಬೇಕು.

ಅಮೃತಂ ದೇವಿ ತೇ ಕ್ಷೀರಂ ಪವಿತ್ರಮಿಹ ಬುದ್ಧಿದಂ ।
ತವ ಪ್ರಸಾದಾನ್ಮುಚ್ಯಂತೇ ಮನುಜಾಸ್ಸರ್ವಪಾಪ್ಮನಃ ॥ ೫೫ ॥

ಪ್ರಣವೇನಾವಹೇದ್ವಿದ್ವಾನ್ಸೂಕ್ಷ್ಮನೋ ವಟಿಕಾನಥ ।
ಅಣೋರಣೀಯಾನಿತಿ ಹಿ ಮಂತ್ರೇಣ ತು ವಿಚಕ್ಷಣಃ ॥ ೫೬ ॥

॥ ಶ್ರೀ ಶಿವ ಉವಾಚ ॥

ಇತ್ಥಂ ತು ಭಸ್ಮ ಸಂಪಾದ್ಯ ಶುಷ್ಕಮಾದಾಯ ಮಂತ್ರವಿತ್ ।
ಪ್ರಣವೇನ ವಿಮೃಜ್ಯಾಥ ಸಪ್ತಪ್ರಣವಮಂತ್ರಿತಂ ॥ ೫೭ ॥

ಈಶಾನೇನ ಶಿರೋದೇಶಂ ಮುಖಂ ತತ್ಪುರುಷೇಣ ಚ ।
ಉರೋದೇಶಮಘೋರೇಣ ಗುಹ್ಯಂ ವಾಮೇನ ಮಂತ್ರಯೇತ್ ॥ ೫೮ ॥

ಸದ್ಯೋಜಾತೇನ ವೈ ಪಾದೌ ಸರ್ವಾಂಗಂ ಪ್ರಣವೇನ ತು ।
ತತ ಉನ್ಮೂಲ್ಯ ಸರ್ವಾಂಗಮಾಪಾದತಲಮಸ್ತಕಂ ॥ ೫೯ ॥

---

೫೫. ಎಲೈ ದೇವಿಯೇ ನಿನ್ನ ಹಾಲು ಅಮೃತವು, ಪವಿತ್ರವು, ಬುದ್ಧಿಯನ್ನು ಕೊಡತಕ್ಕದು. ನಿನ್ನ ಅನುಗ್ರಹದಿಂದ ಪಾಪಿಗಳಾದ ಮನುಜರು ಅದನ್ನು ಕಳೆದು ಕೊಳ್ಳುತ್ತಾರೆ. ಎಂಬುದೇ ಹಾಲಿನ ಮಂತ್ರವು.

೫೬. ಅನಂತರ ಓಂಕಾರದಿಂದಲೂ, ಅಣೋರಣೀಯಾನೆಂಬ ಮಂತ್ರದಿಂದಲೂ ಸಣ್ಣಸಣ್ಣ ಗುಳಿಗೆಗಳನ್ನಾಗಿ ಮಾಡಬೇಕು.

೫೭. ಶಿವನು ಹೇಳಿದನು :—ಈರೀತಿ ಭಸ್ಮವನ್ನುತ್ಪತ್ತಿಮಾಡಿಕೊಳ್ಳಬೇಕು. ಅನಂತರ ಮಂತ್ರವನ್ನು ಬಲ್ಲವನು ಒಣಗಿದ ಆ ಭಸ್ಮವನ್ನು ತೆಗೆದುಕೊಂಡು ಓಂಕಾರ ದಿಂದ ತಿಕ್ಕಬೇಕು. ಸಪ್ತಪ್ರಣವಮಂತ್ರದಿಂದ ಮಂತ್ರಿಸಬೇಕು.

೫೮-೫೯. ಈಶಾನಮಂತ್ರದಿಂದ ಶಿರಸ್ಸಿಗೂ, ತತ್ಪುರುಷಮಂತ್ರದಿಂದ ಮುಖಕ್ಕೂ, ಅಘೋರಮಂತ್ರದಿಂದ ಎದೆಗೂ, ವಾಮದೇವಮಂತ್ರದಿಂದ ಗುಹ್ಯಕ್ಕೂ, ಸದ್ಯೋಜಾತಮಂತ್ರದಿಂದ ಪಾದಗಳಿಗೂ, ಓಂಕಾರದಿಂದ ಸರ್ವಾಂಗಕ್ಕೂ ಪೂಸಿಕೊಳ್ಳ ಬೇಕು. ಅನಂತರ ಆ ಭಸ್ಮವನ್ನು ಕಾಲಿನಿಂದ ಹಿಡಿದು ತಲೆಯವರೆಗೂ ಪೂಸಿ ಕೊಳ್ಳಬೇಕು.

ತತ ಆಚಮ್ಯ ವಸನಂ ಧೌತಂ ಶ್ವೇತಂ ಪ್ರಧಾರಯೇತ್ ।
ಪುನರಾಚಮ್ಯ ಕರ್ಮ ಸ್ವಂ ಕರ್ತುಮರ್ಹತಿ ಸರ್ವತಃ ॥ ೬೦ ॥

ತತೋ ಭಸ್ಮ ಸಮಾದಾಯ ಪ್ರಮೃಜ್ಯ ಪ್ರಣವೇನ ತು ।
ತ್ರಿಣೇತ್ರಂ ತ್ರಿಗುಣಾಧಾರಂ ತ್ರಯಾಣಾಂ ಜನಕಂ ವಿಭುಂ ॥ ೬೧ ॥

ಸ್ಮರನ್ನಮಶ್ಶಿವಾಯೇತಿ ಲಲಾಟೇ ತು ತ್ರಿಪುಂಡ್ರಕಂ ।
ನಮಶ್ಶಿವಾಭ್ಯಾಮಿತ್ಯುಕ್ತ್ವಾ ಬಾಹ್ವೋರ್ವಾಪಿ ತ್ರಿಪುಂಡ್ರಕಂ ॥ ೬೨ ॥

ಅಘೋರಾಯ ನಮ ಇತಿ ಉಭಾಭ್ಯಾಂ ಚ ಪ್ರಕೋಷ್ಠಯೋಃ ।
ಭೀಮಾಯೇತಿ ತತಃ ಪೃಷ್ಠೇ ಶಿರೋಧಿಪಶ್ಚಿಮೇ ತಥಾ ॥ ೬೩ ॥

ನೀಲಕಂಠಾಯ ಶಿರಸಿ ಕ್ಷಿಪೇತ್ಸರ್ವಾತ್ಮನೇ ನಮಃ ।
ಪ್ರಕ್ಷಾಳ್ಯಾಥ ತತೋ ಹಸ್ತೌ ಕರ್ಮಾನುಷ್ಠಾನಮಾಚರೇತ್ ॥ ೬೪ ॥

---

೬೦. ಆಮೇಲೆ ಆಚಮನಮಾಡಿ ಬಿಳಿ ಮಡಿಬಟ್ಟೆಗಳನ್ನುಟ್ಟುಕೊಳ್ಳಬೇಕು. ಮತ್ತೆ ಆಚಮನ ಮಾಡಿ ತನ್ನ ಕರ್ಮಗಳನ್ನು ಮಾಡಿಕೊಳ್ಳಬೇಕು.

೬೧. ಆಮೇಲೆ ಭಸ್ಮವನ್ನು ತೆಗೆದುಕೊಂಡು ಪ್ರಣವದಿಂದ ಕಲಸಿ ತ್ರಿಣೇತ್ರನೂ ಸತ್ವರಜಸ್ತಮೋಗುಣಗಳಿಗೆ ಆಧಾರನೂ, ಬ್ರಹ್ಮ, ವಿಷ್ಣು, ಶಿವರಿಗೆ ಜನಕನೂ ಆದ ಸ್ವಾಮಿಯನ್ನು ಸ್ಮರಿಸಬೇಕು. ಅನಂತರ ನಮಶ್ಶಿವಾಯ ಎಂದು ಹೇಳಿ ಹಣೆಯಲ್ಲಿ ಮೂರು ಪಟ್ಟೆಗಳುಳ್ಳ ತ್ರಿಪುಂಡ್ರವನ್ನು ಧರಿಸಿಕೊಳ್ಳಬೇಕು.

೬೨—೬೪. ನಮಶ್ಶಿವಾಭ್ಯಾಂ ಎಂದು ಹೇಳಿ ಬಾಹುಗಳಿಗೆ ತ್ರಿಪುಂಡ್ರವನ್ನು ಹಚ್ಚಬೇಕು. ಅಘೋರಾಯ ಎಂಬ ಮಂತ್ರದಿಂದ ಮೊಳಕೈಗೆ ಹಚ್ಚಬೇಕು. ನಮೋ ಭೀಮಾಯ ಎಂಬ ಮಂತ್ರದಿಂದ ಪೃಷ್ಠಭಾಗಕ್ಕೂ ತಲೆಯ ಹಿಂದುಗಡೆಗೂ ಹಚ್ಚಿ ಕೊಳ್ಳಬೇಕು. ನಮೋ ನೀಲಕಂಠಾಯ ಎಂಬುದರಿಂದ ತಲೆಗೆ ಹಚ್ಚಿಕೊಂಡು ಸರ್ವಾತ್ಮನೇನಮಃ ಎಂಬುದರಿಂದ ಕೈಗಳನ್ನು ತೊಳೆದುಕೊಳ್ಳಬೇಕು. ಅನಂತರ ಕರ್ಮಾನುಷ್ಠಾನಮಾಡಬೇಕು.

॥ ಶಿವ ಉವಾಚ ॥

ಯೂಯಮೇವಂ ಪ್ರಕಾರೇಣ ಭಸ್ಮ ಕೃತ್ವಾ ಪ್ರಘೃಷ್ಯ ಚ ।
ಗುಣಾನ್ಧಾರಯಿತುಂ ಶಕ್ತಾಸ್ತತಃ ಸ್ರಕ್ಷ್ಯಥ ವೈ ಪ್ರಜಾಃ ॥ ೬೫ ॥

॥ ಶಂಭುರುವಾಚ ॥

ಇತ್ಥಂ ಶಿವೋದಿತಾ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।
ತಥಾ ಕೃತ್ವಾ ಚ ವಿಧಿನಾಽಹಮಹಮಿಕಯಾ ತದಾ ॥ ೬೬ ॥

ಅನ್ಯೋನ್ಯಬೋಧಸಾಪಕ್ತಾಃ ಪ್ರಣಮ್ಯ ಶಿವಮೂಚಿರೇ ।
ಕಂ ಗುಣಂ ಧಾರಯೇತ್ಕೋ ವಾ ಶಿವಃ ಪ್ರಾಹ ಸುತಾನಥ ॥ ೬೭ ॥

ಕರ್ಮಶಕ್ತಿಂ ತಥಾ ಜ್ಞಾನಂ ಮುಖರೇಣ್ವೈವ ನಶ್ಯತಿ ।
ಅಲ್ಪಾಯುರ್ದೃಶ್ಯತೇ ಬ್ರಹ್ಮಾ ಮನುಭಿಶ್ಚಾಸ್ಯ ಜೀವಿತಂ ॥ ೬೮ ॥

---

೬೫. ಶಿವನು ಹೇಳಿದನು :—ನೀವು ಈರೀತಿ ಭಸ್ಮವನ್ನು ಮಾಡಿ ಬಳಿದುಕೊಂಡು, ಆಮೇಲೆ ಈ ಗುಣಗಳನ್ನು ಧರಿಸಲು ಸಮರ್ಥರಾಗುತ್ತೀರಿ. ಆಮೇಲೆ ಪ್ರಜೆಗಳನ್ನು ಸೃಷ್ಟಿಮಾಡಿರಿ.

೬೬. ಶಂಭುವು ಹೇಳಿದನು :—ಬ್ರಹ್ಮವಿಷ್ಣುಮಹೇಶ್ವರರು ಶಿವನು ಹೇಳಿದುದನ್ನು ಕೇಳಿ, ನಾನು ತಾನೆಂದು ಭಸ್ಮವನ್ನು ಮಾಡಿ ವಿಧಿವತ್ತಾಗಿ ಲೇಪಿಸಿಕೊಂಡರು. ಹೀಗೆ ಮಾಡಿಕೊಂಡ ಮೇಲೆ ಒಬ್ಬರಿಗೊಬ್ಬರು ತಿಳಿದುಕೊಳ್ಳುವುದರಲ್ಲಿ ಶಕ್ತರಾಗಿ ಶಿವನಿಗೆ ನಮಸ್ಕರಿಸಿ ಹೇಳಿದರು.

೬೭-೬೮. ಯಾವ ಗುಣವನ್ನು ಯಾರು ಧರಿಸಬೇಕು? ಎನ್ನಲು, ಶಿವನು ಅವರಿಗೆ ಇಂತೆಂದನು. ಕೆಲಸದಲ್ಲಿ ಶಕ್ತಿ ಜ್ಞಾನಗಳು ಮುಖರೇಣುಗಳಿಂದ ನಾಶವಾಗುತ್ತವೆ. ಈ ಬ್ರಹ್ಮನು ಅಲ್ಪಾಯಸ್ಸುಳ್ಳವನಾಗಿ ಕಾಣುತ್ತಾನೆ. ಮನುಗಳ ಸಂಖ್ಯೆಯಿರುವಷ್ಟು ಕಾಲ ಇವನ ಆಯಸ್ಸು.

ಯೋಽಹಂ ಬ್ರಹ್ಮಾಣ್ಡಮಾಲಾಭಿರ್ಭೂಷಿತೋ ಬ್ರಹ್ಮಗೋಪನಂ ।
ರಜೋಗುಣಮವಷ್ಟಭ್ಯ ನ ಚ ಜಾನಾಸಿ ಮಾಂ ತದಾ ॥ ೬೯ ॥

ಬ್ರಹ್ಮಾಧಿಕಬಲೋ ವಿಷ್ಣುರಾಯುಷಿ ಬ್ರಹ್ಮಣೋಽಧಿಕಃ ।
ಬ್ರಹ್ಮಾಂಡಮಾಲಾಭರಣೇ ಮಹೇಶಸ್ಯ ಮಮೈವ ತು ॥ ೭೦ ॥

ಚತುರ್ನಿಶ್ವಾಸಮಾತ್ರೇಣ ವಿಷ್ಣೋರಾಯುರುದಾಹೃತಂ ।
ಬ್ರಹ್ಮಣೋಽಧಿಕಸತ್ತ್ವತ್ವಾತ್ಸತ್ತ್ವಮಾಲಂಬತೇ ಹರಿಃ ॥ ೭೧ ॥

ಜಾನಾತಿ ಸರ್ವಕಾಲಂ ಮಾಂ ಕ್ವಚಿದೇವ ನ ವಿಸ್ಮರೇತ್ ।
ಸಾತ್ತ್ವಿಕ್ಯೈಕ್ಯೈವ ಪೂಜಾಸ್ಯ ರಾಜಸೀ ತಾಮಸೀ ನ ತು ॥ ೭೨ ॥

ಶಾನ್ತಂ ಶಿವಂ ಸತ್ತ್ವಗುಣಂ ರಜವತ್ತಾನುಮಾನತಃ ।
ತಮೋ ನೀಲಂ ತಥಾ ಚೈವ ಗುಣಂ ಶಂಭುಸ್ತಥಾಭಜತ್ ॥ ೭೩ ॥

---

೬೯. ಬ್ರಂಹ್ಮಾಂಡಮಾಲೆಯಿಂದ ಈ ಬ್ರಂಹ್ಮಾಂಡವನ್ನು ನಾನು ಕಾಪಾಡು ತ್ತಿದ್ದೇನೆ. ರಜೋಗುಣದಿಂದ ಕೂಡಿ ನೀನು ನನ್ನನ್ನು ಆಗ ತಿಳಿಯದೆ ಹೋಗುತ್ತೀಯೆ.

೭೦. ಬ್ರಹ್ಮನಿಗಿಂತಲೂ, ವಿಷ್ಣುವಿಗೆ ಬಲಹೆಚ್ಚು. ಆಯುಸ್ಸೂ ಹೆಚ್ಚಾಗಿದೆ ಬ್ರಹ್ಮಾಂಡಮಾಲೆಯನ್ನು ಧರಿಸುವುದರಲ್ಲಿ ಮಹೇಶನಾದ ನಾನೇ ಸಮರ್ಥನು.

೭೧. ನನ್ನ ನಾಲ್ಕು ನಿಶ್ವಾಸಗಳ ಕಾಲ ವಿಷ್ಣುವಿಗೆ ಆಯುಸ್ಸಿದೆ. ಬ್ರಹ್ಮನಿ ಗಿಂತಲೂ, ಅಧಿಕ ಸತ್ವವುಳ್ಳವನಾದುದರಿಂದ ವಿಷ್ಣುವು ಸತ್ತ್ವಗುಣವನ್ನು ಧರಿಸಲಿ.

೭೨. ಆ ವಿಷ್ಣುವು ಸದಾ ನನ್ನ ವಿಷಯವನ್ನು ಬಲ್ಲನು. ಮರೆಯುವುದೇ ಇಲ್ಲ. ಅವನಿಗೆ ಸಾತ್ವಿಕಪೂಜೆಯೊಂದೇ ಸಾಕು. ರಾಜಸ ತಾಮಸ ಪೂಜೆಗಳು ಬೇಡ.

೭೩. ಶಿವನು ಶಾನ್ತನೂ, ಸತ್ತ್ವಗುಣವುಳ್ಳವನೂ, ರಜೋಗುಣದ ಅನುಮಾನ ಬರುವಂತಿರುವವನೂ, ಆಗಿದ್ದಾನೆ. ಮತ್ತು ತಮಸ್ಸು ನೀಲಿಬಣ್ಣವು ಎಂಬಂತೆ ಎಂದರೆ ಕತ್ತಲೆಯು ಪದಾರ್ಥವಲ್ಲದಿದ್ದರೂ ಅದರಲ್ಲಿ ಕಪ್ಪುಬಣ್ಣವನ್ನು ಆರೋಪಿಸಿ ಹೇಳುವಂತೆ ತಮೋಗುಣವುಳ್ಳವನೆಂದು ಹೇಳಿಸಿಕೊಳ್ಳುವುದರಿಂದಲೂ. ಆ ತಮೋಗುಣವನ್ನು ಆ ಮಹೇಶರನೇ ಭಜಿಸಿದನು.

ಸತ್ತ್ವಂ ರಜಸ್ತಮಶ್ಚಾಪಿ ದಧಾರ ಚ ಪುರಾ ಕಿಲ ।
ಅತಶ್ಚ ತ್ರಿವಿಧಾ ಪೂಜಾ ಶಂಕರಸ್ಯ ವಿಧೀಯತೇ ॥ ೭೪ ॥

ರಜಶ್ಚ ತಮಸಾ ಯುಕ್ತಂ ದಾರುಣಂ ಪರಿಕೀರ್ತಿತಂ ।
ದಾರುಣಾಪಿ ತತಃ ಪೂಜಾ ಶಂಕರೇ ಗತಿದಾ ಮತಾ ॥ ೭೫ ॥

ರಜಶ್ಚ ತಮಸಾ ಯುಕ್ತಮಲಂ ಶಾಸ್ತ್ರಪ್ರವರ್ತಕಂ ।
ವಿಚ್ಛಿನ್ನಾಪಿ ತತಃ ಪೂಜಾ ಶಂಕರೇ ಫಲದಾ ಮತಾ ॥ ೭೬ ॥

ತಮಶ್ಚ ಸತ್ತ್ವಸಂಯುಕ್ತಂ ಮಿಶ್ರಕಂ ಚ ಪ್ರವರ್ತಕಂ ।
ಮಿಶ್ರಪೂಜಾ ವಿಫಲದಾ ಶಂಕರೇ ಲೋಕಶಂಕರೇ ॥ ೭೭ ॥

ಯಾದೃಶಂ ತಾದೃಶಂ ವಾಪಿ ನಿಯಮೇನಾರ್ಚನಂ ವಿಭೋಃ ।
ಶಂಕರಸ್ಯಾಶುಫಲದಂ ಯಾದೃಶಸ್ಯಾಪಿ ದೇಹಿನಃ ॥ ೭೮ ॥

---

೭೪. ಈ ಶಿವನು ಸತ್ತ್ವರಜಸ್ತಮೋಗುಣಗಳನ್ನು ಪೂರ್ವದಲ್ಲಿ ಧರಿಸಿರುವುದರಿಂದ ಈ ಶಿವನಿಗೆ ಮೂರು ವಿಧವಾದ ಪೂಜೆಯೂ ಇದೆ.

೭೫. ತಮೋಗುಣದಿಂದ ಕೂಡಿದ ರಜೋಗುಣವು ಕ್ರೂರವೆಂದು ತಿಳಿಯಬೇಕು. ಆದ್ದರಿಂದ ಶಂಕರನಲ್ಲಿ ಕ್ರೂರವಾದ ಪೂಜೆಯೂ ಗತಿಯನ್ನು ಕೊಡುತ್ತದೆ.

೭೬. ಹಾಗೆಯೇ ತಮೋಗುಣದಿಂದ ಕೂಡಿದ ಈ ವಿಧವಾದ ಪೂಜೆಯು ಶಾಸ್ತ್ರಪ್ರವರ್ತಿಯನ್ನುಂಟುಮಾಡುವುದು. ಪೂಜೆಯನ್ನು ಸರಿಯಾಗಿ ಮಾಡದಿದ್ದರೂ ಫಲವು ಸ್ವಲ್ಪಮಟ್ಟಿಗಾದರೂ ಆಗಿಯೇ ಆಗುವುದು.

೭೭. ಸತ್ವದಿಂದ ಕೂಡಿದ ತಮಸ್ಸು ಮಿಶ್ರಜ್ಞಾನಕೊಡುತ್ತದೆ. ಆ ಮಿಶ್ರಜ್ಞಾನದ ಪೂಜೆಯು ಶಂಕರನಲ್ಲಿ ಫಲಕೊಡುವುದಿಲ್ಲ.

೭೮. ಯಾವರೀತಿಯಾದ ಮನುಷ್ಯನೇ ಆಗಲಿ ಅಥವಾ ಪ್ರಾಣಿಯೇ ಆಗಲಿ ನಿಯಮದಿಂದ ಯಾವರೀತಿಯ ಪೂಜೆಯನ್ನು ಬೇಕಾದರೂ ಶಂಕರನಿಗೆ ಮಾಡಲಿ, ಅದು ಆ ಪ್ರಾಣಿಗೆ ಜಾಗ್ರತೆ ಫಲಕೊಡುತ್ತದೆ.

॥ ಶಂಭುರುವಾಚ ॥

**ಏತತ್ಸಂಕ್ಷೇಪತಃ ಪ್ರೋಕ್ತಂ ವಿಧಾನಂ ಭಸ್ಮನೋಽನಘ ।**
**ವಕ್ತೃಶ್ರೋತೃಜನಾನಾಂ ಚ ಸಮಸ್ತಾಘವಿನಾಶನಂ ॥ ೭೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ ಭಸ್ಮೋತ್ಪತ್ತಿವಿಧಾನಂ ನಾಮ ಚತುರಧಿಕಶತತಮೋಽಧ್ಯಾಯಃ**



---

೭೯. ಶಂಭುವು ಹೇಳಿದನು :—ಈ ಭಸ್ಮದ ವಿಧಾನವನ್ನು ಸಂಕ್ಷೇಪದಿಂದ ಹೇಳಿದ್ದೇನೆ. ಇದನ್ನು ಹೇಳುವವರು ಕೇಳುವವರು ಇವರಿಗೆ ಎಲ್ಲಾ ಪಾಪವನ್ನೂ ನಾಶಮಾಡುತ್ತದೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ಭಸ್ಮೋತ್ಪತ್ತಿವಿಧಾನವೆಂಬ ನೂರನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಪಂಚಾಧಿಕಶತತಮೋಽಧ್ಯಾಯಃ

॥ ಶಂಭುರುವಾಚ ॥

ಅತ್ರ ತೇ ಕೀರ್ತಯಿಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಶ್ರುತ್ವಾ ಯಾಮಾಪ ಧರ್ಮಾತ್ಮಾ ಶಿವಭಕ್ತಿಮನುತ್ತಮಾಂ ॥ ೧ ॥

ಇಕ್ಷ್ವಾಕುರ್ನಾಮ ವಿಪ್ರೇಂದ್ರೋ ಮಹಾವಿದ್ಯೋ ಮಹಾಮತಿಃ ।
ಬಹುಶಾಸ್ತ್ರಪ್ರವೀಣಶ್ಚ ನೀತಿಶಾಸ್ತ್ರವಿಶಾರದಃ ॥ ೨ ॥

ನ ಯಷ್ಟಾ ನ ಚ ದಾತಾ ಚ ನ ದೇವಾನಾಂ ಚ ಪೂಜಕಃ ।
ನ ಚಾಧ್ಯಾಪಯಿತಾ ವೇದಂ ನ ಚಾಖ್ಯಾತಾ ಶ್ರುತಸ್ಯ ಚ ॥ ೩ ॥

---

## ನೂರ ಐದನೆಯ ಅಧ್ಯಾಯವು

೧. ಶಂಭುವು ಹೇಳಿದನು :—ಪಾಪವನ್ನು ನಾಶಮಾಡುವ ಇದನ್ನು ಕೇಳುವುದರಿಂದ ಉತ್ತಮವಾದ ಶಿವಭಕ್ತಿಯನ್ನು ಹೊಂದುವ ಒಂದು ಇತಿಹಾಸವನ್ನು ಹೇಳುತ್ತೇನೆ. ಕೇಳು.

೨. ಮಹಾವಿದ್ಯೆಗಳನ್ನು ಕಲಿತು ಮಹಾಬುದ್ಧಿಯುಳ್ಳ, ಅನೇಕ ಶಾಸ್ತ್ರಗಳಲ್ಲಿ ಪ್ರವೀಣನಾದ, ನೀತಿಶಾಸ್ತ್ರದಲ್ಲಿ ನಿಪುಣನಾದ ಇಕ್ಷ್ವಾಕುವೆಂಬ ಬ್ರಾಹ್ಮಣನಿದ್ದನು.

೩. ಯಾಗ, ದಾನ, ದೇವರಪೂಜೆ, ಅಧ್ಯಯನಗಳೊಂದನ್ನೂ ಮಾಡುತ್ತಿರಲಿಲ್ಲ. ವೇದವನ್ನು ಯಾರಿಗೂ ಹೇಳಿಕೊಡುತ್ತಿರಲಿಲ್ಲ. ತಿಳಿದಿದ್ದುದನ್ನು ಮತ್ತಾರಿಗೂ ಹೇಳುತ್ತಲೂ ಇರಲಿಲ್ಲ.

ನ ಪುರಾಣೇತಿಹಾಸಾನಾಂ ಶ್ರುತೀನಾಮಾಗಮಸ್ಯ ವಾ ।
ಯತ್ನಾದ್ಭೋಕ್ತಾ ತಥಾ ದೇಹಸಂಸ್ಕಾರೈಕಪ್ರವರ್ತಕಃ ॥ ೪ ॥

ತಾದೃಶಸ್ಯ ದ್ವಿಜಸ್ಯಾಥ ಸಮಾ ಲಕ್ಷಾಯುರತ್ಯಗಾತ್ ।
ಲಕ್ಷಾನ್ತರೇ ತಥೈಕಸ್ಮಿನ್ವತ್ಸರೇ ಮಾಸಿ ಪಂಚಮೇ ॥ ೫ ॥

ತೃತೀಯದಿವಸೇ ರಾತ್ರ್ಯಾಂ ಪುರಾಣಂ ಶ್ರುತವಾನಿದಂ ।
ಸ್ವಸಂಪಾದಿತವಿತ್ತಸ್ಯ ಯೇನ ದಾನಂ ನ ವೈ ಕೃತಂ ॥ ೬ ॥

ದಿನೇ ದಿನೇ ಭುಜ್ಯಮಾನಂ ನಿಸ್ಸಾರಂ ಸ್ಯಾತ್ಕ್ರಮೇಣ ಹಿ ।
ವರ್ಷಾಣ್ಯೇವ ಚ ತಾವಂತಿ ನರಕೇ ಪಚ್ಯತೇ ಧ್ರುವಂ ॥ ೭ ॥

ಕೃಮಿಯೋನಿಸಹಸ್ರಂ ಚ ಹ್ಯನುಭೂಯ ತತಃ ಪರಂ ।
ದರಿದ್ರೋ ವ್ಯಾಧಿತೋಽಬಂಧುರ್ದುಷ್ಟಭಾರ್ಯೋ ಬಹುಪ್ರಜಃ ॥ ೮ ॥

---

೪. ಪುರಾಣ, ಇತಿಹಾಸ, ಶಾಸ್ತ್ರವೇದಗಳೊಂದನ್ನೂ ಹೇಳುತ್ತಿರಲೇ ಇಲ್ಲ. ಪ್ರಯತ್ನಪಟ್ಟು ಎಲ್ಲಾದರೂ ಊಟಮಾಡುತ್ತಿದ್ದನು. ದೇಹಸಂಸ್ಕಾರವನ್ನು ಚೆನ್ನಾಗಿ ಮಾಡಿಕೊಳ್ಳುತ್ತಿದ್ದನು.

೫. ಈರೀತಿಯಿರುವ ಬ್ರಾಹ್ಮಣನಿಗೆ ಲಕ್ಷ ವರ್ಷಗಳು ಕಳೆದುವು. ಇಷ್ಟರೊಳಗೆ ಒಂದು ವರ್ಷದಲ್ಲಿ ಐದನೆಯಲ್ಲಿ ತಿಂಗಳಿನ ತೃತೀಯೆಯ ದಿನ ರಾತ್ರಿಯಲ್ಲಿ ಈ ಪುರಾಣವನ್ನು ಕೇಳಿದನು.

೬-೭. ತಾನು ಸಂಪಾದಿಸಿದ ಹಣವನ್ನು ಯಾವನು ದಾನಮಾಡುವುದಿಲ್ಲವೋ ಅವನ ಹಣವು ತಿನ್ನುತ್ತಿದ್ದಂತೆ ದಿನದಿನಕ್ಕೂ ಕ್ರಮವಾಗಿ ಸಾರವಿಲ್ಲದ್ದಾಗಿ ಆಗುತ್ತದೆ. ಮತ್ತು ತಾನು ಅನುಭವಿಸಿದ್ದಷ್ಟು ದಿನವೂ ನರಕದಲ್ಲಿ ಬೀಳುತ್ತಾನೆ.

೮. ಕ್ರಿಮಿಯಾಗಿ ಸಾವಿರ ಜನ್ಮಗಳನ್ನು ಕಳೆದು ಅನಂತರ ದರಿದ್ರನೂ, ರೋಗಿಯೂ, ಬಂಧುಗಳಿಲ್ಲದವನೂ, ಕೆಟ್ಟಹೆಂಡತಿಯುಳ್ಳವನೂ, ಬಹು ಮಕ್ಕಳುಳ್ಳವನೂ, ಆಗಿ ಹುಟ್ಟುತ್ತಾನೆ.

ದಿನೇ ದಿನೇ ಭಕ್ಷಿತೇನ ಯಾಚಿತೇನ ಚ ಜೀವನಂ ।
ಯನ್ನ ಕ್ವಾಪಿ ಚ ಬೀಜಾನಾಂ ಮಗ್ನಾನಾಮಥ ಮಾರ್ಗಣಾತ್ ॥ ೯ ॥

ಲಬ್ಧೇ ಜೀನಾಚನಂ ಕರ್ಮ ಭೃತ್ಯಾನಾಮಥ ಜೀವನಂ ।
ಮಧ್ಯೇ ಶ್ರೋತ್ರವಿಹೀನಶ್ಚ ನೇತ್ರಹೀನಃ ಸ್ಖಲನ್ಮಲಃ ॥ ೧೦ ॥

ಏವಂ ಪುರಾಣಂ ಶ್ರುತ್ವಾ ಸಾವಿಕ್ವಾಕ್ವಭ್ಯರ್ಕಶದುಃಖಿತಃ ।
ಮನಸಾ ಚಿಂತಯಚ್ಚೇದಂ ಸ್ಮಾರಂ ಸ್ಮಾರಂ ದ್ವಿಜಾಧಮಃ ॥ ೧೧ ॥

ರೂಪಪುಷ್ಪೈರ್ನಾರ್ಹಿಷ್ಮಯೀ ದುರ್ಗಾಪಿ ಫಲವರ್ಜಿತಾ ।
ತಥಾ ಪುರಾಣರಹಿತಾ ವಿದ್ಯಾ ನೋ ಗತಿದರ್ಶಿನೀ ॥ ೧೨ ॥

ಬಹುಶಾಸ್ತ್ರಂ ಸಮಭ್ಯಸ್ಯ ಬಹೂನ್ವೇದಾನ್ಸವಿಸ್ತರಾನ್ ।
ಪುಂಸೋಽಶ್ರುತಪುರಾಣಸ್ಯ ನ ಸಮ್ಯಗ್ಗತಿದರ್ಶನಂ ॥ ೧೩ ॥

---

೯. ದಿನದಿನವೂ ಭಿಕ್ಷದಿಂದ ಅಥವಾ ಯಾಚನೆಯಿಂದ ಜೀವಿಸುತ್ತಾನೆ. ಎಲ್ಲಾದರೂ ಕೂಡ ಬಿದ್ದಿರುವ ಬೀಜಗಳನ್ನು ಹುಡುಕುವುದೇ ಇಲ್ಲ. ಎಂದರೆ ಉಂಛವೃತ್ತಿಯಿಂದ ಅಯಾಚಿತಜೀವನವಿಲ್ಲವೆಂದರ್ಥ.

೧೦. ಸಿಕ್ಕಿದರೆ ಕಾರ್ಪಣ್ಯದಿಂದ ಜೀವಿಸುವುದು. ಇಲ್ಲದಿದ್ದರೆ ಕೂಲಿಮಾಡಿ ಜೀವನಮಾಡುವುದು. ಇದರ ಮಧ್ಯದಲ್ಲಿ ಕಣ್ಣು, ಕಿವಿಗಳು ಹೋಗಿ ಅವುಗಳಲ್ಲಿ ಕೊಳೆತು ಹರಿಯುವುದು.

೧೧. ಇಕ್ಷ್ವಾಕುವು ಈರೀತಿಯಾದ ಪುರಾಣವನ್ನು ಕೇಳಿ ನಾನು ಅಯೋಗ್ಯನು ಎಂದು ಪದೇಪದೇ ಜ್ಞಾಪಿಸಿಕೊಳ್ಳುತ್ತಾ ಮನಸ್ಸಿನಲ್ಲಿ ಹೀಗೆ ಯೋಚಿಸಿದನು.

೧೨. ರೂಪು ಹೂವುಗಳಿಂದ ಅರ್ಚಿಸಿದರೂ, ಎಮ್ಮೆಯ ಸಗಣಿಯಿಂದ ಮಾಡಿದ ದುರ್ಗೆಯು ಫಲವನ್ನು ಕೊಡದಿರುವಂತೆ ಪುರಾಣವನ್ನು ತಿಳಿಯದ ವಿದ್ಯೆಯು ಫಲವನ್ನು ಕೊಡುವುದಿಲ್ಲ.

೧೩. ಅನೇಕ ಶಾಸ್ತ್ರಗಳನ್ನೂ, ವೇದಗಳನ್ನೂ, ಓದಿದರೂ ಮನುಷ್ಯನು ಪುರಾಣವನ್ನು ಕೇಳದಿದ್ದರೆ ಸದ್ಗತಿಯುಂಟಾಗುವುದಿಲ್ಲ.

॥ ಶಂಭುರುವಾಚ ॥

ಏವಂ ಚಿಂತಯತಸ್ತಸ್ಯ ಹ್ಯಕಾಲಮರಣಂ ತ್ವಭೂತ್ ।
ಯಮಲೋಕಂ ಗತಶ್ಚಾಯಂ ಯಮೇನ ಪರಿಭಾಷಿತಃ ॥ ೧೪ ॥

॥ ಯಮ ಉವಾಚ ॥

ಅನೇಕಪಾಪಯುಕ್ತೋಽಸಿ ಪುಣ್ಯಂ ನೈವ ಮಹತ್ತ್ವವ ।
ನ ವೇದಾಧ್ಯಯನಾತ್ಪ್ರಾಪ್ತಂ ಪಾಪಂ ಚ ವಿದಿತಂ ತವ ॥ ೧೫ ॥

ಕೋಟಿವರ್ಷಾಣಿ ನರಕೇ ತವ ಸ್ಥಿತಿರಿತಿ ದ್ವಿಜ ।
ಆಯುರಸ್ತಿ ತವಾತ್ಯಲ್ಪಂ ಗಮ್ಯತಾಂ ಪೌರ್ವಿಕೀ ತನುಃ ॥ ೧೬ ॥

ಕುರು ಪುಣ್ಯಂ ಹಿತಂ ದಾನಂ ದೇವತಾಪೂಜನಂ ಜಪಂ ।
ಸಾಂಗಮಧ್ಯಾಪನಂ ವಿಪ್ರಭೋಜನಂ ಭಸ್ಮಧಾರಣಂ ॥ ೧೭ ॥

---

೧೪. ಶಂಭುವು ಹೇಳಿದನು :—ಹೀಗೆ ಯೋಚಿಸುತ್ತಿರಲು ಅಕಾಲಮರಣವು ಆತನಿಗೆ ಸಂಭವಿಸಿತು. ಇವನು ಯಮಲೋಕಕ್ಕೆ ಹೋಗಲು ಯಮನೊಡನೆ ಇಂತೆಂದು ಮಾತನಾಡಿದನು.

೧೫. ಯಮನು ಹೇಳಿದನು :—ನೀನು ಅನೇಕ ಪಾಪದಿಂದ ಕೂಡಿದ್ದೀಯೆ. ಹೆಚ್ಚು ಪುಣ್ಯವನ್ನು ಮಾಡಿಲ್ಲ. ವೇದಾಧ್ಯಯನದಿಂದ ಬಂದ ಪಾಪವು ನಿನಗೆ ತಿಳಿಯದು.

೧೬. ಎಲೈ ಬ್ರಾಹ್ಮಣನೇ, ನೀನು ಕೋಟಿ ವರ್ಷಗಳವರೆಗೆ ನರಕಪಡ್ಚಿರಬೇಕು. ಆದರೂ ನಿನಗೆ ಇನ್ನೂ ಸ್ವಲ್ಪ ಆಯುಸ್ಸಿರುವುದರಿಂದ ಹಿಂದಿನ ದೇಹವನ್ನು ಸೇರಿಕೋ.

೧೭. ಪುಣ್ಯವನ್ನೂ, ಇಷ್ಟವಾದ ದಾನವನ್ನೂ ಮಾಡು. ದೇವರಪೂಜೆ, ಜಪಗಳನ್ನೂ ಸಾಂಗವಾಗಿ ವೇದವನ್ನು ಹೇಳಿಕೊಂಡು ಬ್ರಾಹ್ಮಣ ಭೋಜನ ಮಾಡಿಸು. ಭಸ್ಮ ಧಾರಣಮಾಡಿಕೋ.

ಭಜ ವಿಶ್ವೇಶ್ವರಂ ದೇವಂ ದೇವದೇವಮುಮಾಪತೀ ।
ತಸ್ಯ ಪ್ರಯತ್ನಮಾತ್ರೇಣ ಮಮ ಲೋಕಂ ನ ಗಚ್ಛಸಿ ॥ ೧೮ ॥

ಯತ್ಕಿಂಚಿತ್ಪ್ರತ್ಯಹಂ ಪಾಪಿನ್ಪುರಾಣಂ ಶೃಣು ಸಾದರಂ ।
ತತಸ್ತಚ್ಛ್ರವಣಾದೇವ ನೇಕ್ಷಸೇ ಮಮ ಯಾತನಾಃ ॥ ೧೯ ॥

ಯಮಸ್ಯ ವಚನಂ ಶ್ರುತ್ವಾ ಬ್ರಾಹ್ಮಣಃ ಸ್ವಾಂ ಯಯೌ ತನುಂ ।
ಅಥೇಶಪೂಜನಕೃತೇ ಯತ್ನಮಾಸ್ಥಾಯ ಸ ದ್ವಿಜಃ ॥ ೨೦ ॥

ಆಗಮನ್ಮುನಿವರ್ಯಂ ತು ಜಾಬಾಲಿಂ ಶಿವಪೂಜಕಂ ।
ತಪಸ್ಸ್ವಾಧ್ಯಾಯಸಂಪನ್ನಂ ಶ್ರುತಿಸ್ಮೃತಿವಿವೇಚಕಂ ॥ ೨೧ ॥

ಪುರಾಣತತ್ತ್ವವೇತ್ತಾರಂ ಲಕ್ಷಶಿಷ್ಯಸಮಾವೃತಂ ।
ಜರಾಶಿಥಿಲಸರ್ವಾಂಗಂ ವೇದವೇದಾಂಗಪಾರಗಂ ॥ ೨೨ ॥

---

೧೮. ದೇವದೇವನಾದ ವಿಶ್ವೇಶ್ವರನನ್ನು ಸೇವಿಸು. ಅವನ ಪ್ರಯತ್ನದಿಂದ ನೀನು ಯಮಲೋಕಕ್ಕೆ ಬರುವುದಿಲ್ಲ.

೧೯. ಪ್ರತಿದಿನವೂ ಯಾವುದಾದರೂ ಸ್ವಲ್ಪ ಪುರಾಣವನ್ನೂ ಭಕ್ತಿಯಿಂದ ಕೇಳು. ಅದನ್ನು ಕೇಳುವುದರಿಂದಲೇ ನನ್ನ ಲೋಕದ ಯಾತನೆಗಳನ್ನು ನೋಡುವುದೂ ಇಲ್ಲ.

೨೦. ಯಮನ ಮಾತನ್ನು ಕೇಳಿ ಆ ಬ್ರಾಹ್ಮಣನು ತನ್ನ ದೇಹವನ್ನು ಮತ್ತೆ ಹೊಂದಿದನು. ಆಮೇಲೆ ಈಶ್ವರನ ಪೂಜೆಮಾಡಲು ಆತನು ಪ್ರಯತ್ನಪಟ್ಟು ಶಿವಪೂಜಕನಾದ ಜಾಬಾಲಿಋಷಿಯ ಬಳಿಗೆ ಹೋದನು.

೨೧-೨೨. ತಪಸ್ಸು ವೇದಾಧ್ಯಯನಗಳಿಂದ ಕೂಡಿದ ಲಕ್ಷ ಶಿಷ್ಯರಿಂದ ಸೇವಿತನಾದ, ಪುರಾಣದ ತತ್ತ್ವವನ್ನು ಬಲ್ಲ, ಶ್ರುತಿಸ್ಮೃತಿಗಳನ್ನು ವಿವೇಚಿಸುವ, ಮುಪ್ಪಿನಿಂದ ಸಡಿಲವಾದ ದೇಹವುಳ್ಳ, ವೇದವೇದಾಂಗಗಳಲ್ಲಿ ಪಾರಗನಾದ ಆ ಋಷಿಯನ್ನು ನೋಡಲು ಮಂದರಪರ್ವತಕ್ಕೆ ಹೋದನು.

ದ್ರಷ್ಟುಕಾಮೋ ಯಯೌ ಶೈಲಂ ಮಂದರಂ ಚಾರುಕಂದರಂ ।
ನಾನಾವಿಹಂಗಸಂಪೂರ್ಣಂ ನಾನಾಪುಷ್ಪಲತಾವೃತಂ ॥ ೨೩ ॥

ಸರ್ವರ್ತುಕಕುಸುಮೋಪೇತಂ ನಾನಾಗಂಧೋಪಸೇವಿತಂ ।
ಕಿನ್ನರಾಣಾಂ ಚ ಮಿಥುನೈರ್ಗೀತಪೂರ್ಣಮಹಾಗುಹಂ ॥ ೨೪ ॥

ಅನೇಕರೂಪಲಾವಣ್ಯವನಿತೋಷಿತಪಾದಪಂ ।
ಲಂಬಮಾನವಿಚಿತ್ರಾಭಿಃ ಸ್ರಗ್ಭಿಃ ಶೋಭಿತಪಾದಪಂ ॥ ೨೫ ॥

ರತಿಶ್ರಮಪ್ರಸುಪ್ತಾನಾಂ ಬೋಧನಾದಿತಷಟ್ಪದಂ ।
ಕೂಜಂತಿ ಚ ಪಿಕಾಃ ಕಾಮಂ ವಿಯುಕ್ತಾನಾಂ ಯುಜೇ ಕಿಲ ॥ ೨೬ ॥

ನಾನಾಮುನಿಗಣಾಕೀರ್ಣಂ ಪ್ರಶಾಂತಮೃಗಚಾರಿಣಂ ।
ಅಪ್ಸರೋಗಣಸಂಕೀರ್ಣಂ ಗಂಧರ್ವಗಣಸೇವಿತಂ ॥ ೨೭ ॥

---

೨೩—೨೫. ಅನೇಕ ಪಕ್ಷಿಗಳುಳ್ಳ, ಹೂಗಳಿಂದಲೂ, ಲತೆಗಳಿಂದಲೂ, ಪೂರ್ಣವಾದ, ಎಲ್ಲ ಋತುಗಳ ಹೂಗಳೂ ಇರುವ, ಬಗೆಬಗೆಯಾದ ಸುಗಂಧವುಳ್ಳ, ಕಿನ್ನರ ಯುಗ್ಮವು ಗಾನಮಾಡುತ್ತಿರುವ ಧ್ವನಿಯಿಂದ ಕೂಡಿದ ಗುಹೆಗಳುಳ್ಳ, ಅನೇಕರಾದ ರೂಪಲಾವಣ್ಯವತಿಯರಾದ ಯುವತಿಯರು ನೆರಳಿನಲ್ಲಿ ಕುಳಿತಿರುವ ಮರಗಳುಳ್ಳ, ಜೋಲುತ್ತಿರುವ ಹೂಗೊಂಚಲಿನಿಂದ ಕೂಡಿರುವ ಮರಗಳುಳ್ಳ, ಆ ಮಂದರಪರ್ವತಕ್ಕೆ ಹೋದನು.

೨೬. ರತಿಶ್ರಮದಿಂದ ಮಲಗಿರುವವರನ್ನು ಎಬ್ಬಿಸುವಂತೆ ಧ್ವನಿಮಾಡುತ್ತಿರುವ ದುಂಬಿಗಳುಳ್ಳ ಆ ಮಂದರಪರ್ವತವನ್ನು ಹೊಂದಿದನು. ಅಲ್ಲಿ ವಿಯೋಗಹೊಂದಿರುವ ಮಿಥುನಗಳನ್ನು ಕುರಿತು ಕೋಗಿಲೆಗಳು ಕೂಗುತ್ತಿರುತ್ತವೆ.

೨೭. ಅನೇಕ ಮುನಿಗಳ ಗುಂಪಿನಿಂದ ಕೂಡಿದ, ಶಾಂತವಾದ ಮೃಗಗಳು ಓಡಾಡುತ್ತಿರುವ, ಅಪ್ಸರಸ್ತ್ರೀಯರಿಂದ ಕೂಡಿರುವ, ಗಂಧರ್ವರ ಗುಂಪುಳ್ಳ, ಮಂದರವನ್ನು ಹೊಂದಿದನು.

ನಾನಾಸಿದ್ಧಮುಖೋದ್ಭೂತಗೀತಪೂರ್ಣವನಾಂತರಂ ।
ವಿಚಿತ್ರಫಲಸಂಪೂರ್ಣಂ ನಾನಾದೇವಾಲಯಾನ್ವಿತಂ ॥ ೨೮ ॥

ಪ್ರಾಸಾದಶತಸಂಬಾಧಂ ನಾನಾಗೃಹಸಮನ್ವಿತಂ ।
ಸಿಂಹಾಸನೈರ್ಗಜಮುಖೈರುಲೂಕವದನೈರಥ ।
ಅಮುಖೈರ್ವಿಮುಖೈರುಗ್ರೈರರ್ಧವಕ್ತ್ರೈರ್ಮೃಗೀಮುಖೈಃ ॥ ೨೯ ॥

ರುರುಜಂಬುಕಗೋಧಾಹಿವಾನರರ್ಕ್ಷಮುಖೈರಪಿ ।
ವ್ಯಾಘ್ರವೃಶ್ಚಿಕಭಲ್ಲೂಷ್ಟ್ರಶ್ವಾನಗರ್ದಭತುಂಡ್ರಕೈಃ ॥ ೩೦ ॥

ಸಮಸ್ತಜೀವವದನೈಃ ಸದೃಶಾಸ್ಯೈರ್ಗಣೇಶ್ವರೈಃ ।
ವಲ್ಲೀಮುಖೈರ್ವೃಕ್ಷಮುಖೈಃ ಶಿಲಾವಕ್ತ್ರೈರಯೋಮುಖೈಃ ॥ ೩೧ ॥

---

೨೮. ಸಿದ್ಧರ ಮುಖಗಳಿಂದ ಹೊರಡುವ ಗೀತದಿಂದ ಕೂಡಿದ ಕಾಡುಳ್ಳ, ನಾನಾಬಗೆಯ ಫಲಗಳಿಂದ ಪೂರ್ಣವಾದ, ಅನೇಕ ದೇವಾಲಯಗಳಿಂದ ಕೂಡಿದ ಮಂದರವನ್ನು ಹೊಂದಿದನು.

೨೯. ಅನೇಕವಾದ ಮಹಡಿಯ ಮನೆಗಳುಳ್ಳ, ಸಾಧಾರಣ ಮನೆಗಳು ಅನೇಕವಿರುವ ಸಿಂಹ, ಆನೆ, ಗೂಬೆ ಇವುಗಳ ಮುಖದಂತೆ ಮುಖವುಳ್ಳ, ಮೃಗಗಳಿಂದ ಕೂಡಿದ ಮುಖವಿರುವ, ಮುಖವಿಲ್ಲದ, ಹೆದರಿಕೆಯನ್ನುಂಟುಮಾಡುವ ಅರ್ಧಮುಖವುಳ್ಳ, ಜಿಂಕೆಯ ಮುಖವುಳ್ಳ ಪ್ರಾಣಿಗಳಿರುವ ಮಂದರವನ್ನು ಸೇರಿದನು.

೩೦. ಜಿಂಕೆ, ನರಿ, ಓತಿ, ಸರ್ಪ, ಕಪಿ, ಕರಡಿ, ಹುಲಿ, ಚೇಳು, ಒಂಟೆ, ನಾಯಿ, ಕತ್ತೆ, ಹಂದಿ ಮುಂತಾದವುಗಳಿಂದ ಆ ಮಂದರವು ಕೂಡಿದೆ.

೩೧. ಅಲ್ಲಿರುವ ಗಣೇಶ್ವರರು ಸಮಸ್ತ ಪ್ರಾಣಿಗಳ ಮುಖದಂತೆ ಮುಖವುಳ್ಳವರಾಗಿದ್ದಾರೆ. ಮತ್ತೂ ಲತೆ, ಮರ, ಕಲ್ಲು, ಕಬ್ಬಿಣ ಇವುಗಳಂತಿರುವ ಮುಖಗಳುಳ್ಳ ಪ್ರಾಣಿಗಳಿಂದ ಕೂಡಿದೆ. ಶಂಖ, ಮುತ್ತು, ಕಮಲದಂತೆ ಮುಖವುಳ್ಳ ಪ್ರಾಣಿಗಳಿಂದ ಕೂಡಿದೆ.

ಶಂಖಮುಕ್ತಾದಿಜಲಜವದನೈರುಪಶೋಭಿತಂ ।
ಅಧಿಕಾಂಗೈರನಂಗೈಶ್ಚ ಜಟಿಲೈಶ್ಶಿಖಿಮುಂಡಿತೈಃ ॥ ೩೨ ॥

ಪಕ್ಷಿವಕ್ತ್ರೈರ್ವಿಷವಕ್ತ್ರೈಸ್ತಿಮಿಗ್ರಾಹಮುಖೈರಪಿ ।
ಘಟಾಸ್ಯೈಶ್ಶೂರ್ಪವದನೈಃ ಕರ್ಣಪಾದಮುಖೈರಪಿ ॥ ೩೩ ॥

ಘಂಟಾಮುಖೈರ್ವೇಣುಮುಖೈಃ ಕಿಂಕಿಣೀವದನೈರಪಿ ।
ಯಾದೃಗ್ವಸ್ತು ಜಗತ್ಯಸ್ಮಿನ್ತಾದೃಶಾಸ್ಯೈರಥೋಮುಖೈಃ ॥ ೩೪ ॥

ಕೈಶ್ಚಿನ್ನಿಭೃತಕಂದರ್ಪರೂಪಲಾವಣ್ಯಕೋಮಲೈಃ ।
ಕೋಟಿಸೂರ್ಯಪ್ರತೀಕಾಶೈಶ್ಚಂದ್ರಕೋಟಿಸಮಪ್ರಭೈಃ ॥ ೩೫ ॥

ನಾನಾವರ್ಣೈರ್ವಿಶ್ವಮುಖೈರ್ವಿಶ್ವರೂಪೈಶ್ಚತುರ್ಮುಖೈಃ ।
ದ್ವಿಮುಖೈಃ ಪಂಚವಕ್ತ್ರೈಶ್ಚ ತ್ರಿಮುಖೈಃ ಷಣ್ಮುಖೈರಪಿ ॥ ೩೬ ॥

---

೩೨—೩೪. ಹೆಚ್ಚು ಅವಯವ, ಕಡಿಮೆ ಅವಯವಗಳುಳ್ಳವುಗಳಿಂದಲೂ, ಜಟೆಯುಳ್ಳವರು, ಜುಟ್ಟುಳ್ಳವರು, ಬೋಳರುಗಳಿಂದಲೂ, ಹದ್ದಿನಕೊಕ್ಕಿನಂತೆ ಮುಖವುಳ್ಳವರಿಂದಲೂ, ವಿಷಮುಖವುಳ್ಳವರಿಂದಲೂ, ಮೀನುಮುಖ, ಮೊಸಳೆಮುಖವುಳ್ಳವರಿಂದಲೂ, ಮಡಿಕೆಯಂತೆ ಮುಖ, ಮೊರದ ಮುಖದಂತೆ ಮುಖ, ಕಿವಿಯಲ್ಲಿ ಮುಖ, ಕಾಲಿನಲ್ಲಿ ಮುಖ, ಇವರಿಂದಲೂ ಕೂಡಿದೆ. ಘಂಟೆಯಂತೆ ಮುಖ, ಬಿದಿರಿನಂತೆ ಮುಖ, ಗೆಜ್ಜೆಯಂತೆ ಮುಖವುಳ್ಳವರಿಂದಲೂ, ಕೂಡಿದೆ. ಪ್ರಪಂಚದಲ್ಲಿ ಎಂತಹ ವಸ್ತುಗಳಿವೆಯೋ, ಅಂತಹ ಮುಖವುಳ್ಳವರಿಂದ ಮಂದರವು ಕೂಡಿದೆ.

೩೫-೩೬. ಮನ್ಮಥನಂತೆ ರೂಪವುಳ್ಳ, ಕೋಮಲರಾದ ಕೆಲವರಿಂದಲೂ, ಸೂರ್ಯರ ಕೋಟಿಗಳಷ್ಟು ಪ್ರಕಾಶವುಳ್ಳವರಿಂದಲೂ, ಚಂದ್ರರ ಕೋಟಿಗಳಷ್ಟು ಕಾಂತಿಯುಳ್ಳವರಿಂದಲೂ, ನಾನಾ ಬಣ್ಣವುಳ್ಳ ಎಲ್ಲಾ ಕಡೆಗೂ ಮುಖವುಳ್ಳವರಿಂದಲೂ, ಅನೇಕ ರೂಪವುಳ್ಳ, ನಾಲ್ಕು ಮುಖದವರಿಂದಲೂ, ಎರಡು ಮುಖವುಳ್ಳವರಿಂದಲೂ, ಐದು ಮುಖವುಳ್ಳವರಿಂದಲೂ, ಮೂರು ಮುಖ, ಆರು ಮುಖಗಳುಳ್ಳವರಿಂದಲೂ, ಆ ಪರ್ವತವು ಕೂಡಿದೆ.

ಏಕಾನೇಕಮುಖೈಶ್ಶಾಸ್ತೈಸ್ಸರ್ವದಾ ಸುಖಿಭಿರ್ವೃತಂ ।
ನಾನಾಭೋಗಸಮೃದ್ಧೈಶ್ಚ ರತಿಕಾಮಸಮೈರಪಿ ॥ ೩೭ ॥

ಲಕ್ಷ್ಮೀನಾರಾಯಣಪ್ರಖ್ಯೈರುಮೇಶಸಮವಿಗ್ರಹೈಃ ।
ನಾನಾರೂಪಧರೈಶ್ಚಾನ್ಯೈಃ ಸೇವಿತಂ ಮಂದರಾಚಲಂ ॥ ೩೮ ॥

ಧೇನವೋ ಯತ್ರ ವೇದಾಶ್ಚ ಮೀಮಾಂಸಾವತ್ಸಸಂಯುತಾಃ ।
ಧರ್ಮಾದಯಃ ಸವಷ್ಕರ್ಮಾಣಃ ಪುರಾಣಾನಿ ಚ ಕರ್ಮಣಾ ॥ ೩೯ ॥

ಸ್ಮೃತೀತಿಹಾಸಜಾತಾನಿ ಆಗಮಾಶ್ಚ ಶರೀರಿಣಃ ।
ಸ್ಥಿತಾಶ್ಚ ಮಂದರೇ ಯತ್ರ ಸ ಶೈಲಃ ಪಾಪನಾಶನಃ ॥ ೪೦ ॥

ತಸ್ಯ ಮಧ್ಯೇ ಮಹಾಪುಣ್ಯಂ ಪುರಂ ಪರಮಶೋಭಿತಂ ।
ವಾಪೀತಟಾಕೋಪವನಪ್ರಾಸಾದಶತಶೋಭಿತಂ ॥ ೪೧ ॥

---

೩೭-೩೮. ಏಕಮುಖರು, ಅನೇಕ ಮುಖರು, ಶಾಸ್ತ್ರರು, ಯಾವಾಗಲೂ ಸುಖಿಗಳಾದವರಿಂದಲೂ, ಬಗೆಬಗೆಯ ಭೋಗಗಳಿಂದ ಕೂಡಿರುವವರಿಂದಲೂ, ರತಿಕಾಮರಿಗೆ ಸಮಾನವಾಗಿರುವವರಿಂದಲೂ, ಲಕ್ಷ್ಮೀನಾರಾಯಣರಂತಿರುವವರಿಂದಲೂ, ಪಾರ್ವತೀಪರಮೇಶ್ವರರಂತಿರುವವರಿಂದಲೂ, ನಾನಾಬಗೆಯ ರೂಪವನ್ನು ಹೊಂದಿರುವ ಇತರರಿಂದಲೂ, ಸೇವಿಸಲ್ಪಡುತ್ತಿರುವ ಮಂದರಪರ್ವತವನ್ನು ಹೊಂದಿದನು.

೩೯-೪೦. ಅಲ್ಲಿರತಕ್ಕ ವೇದಗಳೇ ಹಸುಗಳು. ಮೀಮಾಂಸಗಳೇ ಅವುಗಳ ಕರುಗಳು. ಧರ್ಮಾದಿಗಳೇ ಕವಚಗಳು. ಪುರಾಣಗಳೇ ಕರ್ಮಗಳು. ಸ್ಮೃತಿ ಇತಿಹಾಸಗಳೂ, ಆಗಮಗಳೂ ಶರೀರಗಳು. ಹೀಗೆ ಮಂದರಪರ್ವತದಲ್ಲಿವೆ. ಅಂತಹ ಮಂದರವು ಪಾಪನಾಶಕವು.

೪೧-೪೨. ಆ ಮಂದರಪರ್ವತದ ಕಾಡಿನ ಮಧ್ಯದಲ್ಲಿ ಉತ್ತಮವಾದ ಒಂದೂರಿದ್ದಿತು. ಅಲ್ಲಿ ಅನೇಕ ಮಹಡಿಯ ಮನೆಗಳಿದ್ದುವು. ಸುತ್ತಲೂ ಏಳು ಸುತ್ತಿರುವ ಕೋಟೆಯೂ, ಕೋಟೆಯ ಸುತ್ತಲೂ ಅಗಳುಗಳೂ (ಕಂದುಕಗಳೂ) ಇದ್ದುವು.

ಸಪ್ತಪ್ರಾಕಾರಪರಿಖಂ ರತ್ನಾಟ್ಟಾಲಕಸಂಯುತಂ ।
ಗೋಪುರೈರ್ನವಭಿರ್ಯುಕ್ತಂ ವಿಚಿತ್ರಗೃಹಸಂಯುತಂ ॥ ೪೨ ॥

ಯಸ್ಯ ಚಾಪ್ರತಿಮಂ ತೇಜ ಉಷ್ಣಶೀತಾದಿವರ್ಜಿತಂ ।
ತನ್ಮಧ್ಯೇ ನಗರೀ ಪುಣ್ಯಾ ತನ್ಮಧ್ಯೇ ಚ ಸಭಾ ಶುಭಾ ॥ ೪೩ ॥

ತಸ್ಯಾಂ ಭದ್ರಾಸನಂ ಮಧ್ಯೇ ವೇದಪಾದಂ ವಿಚಿತ್ರಿತಂ ।
ಸರ್ವೋಪನಿಷದಾ ಕ್ಲೃಪ್ತಂ ಪಾದಪೀಠಂ ಸುಶೋಭನಂ ॥ ೪೪ ॥

ಪುರಾಣಾನ್ಯಾಗಮಾಸ್ತಸ್ಯ ಸ್ವಸ್ತೀತಿ ಶಿವಪಾದಯೋಃ ।
ತತ್ರಾಸೀನೋ ಮಹಾಯೋಗೀ ಗೋಕ್ಷೀರಸದೃಶಾಕೃತಿಃ ॥ ೪೫ ॥

ಮಂದಸ್ಮಿತಸುಚಾರ್ವಾಸ್ಯೋ ಷೋಡಶವರ್ಷವಯಾಃ ಪ್ರಭುಃ ।
ದಧಾರ ಉರಸಾ ಮಾಲಾಂ ಮಣಿರುದ್ರಾಕ್ಷಕಲ್ಪಿತಾಂ ॥ ೪೬ ॥

---

ಆ ಕೋಟೆಯ ಮೇಲೆ ರತ್ನದಿಂದ ಮಾಡಿದ ಕುರುಜುಗಳಿದ್ದುವು. ಒಂಭತ್ತು ಗೋಪುರಗಳಿದ್ದುವು. ಅಲ್ಲದೆ ಒಳಗೆ ಬಗೆಬಗೆಯ ಮನೆಗಳೂ ಇದ್ದುವು.

೪೩. ಆ ಕೋಟೆಯ ತೇಜಸ್ಸು ಶೀತಶಿಖೆಗಳನ್ನುಂಟುಮಾಡದೆ ಅಸದೃಶ ವಾಗಿದ್ದಿತು. ಆ ಕೋಟೆಯೊಳಗೆ ಉತ್ತಮವಾದ ಊರಿರುವುದು. ಅದರ ಮಧ್ಯದಲ್ಲಿ ಒಂದು ಮನೆಯುಂಟು. ಅದರೊಳಗೆ ಒಂದು ಸಭೆಯಿರುವುದು.

೪೪. ಅದರ ಮಧ್ಯದಲ್ಲಿ ಒಂದು ಭದ್ರಾಸನವಿರುವುದು. ಅದಕ್ಕೆ ನಾಲ್ಕು ವೇದಗಳೇ ಕಾಲಾಗಿದ್ದುವು. ಉಪನಿಷತ್ತುಗಳಿಂದ ಮಾಡಿದ ಪಾದಪೀಠವು ಅದಕ್ಕಿ ರುವುದು.

೪೫. ಪುರಾಣಗಳೂ, ಆಗಮಗಳೂ, ಆ ಪಾದದ ಬುಡದಲ್ಲಿ ಸ್ವಸ್ತಿಸ್ವಸ್ತಿ ಎಂದೆನ್ನುತ್ತಿದ್ದುವು. ಆ ಪೀಠದ ಮೇಲೆ ಒಬ್ಬ ಬೆಳ್ಳಗಿರುವ ಯೋಗಿಯು ಕುಳಿತಿ ರುವನು.

೪೬-೪೭. ಅವನು ಮುಗುಳುನಗೆಯುಳ್ಳ ಮನೋಹರವಾದ ಮುಖವುಳ್ಳ ವನು. ಹದಿನಾರು ವರ್ಷ ವಯಸ್ಸುಳ್ಳವನು. ರುದ್ರಾಕ್ಷಿಯ ಮಾಲೆಯನ್ನು ಕತ್ತಿ ನಲ್ಲಿ ಹಾಕಿಕೊಂಡಿದ್ದಾನೆ. ಉತ್ತಮವಾದ ಜನಿವಾರವನ್ನೂ ಹಾಕಿಕೊಂಡಿದ್ದಾನೆ.

ಬಿಭ್ರಾಣ ಉಪವೀತಂ ಚ ಕರ್ಣಿಕಾರಸಮದ್ಯುತಿಃ ।
ಸುರತ್ನಕುಂಡಲೋ ದೇವಃ ಕಿರೀಟೀ ಕನಕಾಂಬರಃ ॥ ೪೭ ॥

ನಾನಾಭೂಷಣಸಂಯುಕ್ತೋ ನಾನಾಗಂಧವಿಲೇಪನಃ ।
ವಾಮಾಂಕಾರೂಢಗಿರಿಜೋ ವೀಕ್ಷಮಾಣಸ್ತದಾನನಂ ॥ ೪೮ ॥

ಮುಗ್ಧಾಂ ಸಮ್ರುಮುಖೀಂ ಬಾಲಾಂ ನವಯೌವನಶೋಭಿತಾಂ ।
ಭೂಷಿತಾಂ ಚಾರುಸರ್ವಾಂಗೀಂ ಬಿಭ್ರತೀಂ ಕನಕಾಂಬುಜಂ ॥ ೪೯ ॥

ಆಲಿಂಗ್ಯ ವಾಮೇನ ಕರೇಣ ದೇವೀಂ
ದಕ್ಷೇಣ ತಸ್ಯಾ ಮುಖಮುನ್ನಮಯ್ಯ ।
ಸ್ಪೃಷ್ಟ್ವಾ ಶಿರೋ ವಾಮಕರೇಣ ತಸ್ಯಾ
ದಕ್ಷೇಣ ಕುರ್ವಂಸ್ತಿಲಕಂ ಚ ದೇವಃ ॥ ೫೦ ॥

ಭಕ್ತಿರ್ವೀಜಯತೇ ದೇವಂ ಪ್ರಣವವ್ಯಜನೇನ ಚ ।
ಪೂಜಾ ಕಾಂತಾಪಿ ಕುಸುಮೈರ್ಮಾಲಾ ದೇವಾಯ ಬಿಭ್ರತೀ ॥ ೫೧ ॥

---

ಒಳ್ಳೆಯ ರತ್ನಗಳಿಂದ ಕೂಡಿರುವ ಕಿರೀಟವನ್ನೂ ಹಾಕಿಕೊಂಡಿದ್ದಾನೆ. ರತ್ನದ ಕರ್ಣಾಭರಣಗಳನ್ನೂ ಹಾಕಿಕೊಂಡಿರುವನು. ಉತ್ತಮವಾದ ಬಟ್ಟೆಯನ್ನು ಹಾಕಿಕೊಂಡಿದ್ದಾನೆ. ಅನೇಕ ಒಡವೆಗಳನ್ನು ತೊಟ್ಟು ನಾನಾಬಗೆಯಾದ ಸುವಾಸನಾ ದ್ರವ್ಯಗಳನ್ನು ತೊಡೆದುಕೊಂಡಿದ್ದಾನೆ.

೪೮-೪೯. ಎಡಗಡೆಯ ತೊಡೆಯ ಮೇಲೆ ಪಾರ್ವತಿಯು ಕುಳಿತಿದ್ದಾಳೆ. ಆಕೆಯ ಮುಖವನ್ನು ಆ ಯೋಗಿಯು ನೋಡುತ್ತಿದ್ದಾನೆ. ಆಕೆಯು ಸುಂದರಿಯಾಗಿದ್ದಾಳೆ. ಮುಖವನ್ನು ತಗ್ಗಿಸಿಕೊಂಡಿದ್ದಾಳೆ. ಹೊಸ ಯೌವನವು ಶೋಭಿಸುತ್ತಿದೆ. ಎಲ್ಲ ಒಡವೆಗಳನ್ನೂ ಹಾಕಿಕೊಂಡಿದ್ದಾಳೆ. ಅವಯವಗಳೆಲ್ಲವೂ ಮನೋಹರವಾಗಿವೆ. ಕೈಯಲ್ಲಿ ಚಿನ್ನದ ಕಮಲವನ್ನು ಹಿಡಿದಿದ್ದಾಳೆ.

೫೦. ಆ ಸ್ವಾಮಿಯು ಎಡಗೈಯಿಂದ ಆಕೆಯನ್ನು ಆಲಿಗಿಂಸಿಕೊಂಡು ಬಲಗೈಯಿಂದ ಮುಖವನ್ನು ಮೇಲಕ್ಕೆತ್ತಿದ್ದಾನೆ. ಎಡಗೈಯಿಂದ ತಲೆಯನ್ನು ಹಿಡಿದುಕೊಂಡು ಬಲಗೆಯಿಂದ ತಿಲಕವನ್ನಿಡುತ್ತಿದ್ದಾನೆ.

೫೧. ಭಕ್ತಿ ಎಂಬುವಳು ಪ್ರಣವವೆಂಬ ಬೀಸಣಿಗೆಯಿಂದ ಬೀಸುತ್ತಿರುವಳು. ಪೂಜೆಯೆಂಬ ಹೆಂಗಸು ಹೂವಿನ ಮಾಲೆಯನ್ನು ದೇವರಿಗೋಸ್ಕರ ಹಿಡಿದಿದ್ದಾಳೆ.

ಜ್ಞಪ್ತಿರ್ವಿರಕ್ತಿರ್ವನಿತೇ ಬಿಭ್ರತ್ಯೌ ಯೋಗಚಾಮರೇ ।
ಸಮಾಧಿಃ ಕಾರ್ಯಕರ್ತಾಸ್ಯ ಧಾರಣಾಯೋಷಿದಸ್ಯ ಚ ॥ ೫೨ ॥

ಯಮಾಶ್ಚ ನಿಯಮಾಶ್ಚೈವ ಕಿಂಕರಾಸ್ತಸ್ಯ ಕೀರ್ತಿತಾಃ ॥
ಪ್ರಾಣಾಯಾಮಃ ಪುರೋಧಾಸ್ತು ಪ್ರತ್ಯಾಹಾರಸ್ಸುವರ್ಣಧೃತ್ ॥ ೫೩ ॥

ಧ್ಯಾನಂ ಚ ದ್ರವಿಣಾಧ್ಯಕ್ಷಃ ಸತ್ಯಂ ಸೇನಾಪತಿಸ್ತಥಾ ।
ಬ್ರಹ್ಮಪ್ರಭೃತೀಟಾನ್ತಾಃ ಪಶವಸ್ತತ್ಪತಿಃ ಶಿವಃ ॥ ೫೪ ॥

ಪಶೂನಾಂ ಪಾಲಕೋ ಧರ್ಮಃ ಸ್ಯಾದಧರ್ಮಶ್ಚ ತಸ್ಕರಃ ।
ಮಾಯಾಪಾಶೇನ ತೇ ಬದ್ಧಾ ಮೋಚನೀ ಕಾಶಿಕಾಮೃತಿಃ ॥ ೫೫ ॥

ನಾನಾವಿಧಾಶ್ಚ ಪ್ರಮದಾ ದೇವದೇವಮುಮಾಪತಿಂ ।
ಏತಾದೃಶಮುಮಾನಾಥಂ ಕೋಟಿಜಂತುರನುಸ್ಮರೇತ್ ॥ ೫೬ ॥

---

೫೨. ಜ್ಞಪ್ತಿ, ವಿರಕ್ತಿ ಎಂಬ ಹೆಂಗಸರು ಯೋಗವೆಂಬ ಚಾಮರವನ್ನು ಹಿಡಿದಿದ್ದಾರೆ. ಸಮಾಧಿಯು ಈ ಸ್ವಾಮಿಯ ಸಭೆಯ ನಿಯಮಪಾಲಕನು. ಧಾರಣೆ ಎಂಬುವಳೇ ಈತನ ಹೆಂಡತಿಯು.

೫೩. ಯಮಗಳೂ, ನಿಯಮಗಳೂ, ಅವನಿಗೆ ಆಳುಗಳು. ಪ್ರಾಣಾಯಾಮವು ಪುರೋಹಿತನು. ಪ್ರತ್ಯಾಹಾರವೇ ಒಡವೆಯನ್ನು ಹಿಡಿದಿರತಕ್ಕವನು.

೫೪. ಧ್ಯಾನವು ಕೋಶಾಧ್ಯಕ್ಷನು. ಸತ್ಯವು ಸೇನಾಪತಿಯು. ಬ್ರಹ್ಮನು ಮೊದಲುಗೊಂಡು ಕೀಟದವರೆಗೂ, ಇರತಕ್ಕವು ಪಶುಗಳು. ಅವಕ್ಕೆ ಪತಿಯು ಶಿವನು.

೫೫. ಪಶುಗಳನ್ನು ಕಾಪಾಡುವುದು ಧರ್ಮವು. ಅಧರ್ಮನು ಆ ಪಶುಗಳ ಕಳ್ಳನು. ಆ ಪಶುಗಳೆಲ್ಲವೂ ಮಾಯೆಯೆಂಬ ಹಗ್ಗದಿಂದ ಕಟ್ಟಲ್ಪಟ್ಟಿವೆ. ಅವುಗಳನ್ನು ಬಿಡಿಸುವುದು ಕಾಶಿಯ ಮರಣವು.

೫೬. ನಾನಾಬಗೆಯಾದ ಸ್ತ್ರೀಯರು ಆ ಉಮಾಪತಿಯನ್ನು ಸೇವಿಸುತ್ತಿದ್ದಾರೆ. ಈ ರೀತಿಯಾದ ಸ್ವಾಮಿಯನ್ನು ಎಲ್ಲಾ ಜಂತುಗಳೂ ಸ್ಮರಿಸಬೇಕು.

ಇಷ್ಟಾನ್ಭೋಗಾನವಾಪ್ಯಾಥ ಶಿವಲೋಕೇ ಮಹೀಯತೇ ।
ಬ್ರಹ್ಮವಿಷ್ಣುಮಹೇಂದ್ರಾದ್ಯಾಸ್ತತ್ಪುರದ್ವಾರಪಾಲಕಾಃ । ॥ ೫೭ ॥

ಲಕ್ಷ್ಮೀಸರಸ್ವತೀದೇವ್ಯೌ ದೇಹಲ್ಯರ್ಚನ ಉಕ್ಷಿತೌ ।
ನಿಯುಕ್ತೇ ದೇವದೇವಸ್ಯ ದೇವಾಶ್ಚ ಸುರಯೋಷಿತಃ ॥ ೫೮ ॥

ದಾಸ್ಯೋ ದೇವಾಸ್ಸಮಸ್ತಾಶ್ಚ ದಾಸಾ ಯಸ್ಯ ಮಹಾತ್ಮನಃ ।
ಏತಾದೃಶಂ ಮಹಾಶೈಲಮಿಕ್ಷ್ವಾಕುಸ್ಸಂದದರ್ಶ ಹ ॥ ೫೯ ॥

ಮುನಿಂ ಪ್ರಣಮ್ಯ ಜಾಬಾಲಿಮಿದಮಾಹ ವಚಸ್ತದಾ ।
ಗನ್ತುಕಾಮೋ ಮಹಾಶೈಲಂ ನ ಶಕ್ತೋಽಸ್ಮಿ ನ ವಾ ಮುನೇ ॥ ೬೦ ॥

ಮಮಾಯುರಲ್ಪಂ ಕಥಿತಂ ಯಮೇನ ಜ್ಞಾನಿನಾ ಪುರಾ ।
ನರಕಶ್ಚ ಬಹುಪ್ರೋಕ್ತಃ ಕಥಂ ಶ್ರೇಯೋ ಭವಿಷ್ಯತಿ ॥ ೬೧ ॥

॥ ಜಾಬಾಲಿರುವಾಚ ॥

ಮಯಾಪಿ ಸರ್ವಮೇತತ್ತೇ ಜ್ಞಾನಂ ದಿವ್ಯೇನ ಚಕ್ಷುಷಾ ।
ಆಯುರ್ದಶದಿನಂ ಬ್ರಹ್ಮನ್ವಿದ್ವಾನಪಿ ನ ಧರ್ಮಕೃತ್ ॥ ೬೨ ॥

---

೫೭. ಆರೀತಿ ಸ್ಮರಿಸಿದರೆ ಇಷ್ಟವಾದ ಭೋಗಗಳನ್ನು ಹೊಂದಿ ಶಿವಲೋಕದಲ್ಲಿ ಸುಖಿಸುತ್ತಾರೆ.

೫೮-೫೯. ಬ್ರಹ್ಮ, ವಿಷ್ಣು, ಮಹೇಂದ್ರರು ಅವನ ಪಟ್ಟಣದಲ್ಲಿ ಬಾಗಿಲು ಕಾಯುವವರು. ಲಕ್ಷ್ಮೀ, ಸರಸ್ವತಿಯರು ಅವನ ಮನೆಯ ಬಾಗಿಲನ್ನು ಸಾರಿಸುವವರು. ದೇವತಾಸ್ತ್ರೀಯರು ಅವನ ದಾಸಿಯರು. ದೇವತೆಗಳು ಆ ಮಹಾತ್ಮನಿಗೆ ದಾಸರು ಈ ರೀತಿಯಾದ ಮಹಾಪರ್ವತವನ್ನು ಇಕ್ಷ್ವಾಕುವು ನೋಡಿದನು.

೬೦-೬೧. ಅಲ್ಲಿದ್ದ ಜಾಬಾಲಿಋಷಿಯನ್ನು ಇಕ್ಷ್ವಾಕುವು ನಮಸ್ಕರಿಸಿ ಸ್ವಾಮಿ, ಈ ಮಹಾಶೈಲಕ್ಕೆ ಹೋಗಬೇಕೆಂದಿದ್ದೇನೆ ನನಗೆ ಶಕ್ತಿಯಿದೆಯೇ? ಇಲ್ಲವೇ? ಹಿಂದೆ ಯಮನು ನನಗೆ ಇನ್ನೂ ಸ್ವಲ್ಪ ಆಯುಸ್ಸಿದೆಯೆಂದೂ, ನರಕವು ಬಹು ಕ್ರೂರವಾದುದೆಂದೂ ಹೇಳಿದನು. ನನಗೆ ಕಲ್ಯಾಣವಾಗುವ ಬಗೆ ಹೇಗೆ? ಎಂದು ಕೇಳಿದನು.

೬೨. ಜಾಬಾಲಿಯು ಹೇಳಿದನು:—ಎಲೈ ಬ್ರಾಹ್ಮಣನೇ, ಜ್ಞಾನಚಕ್ಷುಸ್ಸಿನಿಂದ ನಿನ್ನ ವಿಷಯವೆಲ್ಲವನ್ನೂ ತಿಳಿದಿದ್ದೇನೆ. ನಿನಗೆ ಹತ್ತುದಿನ ಮಾತ್ರ ಆಯುಸ್ಸಿರುವುದು. ಇಷ್ಟರಲ್ಲಿ ಎಂತಹ ವಿದ್ವಾಂಸನೂ ಹೆಚ್ಚು ಧರ್ಮಮಾಡಲಾರನು.

ನ ತಪಸ್ತೇ ಹ್ಯನಭ್ಯಾಸಾನ್ನ ಚ ಯೋಗೋಽಲ್ಪಕಾಲತಃ ।
ನ ದಾನಂ ದ್ರವಿಣಾಭಾವಾದಸಮರ್ಥ್ಯಾತ್ತಥಾರ್ಚನಾ ॥ ೬೩ ॥

ನ ಯಜ್ಞೋ ನ ವ್ರತಂ ಪೂರ್ತಂ ನ ಚ ಪುಣ್ಯಮನಾಯುಷಃ ।
ನ ಚಾಧ್ಯಾಪನತೀರ್ಥಾದಿಸೇವಾ ಕಾಲವಿರೋಧತಃ ॥ ೬೪ ॥

ತಸ್ಮಾತ್ತ್ವತ್ಪಾಪನಾಶಾಯ ಪ್ರಾಯಶ್ಚಿತ್ತಂ ನ ವಿದ್ಯತೇ ।
ಗತಿಪ್ರದಂ ತಥಾ ಧರ್ಮಂ ಗಚ್ಛ ವಾ ತಿಷ್ಠ ವಾ ಮುನೇ ॥ ೬೫ ॥

॥ ಇಕ್ಷ್ವಾಕುರುವಾಚ ॥

ಯಾವಜ್ಜೀವಂ ಪ್ರತಿಜ್ಞಾಯ ಕ್ರಿಯತೇ ಯೋ ವೃಷೋ ದ್ವಿಜ ।
ತೇನ ಪಾಪಪರೀಹಾರೋ ಭವಿಷ್ಯತಿ ಸುನಿಶ್ಚಿತಂ ॥ ೬೬ ॥

ತದ್ಯೇನ ಧರ್ಮಚರ್ಯೇಣ ಮಮ ಪಾಪಂ ಪ್ರಣಶ್ಯತಿ ।
ಕೇನ ವಾ ಪುಣ್ಯಯೋಗೇನ ಸ್ವರ್ಗತಿಶ್ಚ ಭವಿಷ್ಯತಿ ॥ ೬೭ ॥

---

೬೩-೬೪. ನಿನಗೆ ಅಭ್ಯಾಸವಿಲ್ಲದುದರಿಂದ ತಪಸ್ಸಾಗಲಿ, ಆಯುಸ್ಸು ಸ್ವಲ್ಪವಾದುದರಿಂದ ಯೋಗವಾಗಲಿ, ದುಡ್ಡಿಲ್ಲದಿರುವುದರಿಂದ ದಾನವಾಗಲಿ, ಸಾಮರ್ಥ್ಯವಿಲ್ಲದುದರಿಂದ ಪೂಜೆಯಾಗಲಿ, ಮಾಡಲು ಸಾಧ್ಯವಾಗುವುದಿಲ್ಲ. ಯಜ್ಞ, ವ್ರತ, ಇಷ್ಟಿಗಳು, ಪುಣ್ಯಪ್ರದವಾದ ಇತರ ಕೆಲಸಗಳು ಆಯುಸ್ಸಿಲ್ಲದುದರಿಂದ ಸಾಧ್ಯವಿಲ್ಲ. ಕಾಲವು ಅಕಾಲವಾದುದರಿಂದ, ವೇದವನ್ನು ಹೇಳಿಕೊಡುವುದಾಗಲಿ ತೀರ್ಥಸೇವೆಯಾಗಲಿ ಸಾಧ್ಯವಿಲ್ಲ.

೬೫. ಆದ್ದರಿಂದ ಆ ನಿನ್ನ ಪಾಪಗಳಿಗೆ ಪ್ರಾಯಶ್ಚಿತ್ತಗಳೇ ಇಲ್ಲ. ಸದ್ಗತಿಯನ್ನು ಕೊಡತಕ್ಕುದು ಧರ್ಮವು. ಬೇಕಾದರೆ ಹೋಗು. ಇಲ್ಲದಿದ್ದರೆ ಬಿಡು.

೬೬. ಇಕ್ಷ್ವಾಕುವು ಹೇಳಿದನು :—ಜೀವವಿರುವವರೆಗೂ ಮಾಡುತ್ತೇನೆಂದು ಪ್ರತಿಜ್ಞೆಮಾಡಿ ಯಾವುದಾದರೂ ವ್ರತವನ್ನು ಹಿಡಿದು ಮಾಡುತ್ತಿದ್ದರೆ ಅದರಿಂದ ಪಾಪವು ನಾಶವಾಗಿಯೇ ಆಗುತ್ತದೆ.

೬೭. ಆದ್ದರಿಂದ ಯಾವ ಧರ್ಮವನ್ನು ಮಾಡಿದರೆ ನನ್ನ ಪಾಪವು ನಾಶವಾಗುತ್ತದೆ? ಯಾವ ಪುಣ್ಯದ ಸಂಬಂಧದಿಂದ ಸ್ವರ್ಗವು ಸಿಕ್ಕುತ್ತದೆ?

ಶರಣಂ ಭವ ವಿಪ್ರರ್ಷೇ ನರಕಾದಿತಿ ಬಿಭ್ಯತಃ ।
ಸರ್ವಧರ್ಮಫಲಂ ಪ್ರಾಹುಃ ಶರಣಾಗತಪಾಲನಂ ॥ ೬೮ ॥

॥ ಜಾಬಾಲಿರುವಾಚ ॥

ಸತ್ಯಂ ಸ್ವಲ್ಪೇನ ಕಾಲೇನ ನ ತಾದೃಗ್ಲಭ್ಯತೇ ವೃಷಃ ।
ಅಮೃತೇತ್ವನೃತೆ ಶಕ್ಯಂ ವಕ್ತುಂ ಸ್ವಪ್ನಾಂತರೇಷ್ವಪಿ ।
ರಹಸ್ಯಮೇಕಂ ಕಿಂಚಿತ್ತು ಯಸ್ಯ ಕಸ್ಯಾಪಿ ನೋಚ್ಯತೇ ॥ ೬೯ ॥

॥ ಇಕ್ಷ್ವಾಕುರುವಾಚ ॥

ಶರಣಂ ಪಾಲಯ ಮುನೇ ಕಾಲೋ ಮೇ ನಿರ್ಗಮಿಷ್ಯತಿ ॥ ೭೦ ॥

॥ ಜಾಬಾಲಿರುವಾಚ ॥

ಮಮ ಪ್ರಾಣಾಧಿಕಂ ವಿಪ್ರ ರಹಸ್ಯಂ ಶ್ರುತಿಚೋದಿತಂ ।
ಶಿವಲಿಂಗಾರ್ಚನಂ ನಾಮ ಬ್ರಹ್ಮಾದಿಭಿರನುಷ್ಠಿತಂ ॥ ೭೧ ॥

---

೬೮. ಎಲೈ ಋಷಿಯೇ, ನರಕದಿಂದ ಹೆದರಿರುವ ನನ್ನನ್ನು ಕಾಪಾಡು. ಶರಣಾಗತರನ್ನು ಕಾಪಾಡಿದರೆ ಸರ್ವಧರ್ಮಗಳ ಫಲವೂ ಉಂಟೆಂದು ಹೇಳುತ್ತಾರೆ.

೬೯. ಜಾಬಾಲಿಯು ಹೇಳಿದನು :—ನಿಶ್ಚಯವಾಗಿಯೂ ಅಂತಹ ಮಹತ್ತರವಾದ ಪುಣ್ಯವು ಲಭಿಸುವುದಿಲ್ಲ. ಸಾವಿಲ್ಲದಿದ್ದಲ್ಲಿ ಸುಳ್ಳನ್ನು ಹೇಗಾದರೂ ಹೇಳಬಹುದಾಗಿದ್ದಿತು. ಆದರೆ ಒಂದು ರಹಸ್ಯವುಂಟು. ಅದನ್ನು ಯಾರಿಗೂ ಹೇಳುವುದಿಲ್ಲ.

೭೦. ಇಕ್ಷ್ವಾಕುವು ಹೇಳಿದನು :—ಎಲೈ ಋಷಿಯೇ, ಮರೆಹೊಕ್ಕವರನ್ನು ಕಾಪಾಡು. ನನಗೆ ಕಾಲವು ಕಳೆದುಹೋಗುತ್ತಿದೆ.

೭೧. ಜಾಬಾಲಿಯು ಹೇಳಿದನು :—ಅದು ನನ್ನ ಪ್ರಾಣಗಳಿಗಿಂತಲೂ ಹೆಚ್ಚಾದುದು. ಶ್ರುತಿಗಳಿಂದಲೇ ಹೇಳಲ್ಪಟ್ಟಿದೆ. ಅದೇ ಶಿವಾರ್ಚನೆಯು. ಅದನ್ನು ಬ್ರಹ್ಮಾದಿಗಳೂ ಮಾಡಿದ್ದಾರೆ.

ಸಮಸ್ತಪಾಪಶಮನಂ ಸರ್ವೋಪದ್ರವನಾಶನಂ ।
ಭುಕ್ತಿಮುಕ್ತಿಪ್ರದಂ ತಸ್ಮಾಚ್ಛಿವಪೂಜಾಂ ಸಮಾಚರ ॥ ೭೨ ॥

ನಾತಿಕ್ರಮೇದ್ಯದಿ ಮುನೇ ಶಿವಲಿಂಗಾರ್ಚನಂ ಶುಭಂ ।
ಯಃ ಶಂಭುಪೂಜಾಂ ವಿಚ್ಛಿನ್ದ್ಯಾತ್ತೇನ ಛಿನ್ನಂ ಹಿ ಮೇ ಶಿರಃ ॥ ೭೩ ॥

ವರಂ ಶೂಲವಿನಿಕ್ಷೇಪೋ ವರಂ ಶಾಲ್ಮಲಿಕರ್ಷಣಂ ।
ವರಂ ಪ್ರಾಣಪರಿತ್ಯಾಗೋ ನೈವ ಪೂಜಾವ್ಯತಿಕ್ರಮಃ ॥ ೭೪ ॥

ವರಂ ವಹ್ನಿಪ್ರತಪನಂ ವರಂ ಚಾಧಶ್ಶಿರಃ ಕೃತಂ ।
ವರಂ ಸ್ವಮಲಭುಕ್ತಿರ್ವಾ ನೇಶಪೂಜಾವ್ಯತಿಕ್ರಮಃ ॥ ೭೫ ॥

ಅಪೂಜಯಿತ್ವಾ ಚೇಶಾನಂ ಯೋ ಹಿ ಭುಂಕ್ತೇ ನರಾಧಮಃ ।
ಪಾಪಾನಾಮನ್ನರೂಪಾಣಾಂ ತಸ್ಯ ಭೋಜನಮುಚ್ಯತೇ ॥ ೭೬ ॥

---

೭೨. ಸಮಸ್ತ ಪಾಪಗಳನ್ನು ನಾಶಮಾಡುತ್ತದೆ. ಸಮಸ್ತ ತೊಂದರೆಗಳನ್ನು ನಾಶಮಾಡುತ್ತದೆ. ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುತ್ತದೆ. ಆದ್ದರಿಂದ ಆ ಶಿವನ ಪೂಜೆಯನ್ನು ಮಾಡು.

೭೩. ಶಿವಲಿಂಗಾರ್ಚನವನ್ನು ನಿಯಮದಿಂದ ಮಾಡು. ಅದು ನಿಯಮದಿಂದ ಅತಿಕ್ರಮಿಸಕೂಡದು. ಯಾವನು ಶಿವಪೂಜೆಯನ್ನು ಉಪಕ್ರಮಿಸಿ ಮಧ್ಯದಲ್ಲಿ ಬಿಟ್ಟುಬಿಡುವನೋ ಅವನು ತನ್ನ ತಲೆಯನ್ನು ಕತ್ತರಿಸಿದಂತಾಗುತ್ತದೆ.

೭೪. ಶೂಲಕ್ಕೇರಿಸಿದರೂ ಬಾಧಕವಿಲ್ಲ. ದುಷ್ಟಮೃಗಗಳನ್ನು ಹಿಡಿವೆಳೆಯಬಹುದು. ಪ್ರಾಣವನ್ನಾದರೂ ಬಿಡಬಹುದು. ಆದರೆ ಶಿವಪೂಜೆಯನ್ನು ಮೀರಬಾರದು. ಮಧ್ಯೆ ಭಂಗತಂದುಕೊಳ್ಳಬಾರದು.

೭೫. ಬೆಂಕಿಯಲ್ಲಿ ಸುಟ್ಟುಹೋಗುವುದು ಒಳ್ಳೆಯದು. ತಲೆಕೆಳಗಾಗಿ ನಿಂತಿರಬಹುದು. ತನ್ನ ಮಲವನ್ನು ತಾನು ತಿನ್ನಬಹುದು. ಅವಾವರೂ ಒಳ್ಳೆಯದು. ಈಶ್ವರನ ಪೂಜೆಯನ್ನು ಮಾತ್ರ ಮೀರಬಾರದು.

೭೬. ಈಶ್ವರ ಪೂಜೆಯನ್ನು ಮಾಡದೆ ಊಟಮಾಡಿದರೆ ಅವನು ಮಾಡುವ ಊಟದ ಅನ್ನವು ಪಾಪವೆಂದು ಹೇಳಲ್ಪಟ್ಟಿದೆ. ಶಂಭು ಸ್ಮರಣೆಯನ್ನು ಮಾಡದೆ ಅನ್ನವನ್ನು ತಿಂದರೆ ಅದೂ ಪಾಪವೆಂದೇ ತಿಳಿಯಬೇಕು.

ಅನುಚ್ಚಾರ್ಯ ಪದಂ ಶಂಭೋರ್ಭುಂಕ್ತೇ ಯದಿ ಚ ಖಾದತಿ ।
ಶಿವೇತಿ ಮಂಗಳಂ ನಾಮ ಯಸ್ಯ ವಾಚಿ ಪ್ರವರ್ತತೇ ॥ ೭೭ ॥

ಭಸ್ಮೀಭವಂತಿ ತಸ್ಯಾಶು ಮಹಾಪಾತಕಕೋಟಯಃ ।
ಶಿವಂ ಪ್ರದಕ್ಷಿಣೀಕೃತ್ಯ ಯೋ ನಮಸ್ಯತಿ ಮಾನವಃ ॥ ೭೮ ॥

ಭೂಮೇಃ ಪ್ರದಕ್ಷಿಣಂ ಕೃತ್ವಾ ಯತ್ತತ್ಪುಣ್ಯಮವಾಪ್ನುಯಾತ್ ।
ಪ್ರದಕ್ಷಿಣತ್ರಯಂ ಕೃತ್ವಾ ನಮಸ್ಕಾರಂ ಚ ಪಂಚಧಾ ॥ ೭೯ ॥

ಪುನಃ ಪ್ರದಕ್ಷಿಣಂ ಕೃತ್ವಾ ನತ್ವಾ ಮುಚ್ಯೇತ ಪಾತಕೈಃ ।
ಸರ್ವವಾದ್ಯಾನಿ ಯಃ ಕುರ್ಯಾತ್ಕಾರಯೇದ್ವಾ ಶಿವಾಲಯೇ ॥ ೮೦ ॥

ಬಲೇನ ಮಹತಾ ಯುಕ್ತೋ ವೇದಸೇವ್ಯತ್ರ ಜಾಯತೇ ।
ಶ್ರಾವಯೇದ್ಯಃ ಪುರಾಣಾನಿ ದೇವದೇವಂ ತ್ರಿಲೋಚನಂ ॥ ೮೧ ॥

---

೭೭. ಶಿವನೆಂಬ ಮಂಗಳವಾದ ಹೆಸರು ಯಾರ ಬಾಯಲ್ಲಿ ಹೊರಡುತ್ತದೆಯೋ ಅವನಿಗೆ ಕೋಟಿ ಪಾಪಗಳಿದ್ದರೂ ಭಸ್ಮವಾಗುತ್ತದೆ.

೭೮. ಶಿವನನ್ನು ಪ್ರದಕ್ಷಿಣೆ ಮಾಡಿದವನಿಗೆ ಭೂಮಿಯನ್ನು ಪ್ರದಕ್ಷಿಣೆ ಮಾಡಿದ ಪುಣ್ಯವು ಲಭಿಸುತ್ತದೆ.

೭೯. ಮೂರು ಪ್ರದಕ್ಷಿಣೆಗಳನ್ನು ಮಾಡಿ, ಐದುಬಾರಿ ನಮಸ್ಕರಿಸಿ, ಮತ್ತೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದರೆ ಪಾಪದಿಂದ ಪಾರಾಗುತ್ತಾನೆ.

೮೦. ಯಾವನು ಶಿವಾಲಯದಲ್ಲಿ ಸರ್ವವಾದ್ಯಗಳನ್ನು ಮಾಡುತ್ತಾನೋ ಅಥವಾ ಮಾಡಿಸುತ್ತಾನೋ ಆತನು ಬಲಿಷ್ಠನಾಗಿ ವೇದವನ್ನು ಸೇವಿಸುವವನಾಗಿ ಹುಟ್ಟುತ್ತಾನೆ.

೮೧-೮೩. ಯಾವನು ಸ್ವಾಮಿಯ ಮುಂದೆ ಪುರಾಣವನ್ನು ಹೇಳುತ್ತಾನೆಯೋ

ಸರ್ವಪಾಪವಿನಿರ್ಮುಕ್ತೋ ವಸೇಚ್ಛಿವವಶೇ ಕೃತೀ ।
ತಂ ನಿತ್ಯಮಾದರೇಣೇಶೋ ವಕ್ತಿ ವಾಕ್ಯಂ ಪ್ರಿಯಂ ಸದಾ　॥ ೮೨ ॥

॥ ಜಾಬಾಲಿರುವಾಚ ॥

ಏತತ್ಸಂಕ್ಷೇಪತಃ ಪ್ರೋಕ್ತಮೀಶಪೂಜನಮುತ್ತಮಂ ।
ಅಲ್ಪಾಯುಶ್ಚ ಭವಾನ್ವಿಪ್ರ ಶಿವಪೂಜನಮಾಚರ　॥ ೮೩ ॥

ತ್ರಿಕಾಲಂ ವಾ ದ್ವಿಕಾಲಂ ವಾ ಏಕಕಾಲಮಥಾಪಿ ವಾ ।
ಯಾಮಂ ಯಾಮಾರ್ಧಮಥವಾ ಶಿವಪೂಜನಮಾಚರ　॥ ೮೪ ॥

ವಾನಪ್ರಸ್ಥಾಶ್ರಮೋ ಭೂತ್ವಾ ವಾನಪ್ರಸ್ಥಕೃತಾಶ್ರಯಃ ।
ವಾನಪ್ರಸ್ಥಪ್ರಸೂತೈಶ್ಚ ಪ್ರಾತಃ ಪೂಜಯ ಶಂಕರಂ　॥ ೮೫ ॥

ಶ್ರೀಫಲೈಶ್ಶತಪತ್ರೈಶ್ಚ ಪದ್ಮಸೌಗಂಧಿಕೈರಪಿ ।
ನೀಪೈರ್ಜಪಾಭಿಃ ಪುನ್ನಾಗೈಃ ಕರವೀರೈಶ್ಚ ಪಾಟಲೈಃ　॥ ೮೬ ॥

---

ಅವನು ಸರ್ವಪಾಪಗಳನ್ನೂ ಕಳೆದುಕೊಂಡು ಶಿವಸಮೀಪದಲ್ಲಿ ವಾಸಮಾಡುತ್ತಾನೆ. ಅವನನ್ನು ಶಿವನು ನಿತ್ಯವೂ ಆದರದಿಂದ ಒಳ್ಳೆಯ ಮಾತನ್ನಾಡಿಸುತ್ತಾನೆ.

೮೩. ಜಾಬಾಲಿಯು ಹೇಳಿದನು :—ಈ ಶಿವಪೂಜೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ನೀನು ಅಲ್ಪಾಯಸ್ಸುಳ್ಳವನು. ಆದ್ದರಿಂದ ಶಿವಪೂಜೆಯನ್ನು ಮಾಡು.

೮೪. ಮೂರುಹೊತ್ತು, ಇಲ್ಲದಿದ್ದರೆ ಎರಡುಹೊತ್ತು, ಅದೂ ಇಲ್ಲದಿದ್ದರೆ ಒಪ್ಪತ್ತು, ಅದೂ ಆಗದಿದ್ದರೆ ಒಂದು ಜಾವ, ಇಲ್ಲವೆ ಜಾವದಲ್ಲಿ ಅರ್ಧಹೊತ್ತಾದರೂ ಶಿವಪೂಜೆಯನ್ನು ಮಾಡು.

೮೫. ವಾನಪ್ರಸ್ಥಾಶ್ರಮವನ್ನು ಹೊಂದಿ, ವಾನಪ್ರಸ್ಥರ ಆಶ್ರಯವನ್ನು ಹೊಂದಿ, ವನದಲ್ಲಿ ಹುಟ್ಟಿದ ಹೂಗಳಿಂದ ಪ್ರಾತಃಕಾಲದಲ್ಲಿ ಈಶ್ವರನನ್ನು ಪೂಜಿಸು.

೮೬. ಬಿಲ್ವಹಣ್ಣು, ಕಮಲ, ಪದ್ಮವಾಸನೆಯುಳ್ಳ ಹೂಗಳು, ನೀರಂಜಿಪೂ, ದಾಸವಾಳದ ಹೂ, ಪುನ್ನಾಗ, ಕಣಿಗಲೆ, ಪಾದರಿ ಹೂಗಳಿಂದ ಸ್ವಾಮಿಯನ್ನು ಪೂಜಿಸು.

ತುಳಸ್ಯಾ ಚ ರವಿದಳೈರಪರಾಜಿತಯಾ ತಥಾ ।
ಅಪಾಮಾರ್ಗದಳೈ ರುದ್ರಜಟಾಧಮನಕೇನ ಚ ॥ ೮೭ ॥

ಸರ್ವೈರೇಭಿಸ್ಸಮುಫಲೈರ್ಬಿಲ್ವಪತ್ರೈಶ್ಚ ಧೂರ್ತಕೈಃ ।
ದ್ರೋಣೈಶ್ಶಿರೀಷೈಶ್ಶಕ್ತೈಶ್ಚ ದೂರ್ವಯಾ ಕೋರಕೈರಪಿ ॥ ೮೮ ॥

ನಂದ್ಯಾವರ್ತೈರಕ್ಷತೈಶ್ಚ ತಿಲಮಿಶ್ರೈಶ್ಚ ಕೇವಲೈಃ ।
ಅನ್ಯೈರಪಿ ಯಥಾಶಕ್ತಿ ಪ್ರಾತಸ್ಸಂಪೂಜಯೇಚ್ಛಿವಂ ॥ ೮೯ ॥

ಕರ್ಣಿಕಾರೈಶ್ಚ ಸೌವರ್ಣೈರ್ದೂರ್ವಯಾಪಿ ಶಿವಾರ್ಚನಂ ।
ಮುಕುಲೈರ್ನಾರ್ಚಯೇದ್ದೇವಂ ಚಂಪಕೈರ್ಜಲಜಂ ವಿನಾ ॥ ೯೦ ॥

ಜಲಜಾನಾಂ ಚ ಸರ್ವೇಷಾಂ ಪತ್ರಾಣಾಮಕ್ಷತಸ್ಯ ಚ ।
ಕುಶಪುಷ್ಪಸ್ಯ ರಜತಸುವರ್ಣಕೃತಯೋರಪಿ ॥ ೯೧ ॥

---

೮೭. ತುಳಸಿ, ಎಕ್ಕದೆಲೆ, ಅಪರಾಜಿತೆ, ಉತ್ತರಣೆ, ರುದ್ರಜಟೆ, ದವನ, ಇವುಗಳಿಂದ ಪೂಜೆಮಾಡಬೇಕು.

೮೮-೮೯. ಇವುಗಳಿಂದಲೂ, ಬಿಲ್ವಪತ್ರೆ, ದುತ್ತೂರಿ, ತುಂಬೇ ಹೂ, ಬಾಗೇ ಹೂ, ಗರಿಕೆ ಚಿಗುರು, ನಂಜಬಟ್ಟಲು, ಅಕ್ಷತೆ, ಇದು ಎಳ್ಳಿನಿಂದ ಮಿಶ್ರವಾಗಿದ್ದುದು. ಬರಿಯದು ಆದರೂ ಆಗಬಹುದು. ಇನ್ನೂ ಮಿಕ್ಕವುಗಳಿಂದಲೂ, ಯಥಾಶಕ್ತಿ ಶಿವನನ್ನು ಪೂಜಿಸಬೇಕು.

೯೦. ಹಳದಿಯ ಪಗಡೆಹೂವಿನಿಂದಲೂ, ಗರಿಕೆಯಿಂದಲೂ, ಶಿವಾರ್ಚನೆಯು ಶ್ರೇಷ್ಠವಾದುದು. ಮೊಗ್ಗುಗಳಿಂದ ಶಿವನನ್ನು ಪೂಜಿಸಬಾರದು. ಆದರೆ ಸಂಪಿಗೆ ಕಮಲದ ಮೊಗ್ಗುಗಳಾದರೂ ಆಗಬಹುದು.

೯೧. ಜಲದಲ್ಲಿ ಹುಟ್ಟಿದ ಹೂವನ್ನೆಲ್ಲಾ ಪೂಜೆಮಾಡಬಹುದು. ಪತ್ರೆಗಳನ್ನೆಲ್ಲಾ ಪೂಜಿಸಬಹುದು. ಅಕ್ಷತೆ, ದರ್ಭೆ, ಹೂಗಳನ್ನು ಪೂಜಿಸಬಹುದು. ಇನ್ನೂ ಚಿನ್ನ, ಬೆಳ್ಳಿಯ ಹೂಗಳನ್ನು ಮಾಡಿಸಿ ಪೂಜೆಮಾಡಬಹುದು.

**ಅನ್ಯತ್ಕೃತ್ವಾ ಯಥಾ ಯತ್ತು ತೈಲಪಕ್ವಂ ಭವೇನ್ನೃಪ ।**
**ನ ತತ್ಪರ್ಯುಷಿತಂ ಪ್ರೋಕ್ತಮುಪೂಪಾದಿ ಗಮಿಷ್ಯತಿ ॥ ೯೨ ॥**

**ಉಕ್ಷಿತಂ ಯತ್ಫಲಾಯುಕ್ತಂ ತೈಲಕ್ವಾರಾಮ್ಲಜೀರಕೈಃ ।**
**ಜಲೇ ತತ್ಪ್ರೋಕ್ಷಿತಂ ಮೂಲಫಲಶಾಕಾದಿಕಂ ನೃಪ ॥ ೯೩ ॥**

**ನ ಚ ಪರ್ಯುಷಿತಂ ಪ್ರೋಕ್ತಂ ಗಂಗಾತೋಯಂ ಚ ಸಾಗರಂ ।**
**ಮಹಾನದೀಜಲಂ ಸರ್ವಂ ಕೇದಾರಜಲಮೇವ ಚ ॥ ೯೪ ॥**

**ಹ್ರದರೂಪೇಣ ಯತ್ತೀರ್ಥಂ ಕೂಪತೀರ್ಥೇನ ರಾಘವ ।**
**ತಟಾಕವಾಪೀಸರಸಾಂ ಕೂಪೇನಾಪಾಂ ಚ ಯದ್ಭವೇತ್ ॥ ೯೫ ॥**

**ತತ್ತೀರ್ಥತೋಯಂ ಸರ್ವಂ ಚ ನ ಚ ಪರ್ಯುಷಿತಂ ಭವೇತ್ ।**
**ನ ರಾತ್ರೌ ಜಲಮಾಹಾರ್ಯಂ ದಿವಾ ಸಂಪಾದಯೇಜ್ಜಲಂ ॥ ೯೬ ॥**

**ಸಸ್ಯೈಕತಂ ತಥಾ ಧಾರ್ಯಂ ನ ಚ ಪರ್ಯುಷಿತಂ ಹಿ ತತ್ ।**
**ಏವಂ ವಿದಿತ್ವಾ ಪೂಜಾಂ ತ್ವಂ ಶಿವಲಿಂಗೇ ಸಮಾಚರ ॥ ೯೭ ॥**

---

೯೨. ಇನ್ನೂ ಬೇಕಾದುವುಗಳನ್ನು ತಂದು ಪೂಜಿಸಬಹುದು. ನಿವೇದನಕ್ಕೆ ಮಾಡುವುದು ತೈಲಪಕ್ವವಾಗಿರಬೇಕು. ಅದು ಪರ್ಯುಷಿತ, ಹಳಸಿದ್ದು, ಎನ್ನಿಸಿಕೊಳ್ಳುವುದಿಲ್ಲ. ಆದರೆ ಒಬ್ಬಟ್ಟು ಮುಂತಾದುವು ಹಳಸುತ್ತವೆ ಅವಾಗುವುದಿಲ್ಲ.

೯೩. ಎಣ್ಣೆ, ತುಪ್ಪ, ಹುಳಿ, ಜೀರಿಗೆಗಳನ್ನು ಹಾಕಿರುವುದು, ನೀರಿನಿಂದ ಮಾಡಿರುವುದು, ಗೆಡ್ಡೆಗೆಣಸುಗಳು, ಕಾಯಿಪಲ್ಯಗಳು ಇವು ಪರ್ಯುಷಿತಗಳು.

೯೪-೯೫. ಗಂಗೆನೀರು, ಸಮುದ್ರದ ನೀರು, ಮಹಾನದಿಯ ನೀರು, ಚಿಲುಮೆಯ ನೀರು, ಮಡುವಿನ ನೀರು, ಬಾವಿನೀರು, ಕೆರೆ, ಕೊಳ, ಸರೋವರ ಇವುಗಳ ನೀರು ಉಪಯೋಗಿಸಿದುವುಗಳಾಗುವುದಿಲ್ಲ. ಹಳಸಿದುವಲ್ಲ.

೯೬. ತೀರ್ಥಗಳಲ್ಲಿರುವ ಯಾವ ನೀರೂ ಕೂಡ ಉಪಯೋಗಿಸಿದ್ದಾಗುವುದಿಲ್ಲ. ನೀರನ್ನು ರಾತ್ರಿಯಲ್ಲಿ ತರಬಾರದು. ಹಗಲೇ ತರಬೇಕು.

೯೭. ಮರಳಿನಿಂದ (ಮರಳಿನೊಡನೆ) ತಂದ ನೀರು ನಿರ್ಮಾಲ್ಯವಾಗುವುದಿಲ್ಲ. ಇದನ್ನು ತಿಳಿದು ನೀನು ಶಿವಲಿಂಗದಲ್ಲಿ ಪೂಜೆಯನ್ನು ಮಾಡು.

॥ ಶಂಭುರುವಾಚ ॥

ಏವಮುಕ್ತೋಽಥ ಮುನಿನಾ ಇಕ್ಷ್ವಾಕುರ್ಬ್ರಾಹ್ಮಣಪ್ರಿಯಃ ।
ಶಿವಪೂಜಾಪರೋ ಭೂತ್ವಾ ದಿನಾಷ್ಟಕಮತಿಷ್ಠತ ॥ ೯೮ ॥

ನವಮೇಽಥ ದಿನೇ ಪ್ರಾಪ್ತೇ ಪ್ರಾತಃಕಾಲೇ ಕೃತಾರ್ಚನಃ ।
ಮರಣಾವಸರೇ ಪ್ರಾಪ್ತೇ ಶಿವಪೂಜಾಂ ವಿಧಾಯ ಸಃ ॥ ೯೯ ॥

ಸ್ವಾನ್ಪ್ರಾಣಾನುಪಹಾರಾಯ ತತ್ಯಾಜೈವ ಮಹೇಶಿತುಃ ।
ಮೃತಂ ತಮಥ ವಿಜ್ಞಾಯ ಯಮದೂತಾಸ್ಸಮಾಗತಾಃ ॥ ೧೦೦ ॥

ಯಮಲೋಕಪ್ರಾಪಕಾಯೇ ಯತ್ನಮಾಸ್ಥಾಯ ತಸ್ಥಿರೇ ।
ಶೈವಾಶ್ಚಾಪಿ ಸಮಾಯಾತಾ ದೂತಾ ವಹ್ನಿಮುಖಾದಯಃ ॥ ೧೦೧ ॥

ತೇಷಾಮನ್ಯೋನ್ಯವಾದೋಽಭೂನ್ಮಾಮಕೋ ಮಾಮಕಸ್ತ್ವಿತಿ ।
ಅಥವಾ ಮೋಕ್ಷಪಾಣಿಂ ಚ ಶಿವದೂತಮಥಾರ್ದಯನ್ ॥ ೧೦೨ ॥

---

೯೮. ಶಂಭುವು ಹೇಳಿದನು :—ಜಾಬಾಲಿಯು ಹೀಗೆ ಹೇಳುತ್ತಲೂ, ಇಕ್ಷ್ವಾಕುವು ಬ್ರಾಹ್ಮಣರಲ್ಲಿ ಪ್ರೀತಿಯಿಟ್ಟುಕೊಂಡು ಶಿವಪೂಜೆಯನ್ನು ಮಾಡುತ್ತಾ ಎಂಟು ದಿನಗಳಿದ್ದನು.

೯೯-೧೦೦. ಒಂಭತ್ತನೆಯ ದಿನ ಬರಲು ಪ್ರಾತಃಕಾಲದಲ್ಲಿ ಶಿವಪೂಜೆಯನ್ನು ಮಾಡಿ ಸಾಯುವ ಕಾಲಬರಲು, ತನ್ನ ಪ್ರಾಣಗಳನ್ನೇ ನಿವೇದನಕ್ಕೋಸ್ಕರ ಮಹೇಶನಿಗೆ ಸಮರ್ಪಿಸಿ ಪ್ರಾಣಗಳನ್ನು ಬಿಟ್ಟನು ಅವನು ಸತ್ತುದನ್ನು ತಿಳಿದು ಯಮದೂತರು ಬಂದರು.

೧೦೧. ಯಮಲೋಕಕ್ಕೆ ಕರೆದುಕೊಂಡು ಹೋಗುವ ಯಮದೂತರೂ ನಿಂತಿದ್ದರು. ಶಿವಲೋಕಕ್ಕೆ ಕರೆದುಕೊಂಡು ಹೋಗಲು ಅಗ್ನಿಮುಖವುಳ್ಳ ಶಿವದೂತರೂ ಬಂದಿದ್ದರು.

೧೦೨. ಅವರಿಬ್ಬರಿಗೂ, ಇವನು ನನ್ನವನು, ತನ್ನವನೆಂದು ಜಗಳ ನಡೆಯಿತು. ಮೋಕ್ಷವನ್ನು ಕೊಡಲು ಬಂದಿರುವ ಶಿವದೂತರನ್ನು ಹೊಡೆದರು.

**ಅಥ ವಹ್ನಿಮುಖಃ ಕ್ರುದ್ಧೋ ಯಮದೂತಶತಂ ತಮಃ ।**
**ಮಹಾಕಾಯಸ್ತಥಾ ಭೂತ್ವಾ ಗೃಹೀತ್ವಾ ಚ ಕರೇಣ ತತ್ ॥ ೧೦೩ ॥**

**ಶಿರಾಂಸಿ ಚ ತಥೈಕೇನಾಕ್ರಮ್ಯ ಚಿಚ್ಛೇದ ಶಷ್ಪವತ್ ।**
**ಮಾರಯಿತ್ವಾ ತತೋ ದೂತಾನಾದಾಯೇಕ್ಷ್ವಾಕುಮಭ್ಯಗಾತ್ ॥ ೧೦೪ ॥**

**ನಿವೇದಯಾಮಾಸ ಚ ತಂ ವೀರಭದ್ರಾಯ ಧೀಮತೇ ।**
**ಸ ಚಾಪಿ ಶಂಕರಾಯಾಥ ತಂ ಪ್ರಾಹ ಚ ಮಹೇಶ್ವರಃ ॥ ೧೦೫ ॥**

**ತ್ವಯಾಷ್ಟದಿನಪೂಜೈವ ಕೃತಾ ಕೃಷ್ಣಾ ದಿನೇ ದಿನೇ ।**
**ತ್ವಮನಿಂದಃ ಪುರಾ ಮಾಂ ಚ ಲಿಂಗಂ ಶಿಶ್ನಾಗ್ರಮಿತ್ಯತ ॥ ೧೦೬ ॥**

**ತೇನೈವ ಪಾಪಯೋಗೇನ ಶಿಶ್ನಚಕ್ರೋ ಭವಿಷ್ಯಸಿ ।**
**ಶಿಶ್ನಾಗ್ರೇ ವಿವರಂ ಚಕ್ರಂ ಜಿಹ್ವಾನಾಸಾದಿವರ್ಜಿತಃ ॥ ೧೦೭ ॥**

---

೧೦೩-೧೦೪. ಅನಂತರ ವಹ್ನಿಮುಖನು ಕೋಪಗೊಂಡು ಯಮದೂತರನ್ನೇ ಕರನ್ನು ಹಿಡಿದುಕೊಂಡು ಮಹಾಕಾಯನಾಗಿ ಅವರನ್ನು ಒಂದೇ ಕೈಯಿಂದ ಹಿಡಿದು ಕೊಂಡು ಹುಲ್ಲನ್ನು ಜಿಗುಟುವಂತೆ ಅವರ ತಲೆಗಳನ್ನು ಕತ್ತರಿಸಿ ಕೊಂದು, ಇಕ್ಷ್ವಾಕು ವನ್ನು ತೆಗೆದುಕೊಂಡು ಹೊರಟುಹೋದನು.

೧೦೫. ಆ ಇಕ್ಷ್ವಾಕುವನ್ನು ಅಗ್ನಿಮುಖನು ವೀರಭದ್ರನಿಗೆ ಒಪ್ಪಿಸಿದನು. ಆ ವೀರಭದ್ರನು ಶಂಕರನಿಗೆ ಒಪ್ಪಿಸಿದನು. ಆ ಮಹೇಶನು ಇಕ್ಷ್ವಾಕುವನ್ನು ಕುರಿತು ಇಂತೆಂದನು.

೧೦೬. ನೀನು ಕೃಷ್ಣಪಕ್ಷದಲ್ಲಿ ಎಂಟುದಿನ ಪೂಜೆಯನ್ನೇನೋ ಮಾಡಿದೆ. ನೀನು ಪೂರ್ವದಲ್ಲಿ ನನ್ನನ್ನು ಕುರಿತು ಲಿಂಗವು ಶಿಶ್ನದ ಮುಂಭಾಗವು ಎಂದು ಮುಂತಾಗಿ ನಿಂದಿಸಿದೆ.

೧೦೭-೧೦೮. ಆ ಪಾಪದಿಂದ ನೀನು ಶಿಶ್ನಚಕ್ರನಾಗಿ ಆಗುತ್ತೀಯೆ. ಶಿಶ್ನಾಗ್ರ ದಲ್ಲಿರುವ ಚಕ್ರದಂತೆ ಬಾಯುಳ್ಳವನಾಗಿ ನಾಲಿಗೆ ಮೂಗುಗಳಿಲ್ಲದವನಾಗಿಯೂ, ಆಗುತ್ತೀಯೆ. ಮೊದಲು ನನ್ನ ಹೆಸರನ್ನು ಹೇಳುತ್ತಿದ್ದುದರಿಂದ ಮಾತನಾಡುವವ

ಪೂರ್ವಂ ಮನ್ನಾಮವಕ್ತ್ಯೃತ್ವಾದ್ವಕ್ತಾ ಚಾಪಿ ಭವಿಷ್ಯಸಿ ।
ಅಥೇಶವಚನಾತ್ಸೋಽಪಿ ತಥಾಭೂತೋಽಭವತ್ಕ್ಷಣಾತ್ ॥ ೧೦೮ ॥

॥ ಶಂಭುರುವಾಚ ॥

ಯ ಇದಂ ಶೃಣುಯಾನ್ನಿತ್ಯಂ ಪುರಾಣಾಖ್ಯಾನಮುತ್ತಮಂ ।
ವಿಮುಕ್ತಪಾಪಬಂಧಶ್ಚ ಶಿವಭಕ್ತೋ ಭವಿಷ್ಯತಿ ॥ ೧೦೯ ॥

ಸ ಯಾತಿ ಚ ಶಿವಸ್ಥಾನೇ ವಕ್ತಾ ಚಾಪಿ ತಥಾ ಭವೇತ್ ।
ಯಶ್ಚ ವಕ್ತಿ ಕಥಾಮೇನಾಂ ಹರೇಣ ಸದೃಶೋ ಭುವಿ ॥ ೧೧೦ ॥

ಉಕ್ತ್ವಾ ಕಥಾಮಿಮಾಂ ಪೂರ್ವಮಧೀರೋ ನಾಮ ಭೂಮಿಪಃ ।
ಸ್ವರ್ಗಂ ಸ ಗತವಾನ್ರಾಜಾ ಕೃತಪಾಪೋಽಥ ಭಾರ್ಯಯಾ ॥ ೧೧೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ
ವಿಭೂತಿಮಾಹಾತ್ಮ್ಯೇ ಪಂಚಾಧಿಕಶತತಮೋಽಧ್ಯಾಯಃ

---

ನಾಗಿ ಆಗುತ್ತೀಯೆ. ಕೂಡಲೇ ಅವನು ಈಶ್ವರನ ಮಾತಿನಂತೆ ಕ್ಷಣಕಾಲದಲ್ಲಿ ಹಾಗೆಯೇ ಆದನು.

೧೦೯. ಶಂಭುವು ಹೇಳಿದನು:—ಈ ಪುರಾಣದ ಕಥೆಯನ್ನು ಯಾವನು ದಿನವೂ ಕೇಳುತ್ತಾನೆಯೋ, ಅವನು ಪಾಪಗಳೆಲ್ಲವನ್ನೂ ಕಳೆದುಕೊಂಡು ಶಿವಭಕ್ತನಾಗುತ್ತಾನೆ.

೧೧೦. ಮತ್ತು ಹಾಗೆ ಕೇಳಿದವನು ಶಿವನ ಸ್ಥಾನಕ್ಕೆ ಹೋಗಿ ವಾಚಾಳಿಯೂ ಆಗುತ್ತಾನೆ. ಈ ಕಥೆಯನ್ನು ಹೇಳುವವನು ಹರನಿಗೆ ಸಮನಾಗುತ್ತಾನೆ.

೧೧೧. ಪೂರ್ವದಲ್ಲಿ ಅಧೀರನೆಂಬ ರಾಜನು ಈ ಕಥೆಯನ್ನು ಹೇಳಿದುದರಿಂದ ಹೆಂಡತಿಯೊಡನೆ ಸ್ವರ್ಗವನ್ನು ಹೊಂದಿದನು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ವಿಭೂತಿಮಹಾತ್ಮ್ಯವೆಂಬ ನೂರಐದನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಷಡಧಿಕಶತತಮೋಽಧ್ಯಾಯಃ

॥ ಶ್ರೀ ರಾಮ ಉವಾಚ ॥

**ಅಯಮಗ್ನಿಶಿಖೋ ನಾಮ ವಹ್ನಿಶ್ಶಿವಗಣಶ್ಶುಚಿಃ ।**
**ಸ ಕಥಂ ತಾದೃಶೋ ಭೂತಸ್ತನ್ಮೇ ವದ ನಮಸ್ತವ ॥ ೧ ॥**

॥ ಶಂಭುರುವಾಚ ॥

**ಅಯಮಾಸೀತ್ಪುರಾ ಕಶ್ಚಿತ್ಕ್ಷತ್ರಿಯಃ ಕ್ರೋಧನಸ್ಸದಾ ।**
**ನಷ್ಟಭಾರ್ಯೋ ನಷ್ಟಸೇನೋ ನಷ್ಟರಾಷ್ಟ್ರೋಽತಿದುಃಖಿತಃ ॥ ೨ ॥**

**ಲಬ್ಧ್ವಾ ಲುಲಾಯದ್ವಿತಯಂ ಕೃಷಿಂ ಚಕ್ರೇ ಸಹಾತ್ಮಜೈಃ ।**
**ಖುಣೇನ ಮಹತಾ ಯುಕ್ತಃ ಪುನಶ್ಚಾತೀವ ದುಃಖಿತಃ ॥ ೩ ॥**

---

## ನೂರ ಆರನೆಯ ಅಧ್ಯಾಯವು

೧. ಶ್ರೀರಾಮನು ಕೇಳಿದನು :—ಅಗ್ನಿಮುಖನೆಂಬ ಆ ಶಿವಗಣನು ಅದು ಹೇಗೆ ಅಂತಹ ಮಹಾಕಾಯವುಳ್ಳವನಾದನು ? ಅದನ್ನು ಹೇಳು. ನಿಮಗೆ ನಮಸ್ಕಾರವು.

೨. ಶಂಭುವು ಹೇಳಿದನು :—ಇವನು ಪೂರ್ವದಲ್ಲಿ ಒಬ್ಬ ಕ್ಷತ್ರಿಯನು. ಕೋಪಿಯು. ಹೆಂಡತಿಯು ಸತ್ತುಹೋಗಿದ್ದಳು. ಸೇನೆಗಳು ನಾಶವಾಯಿತು. ರಾಜ್ಯವೂ ಹೋಯಿತು. ಬಹು ದುಃಖಿತನಾಗಿದ್ದನು.

೩. ಎರಡು ಕೋಣಗಳನ್ನು ತೆಗೆದುಕೊಂಡು ಮಕ್ಕಳೊಡನೆ ವ್ಯವಸಾಯವನ್ನು ಮಾಡುತ್ತಿದ್ದನು. ಬಹು ಸಾಲವಾಗಲು ಪುನಃ ದುಃಖಿತನಾದನು.

ಪುನಶ್ಚ ದುಃಖಿತೋ ರಾಜಾ ಸರ್ಪೇಣ ಸುತನಾಶನಾತ್ ।
ತಥಾಭೂತೋ ಮಹೀಪಾಲಸ್ತತ್ಯಾಜ ಕೃಷಿಮುತ್ತಮ ॥ ೪ ॥

ಪರಿತ್ಯಜ್ಯ ಸುತೌ ಚಾಪಿ ತ್ಯಕ್ತ್ವಾಹಾರೋ ರುರೋದ ಹ ।
ಸುತಾವಥ ಸಮಾಗಮ್ಯ ಪ್ರಾಹತುಃ ಪಿತರಂ ತ್ವಿದಂ ॥ ೫ ॥

॥ ಪುತ್ರಾವೂಚತುಃ ॥

ಕಿಮರ್ಥಂ ರುದ್ಯತೇ ತಾತ ನಷ್ಟೋ ನಾಯಾತಿ ರೋದನಾತ್ ।
ಶರೀರಶೋಷಣಾಯಾಥ ಶೋಕಸ್ತೇಽದ್ಯ ಭವಿಷ್ಯತಿ ॥ ೬ ॥

ಶೋಕೇನ ಚಕ್ಷುಷೀ ನಷ್ಟೇ ಕಂಠೋ ನಷ್ಟಸ್ತಥಾ ತವ ।
ಅನುಷ್ಠಾನಂ ತಥಾ ನಷ್ಟಂ ಕಿಮರ್ಥಂ ಪರಿತಪ್ಯಸೇ ॥ ೭ ॥

ಏಕೋ ನಷ್ಟೋ ನ ಚಾಯಾತಿ ರಕ್ಷ ಪಂಚ ಸ್ಥಿತಾನಸೂನ್ ।
ಬಹೂನಾಂ ರಕ್ಷಣಂ ಪುಣ್ಯಮಾಶ್ರಿತಾನಾಂ ವಿಶೇಷತಃ ।
ಅನ್ಯಾಶ್ರಿತಮಮುಂ ಶತ್ರುಂ ಕಥಂ ಶೋಚಿತುಮರ್ಹಸಿ ॥ ೮ ॥

---

೪. ಮಗನು ಹಾವುಕಡಿದು ಸಾಯಲು, ಮತ್ತೆ ದುಃಖಗೊಂಡು ಆ ವ್ಯವಸಾಯ ಮಾಡುವುದನ್ನೂ ಬಿಟ್ಟುಬಿಟ್ಟನು.

೫. ಉಳಿದ ಇಬ್ಬರು ಮಕ್ಕಳನ್ನೂ ಬಿಟ್ಟು, ಆಹಾರವನ್ನು ತೆಗೆದುಕೊಳ್ಳದೆ ಅಳುತ್ತಿದ್ದನು. ಆಗ ಇಬ್ಬರು ಮಕ್ಕಳೂ ಬಂದು ಹೀಗೆಂದು ಹೇಳಿದರು.

೬. ಮಕ್ಕಳು ಹೇಳಿದರು :—ಅಪ್ಪ ಏತಕ್ಕೆ ಅಳುತ್ತೀಯೆ ? ಅತ್ತುದರಿಂದ ನಾಶವಾದುದು ಮತ್ತೆ ಬರುವುದಿಲ್ಲ. ನಿನ್ನ ಶೋಕದಿಂದ ಶರೀರವೊಂದೇ ಶೋಷಿಸುತ್ತದೆ.

೭. ಶೋಕದಿಂದ ಕಣ್ಣುಗಳೂ ಹೋದುವು. ಕಂಠವು ಹೋಯಿತು ಅನುಷ್ಠಾನವನ್ನೆಲ್ಲಾ ಬಿಟ್ಟುಬಿಟ್ಟೆ. ಏತಕ್ಕೋಸ್ಕರ ಅಳುತ್ತೀಯೆ ?

೮. ಅವನು ಒಬ್ಬನು ಸತ್ತವನು ಬರುವುದಿಲ್ಲ. ಇರತಕ್ಕ ಐದು ಜನರನ್ನು ಕಾಪಾಡು (ಪಂಚಪ್ರಾಣಗಳು) ಬಹಳ ಜನರನ್ನು ರಕ್ಷಿಸುವುದು ಪುಣ್ಯವು. ಆಶ್ರಿತರ ರಕ್ಷಣವಂತೂ ಇನ್ನೂ ಬಹು ಪುಣ್ಯವು. ಅನ್ಯರನ್ನಾಶ್ರಯಿಸಿ ಶತ್ರುರೂಪನಾದ ಮಗನನ್ನು ಕುರಿತೇಕೆ ಅಳುತ್ತೀಯೆ ?

॥ ಪಿತೋವಾಚ ॥

ಪುತ್ರಶ್ಶತ್ರುಃ ಕಥಂ ಪುತ್ರೌ ಯುವಾಂ ಶತ್ರೂ ತಥಾ ಚ ಮೇ ।
ಅತ್ಯಂತಸುಖಿನಂ ಪುತ್ರಂ ಕಥಂ ಶತ್ರುಮುಭಾಷತಂ ॥ ೯ ॥

॥ ಸುತಾವೂಚತುಃ ॥

ಜಾಯಮಾನೋ ಹರೇದ್ಭಾರ್ಯಾಂ ವರ್ಧಮಾನೋ ಹರೇದ್ಧನಂ ।
ಮ್ರಿಯಮಾಣಸ್ತಥಾ ಪ್ರಾಣಾನ್ ಶತ್ರುತ್ವಂ ಕಿಮತಃ ಪರಂ ॥ ೧೦ ॥

ಯತ್ಸುಖಂ ಚ ತ್ವಯಾ ಪ್ರೋಕ್ತಂ ಸ್ಪರ್ಶನಾಲಿಂಗನಾದಿಭಿಃ ।
ದುಃಖೋದರ್ಕಮಿದಂ ರಾಜನ್ಸರ್ವಮೇತದ್ವದಾಮಿ ತೇ ॥ ೧೧ ॥

ಪ್ರಸೂತಿಕಾಲೇ ಪುತ್ರಸ್ಯ ಭಾರ್ಯಾನಾಶವಿಚಾರಣಾ ।
ಜೀವಿತಾಯಾಮಥೋ ಪತ್ನ್ಯಾಮಾತ್ಮನಸ್ಸುಖನಾಶನಂ ॥ ೧೨ ॥

ಯೋನ್ಯಶುದ್ಧೌ ತು ಜಾತಾಯಾಂ ಸಂಯೋಗೋ ನೋಪಪದ್ಯತೆ ।
ಆಲಿಂಗನಪರೇ ಗಾಢಂ ಸ್ತನ್ಯೇನಾಂಗಂ ಪರಿಪ್ಲುತೇ ॥ ೧೩ ॥

---

೯. ತಂದೆಯು ಹೇಳಿದನು :—ಮಕ್ಕಳಿರಾ, ಮಗನು ಹೇಗೆ ಶತ್ರುವಾದಾನು? ಹಾಗಾದರೆ ನೀವೂ ನನಗೆ ಶತ್ರುಗಳೇ? ಅತ್ಯಂತ ಸುಖಪ್ರದನಾದ ಮಗನನ್ನು ಶತ್ರುವೆಂದು ಹೇಗೆ ಹೇಳಿದಿರಿ?

೧೦. ಮಕ್ಕಳು ಹೇಳಿದರು :—ಹುಟ್ಟುವಾಗ ಹೆಂಡತಿಯನ್ನು ಕೊಲ್ಲುತ್ತಾನೆ. ಬೆಳೆಯುವಾಗ ಹಣವನ್ನು ನಾಶಪಡಿಸುತ್ತಾನೆ. ಸಾಯುವಾಗ ಅಥವಾ ಆಮೇಲೆ ಪ್ರಾಣಗಳನ್ನು ನಾಶಮಾಡುತ್ತಾನೆ. ಇದಕ್ಕಿಂತಲೂ ಶತ್ರುವೇನುಬೇಕು?

೧೧. ಸ್ಪರ್ಶನಾಲಿಂಗನೆಗಳಿಂದುಂಟಾಗುವ ಸುಖವನ್ನು ಹೇಳಿದೆಯಲ್ಲ. ಅವೆಲ್ಲವೂ ಮುಂದೆ ದುಃಖವನ್ನೇ ಕೊಡತಕ್ಕವುಗಳು. ಎಲ್ಲವನ್ನೂ ಹೇಳುತ್ತೇನೆ ಕೇಳು.

೧೨. ಮಗನು ಹುಟ್ಟುವಾಗ ಹೆಂಡತಿಯು ಎಲ್ಲಿ ಸಾಯುವಳೋ ಎಂಬ ಯೋಚನೆ. ಅವಳು ಬದುಕಿದರೂ ತನಗೆ ಸುಖವಿಲ್ಲ.

೧೩. ಮಗ ಹುಟ್ಟಿದ ಮೇಲೆ ಯೋನಿ ಶುದ್ಧವಾಗಿರುವುದರಿಂದ ಸಂಭೋಗ ಸುಖವಿಲ್ಲ. ಸ್ತನ್ಯದಿಂದ ಅವಯವಗಳು ನೆನದಾವೆಂದು ಗಾಢವಾದ ಆಲಿಂಗನೆಯೂ ಇರುವುದಿಲ್ಲ.

ತಥಾಪಿ ಯದಿ ಸಂಯೋಗಃ ಶಿಶುರೋದನತಾ ಸ್ತ್ರಿಯಾಃ ।
ವೃಥಂ ಶಿಶುಗತಂ ಚಿತ್ತಂ ತತೋ ವೈರಸ್ಯಮೇವ ಚ ॥ ೧೪ ॥

ಅಥ ಚೇತ್ಪ್ರತಿತೋ ಡಿಂಭೋ ಮಧ್ಯೇಮ್ಮೈಥುನಮುದ್ಗತಿಃ ।
ರತಿಮಧ್ಯೇ ತು ವಿಚ್ಛೇಧೇ ದುಃಖಂ ಕಿಂಚಿದಸನ್ನಿಭಂ ॥ ೧೫ ॥

ಸರ್ವಕಾಲೇ ಪರಿಮಿತೇ ಕದಾಚಿದ್ರತಿಸಂಭವಃ ।
ತತ್ಕಾಲೇ ಭೋಜನಂ ನಾಸ್ತಿ ಸ್ವಾಪೋ ನಾಸ್ತಿ ಚ ಭಾರ್ಯಯಾ ॥ ೧೬ ॥

ಶಿಶೂನಾಂ ರಕ್ಷಣೇ ದುಃಖಂ ವ್ಯಾಧಿಸರ್ಪಗ್ರಹಾದಿಭಿಃ ।
ತನ್ಮತಂ ಯತ್ಸುಖಂ ಚಿತ್ರಂ ಯಥಾಂಕಾರೋಹಣಂ ಪಿತುಃ ॥ ೧೭ ॥

ಆಲಿಂಗನಕೃತಂ ತಾತ ಚುಂಬನಾದಿಕೃತಂ ತಥಾ ।
ಅವ್ಯಕ್ತಮಧುರೋಕ್ತ್ಯಾದಿ ಯತ್ಸುಖಾನಿ ನರೇಶ್ವರ ॥ ೧೮ ॥

---

೧೪. ಆದರೂ ಸಂಭೋಗಿಸಿದರೆ ಮಕ್ಕಳು ಅಳುತ್ತವೆ. ಹೆಂಗಸರಿಗೆ ಮಕ್ಕಳಲ್ಲಿ ಮನಸ್ಸು ಹೆಚ್ಚು. ಆದರೂ ಬಲಾತ್ಕರಿಸಿದರೆ ವೈರಸ್ಯ ಹುಟ್ಟುವುದು.

೧೫. ರತಿಮಧ್ಯದಲ್ಲಿ ಮಗು ಎದ್ದರೆ ಮೈಥುನವು ಸುಖಿಸುವುದಿಲ್ಲ. ರತಿಯ ಮಧ್ಯದಲ್ಲಿ ವಿಚ್ಛೇದಹೊಂದಿದರೆ ಅಪರಿಮಿತವಾದ ದುಃಖವಾಗುತ್ತದೆ.

೧೬. ಸರ್ವವಾದ ಕಾಲದಲ್ಲಿ ರತಿಗೋಸ್ಕರವೆಂದು ಕಾಲವನ್ನು ನಿಯಮಿಸಿದ್ದಾರೆ. ಆ ನಿಯಮಿತಕಾಲದಲ್ಲಿ ಊಟವೂ ಇರುವುದಿಲ್ಲ. ಹೆಂಡತಿಯೊಡನೆ ಮಲಗುವ ಹಾಗೆಯೂ ಇಲ್ಲ.

೧೭. ರೋಗ, ಸರ್ಪಗ್ರಹಗಳಿಂದ ಮಗುವನ್ನು ಕಾಪಾಡುವುದರಲ್ಲಿ ದುಃಖವುಂಟು. ಅಂತಹದರಲ್ಲಿ ಮಗುವು ತಂದೆಯ ತೊಡೆಯ ಮೇಲೆ ಕುಳಿತರೆ ಅದೇ ಸುಖವೆಂಬುದು ಚಿತ್ರವಾಗಿದೆ.

೧೮. ಮಗುವಿನ ಆಲಿಂಗನ, ಚುಂಬನಗಳು, ತೊದಲು ನುಡಿಯು, ಈ ಸುಖಗಳು ಸುಖವೆಂಬುದೇ ಚಿತ್ರವು.

**ರತಿಮಧ್ಯೇ ವಿರಾಮಸ್ಯ ಕಲಾಂ ನಾರ್ಹಂತಿ ಷೋಡಶೀಂ ।**
**ಅನ್ಯಾನ್ಯಪಿ ಚ ದುಃಖಾನಿ ಸಂತಿ ಪುತ್ರೇ ಸಹಸ್ರಶಃ ॥ ೧೯ ॥**

**ಅನೇನ ಕಿಂ ತ್ವಂ ಕ್ರಿಯಸೇ ಇಹಾಮುತ್ರ ವಿರೋಧಿನಾ ।**
**ತ್ಯಜ ಶೋಕಮಿಮಂ ತಸ್ಮಾದಾವಾಂ ಪುತ್ರೌ ಸ್ಥಿತಾವಿಹ ॥ ೨೦ ॥**

**॥ ರಾಜೋವಾಚ ॥**

**ತ್ಯಜಾಮಿ ಶೋಕಂ ದುರ್ವಾರಂ ಸರ್ವಕಾರ್ಯವಿರೋಧಿನಂ ।**
**ಆತ್ಮನಶ್ಚ ಹಿತಂ ಕಾರ್ಯಮಿಹಾಮುತ್ರ ಸುತೌ ಮಮ ॥ ೨೧ ॥**

**ಪುರೋಧಸಂ ತು ಗಚ್ಛಾಮಿ ಮಮ ಪೂರ್ವಂ ಮಹಾಗುರುಂ ।**
**ವಸಿಷ್ಠಂ ಮುನಿವರ್ಯಂ ಚ ಸ ದಾಸ್ಯತಿ ಗತಿಂ ಮಮ ॥ ೨೨ ॥**

**ಏವಮುಕ್ತ್ವಾ ಗತೋ ವಿಪ್ರಂ ವಾರಾಣಸ್ಯಾಂ ಸ್ಥಿತಂ ಗುರುಂ ।**
**ದಂಡವತ್ಪ್ರಣನಾಮಾಥ ಮುನಿನಾ ಪರಿಪೂಜಿತಃ ॥ ೨೩ ॥**

---

೧೯. ಮಗುವಿನಿಂದ ಉಂಟಾಗುವ ಆ ಸುಖಗಳೆಲ್ಲವೂ ರತಿಮಧ್ಯದಲ್ಲಿರುವ ವಿರಾಮಸುಖದ ಹದಿನಾರರ ಒಂದು ಭಾಗವನ್ನೂ ಹೋಲಲಾರವು ಇದೂ ಅಲ್ಲದೆ ಮಕ್ಕಳಲ್ಲಿ ಇನ್ನೂ ಅನೇಕ ದುಃಖಗಳಿವೆ.

೨೦. ಇಹಪರಲೋಕಗಳಿಗೆ ವಿರೋಧಿಯಾದ ಈ ಮಗನನ್ನು ಕಟ್ಟಿ ಕೊಂಡೇನು? ಆದ್ದರಿಂದ ದುಃಖವನ್ನು ಬಿಡು. ನಾವಿಬ್ಬರೂ ಮಕ್ಕಳು ಇದ್ದೇವೆ.

೨೧. ರಾಜನು ಹೇಳಿದನು:—ಸರ್ವಕಾರ್ಯಗಳಿಗೂ ವಿರೋಧಿಯಾದ ಈ ಶೋಕವನ್ನು ಬಿಟ್ಟುಬಿಡುತ್ತೇನೆ. ಎಲೈ ಮಕ್ಕಳಿರಾ, ಈ ಲೋಕಪರಲೋಕಗಳಲ್ಲಿ ನನಗೆ ಹಿತವಾಗುವ ಕೆಲಸಗಳನ್ನು ನೀವು ಮಾಡಬೇಕು.

೨೨. ನನಗೆ ಹಿಂದೆ ಪುರೋಹಿತನೂ ಗುರುವೂ ಆಗಿದ್ದ ವಸಿಷ್ಠನ ಬಳಿಗೆ ಹೋಗುತ್ತೇನೆ. ಆತನು ನನಗೆ ಉತ್ತಮವಾದ ಮಾರ್ಗವನ್ನು ಬೋಧಿಸುತ್ತಾನೆ.

೨೩. ಹೀಗೆಂದು ಹೇಳಿ ಕಾಶಿಯಲ್ಲಿದ್ದ ಆ ಗುರುವಿನ ಬಳಿಗೆ ಹೋಗಿ ದಂಡಪ್ರಣಾಮಮಾಡಲು ಆತನು ಇವನನ್ನು ಗೌರವಿಸಿದನು.

ಆಲಿಂಗಿತಃ ಶಿರೋಽಘ್ರಾತೋ ದತ್ತಾಸನಪರಿಗ್ರಹಃ ।
ಉಕ್ತಶ್ಚಾಗಮನಂ ಕಿಂ ತೇ ಕಿಂ ಕಾರ್ಯಂ ಕರವಾಣಿ ವೈ ॥ ೨೪ ॥

॥ ರಾಜೋವಾಚ ॥

ಗತಿಂ ಪ್ರಯಚ್ಛ ಮೇ ವಿಪ್ರ ಸಂಸಾರೋತ್ತಾರಣಾಯ ಹಿ ।
ಖಿನ್ನೋಽಹಂ ಕರ್ಮಣಾ ಶಶ್ವದ್ಭವಂತಂ ಶರಣಂ ಗತಃ ॥ ೨೫ ॥

॥ ವಸಿಷ್ಠ ಉವಾಚ ॥

ಗತಿಂ ಪಶ್ಯ ಮಹಾಲಿಂಗಂ ವಿಶ್ವೇಶ್ವರಮಿತಿ ಸ್ಥಿತಂ ।
ಏನಂ ಪೂಜಯ ರಾಜೇಂದ್ರ ದೇವದೇವಂ ಪಿನಾಕಿನಂ ॥ ೨೬ ॥

ಯಮಾರಾಧ್ಯ ಪುರಾ ಶಕ್ತಿರರುಂಧತ್ಯಾಃ ಸುತೋ ಮುನಿಃ ।
ರಕ್ಷಸಾ ಭಕ್ಷಿತಶ್ಚಾಪಿ ಯಮಲೋಕಂ ಗತೋ ನ ಸಃ ॥ ೨೭ ॥

ಕಿಂಚಿತ್ಕಾಲಂ ಗತಸ್ಸ್ವರ್ಗಂ ಬ್ರಹ್ಮಲೋಕಮಗಾದತಃ ।
ಬ್ರಹ್ಮಲೋಕಾದ್ವಿಷ್ಣುಲೋಕೇ ಕ್ರೀಡನ್ನಾಸ್ತೇ ಸುತೋ ಮಮ ॥ ೨೮ ॥

---

೨೪. ಆಲಿಂಗನೆ ಶಿರಸ್ಸನ್ನು ಮೂಸುವುದು ಇತ್ಯಾದಿಗಳನ್ನು ಮಾಡಿ ಆಸನವನ್ನು ಕೊಟ್ಟು ಏಕೆಬಂದೆ? ಏನುಕೆಲಸ? ನಿನಗೇನುಬೇಕು? ಮಾಡಿಕೊಡುತ್ತೇನೆ ಹೇಳು ಎಂದನು.

೨೫. ರಾಜನು ಹೇಳಿದನು:—ಈ ಸಂಸಾರವನ್ನು ದಾಟಿಸಿ ಒಳ್ಳೆಯ ಗತಿಯನ್ನು ಕೊಡು. ನಾನು ಈ ಸಂಸಾರದ ಕೆಲಸಗಳಿಂದ ದುಃಖಿತನಾಗಿ ನಿನ್ನನ್ನು ಶರಣುಬಂದಿದ್ದೇನೆ.

೨೬. ವಸಿಷ್ಠನು ಹೇಳಿದನು:—ಇಲ್ಲಿಯೇ ನಿನಗೆ ಗತಿಯಿದೆ ನೋಡು. ಈ ವಿಶ್ವೇಶ್ವರನೆಂಬ ಮಹಾಲಿಂಗವು ಇಲ್ಲಿದೆ. ಈ ದೇವದೇವನಾದ ಪಿನಾಕಿಯನ್ನು ಪೂಜಿಸು. ಗತಿಯು ಸಿಕ್ಕುತ್ತದೆ.

೨೭. ಅರುಂಧತಿಯ ಮಗನಾದ ಶಕ್ತಿ ಎಂಬ ಮುನಿಯು ಈ ವಿಶ್ವೇಶ್ವರನನ್ನು ಪೂಜಿಸಿದುದರಿಂದ, ರಾಕ್ಷಸನು ತಿಂದರೂ ಕೂಡ ಯಮಲೋಕವನ್ನು ಹೊಂದಲಿಲ್ಲ.

೨೮. ಸ್ವಲ್ಪಕಾಲ ಸ್ವರ್ಗಕ್ಕೂ, ಅನಂತರ ಬ್ರಹ್ಮಲೋಕಕ್ಕೂ, ಅನಂತರ ವಿಷ್ಣುಲೋಕಕ್ಕೂ ಹೋಗಿರುತ್ತಾ ಸುಖವಾಗಿದ್ದಾನೆ.

**ಅಮುಂ ಪಶ್ಯ ಮಹಾರಾಜ ಲುಬ್ಧಕಂ ವನಚಾರಿಣಂ ।**
**ಪೂಜಯಂತಂ ಹಿ ವಿಶ್ವೇಶಂ ಪತ್ರಸೂತ್ರೈಸ್ಸ್ವಸಂಭೃತೈಃ　　॥ ೨೯ ॥**

**ಶಮೀವೃಕ್ಷಸ್ಯ ಸಂಭೂತೈಸ್ತಥಾ ಪೂಗಪ್ರಸೂನಕೈಃ ।**
**ಕದಂಬಕುಸುಮೈರರ್ಕಕುಸುಮೈರ್ವ್ಯಾಧಿಕಾಭವೈಃ　　॥ ೩೦ ॥**

**ಏತೈರನ್ಯೈರ್ಮಹೇಶಾನಂ ಪೂಜಯಂತಂ ವಿಲೋಕಯ ।**
**ಇತೋಽರ್ಧಯಾಮಮಾತ್ರೇಣ ಮರಿಷ್ಯತಿ ತದದ್ಭುತಂ　　॥ ೩೧ ॥**

**ಅಂತಕಾಲೇ ಸಮಾಯಾತೇ ಲುಬ್ಧಕೋಽಪಿ ಶಿವಾಯ ವೈ ।**
**ಉಪಹಾರಪ್ರದಾನಾಯ ದೃಷ್ಟವಾನ್ಪಾರ್ಶ್ವಕೇ ಘಟಂ　　॥ ೩೨ ॥**

**ತಂ ಚೂತಫಲಸಂಪೂರ್ಣಂ ಶುನಾ ಸ್ಪೃಷ್ಟಂ ವಿಗರ್ಹಿತಂ ।**
**ಸಂಕಲ್ಪಿತೋಪಹಾರಸ್ಯ ಹ್ಯಭಾವಾಲ್ಲುಬ್ಧಕಸ್ತಥಾ　　॥ ೩೩ ॥**

**ಇದಂ ಜಗೌ ಶುಭಂ ವಾಕ್ಯಂ ಲೋಕಾನಾಂ ಭಕ್ತಿಸೂಚಕಂ ।**
**ಪುಷ್ಪಾಭಾವೇ ಹರಿರ್ನೇತ್ರಂ ಫಲಾಭಾವೇಂಗುಲಂ ರವಿಃ　　॥ ೩೪ ॥**

---

೨೯-೩೦. ಈ ಬೇಡನನ್ನು ನೋಡು, ಕಾಡಿನವನು. ಎಲೆಯ ಪಾತ್ರೆಯಲ್ಲಿಯೂ, ಬನ್ನಿಪತ್ರೆ, ಅಡಕೆಹೂ, ಕದಂಬದಹೂ, ಎಕ್ಕದಹೂ, ಗರುಗದಹೂಗಳೇ ಮೊದಲಾದುವುಗಳಿಂದಲೂ, ಪೂಜಿಸುತ್ತಿರುವನು.

೩೧. ಇವನು ಇನ್ನು ಒಂದು ಅರ್ಧಯಾಮದಲ್ಲಿಯೇ ಸಾಯುತ್ತಾನೆ. ಅದು ಆಶ್ಚರ್ಯವು.

೩೨-೩೩. ಕೊನೆಗಾಲವು ಬರಲು ಆ ಬೇಡನು ಶಿವನಿಗೆ ನಿವೇದನಮಾಡಲು ಪಕ್ಕದಲ್ಲಿ ಮಾವಿನಹಣ್ಣುಗಳನ್ನು ತುಂಬಿಟ್ಟಿದ್ದ ಮಡಕೆಯನ್ನು ನೋಡಲು, ಅದನ್ನು ನಾಯಿಯು ಮುಟ್ಟಿ ಅಪರಿಶುದ್ಧವನ್ನಾಗಿ ಮಾಡಿದ್ದಿತು. ಆಗ ಮನಸ್ಸಿನಲ್ಲಿ ಮಾಡಿದ್ದ ನಿವೇದನದ ಪದಾರ್ಥವಿಲ್ಲದುದರಿಂದ ಲೋಕದ ಜನರಿಗೆ ಭಕ್ತಿಯನ್ನು ಕೊಡುವ ಈ ಮಾತನ್ನು ಹೇಳಿದನು.

೩೪-೩೫. ಹೂವಿಲ್ಲದುದರಿಂದ ಹರಿಯು ಕಣ್ಣನ್ನೂ, ಫಲವಿಲ್ಲದುದರಿಂದ

ಲಿಂಗವಿಸ್ರಂಸನೇ ಕಂ ಚ ಜಮದಗ್ನಿ ಋಷಿಸ್ತಥಾ ।
ಲಿಂಗಪೀಠಂ ಭವೇದೇವ ಗಾತ್ರಂ ನಿರ್ಭಿದ್ಯ ದತ್ತವಾನ್ ॥ ೩೫ ॥

ಅನ್ಯೈರ್ಮಹೇಶ್ವರೈರನ್ಯತ್ಸಾಹಸಂ ಪರಮಂ ಕೃತಂ ।
ಮಮಾಪಿ ತತ್ತಥಾ ಕಾರ್ಯಮನ್ಯಥಾ ದೋಷಭಾಗಹಂ ॥ ೩೬ ॥

ಏತಸ್ಮಿನ್ನಂತರೇ ಕಶ್ಚಿದುನ್ಮತ್ತಃ ಶಿವಮಭ್ಯಗಾತ್ ।
ಅಥ ಲುಬ್ಧಕೃತಾಂ ಪೂಜಾಮಾಹೃತ್ಯಾಭಕ್ಷಯತ್ಕ್ಷಣಾತ್ ॥ ೩೭ ॥

ವಮನಂ ಚ ತದಾ ಚಕ್ರೇ ಶಿವಪೀಠೇಽಥ ಲುಬ್ಧಕಃ ।
ಶಿವಾಪಕಾರಿಣಂ ಚೈನಂ ಹನ್ಮಿ ನೋ ವೇತ್ಯಚಿಂತಯತ್ ॥ ೩೮ ॥

ಅಥ ಸ್ವಾತ್ಮವಧಾಯೈವ ಯತ್ನಮಾಸ್ಥಾಯ ಶಂಕರಃ ।
ಉನ್ಮತ್ತೇನ ಯಥೋದ್ಭುಕ್ತಾ ಶಿವಪೂಜಾ ಮಯಾ ಕೃತಾ ॥ ೩೯ ॥

---

ಸೂರ್ಯನು ಬೆರಳನ್ನೂ, ಲಿಂಗವು ಅಲ್ಲಾಡಿದುದರಿಂದ ಜಮದಗ್ನಿಯು ದೇಹವನ್ನೇ ಕತ್ತರಿಸಿ ಅಲ್ಲಾಡದಂತೆ ಪಾಣಿಪೀಠವನ್ನು ಮಾಡಿದರು.

೩೬. ಮಿಕ್ಕ ಮಹೇಶನ ಭಕ್ತರಿಂದಲೂ, ಅನೇಕ ಸಾಹಸಕಾರ್ಯಗಳು ಮಾಡಲ್ಪಟ್ಟುವು. ನಾನೂ ಕೂಡ ಹಾಗೆಯೇ ಮಾಡಬೇಕು. ಇಲ್ಲದಿದ್ದರೆ ದೋಷವು ಬರುತ್ತದೆ.

೩೭. ಇಷ್ಟರೊಳಗೆ ಒಬ್ಬ ಹುಚ್ಚನು ಅಲ್ಲಿಗೆ ಬಂದು ಈ ಬೇಡನು ಮಾಡಿದ ಪೂಜೆಯನ್ನೂ, ಪೂಜೆಯ ಸಾಮಗ್ರಿಗಳನ್ನೂ ತಿಂದುಬಿಟ್ಟನು.

೩೮. ತಿಂದುದೂ ಅಲ್ಲದೆ ಆ ಶಿವಪೀಠದಲ್ಲಿ ವಾಂತಿಮಾಡಿದನು. ಆಗ ಆ ಬೇಡನು, ಶಿವನಿಗೆ ಅಪಕಾರಮಾಡಿದ ಈತನನ್ನು ಕೊಲ್ಲಲೇ ಬೇಡವೇ ಎಂದು ಯೋಚಿಸುತ್ತಿದ್ದನು.

೩೯-೪೦. ಈ ಶಂಕರನು ನನ್ನನ್ನು ಕೊಲ್ಲುವುದಕ್ಕೇನೆ ಈ ಹುಚ್ಚನಿಂದ ನಾನು ಮಾಡಿದ ಪೂಜೆಯನ್ನು ತಿನ್ನಿಸಿದ್ದಾನೆ. ಆದ್ದರಿಂದ ಈ ಲಿಂಗವನ್ನು ಸುತ್ತು

**ಲಿಂಗಪ್ರಾವರಣೇ ಹ್ಯೇಷಾ ತದಹಂ ಮಮ ದೇಹಿನಃ ।**
**ಪ್ರಾವೃತಿಸ್ತ್ವಪ್ರಿಯಾಂ ತ್ವದ್ಯ ನಿರ್ಮೋಕ್ತ್ವಾ ಮಯಾ ದ್ರುತಂ ॥ ೪೦ ॥**

**ಪೂಜಾವಿಮೋಚನಾಯ್ಯೈತತ್ಫಲಹಾನೇರ್ಗಲಂ ತ್ಯಜೇತ್ ।**
**ಇತ್ಥಂ ಸಂಕಲ್ಪ್ಯ ಸ ತದಾ ತೀಕ್ಷ್ಣಸ್ವಧಿತಿನಾದ್ಭುತಂ ॥ ೪೧ ॥**

**ಚಕ್ರೇ ತ್ವಚಂ ದಕ್ಷಪಾದಂ ತ್ವಚಂ ಛಿತ್ವಾ ಕಟೇರಧಃ ।**
**ವಾಮಪಾದಂ ತಥಾ ಚಕ್ರೇ ಕಟಿಪರ್ಯನ್ತಮಾಗು ಚ ॥ ೪೨ ॥**

**ಹೃಷ್ಟಶ್ಚಾವೇಪಿತಶ್ಚೈವ ತತ ಊರ್ಧ್ವಮಥಾಚ್ಛಿನತ್ ।**
**ಕರಾಂಸೋದರಹೃತ್ಕಂಠತ್ವಚಂ ನಿರ್ಭಿದ್ಯ ಲುಬ್ಧಕಃ ॥ ೪೩ ॥**

**ಮಸ್ತಕಸ್ಯ ತ್ವಚಂ ವಾಪಿ ನಿರ್ಬಿಭೇದ ಪ್ರಹೃಷ್ಟವಾನ್ ।**
**ತಯೋರನ್ತರತಸ್ತಸ್ಮಾದ್ಗಾತ್ರಂ ನಿರ್ಭಿದ್ಯ ವರ್ತುಲಂ ॥ ೪೪ ॥**

**ಛಿತ್ವಾಂಗುಳೀಂ ಸಮಾದಾಯ ದೇವಾಯಾರ್ಪಿತವಾಂಸ್ತ್ವಚಂ ।**
**ಆರಾದೇವ ತಥಾ ದಿವ್ಯರೂಪಃ ಸ್ತ್ರ್ಯಕ್ಷಶ್ಚತುರ್ಭುಜಃ ॥ ೪೫ ॥**

---

ವುದಕ್ಕೆ ನನ್ನ ದೇಹದ ಹೊದ್ದಿಕೆಯಾದ ಚರ್ಮವನ್ನು ತೆಗೆದು ಹೊದ್ದಿಸಬೇಕು.

೪೧-೪೨. ಪೂಜೆಯನ್ನು ಬಿಟ್ಟು ಫಲಹಾನಿಮಾಡಿಕೊಳ್ಳುವುದಕ್ಕಿಂತಲೂ, ಕತ್ತನ್ನೇ ಕುಯ್ದುಕೊಳ್ಳುವುದು ಉತ್ತಮವು ಎಂದು ಯೋಚಿಸಿ, ಹರಿತವಾದ ಚೂರಿಯಿಂದ ಬಲಗಾಲಿನ ಚರ್ಮವನ್ನು ಸೊಂಟದಿಂದ ಕೆಳಕ್ಕೆ ಸುಲಿದನು. ಅಂತೆಯೇ ಎಡಗಾಲಿನದನ್ನೂ ಸುಲಿದನು.

೪೩. ಸಂತೋಷಗೊಂಡು ನಡುಗದೇನೇ ಅಲ್ಲಿಂದ ಮೇಲಕ್ಕೂ, ಕೈಭುಜ ಹೊಟ್ಟೆ, ಎದೆಗಳ ಚರ್ಮವನ್ನೂ ಕತ್ತರಿಸಿ ಸಂತೋಷದಿಂದ ತಲೆಯ ಚರ್ಮವನ್ನೂ ಕತ್ತರಿಸಿ ಸುಲಿದನು.

೪೪. ಇವೆರಡರೊಳಗೆ ದೇಹವನ್ನು ವರ್ತುಲಾಕಾರವಾಗಿ ಸೀಳಿ ಬೆರಳನ್ನೂ ಕತ್ತರಿಸಿ ತೆಗೆದು ದೇವರಿಗೆ ಅರ್ಪಿಸಿದನು.

೪೫-೪೬. ಆಗ ಹತ್ತಿರದಲ್ಲಿಯೇ ಮೂರು ಕಣ್ಣುಳ್ಳ, ನಾಲ್ಕು ಭುಜಗಳುಳ್ಳ

ನಾನಾಭೂಷಣಸಂಯುಕ್ತಃ ಸ್ಥಿತೋ ವಿಯತಿ ಶಾಂಕರಃ ।
ಅಥ ಶೈವಾಸ್ಸಮಾಯಾತಾ ದೂತಾಶ್ಶತಸಹಸ್ರಶಃ ॥ ೪೬ ॥

ವಿಚಿತ್ರಮುಕುಟಾಕಾರಾಃ ಸರ್ವಾಭರಣಭೂಷಿತಾಃ ।
ತ್ರಿಶೂಲಪಾಣಯಸ್ಸರ್ವೇ ಶುದ್ಧಸ್ಫಟಿಕಸನ್ನಿಭಾಃ ॥ ೪೭ ॥

ಚತುರ್ಭುಜಾಸ್ಸುರೂಪಾಶ್ಚ ವಿಮಾನವರಸಂಸ್ಥಿತಾಃ ।
ಸರ್ವೇ ಸೂರ್ಯಸಮಾಶ್ಶಾನ್ತಾ ರಂಭಾವತ್ಪ್ರಿಯಯಾ ಯುತಾಃ ॥ ೪೮ ॥

ಸೂನುಪತ್ನೀಬಲೋತ್ಸಾಹವಿಲಾಸಸ್ತ್ರೀಶತಾನ್ವಿತಾಃ ।
ತೇಜಸಾ ಸೂರ್ಯಸದೃಶಾಃ ಪುಷ್ಪವೃಷ್ಟಿಮವಾಕಿರನ್ ॥ ೪೯ ॥

ತೈರಾಹೂತೋ ಲುಬ್ಧಕಶ್ಚ ನಾಗಚ್ಛದವದಚ್ಚ ತಾರ್ನ್ ।
ಭಾರ್ಯಾಬಂಧುಜನೋಪೇತೋ ಗಚ್ಛೇಽಹಮಥವಾ ನ ವಾ ॥ ೫೦ ॥

ಶೈವಾಸ್ತದ್ವಚನಂ ಶ್ರುತ್ವಾ ವಾಕ್ಯಮೇತದಥೋಚಿರೇ ।
ಯೇತ ಪುಣ್ಯಂ ಕೃತಂ ಪಾಪಂ ತೇನ ಭೋಗ್ಯಂ ಹಿ ತತ್ಫಲಂ ॥ ೫೧ ॥

---

ನಾನಾ ಭರಣಗಳನ್ನು ಹಾಕಿಕೊಂಡಿರುವ ಒಂದು ರೂಪವು ಅಂತರಿಕ್ಷದಲ್ಲಿ ಕಂಡು ಬಂದಿತು ಅನಂತರ ಅನೇಕ ಶಂಕರದೂತರು ಸಾವಿರಗಟ್ಟಲೆ ಅಲ್ಲಿಗೆ ಬಂದರು.

೪೭—೪೯. ವಿಚಿತ್ರವಾದ ಕಿರೀಟಗಳನ್ನು ಹಾಕಿಕೊಂಡಿದ್ದರು. ಸರ್ವಾಭರಣಗಳನ್ನು ಹಾಕಿಕೊಂಡಿದ್ದರು. ಕೈಗಳಲ್ಲಿ ತ್ರಿಶೂಲಗಳನ್ನು ಹಿಡಿದಿದ್ದರು. ಬೆಳ್ಳಗಿದ್ದರು. ನಾಲ್ಕು ತೋಳುಗಳಿದ್ದುವು. ಒಳ್ಳೆಯ ವಿಮಾನದಲ್ಲಿ ಕುಳಿತ್ತಿದ್ದರು. ಎಲ್ಲರೂ ಸೂರ್ಯನಂತೆ ತೇಜಸ್ವಿಗಳಾಗಿದ್ದರು. ಶಾನ್ತರಾಗಿದ್ದರು. ರಂಭೆಯಂತಿರುವ ಹೆಂಡರಿಂದ ಕೂಡಿದ್ದರು. ಮಕ್ಕಳು, ಹೆಂಡಿರು, ಬಲ, ಉತ್ಸಾಹಗಳಿಂದಲೂ ಸಂತೋಷದಿಂದಿರುವ ಅನೇಕ ಸ್ತ್ರೀಯರಿಂದಲೂ, ಕೂಡಿದ್ದರು. ಸೂರ್ಯನಂತೆ ತೇಜಸ್ಸುಳ್ಳ ಅವರು ಇವನ ಮೇಲೆ ಪುಷ್ಪವೃಷ್ಟಿಯನ್ನು ಚೆಲ್ಲಿದರು.

೫೦-೫೧. ಅವರು ಲುಬ್ಧಕನನ್ನು ಕರೆಯಲು, ಅವನು ಹೋಗದೆ ಹೆಂಡತಿಯೇ ಮೊದಲಾದ ಬಂಧುಜನರಿಂದ ಕೂಡಿಕೊಂಡು ನಾನು ಹೋಗಲೇ, ಬೇಡವೇ ಎಂದಿದ್ದೇನೆ ಎಂದನು. ಅದಕ್ಕೆ ಆ ಶಿವಭಕ್ತರು ಅದನ್ನು ಕೇಳಿ ಯಾರು ಪುಣ್ಯಪಾಪಗಳೆರಡನ್ನೂ ಮಾಡುತ್ತಾರೋ ಅವರು ಅವನ್ನು ಅನುಭವಿಸಲೇ ಬೇಕು ಎಂದರು.

॥ ಲುಬ್ಧಕ ಉವಾಚ ॥

ಅಶೈವಾನಾಂ ಚ ಸರ್ವೇಷಾಂ ಧರ್ಮಾಣಾಮೇಕಕರ್ತೃಕಂ ।
ಮಾಹೇಶ್ವರಾಣಾಂ ಧರ್ಮಾಣಾಂ ಫಲಂ ಚ ದ್ವಿಬಹುಷ್ವಪಿ ॥ ೫೨ ॥

ಏತಸ್ಮಿನ್ನಂತರೇ ಪ್ರಾಪ್ತೋ ವೀರಭದ್ರಃ ಶತಾರ್ಕಭಃ ।
ನಾನಾಕೋಟಿಗಣೋಪೇತ ಏಹಿ ಲುಬ್ಧಕ ಬಂಧುಯುಕ್ ॥ ೫೩ ॥

ಸರ್ವಂ ತ್ವಯೋಕ್ತಂ ಚ ತಥಾ ಸಭಾರ್ಯೋ ಜ್ಞಾತಿಬಂಧುಯುಕ್ ।
ಆರುಹ್ಯೇದಂ ವಿಮಾನಂ ಚ ಶಿವಂ ಗಚ್ಛ ಶಿವಂ ತು ವಃ ॥ ೫೪ ॥

॥ ವಸಿಷ್ಠ ಉವಾಚ ॥

ದೃಷ್ಟವಾನಸಿ ಸರ್ವಂ ತ್ವಮೀಶಪೂಜಾಂ ಸಮಾಚರ ।
ವಿಮುಕ್ತಪಾಪಬಂಧಸ್ತ್ವಂ ಶಿವಲೋಕಂ ಗಮಿಷ್ಯಸಿ ॥ ೫೫ ॥

---

೫೨. ಆ ಬೇಡನು ಹೇಳಿದನು:—ಶೈವರಲ್ಲದವರ ಧರ್ಮವು ಒಂದೇ ಫಲವನ್ನು ಕೊಡತಕ್ಕದ್ದು. ಮಾಹೇಶ್ವರ ಧರ್ಮಕ್ಕೆ ಎರಡುಮೂರು ಫಲಗಳಿವೆ.

೫೩. ಇಷ್ಟರೊಳಗೆ ನೂರು ಸೂರ್ಯರಂತೆ ತೇಜಸ್ಸುಳ್ಳ ವೀರಭದ್ರನು ಅನೇಕ ಕೋಟಿ ಗಣಗಳೊಡನೆ ಬಂದು ಎಲೈ ಬೇಡನೇ! ಬಂಧುಗಳೊಡನೆ ಬಾ ಎಂದು ಹೇಳಿದನು.

೫೪. ನೀನು ಹೇಳಿದುದೆಲ್ಲವೂ ಸರಿ. ಹೆಂಡತಿಮಕ್ಕಳು ಬಂಧುಗಳೊಡನೆ ಈ ವಿಮಾನವನ್ನು ಹತ್ತಿಕೊಂಡು ಶಿವನ ಬಳಿಗೆ ಹೋಗು. ನಿನಗೆ ಮಂಗಳವಾಗಲಿ ಎಂದನು. ಅನಂತರ ಲುಬ್ಧಕನು ಹಾಗೆಯೇ ತನ್ನವರೊಡನೆ ವಿಮಾನವನ್ನು ಹತ್ತಿ ಶಿವಲೋಕಕ್ಕೆ ಹೋದನು.

೫೫. ವಸಿಷ್ಠನು ಹೇಳಿದನು:—ಎಲ್ಲವನ್ನೂ ನೋಡಿದ್ದೀಯೆ. ಈಶಪೂಜೆಯನ್ನು ಮಾಡು. ಪಾಪಬಂಧಗಳೆಲ್ಲವನ್ನೂ ಕಳೆದುಕೊಂಡು ಶಿವಲೋಕಕ್ಕೆ ಹೋಗುತ್ತೀಯೆ.

ಯದಿ ರಾಜ್ಯಂ ತ್ವಯಾ ಪ್ರಾರ್ಥ್ಯಂ ಮಾರ್ಜಯೇಶಾಂಗಣಂ ನೃಪ ।
ಗೋಮಯೋದಕಲೇಪಂ ಚ ನಿತ್ಯಮೇವ ಸಮಾಚರ ॥ ೫೬ ॥

ಏತಾವತಾ ಭೂಮಿರಾಜ್ಯಂ ಧ್ರುವಂ ತವ ಭವಿಷ್ಯತಿ ।
ಯಾವದಾಯುಶ್ಚ ತೇ ರಾಜ್ಯಮಂತೇ ಶಿವಪದಂ ಭವೇತ್ ॥ ೫೭ ॥

ನೈತಸ್ಮಿಂಸ್ತು ಭವೇರಾಜ್ಯಸಂಸಿದ್ಧಿರಸುಮೃತ್ಯುತಃ ।
ಅತೋ ದೇಹಾಂತರಂ ಪ್ರಾಪ್ಯ ಶಿವಸೇವಾಪ್ರಭಾವತಃ ॥ ೫೮ ॥

ಭವಿಷ್ಯತಿ ಚ ತೇ ರಾಜ್ಯಂ ಶಿವಭಕ್ತಿಸ್ಸ್ಥಿರಾ ತಥಾ ॥ ೫೯ ॥

॥ ಶಂಭುರುವಾಚ ॥

ಅಥ ಕೃತ್ವಾ ತಥಾ ಪೂಜಾಂ ಮೃತಸ್ಸ್ವರ್ಗಂ ಗತಸ್ತತಃ ।
ರಾಜಜನ್ಮ ಪುನಃ ಪ್ರಾಪ್ಯ ರಾಜ್ಯಂ ಚಕ್ರೇ ಶಿವೇ ರತಃ ॥ ೬೦ ॥

---

೫೬. ನಿನಗೆ ರಾಜ್ಯ ಬೇಕಾದರೆ ಈಶ್ವರನ ದೇವಸ್ಥಾನವನ್ನು ನಿತ್ಯವೂ ಗುಡಿಸಿ, ಸಾರಿಸಿ ರಂಗವಲ್ಲಿಯನ್ನಿಡು.

೫೭ ಇಷ್ಟರಿಂದಲೇ ನಿನಗೆ ಭೂಮಿಯೂ ರಾಜ್ಯವೂ ಸಿಕ್ಕುತ್ತವೆ. ಕೊನೆಯಲ್ಲಿ ಶಿವನ ಪದವನ್ನು ಹೊಂದುತ್ತೀಯೆ.

೫೮-೫೯. ಈ ಜನ್ಮದಲ್ಲಿ ನಿನಗೆ ರಾಜ್ಯ ಸಿಕ್ಕುವುದಿಲ್ಲ. ಸತ್ತಮೇಲೆ ದೇಹಾಂತರದಲ್ಲಿ ಶಿವನ ಸೇವೆಯ ಪ್ರಭಾವದಿಂದ ರಾಜ್ಯವೂ ಸಿಕ್ಕಿ ಶಿವಸೇವೆಯೂ ಸ್ಥಿರವಾಗಿರುತ್ತದೆ.

೬೦. ಶಂಭುವು ಹೇಳಿದನು :—ಆ ರಾಜನು ಅಂತೆಯೇ ಪೂಜೆಮಾಡಿ ಸತ್ತು ಸ್ವರ್ಗವನ್ನು ಸೇರಿದನು. ಮತ್ತೆ ರಾಜಜನ್ಮವನ್ನು ಹೊಂದಿ ರಾಜ್ಯಭಾರಮಾಡುತ್ತಾ ಶಿವಭಕ್ತನಾಗಿದ್ದನು.

**ಕದಾಚಿದಥ ದೇವಸ್ಯ ಗೃಹಮಭ್ಯಗಮನ್ನೃಪಃ ।**
**ನಾನಾದೀಪಸಮೋಪೇತಂ ಮಣಿಭಿರ್ನಾಗರಾಡಿವ ॥ ೬೧ ॥**

**ಭಟಾನಾಮಥ ಸಂಮರ್ದ ಏಕೋ ದೀಪೋಽಪತನ್ನೃಪೇ ।**
**ತದಾಸೌ ಕುಪಿತೋ ರಾಜಾ ದೀಪಮಾದಾಯ ಸತ್ವರಂ ॥ ೬೨ ॥**

**ದೇವಾಲಯಪುರೇ ವೀರ ನ್ಯಕ್ಷಿಪತ್ಕೋಪಸಂಯುತಃ ।**
**ದಗ್ಧಂ ದೇವಗೃಹಂ ತೇನ ಏನಶ್ಚ ಸಮಪದ್ಯತ ॥ ೬೩ ॥**

**ಅಥ ದೇವಪುರಸ್ತತ್ರ ದಗ್ಧವೇಶ್ಮಾದಿಕಂ ಗೃಹಂ ।**
**ನಿರ್ಮಾಪಯಾಮಾಸ ನೃಪೋ ಮಹೇಶಾನಮಥಾಜಪತ್ ॥ ೬೪ ॥**

**ಅಥ ಮೃತ್ಯುದಿನೇ ಪ್ರಾಪ್ತೇ ರಾಜಾರಾಧಿತಶಂಕರಃ ।**
**ಭಸ್ಮಸ್ನಾಯೀ ಭಸ್ಮಶಾಯೀ ಜಪನ್ರುದ್ರಂ ಮಮಾರ ಹ ॥ ೬೫ ॥**

---

೬೧. ಒಂದುಸಾರಿ ಶಿವದೇವಸ್ಥಾನಕ್ಕೆ ಈ ರಾಜನು ಹೋದನು. ಆ ದೇವಸ್ಥಾನವು, ಆದಿಶೇಷನು ಮಣಿಗಳಿಂದ ಅಲಂಕೃತನಾಗಿರುವಂತೆ ಬಹು ದೀಪಗಳಿಂದ ಅಲಂಕೃತವಾಗಿದ್ದಿತು.

೬೨-೬೩. ಆ ದೇವಸ್ಥಾನದಲ್ಲಿ ಭಟರ ಗುಂಪು ಹೆಚ್ಚಾಗಿರಲು, ಒಂದು ದೀಪವು ರಾಜನ ತಲೆಯ ಮೇಲೆ ಬಿದ್ದಿತು. ಆಗ ರಾಜನು ಕೋಪಗೊಂಡು ಆ ದೇವಸ್ಥಾನವಿರುವ ಪಟ್ಟಣದ ಮೇಲೆ ಎಸೆದನು. ಆಗ ಅವೆಲ್ಲವೂ ಹತ್ತಿಕೊಂಡು ದೇವಸ್ಥಾನವು ಬೆಂದುಹೋಯಿತು. ಇದರಿಂದ ಅವನಿಗೆ ಪಾಪಬಂದಿತು.

೬೪. ದೇವಪುರದ ಮನೆಗಳೆಲ್ಲವೂ ಸುಟ್ಟುಹೋಗಲು ಪುನಃ ಕಟ್ಟಿಸಿದನು. ಮತ್ತು ಈಶ್ವರನನ್ನು ಪ್ರಾರ್ಥಿಸಿದನು.

೬೫. ಆಮೇಲೆ ಸಾಯುವಕಾಲ ಒದಗಲು ಶಂಕರನನ್ನು ಆರಾಧಿಸುತ್ತ ಭಸ್ಮದಲ್ಲಿ ಸ್ನಾನಮಾಡಿ, ಭಸ್ಮದಲ್ಲಿಯೇ ಮಲಗುತ್ತ, ರುದ್ರನನ್ನು ಜಪಿಸುತ್ತ ಸತ್ತನು.

**ಶಿವಲೋಕಂ ಗತಸ್ಸೋಽಯಂ ವೀರಭದ್ರೇಣ ಭಾಷಿತಃ ।**
**ಭವ ತ್ವಂ ಗಣಶಾರ್ದೂಲೋ ಮಮ ವೈ ಪರಿಚಾರಕಃ ॥ ೬೬ ॥**

**ಶಾಂಕರಾನ್ಮಮ ನಿರ್ದೇಶಾದಾನಯಸ್ವ ಮಮಾಂತಿಕಂ ।**
**ಶಿರೋಹೀನೋ ಭವಾಂಶ್ಚಾಪಿ ಜ್ವಾಲಾವಕ್ತ್ರೋ ಭವಿಷ್ಯಸಿ ॥ ೬೭ ॥**

**ಸ ಉವಾಚ ಮಹಾತ್ಮಾನಂ ವೀರಭದ್ರಂ ಗಣೇಶ್ವರಂ ।**
**ಚಕ್ಷುಶ್ಶ್ರೋತ್ರಂ ತಥಾ ಜಿಹ್ವಾ ನಾಸಿಕಾಸ್ಯಂ ಶಿರೋ ಗಣಃ ॥ ೬೮ ॥**

**ಏತೈರ್ವಿನಾ ವ್ಯವಹೃತಿಃ ಕಥಂ ಮೇ ಸಂಭವಿಷ್ಯತಿ ।**
**ಅಭಾವೇ ಶಿರಸಃ ಕಿಂ ವಾ ಮಯಾ ಪಾಪಂ ಕೃತಂ ವಿಭೋ ॥ ೬೯ ॥**

**॥ ವೀರಭದ್ರ ಉವಾಚ ॥**

**ತ್ವಯೈವ ಸ್ವೀಕೃತಾ ಪೂರ್ವಂ ದೇವೀ ಪರಮಸುಂದರೀ ।**
**ಮಹೇಶಭವನೇ ನಿತ್ಯಂ ಚಾತುರ್ವರ್ಣಕರಂಗಕೈಃ ।**
**ಸ್ವಸ್ತಿಕಂ ಸರ್ವತೋಭದ್ರಂ ನಂದ್ಯಾವರ್ತಾದಿಕಂ ಶುಭಂ ॥ ೭೦ ॥**

---

೬೬. ಅವನು ಶಿವಲೋಕಕ್ಕೆ ಹೋಗಲು ವೀರಭದ್ರನು ನೀನು ಗಣಗಳಲ್ಲಿ ಮುಖ್ಯನಾಗಿ ನನಗೆ ಪರಿಚಾರಕನಾಗಿರು ಎಂದನು.

೬೭. ಶಂಕರಭಕ್ತರನ್ನು ನನ್ನ ಅಪ್ಪಣೆಯಂತೆ ನನ್ನ ಬಳಿಗೆ ಕರೆದುಕೊಂಡು ಬಾ. ನೀನು ತಲೆಯಿಲ್ಲದವನಾಗಿ ಜ್ವಾಲೆಯಿಂದ ಕೂಡಿದ ಮುಖವುಳ್ಳವನಾಗು.

೬೮-೬೯. ಆಗ ಆತನು ವೀರಭದ್ರನನ್ನು ಕುರಿತು ಹೇಳಿದನು. ಕಣ್ಣು, ಕಿವಿ, ನಾಲಿಗೆ, ಮೂಗು, ಬಾಯಿ, ತಲೆಗಳಿಲ್ಲದಿದ್ದರೆ ನಾನು ವ್ಯವಹಾರವನ್ನು ಹೇಗೆ ಮಾಡಲಿ? ತಲೆಯಿಲ್ಲದಿರುವಂತೆ ಏನು ಪಾಪವನ್ನು ತಾನೆ ನಾನು ಮಾಡಿದೆನು? ಎನ್ನಲು,

೭೦. ವೀರಭದ್ರನು ಹೇಳಿದನು:—ನೀನು ಮೊದಲೇ ಪರಮಸುಂದರಿಯಾದ ಒಬ್ಬಳನ್ನು ಸ್ವೀಕರಿಸಿದ್ದೆ. ಆಕೆಯು ದಿನವೂ ಆ ದೇವಸ್ಥಾನದಲ್ಲಿ ನಾಲ್ಕು ಬಣ್ಣದ ರಂಗವಲ್ಲಿಯಿಂದ ಸ್ವಸ್ತಿಕಗಳನ್ನೂ, ಇನ್ನೂ ಬಗೆಯಾದ ಹಸೆಗಳನ್ನೂ ಬರೆಯುತ್ತಿದ್ದಳು.

**ಪದ್ಮಮುತ್ಪಲಮಾಂದೋಲಪಾದೌ ವ್ಯಜನಚಾಮರೇ ।**
**ತ್ರಿಶೂಲಂ ಶಂಖಚಕ್ರೇ ಚ ಗದಾ ಧನುರ್ಗತ್ಥೈವ ಚ ॥ ೭೧ ॥**

**ತ್ರಿಶೂಲಂ ಡಮರುಂ ಖಡ್ಗಂ ವೃಷಂ ಭೃಂಗೀರಿಟಿಂ ಶಿವಂ ।**
**ತಥಾಷ್ಟಪತ್ರಂ ಕಮಲಮನ್ಯದ್ಯಂತ್ರಾದಿಕಂ ತಥಾ ॥ ೭೨ ॥**

**ಕಲ್ಪಯಂತೀ ಪ್ರತಿದಿನಂ ಸೇವತೇ ವೃಷಭಧ್ವಜಂ ।**
**ಕದಾಚಿದಥ ಸಾ ವೇಶ್ಯಾ ದೇವಸದ್ಮನ್ಯುಪಸ್ಥಿತಾ ॥ ೭೩ ॥**

**ರಾಜಾ ಕಾರಾಂಕಿಕಃ ಕಶ್ಚಿದ್ದೇವವೇಶ್ಮ ಸಮಾವಿಶತ್ ।**
**ಅಥ ತಾಂ ದೃಷ್ಟವಾಂಸ್ತತ್ರ ಸ ಇದಂ ವಾಕ್ಯಮುಕ್ತವಾನ್ ॥ ೭೪ ॥**

**॥ ಕಾರಾಂಕಿಕ ಉವಾಚ ॥**

**ಏಕಾಂತಸಂಸ್ಥಿತಾ ವೇಶ್ಯಾ ಯುವಾಹಂ ಸ್ಥವಿರೋ ನ ಚ ।**
**ಸ್ಥವಿರಂ ವ್ಯಾಧಿತಂ ಷಂಡಮಶಕ್ತಂ ಧನವರ್ಜಿತಂ ॥ ೭೫ ॥**

**ಅದೀರ್ಘಮೋಹನಂ ದೀನಂ ಪುರುಷಂ ಯೋಷಿದುತ್ಸೃಜೇತ್ ।**
**ಅಶ್ಮಶೂಲಂ ಮಲಚ್ಛಿನ್ನಂ ಜಡಂ ದುರ್ಗಂಧದೂಷಿತಂ ॥ ೭೬ ॥**

---

೭೧-೭೨. ಪದ್ಮ, ಕನ್ನೈದಿಲೆ, ತೂಗಾಡುವ ಉದ್ದವಾದ ಪಾದಗಳು, ಬೀಸಣಿಗೆ, ಚಾಮರ, ತ್ರಿಶೂಲ, ಶಂಖ, ಚಕ್ರ, ಗದೆ, ಮುಸಲ, ಧನುಸ್ಸು, ಡಮರು, ಖಡ್ಗ, ಮತ್ತು ಭೃಂಗೀ, ಶಿವ, ಅಷ್ಟಪತ್ರದ ಕಮಲ ಇವೇ ಮುಂತಾದ ಆಕಾರದ ಹಸೆಗಳನ್ನು ಬರೆಯುತ್ತ ಶಿವನನ್ನು ಸೇವಿಸುತ್ತಿದ್ದಳು.

೭೩-೭೪. ಒಂದುಸಾರಿ ಆ ವೇಶ್ಯೆಯು ದೇವಸ್ಥಾನಕ್ಕೆ ಬಂದಿದ್ದಳು. ಆಗ ಕಾರಾಂಕಿಕನೆಂಬ ಒಬ್ಬ ರಾಜನು ಅಲ್ಲಿಗೆ ಬಂದನು. ಆಕೆಯನ್ನು ನೋಡಿ ಇಂತೆಂದನು.

೭೫. ಕಾರಾಂಕಿಕನು ಹೇಳಿದನು :—ಆ ವೇಶ್ಯೆಯು ಒಬ್ಬಳೇ ಇರುವುದನ್ನು ನೋಡಿ ನಾನು ಯುವಕನು ಮುದುಕನಲ್ಲ.

೭೬. ಮುದುಕ, ರೋಗಿ, ಷಂಡ, ಶಕ್ತಿಯಿಲ್ಲದವನು, ಬಡವ, ಉದ್ದವಾದ ಪ್ರಜಾಪತಿಯಿಲ್ಲದವನು, ದಿನ ಇಂತಹವನನ್ನು ಹೆಂಗಸು ಬಿಟ್ಟುಬಿಡಬೇಕು.

ಸ್ವಲ್ಪಮಪ್ಯಸನಂ ನಾರೀ ದೂರತಃ ಪರಿವರ್ಜಯೇತ್ ।
ತಸ್ಮಾನ್ಮೇ ದೀಯತಾಂ ವೇಶ್ಯೇ ಮೈಥುನಂ ಜೀವಯಾಶು ಮಾಂ ॥ ೭೭ ॥

॥ ವೇಶ್ಯೋವಾಚ ॥

ನಿಯತಸ್ಸರ್ವಜಾತೀನಾಮಿಹಾಮುತ್ರ ಸುಖಪ್ರದಃ ।
ಪಾತಿವ್ರತ್ಯಂ ಪರೋ ಧರ್ಮಃ ಸ್ತ್ರೀಣಾಮಿತಿ ಹಿ ಶುಶ್ರುಮ ॥ ೭೮ ॥

ಯದಧೀನಾ ಯದಾ ವೇಶ್ಯಾ ತದಾ ನಾನ್ಯೇನ ಸಂಗತಾ ।
ಪತಿವ್ರತೇತಿ ವಿಖ್ಯಾತಾ ತಸ್ಮಾತ್ತ್ವಂ ಪರಿಪಾಲಯ ॥ ೭೯ ॥

॥ ಕಾರಾಂಕಿಕ ಉವಾಚ ॥

ಯದಿ ಚೈವಂ ಮತಿಶ್ಶೀಘ್ರಂ ಭವಿಷ್ಯತಿ ನ ಸಂಶಯಃ ।
ಅಥ ರಾಜಾಂತಿಕಂ ಗತ್ವಾ ರಾಜಾನಮಿದಮುಕ್ತವಾನ್ ॥ ೮೦ ॥

---

೭೭. ಅಶ್ಮರಿಯೆಂಬ ರೋಗವುಳ್ಳವನು, ಕೊಳಕ, ದಡ್ಡ, ದುರ್ಗಂಧವುಳ್ಳವನು, ಅಯೋಗ್ಯ, ಯೋಚನೆಯಿಲ್ಲದವನು, ಇಂತಹವನನ್ನು ಹೆಂಗಸು ಬಿಟ್ಟುಬಿಡಬೇಕು. ಆದ್ದರಿಂದ ನಾನು ಹಾಗಿಲ್ಲದಿರುವುದರಿಂದ ನನಗೆ ಮೈಥುನಸುಖವನ್ನು ಕೊಟ್ಟು ನನ್ನ ಪ್ರಾಣಗಳನ್ನು ಕಾಪಾಡು ಎಂದನು.

೭೮. ವೇಶ್ಯೆಯು ಹೇಳಿದಳು :—ಸರ್ವಜಂತುಗಳಿಗೂ, ಇಹಾಪರಗಳಲ್ಲಿ ಸುಖವನ್ನು ಕೊಡತಕ್ಕುದು ಪಾತಿವ್ರತ್ಯವು. ಅದೇ ಉತ್ಕೃಷ್ಟವಾದ ಧರ್ಮವೆಂದು ಕೇಳಿದ್ದೇವೆ.

೭೯. ವೇಶ್ಯೆಯು ಯಾವಾಗ ಯಾವನ ಅಧೀನಳೋ ಆಗ ಮತ್ತೊಬ್ಬರೊಡನೆ ಸೇರಬಾರದು ಹಾಗಿದ್ದರೆ ಅವಳು ಪತಿವ್ರತೆಯೆಂದೆನಿಸಿಕೊಳ್ಳುತ್ತಾಳೆ. ಆದುದರಿಂದ ನನ್ನನ್ನು ಕಾಪಾಡು.

೮೦. ಕಾರಾಂಕಿಕನು ಹೇಳಿದನು :—ನೀನು ಹಾಗೆ ಸಂಗಮವನ್ನು ಕೊಡುವುದಿಲ್ಲವೆಂದರೆ ಬೇಗ ಸಾಯುತ್ತೇನೆ. ಎಂದು ಹೇಳಿ ಆ ಊರಿನ ರಾಜನ ಬಳಿಗೆ ಹೋಗಿ ರಾಜನಿಗೆ ಇಂತೆಂದನು.

ವೇಶ್ಯಾ ವೇಶ್ಯೈವ ನೋ ಭಾರ್ಯಾ ನೇತಿ ವಕ್ತುಂ ಚ ನೋಚಿತಂ ।
ಇತ್ಥಂ ರಾಜಾನಮುಕ್ತ್ವಾಥ ಮಂಡಂ ಚೈವಾರನಾಲಜಂ ॥ ೮೧ ॥

ಕಿಂಚಿದಾದಾಯ ತಸ್ಯಾಸ್ತು ಮಂದಿರಂ ಗತವಾನಯಂ ।
ನಿದ್ರಾವಸರಮಾಲೋಕ್ಯ ಪ್ರಸೃಜ್ಯ ಚ ಕರಂ ತತಃ ॥ ೮೨ ॥

ವಸ್ತ್ರಸ್ಯ ವಿವರೇ ತತ್ರ ಮಂಡಂ ಚಿಕ್ಷೇಪ ದುಷ್ಟಧೀಃ ।
ಏವಂ ಕೃತ್ವಾ ತತೋ ಗತ್ವಾ ರಾಜಾನಮಿದಮುಕ್ತವಾನ್ ॥ ೮೩ ॥

ರಾಜನ್ನಿರ್ಗತ್ಯ ಗತ್ವಾಥ ವೇಶ್ಯಾಗ್ರ್ಯಾಂ ತವ ಯೋಷಿತಂ ।
ಉತ್ಥಾಪಯಿತ್ವಾ ವೇಶ್ಯಾಂ ತಾಂ ಸರ್ವಾಂಗಂ ದ್ರಷ್ಟುಮರ್ಹಸಿ ॥ ೮೪ ॥

ಉನ್ಮುಕ್ತಬಂಧಮಥವಾ ವಸನಂ ಪಶ್ಯ ಯತ್ನತಃ ।
ವೇಶ್ಯಾವೇಶ್ಮಾಥ ಗತವಾನ್ರಾಜಾ ಕಾರಾಂಕಿಕಂ ವಚಃ ॥ ೮೫ ॥

ಇದಮಾಹ ಸನಿದ್ರೇಯಂ ಪಶ್ಯೇಮಾಂ ಯಾಮಿ ಪಶ್ಯಸಿ ।
ಸ ಉವಾಚ ನೃಪಂ ತತ್ರ ನ ಮೇ ಯುಕ್ತಮಿದಂ ನೃಪ ॥ ೮೬ ॥

---

೮೧. ಸೂಳೆಯು ಸೂಳೆಯೇ ಹೊರತು ಹೆಂಡತಿಯಲ್ಲ. ಅಲ್ಲವೆಂದು ಹೇಳಲು ಸಾಧ್ಯವಿಲ್ಲ. ಎಂದು ರಾಜನಿಗೆ ಹೇಳಿ ಜೋಳದ ಗಂಜಿಯನ್ನು ಸ್ವಲ್ಪ ತೆಗೆದುಕೊಂಡು ಆ ಸೂಳೆಯುಮನೆಗೆ ಹೋದನು.

೮೨. ನಿದ್ರೆಯ ಸಮಯವನ್ನು ನೋಡಿ ಕೈಗೆ ಆ ಗಂಜಿಯನ್ನು ಬಳಿದು ಕೊಂಡು ಬಟ್ಟೆಯ ನೆರಿಗೆಯಲ್ಲಿ ಆ ಗಂಜಿಯನ್ನೆಸೆದನು.

೮೩. ಹೀಗೆ ಮಾಡಿ ರಾಜನ ಬಳಿಗೆ ಹೋಗಿ ರಾಜನಿಗೆ ಇಂತೆದನು.

೮೪. ಎಲೈ ರಾಜನೇ, ನಿನ್ನ ಪತಿವ್ರತೆಯಾದ ವೇಶ್ಯೆಯ ಬಳಿಗೆ ಹೋಗಿ ಅವಳನ್ನೆಬ್ಬಿಸಿ ಅವಳ ಸರ್ವಾಂಗವನ್ನೂ ನೋಡು.

೮೫-೮೬. ಅದಿಲ್ಲದಿದ್ದರೆ ಗಂಟನ್ನು ಬಿಟ್ಟಿರುವ ಸೀರೆಯನ್ನು ಪರೀಕ್ಷಿಸಿ ನೋಡು. ಎನ್ನಲು, ರಾಜನು ಸೂಳೆಯ ಮನೆಗೆ ಹೋಗಿ ಕಾರಾಂಕಿಕನನ್ನು ಕುರಿತು ಇವಳು ನಿದ್ರಿಸುತ್ತಿದ್ದಾಳೆ. ನೀನೇ ನೋಡು, ನಾನು ಹೋಗುತ್ತೇನೆ ಎಂದನು. ಅದಕ್ಕೆ ಆ ಕಿರಾಂಕಿಕನು ನಾನು ನೋಡುವುದು ಯುಕ್ತವಲ್ಲವೆಂದನು.

ತನ್ಮಾತರಂ ವಾ ಪಿತರಂ ದರ್ಶನಾಯ ನಿಯೋಜಯ ।
ತದ್ದೃಷ್ಟ್ವಾ ಸರ್ವಮೇವೇದಂ ವ್ಯಕ್ತಮಾಶು ಭವಿಷ್ಯತಿ ॥ ೮೭ ॥

ಆನೀತಾ ಹ್ಯಥ ರಾಜ್ಞಾ ತು ಮಾತಾ ವೀಕ್ಷಿತುಮುದ್ಯತಾ ।
ವಚನಾತ್ತು ನೃಪಸ್ಯೈವ ವಸ್ತ್ರಂ ಶೋಧಯತೀವ ಸಾ ॥ ೮೮ ॥

ತತ್ರ ಸ್ಥಿತಂ ಮಂಡಮಥ ವಿಜ್ಞಾಯಾಂಬಾ ಹ್ಯದರ್ಶಯತ್ ।
ಮರ್ದನಾದ್ವಸನಂ ಕ್ಲಿನ್ನಂ ಕಿಂ ತದಿತ್ಯಾಹ ಪಾರ್ಥಿವಃ ॥ ೮೯ ॥

ನ ಕಿಂಚಿದ್ದೇವ ನೋ ಕಿಂಚಿದಿತಿ ವೇಶ್ಯಾಪ್ರಸೂರಪಿ ।
ಬಹುವಾಕ್ಯೇನ ರಾಜಾಥ ವಸನಂ ವೀಕ್ಷ್ಯ ಶಂಕಯಾ ॥ ೯೦ ॥

ಶುಕ್ಲಕ್ಲಿನ್ನಮಿದಂ ವಾಸಃ ಪ್ರಾಹೈತತ್ಪಶ್ಯತಾಮಿತಿ ।
ಅಥ ದೃಷ್ಟ್ವಾ ಸಮೀಪಸ್ಥಾಸ್ತಥೇತ್ಯೂಚುರ್ವಚೋ ನೃಪಂ ॥ ೯೧ ॥

---

೮೭. ಹಾಗಾದರೆ ಅವಳ ತಾಯಿಯಾಗಲಿ ತಂದೆಯಾಗಲಿ ನೋಡಲಿ. ನಿಯಮಿಸು. ಅವರು ನೋಡಿದರೆ ಎಲ್ಲವೂ ಗೊತ್ತಾಗುತ್ತದೆ.

೮೮. ರಾಜನು ಅವರನ್ನು ಕರೆಯಿಸಲು, ತಾಯಿಯು ನೋಡಲು ಮೊದಲು ಮಾಡಿ, ಅವನ ಮಾತಿನಂತೆ ಬಟ್ಟೆಯನ್ನು ಪರೀಕ್ಷೆಮಾಡಿದಳು.

೮೯. ಆ ಸೀರೆಯಲ್ಲಿದ್ದ ಗಂಜಿಯನ್ನು ತಾಯಿಯು ರಾಜನಿಗೆ ತೋರಿಸಿದಳು. ಅದರ ತಿಕ್ಕುವಿಕೆಯಿಂದ ಬಟ್ಟೆಯು ನೆನದಿದೆ ಇದೇನು ? ಎಂದು ರಾಜನು ಕೇಳಿದನು.

೯೦. ಏನೂ ಇಲ್ಲ. ಒಂದೂ ಇಲ್ಲ ಎಂದು ಆ ಸೂಳೆಯು ಬಹುವಾಗಿ ಹೇಳಿದಳು. ರಾಜನು ಬಟ್ಟೆಯನ್ನು ನೋಡಿ ಸಂದೇಹದಿಂದ ಇದು ಶುಕ್ಲದಿಂದ ನೆನೆದಿದೆ ನೋಡು, ಎಂದನು.

೯೧. ಅದನ್ನು ನೋಡಿ ಸಮೀಪದಲ್ಲಿದ್ದವರು, ದೊರೆಯು ಹೇಳಿದುದು ಸರಿ ಎಂದು ಹೇಳಿದರು.

**ರಾಜಾಥ ಸ್ವಗೃಹಂ ಗತ್ವಾ ದಂಡಾಧ್ಯಕ್ಷಮಭಾಷತ ।**
**ಇದಾನೀಮೇವ ವೇಶ್ಯಾಯಾಃ ಶಿರಶ್ಛಿಂದ್ಯವಿಚಾರಯನ್ ॥ ೯೨ ॥**

**ದರ್ಶನೀಯಂ ಶಿರಸ್ತಸ್ಯಾ ಘಟಿಕಾಭ್ಯಂತರೇ ಮಮ ।**
**ದಂಡಕಶ್ಚ ನೃಪೋಕ್ತ್ಯಾಸ್ಯಾಸ್ತಥಾ ಕೃತ್ವಾ ಹ್ಯದರ್ಶಯತ್ ॥ ೯೩ ॥**

॥ ವೀರಭದ್ರ ಉವಾಚ ॥

**ಏವಂ ಕೃತಂ ತ್ವಯಾ ಪೂರ್ವಂ ಪ್ರಾಪ್ತಂ ಚ ಫಲಮದ್ಯ ತೇ ।**
**ಜ್ವಾಲಯೈವ ಹಿ ವಕ್ತಾ ತ್ವಂ ಶ್ರೋತಾ ದ್ರಷ್ಟಾ ಚ ಜಿಘ್ರಸಿ ।**
**ರಸಂ ಜಾನಾಸಿ ಮತಿಮಾನತಿಕ್ರೋಧೀ ಭವಿಷ್ಯಸಿ ॥ ೯೪ ॥**

॥ ಶಂಭುರುವಾಚ ॥

**ಏವಂ ಜ್ವಾಲಾಮುಖೋ ಜಾತೋ ರಾಜಾ ಮಾಹೇಶ್ವರೋಽಕ್ಷಮೀ ।**
**ತಸ್ಮಾತ್ತು ಕ್ಷಮಯಾ ಭಾವ್ಯಂ ಪರತ್ರೇಹ ಸುಖೇಪ್ಸುನಾ ॥ ೯೫ ॥**

---

೯೨. ರಾಜನು ಅರಮನೆಗೆ ಹೋಗಿ ದಂಡಾಧ್ಯಕ್ಷನನ್ನು ಕುರಿತು ಈಗಲೇ ಆ ಸೂಳೆಯ ತಲೆಯನ್ನು ವಿಚಾರಿಸದೆ ಕಡಿದುಹಾಕೆಂದನು.

೯೩. ಒಂದು ಘಳಿಗೆಯ ಒಳಗೆ ಆಕೆಯ ತಲೆಯನ್ನು ತಂದು ನನಗೆ ತೋರಿಸ ಬೇಕೆಂದನು. ಆ ದಂಡಾಧಿಕಾರಿಯು ರಾಜನ ಮಾತಿನಂತೆ ತಲೆಯನ್ನು ಕತ್ತರಿಸಿ ತಂದು ಅವನಿಗೆ ತೋರಿಸಿದನು.

೯೪. ವೀರಭದ್ರನು ಹೇಳಿದನು :—ಹೀಗೆ ನೀನು ಪೂರ್ವದಲ್ಲಿ ಮಾಡಿದ್ದೀಯೆ. ಅದರ ಫಲವನ್ನು ಈಗ ಹೊಂದಿದ್ದೀಯೆ. ಜ್ವಾಲೆಯಿಂದಲೇ ಮಾತನಾಡುತ್ತೀಯೆ, ಕೇಳುತ್ತೀಯೆ, ನೋಡುತ್ತೀಯೆ, ವಾಸನೆ ನೋಡುತ್ತೀಯೆ, ರುಚಿಯನ್ನೂ ನೋಡು ತ್ತೀಯೆ. ಬುದ್ಧಿಯನ್ನೂ ಉಪಯೋಗಿಸುತ್ತೀಯೆ. ಆದರೆ ಬಹು ಕೋಪವುಳ್ಳವ ನಾಗಿ ಆಗುತ್ತೀಯೆ.

೯೫. ಈ ರೀತಿಯಾಗಿ ರಾಜನು ಜ್ವಾಲಾಮುಖನಾದನು. ಕೋಪವುಳ್ಳವ ನಾದನು. ಆದ್ದರಿಂದ ಇಹಪರಗಳಲ್ಲಿ ಸುಖವನ್ನು ಅಪೇಕ್ಷಿಸುವವನು ಕ್ಷಮೆಯಿಂದ ಇರಬೇಕು.

**ಯ ಇದಂ ಶೃಣೆಯಾನ್ನಿತ್ಯಂ ಪುಣ್ಯಾಖ್ಯಾನಮನುತ್ತಮಂ ।**
**ವಿಮುಕ್ತಪಾಪಬಂಧಶ್ಚ ಶಿವಲೋಕೇ ಭವಿಷ್ಯತಿ ॥ ೯೬ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವ ಸಂವಾದೇ ಪೂಜಾಮಾಹಾತ್ಮ್ಯಕಥನಂ ನಾಮ ಷಡಧಿಕಶತತಮೋಽಧ್ಯಾಯಃ**



---

೯೬. ಯಾವನು ಉತ್ತಮವಾದ, ಪುಣ್ಯವಾದ ಈ ಕಥೆಯನ್ನು ಕೇಳುತ್ತಾನೆಯೋ ಅವನು ಪಾಪವನ್ನು ಕಳೆದುಕೊಂಡು ಶಿವಲೋಕದಲ್ಲಿ ಸುಖಿಸುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ಪೂಜಾಮಹಿಮೆಯೆಂಬ ನೂರ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಸಪ್ತಾಧಿಕಶತತಮೋऽಧ್ಯಾಯಃ

---

॥ ಶ್ರೀರಾಮ ಉವಾಚ ॥

ಮಹೇಶನಾಮಮಾಹಾತ್ಮ್ಯಂ ಪೂಜಾಮಾಹಾತ್ಮ್ಯಮೇವ ಚ ।
ನಮಸ್ಕಾರಸ್ಯಮಾಹಾತ್ಮ್ಯಂ ದೃಷ್ಟಮಾಹಾತ್ಮ್ಯಮೇವ ಚ ॥ ೧ ॥

ಜಲದಾನಸ್ಯ ಮಾಹಾತ್ಮ್ಯಂ ಧೂಪದಾನಸ್ಯ ಸತ್ತಮ ।
ದೀಪಗಂಧಾದಿದಾನಸ್ಯ ಮಹಾತ್ಮ್ಯಂ ವದ ಮೇ ಗುರೋ ॥ ೨ ॥

॥ ಶಂಭುರುವಾಚ ॥

ಏಕೈಕಾನಾಂ ತು ಮಾಹಾತ್ಮ್ಯಂ ವಿಸ್ತರಾನ್ನ ಹಿ ಶಕ್ಯತೇ ।
ಸಂಕ್ಷೇಪೇಣ ಚ ತೇ ವಚ್ಮಿ ಶೃಣು ರಾಘವ ಸಾದರಂ ॥ ೩ ॥

---

## ನೂರ ಏಳನೆಯ ಅಧ್ಯಾಯವು

೧-೨. ಶ್ರೀರಾಮನು ಹೇಳಿದನು :—ಮಹೇಶನಾಮದ ಮಹಿಮೆಯನ್ನೂ, ಪೂಜೆಯ ಮಹಿಮೆಯನ್ನೂ, ನಮಸ್ಕಾರದ ಮಹಿಮೆಯನ್ನೂ, ದರ್ಶನದ ಮಹಿಮೆಯನ್ನೂ, ಜಲವನ್ನು ದಾನಮಾಡುವುದರ ಮಹಿಮೆಯನ್ನೂ, ಧೂಪವನ್ನು ಹಾಕುವುದರ ಮಹಿಮೆಯನ್ನೂ, ದೀಪಗಂಧಗಳನ್ನು ದಾನಮಾಡುವುದರ ಮಹಿಮೆಯನ್ನೂ, ಎಲೈ ಗುರುವೇ, ಹೇಳು ಎಂದನು.

೩. ಶಂಭುವು ಹೇಳಿದನು :—ಒಂದೊಂದರ ಮಹಿಮೆಯನ್ನೂ ವಿಸ್ತಾರವಾಗಿ ಹೇಳಲು ಸಾಧ್ಯವಿಲ್ಲ. ಸಂಕ್ಷೇಪವಾಗಿ ಹೇಳುತ್ತೇನೆ. ರಾಘವನೇ ಕೇಳು.

ಪುರಾ ತ್ರೇತಾಯುಗೇ ರಾಜಾ ವಿಧೃತೋ ನಾಮ ವೀರ್ಯವಾನ್ ।
ಮೃತೇ ಪಿತರಿ ಬಾಲೋಽಸೌ ಭೂಮಿರಾಜ್ಯೇಽಭಿಷೇಚಿತಃ ॥ ೪ ॥

ಸಮಾನವಯಸಸ್ಸರ್ವಾನ್ಸಮೀಪಸ್ಥಾಂಶ್ಚಕಾರ ಸಃ ।
ಯೇ ವೃದ್ಧಾ ಯೇ ಚ ವಿದ್ವಾಂಸಸ್ತೇ ಚ ತಸ್ಯ ನ ಸಮ್ಮತಾಃ ॥ ೫ ॥

ಯುವಾನಸ್ಸಂಮತಾ ದುಷ್ಟಾ ಅಕಾರ್ಯಕರಣಾಸ್ತಥಾ ।
ಸುಸ್ತ್ರ್ಯಾನಯನದಕ್ಷಾಶ್ಚ ಚೋರಕರ್ಮವಿಶಾರದಾಃ ॥ ೬ ॥

ಭಾಂಡವಾರ್ತಾರತಾ ಲಾಸ್ಯನಿಪುಣಾಸ್ತಸ್ಯ ಸಮ್ಮತಾಃ ।
ವಶೀಕರಣಮಂತ್ರಜ್ಞಾ ವಸ್ತ್ರೌಷಧವಿದಸ್ತಥಾ ॥ ೭ ॥

ಗೀತನರ್ತನಶೀಲಾಶ್ಚ ಧೂರ್ತಾ ದ್ಯೂತವಿದಃ ಪ್ರಿಯಾಃ ।
ಪಿತೃಸಮ್ಮತಕರ್ತೄಣಾಂ ತ್ಯಾಗಂ ಚಕ್ರೇ ಸ ಪಾರ್ಥಿವಃ ॥ ೮ ॥

ವಿಚಾರ್ಯ ಸ ಚ ತೈಸ್ಸಾರ್ಧಂ ದುಷ್ಟೈಃ ಕಾರ್ಯಮಕಾರಯತ್ ।
ಏತಾದೃಶಾಂಸ್ತಥಾ ಚಾನ್ಯಾನ್ದುಷ್ಟಾನ್ ಸ ಹ ಯುಯೋಜ ಹ ॥ ೯ ॥

---

೪. ತ್ರೇತಾಯುಗದಲ್ಲಿ ವಿಧೃತನೆಂಬ ರಾಜನಿದ್ದನು. ತಂದೆಯು ಸಾಯಲು ಬಾಲನಾಗಿರುವಾಗಲೇ ರಾಜ್ಯದಲ್ಲಿ ಅಭಿಷೇಕಮಾಡಲ್ಪಟ್ಟನು.

೫. ತನ್ನ ವಯಸ್ಸಿನವರನ್ನೇ ಹತ್ತಿರದಲ್ಲಿ ಕೆಲಸಕ್ಕೆ ಇಟ್ಟುಕೊಂಡನು. ಮುದುಕರು, ವಿದ್ವಾಂಸರು ಅವನಿಗೆ ಬೇಕಿಲ್ಲದವರಾದರು.

೬. ಯುವಕರಾದವರು. ದುಷ್ಟರು, ಅಯೋಗ್ಯವಾದ ಕೆಲಸವನ್ನು ಮಾಡ ತಕ್ಕವರು, ಒಳ್ಳೆಯ ಹೆಂಗಸರನ್ನು ತರತಕ್ಕವರು, ಕಳ್ಳತನದಲ್ಲಿ ದಕ್ಷರಾದವರು, ಭಂಡವಾದ ಮಾತಿನಲ್ಲಿ ಆಸಕ್ತರು, ನರ್ತಕರು, ಅವನಿಗೆ ಬೇಕಾದವರಾದರು.

೭-೮. ವಶೀಕರಣಮಂತ್ರವನ್ನು ಬಲ್ಲವರು, ವಸ್ತ್ರೌಷಧಗಳನ್ನು ಬಲ್ಲವರು, ಗೀತನರ್ತನದಲ್ಲಿ ಕುಶಲರೂ, ಧೂರ್ತರು, ಜೂಜಿನಲ್ಲಿ ಗಟ್ಟಿಗರಾದವರು ಅವನಿಗೆ ಪ್ರಿಯರಾದವರಾದರು. ತಂದೆಗೆ ಬೇಕಾದ ಕೆಲಸಮಾಡುವವರನ್ನು ಅವನು ಬಿಟ್ಟು ಬಿಟ್ಟನು.

೯. ಆ ದುಷ್ಟರೊಡನೆ ವಿಚಾರಮಾಡಿ ಕೆಲಸಗಳನ್ನು ಮಾಡುತ್ತ ಬಂದನು. ಇದೇ ರೀತಿಯಾದ ಇನ್ನೂ ಬೇರೆಯವರನ್ನೂ ಅವನು ಸೇರಿಸಿಕೊಂಡನು.

ಏತದುಕ್ತಮುಥಾಲಂಬ್ಯ ಶಿಷ್ಟಂ ಸುಹೃದಮುತ್ಯಜತ್ ।
ಉರೋಮುಷ್ಟಿಂ ಚ ಘೇತ್ಕಾರಂ ಯೇ ಕುರ್ಯುಸ್ತಸ್ಯ ತೇ ಪ್ರಿಯಾಃ ॥ ೧೦ ॥

ಭಗಲಕ್ಷಣತತ್ತ್ವಜ್ಞಾ ರತಿತಂತ್ರವಿಶಾರದಾಃ ।
ರಾಜನೀತಿವಿಹೀನಂ ತದ್ರಾಜ್ಯಂ ಸಮಭವತ್ತದಾ ॥ ೧೧ ॥

ಗಜಾಶ್ವರಥಮುಷ್ಟ್ರಾಜಂ ಗೋಮಹಿಷ್ಯಾದಿಕಂ ಚ ಯತ್ ।
ತತ್ಸರ್ವಂ ನಾಶಮಾಪನ್ನಮುಪಹಾರಾ ಯತಸ್ತತಃ ॥ ೧೨ ॥

ರತ್ನಾನಿ ವಸು ಧಾನ್ಯಾನಿ ನ ದೃಶ್ಯಂತೇ ಪುರೇ ತದಾ ।
ಅಥ ಭೂಪಾಂತರೇಣಾಸೌ ನಿರ್ಜಿತಃ ಪ್ರಪಲಾಯಿತಃ ॥ ೧೩ ॥

ಮಹಾರಣ್ಯಮಥೋ ಗತ್ವಾ ಗಿರಿದುರ್ಗಮಕಲ್ಪಯತ್ ।
ತತ್ರ ಚಾಲ್ಪಪರೀವಾರಶ್ಚೋರವೃತ್ತಿಂ ಸಮಾಶ್ರಿತಃ ॥ ೧೪ ॥

---

೧೦. ಇವರು ಹೇಳಿದುದನ್ನೇ ನಂಬಿಕೊಂಡು ಯೋಗ್ಯರಾದ ಸ್ನೇಹಿತರನ್ನು ಬಿಟ್ಟುಬಿಟ್ಟನು. ಎದೆ ತಟ್ಟಿಕೊಳ್ಳುವವರೂ, ಭಲ ಭೇಷ್ ಎಂದು ಹೊಗಳುವವರೂ ಅವನಿಗೆ ಪ್ರಿಯರಾದರು.

೧೧. ಹೆಂಗಸರ ಗುಹ್ಯಸ್ಥಳದ ತತ್ವವನ್ನು ಬಲ್ಲವರು, ರತಿಶಾಸ್ತ್ರವನ್ನು ತಿಳಿದವರು ಅವನಿಗೆ ಬೇಕಾದವರಾದರು. ಹೀಗೆ ಆ ರಾಜ್ಯದಲ್ಲಿ ರಾಜನೀತಿಯಿಲ್ಲವಾಯಿತು.

೧೨. ಆನೆ, ಕುದುರೆ, ರಥ, ಒಂಟೆ, ಆಡು, ಗೋವು, ಎಮ್ಮೆ ಮುಂತಾದುವು ಇದ್ದಿದ್ದ ಜಾಗದಲ್ಲಿಯೇ ಕದಿಯಲ್ಪಟ್ಟು ನಾಶವಾದುವು.

೧೩. ರತ್ನಗಳೂ, ಹಣಗಳೂ, ಧಾನ್ಯಗಳೂ, ಆ ಊರಿನಲ್ಲಿ ಕಾಣಬರಲಿಲ್ಲ. ಆ ಸಮಯದಲ್ಲಿ ಬೇರೆ ರಾಜನು ಬಂದು ಆ ರಾಜ್ಯವನ್ನು ಜಯಿಸಲು, ಈ ರಾಜನು ಓಡಿಹೋದನು.

೧೪. ಆಗ ಅವನು ಒಂದು ಕಾಡಿಗೆ ಹೋಗಿ ಅಲ್ಲೊಂದು ಬೆಟ್ಟದಲ್ಲಿ ದುರ್ಗವನ್ನು ಮಾಡಿಕೊಂಡು ಮಿತಪರಿವಾರದೊಡನೆ ವಾಸಿಸುತ್ತ ಕಳ್ಳತನಕ್ಕೆ ಮೊದಲು ಮಾಡಿದನು.

ಸುವರ್ಣವಸ್ತ್ರಧಾನ್ಯಾದಿ ರತ್ನಗಂಧಾದಿಕಂ ತಥಾ।
ತತ್ರ ತತ್ರ ವಿನಿರ್ದಿಶ್ಯ ಚೋರಾನಾನೀಯ ವಂಚಕಾ ॥ ೧೫ ॥

ಬಂಧಾದ್ಯಕಾರಯತ್ತ್ಯೈಸ್ತು ದ್ರವ್ಯಾಹರಣಕರ್ಮಣಿ ।
ಯದಾಹಾರೋ ನ ವಿದ್ಯೇತ ತದಾಹಾರಮಕಲ್ಪಯತ್ ॥ ೧೬ ॥

ಗೋಮಹಿಷ್ಯಾದಿಮಾಂಸೇನ ಯದ್ಯನ್ನಂ ನೋಪಲಭ್ಯತೇ ।
ಅಶ್ವೀಯನರಮಾಂಸೇನ ಭೋಜನಂ ಪರ್ಯಕಲ್ಪಯತ್ ॥ ೧೭ ॥

ಏತಾದೃಶಮಭೂದ್ವೃತ್ತಂ ಸಂಧ್ಯೋಪಾಸ್ಯಾದಿವರ್ಜಿತಂ ।
ಏಕಸ್ತು ಸಚಿವಸ್ತಸ್ಯ ಸುರಾಪೋಽನಾಮ ರಾಕ್ಷಸಃ ॥ ೧೮ ॥

ನಿಯುಂಕ್ತೇ ಸರ್ವಕಾಲಂ ತಮಾಹರ ಪ್ರಹರೇತಿ ಚ ।
ಏವಂ ರಕ್ಷೋಮತೇ ಸ್ಥಿತ್ವಾ ನಾನಾದೇಶಗತಾನ್ನರಾನ್ ॥ ೧೯ ॥

---

೧೫-೧೬. ಚಿನ್ನ, ಬಟ್ಟೆ, ಧಾನ್ಯ, ರತ್ನ, ಗಂಧ ಮುಂತಾದುವುಗಳನ್ನು, ಕದಿಯಲು ನಾಲ್ಕೈದುಜನ ಕಳ್ಳರನ್ನು ಕರೆದುಕೊಂಡು ಬಂದು ಅವರಿಗೆ ಆ ಪದಾರ್ಥಗಳಿರುವ ಜಾಗವನ್ನು ತೋರಿಸುತ್ತ, ಅವರೊಡನೆ ಒಂದು ಕಟ್ಟುಪಾಡನ್ನು ಮಾಡಿಕೊಂಡು ಅವರಿಂದ ಕದ್ದು ತರಿಸುತ್ತಿದ್ದನು. ಆಹಾರವಿಲ್ಲದಿರುವಾಗ ಆಹಾರವನ್ನು ಕದ್ದು ತರಿಸುತ್ತಿದ್ದನು.

೧೭. ಧಾನ್ಯಾಹಾರಗಳಿಗೆ ತೊಂದರೆಯಾದಾಗ ಹಸು, ಎಮ್ಮೆ, ಮುಂತಾದುವುಗಳ ಮಾಂಸವನ್ನೂ ಆಹಾರವನ್ನಾಗಿ ಉಪಯೋಗಿಸುತ್ತಿದ್ದನು. ಅದೂ ಸಿಕ್ಕದಿದ್ದರೆ ಕುದುರೆಯ ಮಾಂಸ, ಮನುಷ್ಯರ ಮಾಂಸಗಳನ್ನು ಉಪಯೋಗಿಸುತ್ತಿದ್ದನು. ಈರೀತಿ ಸಂಧ್ಯಾವಂದನಾದಿಗಳಿಂದ ಕೂಡಿದ್ದ ಅವನ ಚರಿತ್ರೆಯು ಈ ಸ್ಥಿತಿಗೆ ಬಂದಿತು.

೧೮. ಅವನಿಗೊಬ್ಬ ರಾಕ್ಷಸನೆಂಬ ಮಂತ್ರಿಯು. ಅವನೂ ಹೆಂಡಕುಡುಕನು. ಆ ಮಂತ್ರಿಯು ಹೇಳಿಕೆಯಂತೆ ಪದಾರ್ಥಗಳನ್ನು ಕದಿಯಲೂ, ಜನಗಳನ್ನು ಕೊಲ್ಲಲೂ ಹೋಗುವನು.

೧೯. ಹೀಗೆ ಆ ಮಂತ್ರಿಯಾದ ರಾಕ್ಷಸನು ಹೇಳಿದಂತೆ ಕೇಳುತ್ತಾ, ಅನೇಕ ಜನರನ್ನು ಆಳುಗಳನ್ನಾಗಿ ಮಾಡಿಕೊಂಡು ಅವರೊಡನೆ ನಾನಾ ದೇಶದ ಜನಗಳನ್ನು ಸ್ವಲ್ಪವೂ ಕೃಪೆಯಿಲ್ಲದೆ ಹೊಡೆದು ತರುವನು.

ನೃಸಹಸ್ರಪರೀವಾರೋ ಹ್ಯಾದದ್ಯಾದಕೃಪಾಲಯಃ ।
ಸ್ವಸ್ಯಾಭಿಮತಯೋಷಾಸ್ತು ತತ್ರ ತತ್ರ ಸಮಾಹರತ್ ॥ ೨೦ ॥

ಕಿಂಚಿತ್ಕಾಲಂ ಚ ತಾ ಭುಕ್ತ್ವಾ ತಾಶ್ಚಾಪಿ ಸಮಭಕ್ಷಯತ್ ।
ಏವಂ ಹತ್ವಾ ನರಾನ್ನಾರೀ ರಾಜ್ಯಂ ಚಕ್ರೇ ಸುದುಸ್ಸಹಂ ॥ ೨೧ ॥

ಏವಂ ವರ್ಷಸಹಸ್ರಂ ತು ರಾಜ್ಯಂ ಕೃತ್ವಾ ನರಾಧಮಃ ।
ಜರಾಶಿಥಿಲಸರ್ವಾಂಗೋ ವಲೀಪಲಿತದೂಷಿತಃ ॥ ೨೨ ॥

ನಿರ್ಜೀವಮಭವತ್ಸ್ಥಾನಂ ಸಮಂತಾದ್ದಶಯೋಜನಂ ।
ಅಥ ಮೃತ್ಯುದಿನಂ ಪ್ರಾಪ್ತಂ ರಾಜ್ಞಸ್ತಸ್ಯ ಮಹಾತ್ಮನಃ ॥ ೨೩ ॥

ಮೃತ್ಯುಕಾಲೇ ಚ ಸಂಪ್ರಾಪ್ತೇ ಸ್ನಾತಂ ಭೂಮಿಗತಂ ನೃಪಂ ।
ತಸ್ಯ ಚಾನುಚರಾಸ್ಸರ್ವೇ ಪರಿವಾರ್ಯೋಪತಸ್ಥಿರೇ ॥ ೨೪ ॥

---

೨೦. ತನಗೆ ಬೇಕಾದ ಹೆಂಗಸರನ್ನು ಅಲ್ಲಲ್ಲೇ ಕದ್ದುತಂದು ಕೆಲವುಕಾಲ ಅವರನ್ನು ಅನುಭವಿಸಿ ಆಮೇಲೆ ಅವರನ್ನೇ ತಿಂದುಬಿಡುತ್ತಿದ್ದನು.

೨೧. ಈರೀತಿ ಗಂಡಸರು ಹೆಂಗಸರನ್ನು ಕೊಂದು, ಅಯೋಗ್ಯತನದಿಂದ ರಾಜ್ಯವನ್ನು ಕಟ್ಟಿ ಆಳಿದನು.

೨೨. ಈರೀತಿ ಒಂದುಸಾವಿರ ವರ್ಷಗಳು ಆ ಅಯೋಗ್ಯನು ರಾಜ್ಯಭಾರ ಮಾಡಿದನು. ಮತ್ತು ಮುದುಕನಾಗಲು ಕೈಕಾಲುಗಳೆಲ್ಲವೂ ಸಡಿಲವಾದುವು. ತಲೆಯೆಲ್ಲಾ ನರೆತುಹೋಯಿತು. ಸುತ್ತಲೂ ಹತ್ತುಯೋಜನಗಳವರೆಗೂ ಪ್ರಾಣಿಗಳೊಂದೂ ಇಲ್ಲದಂತಾದುವು.

೨೩-೨೪. ಹೀಗಿರಲು ಆ ರಾಜನಿಗೆ ಸಾಯುವ ಕಾಲ ಬಂದಿತು. ಕೊನೆಗಾಲದಲ್ಲಿ ಸ್ನಾನಮಾಡಿ ಭೂಮಿಯ ಮೇಲೆ ಮಲಗಿರಲು ಅವನ ಅನುಚರರು ಸುತ್ತುಕಟ್ಟಿಕೊಂಡು ಇದ್ದರು.

ಸುರಾಪಃ ಸಚಿವಃ ಪ್ರಾಹ ಕಿಂ ಕಾರ್ಯಂ ಮಮ ಚಾದಿಶ ।
ಅಥ ರಾಜಾ ತಥಾಶಕ್ತೋ ನಿರ್ಗತಾಯುಸ್ತದಾರ್ತಿತಃ ॥ ೨೫ ॥

ನಾಭೇರಧಸ್ತು ಕ್ಷೀಣಾಸುಃ ಕಥಂಚಿದ್ವಾಕ್ಯಮುಕ್ತವಾನ್ ।
ತ್ವಂ ಸರ್ವಕಾಲಂ ದೈತ್ಯೇಂದ್ರ ಪ್ರಾಹರ ಪ್ರಹರಾ ಹರ ॥ ೨೬ ॥

ಇತ್ಯಥೋಕ್ತ್ವಾ ಮಮಾರಾಸೌ ಯಮದೂತಾಸ್ಸಮಾಯಯುಃ ।
ವಿಚಿತ್ರಂ ಬಂಧನೇ ಯತ್ನಂ ಚಕ್ರುಸ್ತಾಡನತತ್ಪರಾಃ ॥ ೨೭ ॥

ಚೂರ್ಣಿತಾ ಬಂಧಪಾಶಾಶ್ಚ ಹೇತಿದಂಡಾಶ್ಚ ಚೂರ್ಣಿತಾಃ ।
ತದ್ಗಾತ್ರಸ್ಪರ್ಶಮಾತ್ರೇಣ ತದದ್ಭುತಮಿವಾಭವತ್ ॥ ೨೮ ॥

ಅಥಾಯಾತಃ ಸ್ವಯಂ ಮೃತ್ಯುಃ ಪಾಶೇನೈನಮಯೋಜಯತ್ ।
ಮೃತ್ಯುಪಾಶಮಪಿ ಚ್ಛಿನ್ನಂ ವೀಕ್ಷ್ಯ ಮೃತ್ಯುರಚಿಂತಯತ್ ॥ ೨೯ ॥

---

೨೫. ಆ ರಾಕ್ಷಸನೆಂಬ ಮಂತ್ರಿಯು ನಾನೇನು ಮಾಡಲಿ ಅಪ್ಪಣೆಮಾಡೆಂದನು. ಆಗ ರಾಜನು ಶಕ್ತಿರಹಿತನಾಗಿಯೂ, ಆಯಸ್ಸು ಕಳೆದವನಾಗಿಯೂ, ದುಃಖದಿಂದ ಕೂಡಿದ್ದನು. ಆಗಲೇ ಜಂಘಾಬಲವು ಹೋಗಿದ್ದಿತು. ಆಗಲೂ ಬಹು ಕಷ್ಟದಿಂದ ಇಂತೆಂದನು.

೨೬. ಎಲೈ ರಾಕ್ಷಸನೇ, ನೀನು ಯಾವಾಗಲೂ ಪ್ರಾಹರ, ಪ್ರಹರ, ಆಹರ, ಎಂದರೆ, ಹೊಡಿ, ಹೊಡಿ, ತೆಗೆದುಕೊಂಡು ಬಾ ಎಂದನು. ಇದನ್ನು ಹೇಳುತ್ತಿರುವಾಗಲೇ ಸತ್ತನು. ಒಡನೆಯೇ ಯಮದೂತರು ಬಂದರು.

೨೭-೨೮. ಅವರು ಹೊಡೆಯುತ್ತ ಅವನನ್ನು ಕಟ್ಟಲು ಮೊದಲುಮಾಡಿದರು. ಆಗ ಆ ಹಗ್ಗಗಳು ಪುಡಿಪುಡಿಯಾದುವು. ಆಯುಧಗಳೂ, ದೊಣ್ಣೆಗಳೂ ಚೂರು ಚೂರಾದುವು. ಅವನ ಮೈಯನ್ನು ಸೋಕಿದೊಡನೆಯೇ ಹೀಗಾಗಲು ಅವರು ಆಶ್ಚರ್ಯಪಟ್ಟರು.

೨೯. ಅನಂತರ ಮೃತ್ಯುವೇ ಬಂದು ತನ್ನ ಪಾಶದಿಂದ ಬಿಗಿಯಲು ಅದೂ ಕೂಡ ಕಿತ್ತುಹೋದುದನ್ನು ನೋಡಿ ಮೃತ್ಯುವು ಯೋಚಿಸಿದನು.

ಸರ್ವಮರ್ತ್ಯಾನ್ಮೃತಿರ್ದೃಷ್ಟಾ ದೃಷ್ಟಾ ನೈತಾದೃಶೀ ಕ್ವಚಿತ್ ।
ಇತಿ ಚಿಂತಾಪರೇ ಮೃತ್ಯೌ ಜ್ವಾಲವಕ್ತ್ರಃ ಪ್ರತಾಪವಾನ್ ॥ ೩೦ ॥

ವೀರಭದ್ರೇಣ ನಿರ್ದಿಷ್ಟಃ ಸಹಸಾಯಾಚ್ಚ ಶೂಲಭೃತ್ ।
ಜ್ವಾಲಾವಕ್ತ್ರಮುಖಾಲೋಕ್ಯ ಮೃತ್ಯುಸ್ತೂರ್ಣಂ ಪಲಾಯಯೌ ॥ ೩೧ ॥

ಪಲಾಯಮಾನಂ ತಂ ದೃಷ್ಟ್ವಾ ಮೃತ್ಯುಂ ವಹ್ನಿಮುಖಸ್ತದಾ ।
ಅರೇ ರೇ! ಚೋರ ಚೋರ ತ್ವಂ ತಿಷ್ಠ ತಿಷ್ಠ ಕ್ವ ಯಾಸ್ಯಸಿ ॥ ೩೨ ॥

ಏನಸೋ ಮುಚ್ಯಸೇ ಚೋರ ಶೂಲಾರೋಪಣಮಾತ್ರತಃ ।
ಏವಮಾಭಾಷ್ಯ ಮೃತ್ಯುಂ ತಂ ಶೂಲಪ್ರೋತಮಕಲ್ಪಯತ್ ॥ ೩೩ ॥

ಶೂಲಸ್ಕಂಧಗತಂ ಕೃತ್ವಾ ದೂತಾನ್ಸಂಗ್ರಥ್ಯ ರಜ್ಜುನಾ ।
ಪಾದಶೃಂಖಲವಿನ್ಯಸ್ತಾನಾದಾಯನೃಪಮಭ್ಯಗಾತ್ ॥ ೩೪ ॥

ವಿಮಾನವರಮಾರೋಪ್ಯ ಗೀತವಾದ್ಯಸುಶೋಭಿತಂ ।
ವೀರಾಂತಿಕಮಥೋ ಗತ್ವಾ ಸರ್ವಮಸ್ಮೈ ನ್ಯವೇದಯತ್ ॥ ೩೫ ॥

---

೩೦-೩೧. ಅನೇಕ ಮನುಷ್ಯರ ಸಾವನ್ನು ನೋಡಿದ್ದೇನೆ. ಇಂತಹ ಸಾವನ್ನು ಎಲ್ಲಿಯೂ ನೋಡಲಿಲ್ಲವಲ್ಲ! ಎಂದು ಮೃತ್ಯುವು ಯೋಚಿಸುತ್ತಿರುವಾಗ ಪ್ರತಾಪ ಶಾಲಿಯಾದ ಜ್ವಾಲಾವಕ್ತ್ರನು ವೀರಭದ್ರನ ಅಪ್ಪಣೆಯಂತೆ ಅಲ್ಲಿಗೆ ಬರಲು ಅವನನ್ನು ನೋಡಿ ಮೃತ್ಯುವು ಓಡಿಹೋದನು.

೩೨-೩೩. ಮೃತ್ಯುವು ಓಡಿಹೋಗುತ್ತಿರುವುದನ್ನು ಜ್ವಾಲಾಮುಖನು ನೋಡಿ ಲೋ ಲೋ! ನೀನು ಕಳ್ಳ. ನಿಲ್ಲು ನಿಲ್ಲು ಎಲ್ಲಿ ಓಡುತ್ತೀಯೆ? ನೀನು ಈ ಪಾಪ ದಿಂದ ಪಾರಾಗಬೇಕಾದರೆ ಶೂಲಕ್ಕೇರಿಸಬೇಕು ಎಂದು ಹೇಳುತ್ತ ಆ ಮೃತ್ಯುವನ್ನು ಹಿಡಿದು ಶೂಲಕ್ಕೇರಿಸಿದನು.

೩೪. ಮೃತ್ಯುವನ್ನು ಶೂಲಕ್ಕೆ ಸಿಕ್ಕಿಸಿ, ಯಮದೂತರನ್ನೂ ಹಗ್ಗದಿಂದ ಕಟ್ಟಿ, ಕಾಲಿಗೆ ಬೇಡಿಯನ್ನು ತೊಡಿಸಿ ಕರೆದುಕೊಂಡು ರಾಜನ ಬಳಿಗೆ ಹೋದನು.

೩೫. ಗೀತವಾದ್ಯಗಳಿಂದ ಕೂಡಿದ ವಿಮಾನದಲ್ಲಿ ಆ ರಾಜನನ್ನು ಕೂರಿಸಿ ಕೊಂಡು ವೀರಭದ್ರನ ಬಳಿಗೆ ಹೋಗಿ ಎಲ್ಲಾ ವಿಷಯವನ್ನೂ ವಿಜ್ಞಾಪಿಸಿದನು.

ವೀರಭದ್ರೋಽಪಿ ತತ್ಸರ್ವಂ ಶಂಕರಾಯಾಮಿತಾತ್ಮನೇ ।
ನಾನಾಮುನಿಗಣೈರ್ದೇವೈರ್ಬ್ರಹ್ಮವಿಷ್ಣುಪುರಸ್ಸರೈಃ ॥ ೩೬ ॥

ಸೇವ್ಯಮಾನಾಯ ದೇವಾಯ ಪಾರ್ವತೀಸಹಿತಾಯ ಚ ।
ಪ್ರಣಿಪತ್ಯ ನಿವೇದ್ಯಾಥ ಶೂಲಸ್ಥಂ ಮೃತ್ಯುಮೇವ ಚ ।
ತೂಷ್ಣೀಂ ಬಭೂವ ವಿಶ್ವಾತ್ಮಾ ವೀರಭದ್ರಃ ಪ್ರತಾಪವಾನ್ ॥ ೩೭ ॥

ಅಗ್ನ್ಯಾನನಂ ವೀಕ್ಷ್ಯ ಶಿವೋ ವಿಗರ್ಹಯ-
ನ್ಕಥಂ ತ್ವಯೈತದ್ಗಣ ಸಾಹಸಂ ಕೃತಂ ।
ಬಿಭೇಷಿ ಮೃತ್ಯೋರ್ನ ಕಥಂ ಯಮಾಧಿಕಾ-
ದ್ವದಸ್ವ ಸರ್ವಂ ಪರಮಾರ್ಥತೋ ಮೇ ॥ ೩೮ ॥

ಪ್ರಣಮ್ಯ ತಂ ವಹ್ನಿಮುಖೋಽತಿರೋಷಾ-
ನ್ಮೃತ್ಯುಂ ಸಮಾಲೋಕ್ಯ ನನರ್ತ ಹರ್ಷಾತ್ ।
ಉವಾಚ ಚೌರ್ಯಂ ಕೃತಮೇವ ಮೃತ್ಯುನಾ
ತದೇಷ ಶೂಲೇಽಪಿ ಮಯಾ ಪ್ರರೋಹಿತಃ ॥ ೩೯ ॥

---

೩೬-೩೭. ವೀರಭದ್ರನು ನಾನಾ ಮುನಿಗಳಿಂದಲೂ, ಬ್ರಹ್ಮವಿಷ್ಣು ಮುಂತಾದ ದೇವತೆಗಳಿಂದಲೂ, ಸೇವೆಯನ್ನು ತೆಗೆದುಕೊಳ್ಳುತ್ತಾ, ಕುಳಿತಿರುವ ಪಾರ್ವತೀಸಹಿತನಾದ ಶಂಕರನಿಗೆ ನಮಸ್ಕರಿಸಿ, ಇದೆಲ್ಲವನ್ನೂ ತಿಳಿಸಿ, ಮೃತ್ಯುವು ಶೂಲದಲ್ಲಿರುವುದನ್ನೂ ತಿಳಿಸಿ ಸುಮ್ಮನಾದನು.

೩೮. ಅಗ್ನಿಮುಖನನ್ನು ನೋಡಿ ಶಿವನು ಬಯ್ಯುತ್ತಾ ಎಲೈ ಗಣನೆ, ನೀನು ಹೇಗೆ ಈ ಮುಂದಾಲೋಚನೆಯಿಲ್ಲದ ಕೆಲಸವನ್ನು ಮಾಡಿದೆ? ಯಮನಿಗಿಂತಲೂ ಅಧಿಕನಾದ ಮೃತ್ಯುವಿಗೆ ಏಕೆ ಹೆದರದೇ ಹೋದೆ? ಅದೆಲ್ಲವನ್ನೂ ನನಗೆ ಹೇಳು.

೩೯. ಸ್ವಾಮಿಗೆ ವಹ್ನಿಮುಖನು ನಮಸ್ಕರಿಸಿ, ಕೋಪದಿಂದ ಮೃತ್ಯುವನ್ನು ನೋಡುತ್ತ ಹರ್ಷದಿಂದ ಕುಣಿದನು. ಆಗ ಹೇಳಿದನು. ಮೃತ್ಯುವೂ, ಕಳ್ಳತನವನ್ನು ಮಾಡಿದನು. ಅದರಿಂದಲೇ ಅವನನ್ನು ಶೂಲಕ್ಕೆ ಏರಿಸಿದ್ದೇನೆ ಎಂದನು.

ವಿಮೋಚಯಾಮಾಸ ಶಿವೋಽಪಿ ಮೃತ್ಯುಂ
ದೂತಾನಶೇಷಾನ್ನಿರುಜಶ್ಚಕಾರ ।
ಮೃತ್ಯುಂ ಸಮಾಲೋಕ್ಯ ಶಿವೋ ಬಭಾಷೇ
ಮನ್ನಾಮ ಯೇಷಾಂ ಮರಣೇ ಸಮಾಸ್ತೇ ॥ ೪೦ ॥

ಮಚ್ಚೇತಸಾಮನ್ಯಧಿಯಾಂ ಚ ನಾಮ
ಹೀನಾಕ್ಷರಂ ವಾಽಧಿಕವರ್ಣಯುಕ್ತಂ ।
ಮಮೈವ ಲೋಕಂ ಪ್ರದದಾಮಿ ಸತ್ಯಂ
ಹ್ಯನೇನ ನಾಮ ಪ್ರಹರೇತಿ ಭಾಷಿತಂ ॥ ೪೧ ॥

ಪ್ರಶಬ್ದಮಾತ್ರಂ ತ್ವಧಿಕಂ ಹರೇತಿ
ಪದಪ್ರದಂ ಚ ಪದಮೀರಯಂತಿ ।
ಆರಾದಮೂಂಸ್ತ್ವಂ ಜಪತೋ ನಮಸ್ವ
ಮದೀಯವಾಕ್ಯಂ ಚ ಯಮಂ ವದಸ್ವ ॥ ೪೨ ॥

ನತಿಂ ಯಜಿಂ ಕೀರ್ತಿಮುಪಾಸ್ತಿಮಾಶ್ರಿತಾ
ದಾಸ್ಯಂ ಚ ಕೈಂಕರ್ಯಮಥ ಶ್ರುತಿಂವದಾಃ ।

---

೪೦. ಆಗ ಶಿವನು ಮೃತ್ಯುವನ್ನೂ ಯಮದೂತರನ್ನೂ ಬಿಡಿಸಿದನು. ಮೃತ್ಯುವನ್ನು ನೋಡಿ ಯಾರು ಸಾಯುವಾಗ ನನ್ನ ಹೆಸರನ್ನು ಉಚ್ಚರಿಸುತ್ತಾರೆಯೋ ಅವರು ನನಗೆ ಸಮರು ಎಂದನು.

೪೧. ಬೇರೆ ರೀತಿಯಲ್ಲಿ ಮನಸ್ಸಿದ್ದರೂ ನನ್ನ ವಿಷಯದಲ್ಲಿ ಮನಸ್ಸಿರುವಂತೆ ಉಚ್ಚರಿಸಿದರೆ, ಅದು ಹೆಚ್ಚಿನ ಅಕ್ಷರವಾಗಲಿ ಕಡಿಮೇ ಅಕ್ಷರವಾಗಲಿ ಅವರಿಗೆ ನನ್ನ ಲೋಕವನ್ನೇ ಕೊಡುತ್ತೇನೆ.

೪೨. ಪ್ರಹರವೆಂಬ ಪದದಲ್ಲಿ ಪ್ರ ಎಂಬುದು ಹೆಚ್ಚಾಗಿದೆ. ಎಂಪರೆ ಹರನು ಅಧಿಕವೆಂದಂತಾಯಿತು. ಹಾಗೆಂದು ತಿಳಿದವರು ಹೇಳುತ್ತಾರೆ. ಇಂತಹವರನ್ನು ದೂರದಲ್ಲಿಯೇ ನಮಸ್ಕರಿಸು. ಈ ನನ್ನ ಮಾತನ್ನು ಯಮನಿಗೆ ತಿಳಿಸು.

೪೩. ನಮಸ್ಕಾರ, ಪೂಜೆ, ಸ್ತೋತ್ರ, ಸೇವೆ, ದಾಸತನ, ಕೈಂಕರ್ಯಗಳನ್ನು

ಪಂಚಾಕ್ಷರೋಕ್ತ್ರಂ ಶತರುದ್ರಿಯೋಕ್ತ್ರಂ
ಶಿವಸ್ಯ ಕುರ್ವಂತಿ ನ ತೇ ವಿಚಾರ್ಯಾಃ ॥ ೪೩ ॥

ಮನ್ನಾಮರುದ್ರಾಕ್ಷವಿಭೂತಿಧಾರಣೋ
ಮಮಾಗ್ರತೋ ಯಸ್ತು ಪುರಾಣವಕ್ತಾ ।
ಸರ್ವೇಷು ಪಾಪೇಷ್ವಪಿ ತೇಷು ಸತ್ಸು
ಪ್ರಶಾಸ್ಮ್ಯಹಂ ನೈವ ಯಮಾಧಿಕಾರಃ ॥ ೪೪ ॥

ಯೇ ಚಾಪಿ ಪಾಪಾನ್ವಿತಮಾಯಿನೋ ನರಾಃ
ಪರಾನ್ನವಸ್ತ್ರಾದಿವಧೂಭುಜಶ್ಚ ।
ವಾರಾಣಸೀಮೃತ್ಯುಪರಾಶ್ಚ ಯೇ ವೈ
ಶ್ರೀ ಶೈಲಮುತ್ಯಾರ್ಶ್ಚ ನ ತೇ ವಿಚಾರ್ಯಾಃ ॥ ೪೫ ॥

ಯೂಕಾಶ್ಚ ದಂಶಾ ಅಪಿ ಮತ್ಕುಣಾಶ್ಚ
ಮೃಗಾದಯಃ ಕೀಟಪಿಪೀಲಿಕಾಶ್ಚ ।
ಸರೀಸೃಪಾ ವೃಶ್ಚಿಕಶೂಕರಾಶ್ಚ
ಕಾಶೀಮೃತಾಃ ಶಂಕರಮಾಪ್ನುವಂತಿ ॥ ೪೬ ॥

---

ಮಾಡುವವರು, ವೇದಾಧ್ಯಾಯಿಗಳು, ಶಿವಪಂಚಾಕ್ಷರಿಯನ್ನು ಜಪಿಸುವವರು, ಶತರುದ್ರದಲ್ಲಿ ಹೇಳಿರುವಂತೆ ಮಾಡುವವರು, ಇವರನ್ನು ನೀನು ವಿಚಾರಿಸಲೇ ಬೇಡ.

೪೪. ನನ್ನ ಸ್ಮರಣೆ, ರುದ್ರಾಕ್ಷಿಧಾರಣೆ, ವಿಭೂತಿಧಾರಣೆ, ನನ್ನಮುಂದೆ ಪುರಾಣವನ್ನು ಹೇಳುವುದು, ಇವರು ಎಲ್ಲಾ ಪಾಪವನ್ನು ಮಾಡಿದ್ದರೂ ಅವರ ಮೇಲೆ ಯಮನಿಗೆ ಅಧಿಕಾರವಿಲ್ಲವೆಂದು ಅಪ್ಪಣೆಮಾಡಿದ್ದೇನೆ.

೪೫. ಯಾರು ಪಾಪಿಗಳೋ, ಯಾರು ಪರಾನ್ನ, ಪರಸ್ತ್ರೀ, ಪರವಸ್ತ್ರಗಳಿಂದಲೇ ಜೀವಿಸುತ್ತಾರೋ ಅವರೂ ಸಹ ವಾರಣಾಸಿಯಲ್ಲಾಗಲಿ, ಶ್ರೀಶೈಲದಲ್ಲಾಗಲಿ ಪ್ರಾಣಬಿಟ್ಟರೆ ಅವರನ್ನು ವಿಚಾರಮಾಡಬೇಡವೆಂದು ಹೇಳಿದ್ದೇನೆ.

೪೬. ನಶ್ಶಾಗಲಿ, (ಹೇನಾಗಲಿ) ನೊಣವಾಗಲಿ, ತಿಗಣೆಯಾಗಲಿ, ಮೃಗಗಳಾಗಲಿ, ಹುಳುವಾಗಲಿ, ಇರುವೆಯಾಗಲಿ, ಹಾವಾಗಲಿ, ಚೇಳಾಗಲಿ, ಯಾವುದೇ ಆಗಲಿ ಕಾಶಿಯಲ್ಲಿ ಸತ್ತರೆ ಶಂಕರನನ್ನು ಸೇರುತ್ತವೆ.

ಇದಂ ನಾಮ ಗೃಣಂ ಧ್ಯಾಯೇದ್ಯೋ ವೈ ಹೃತ್ಪದ್ಮಮಂದಿರೇ ।
ತ್ರಿಯಂಬಕಂ ವಿರೂಪಾಕ್ಷಂ ಸೋಮಸೋಮಾರ್ಧಭೂಷಣಂ ॥ ೪೭ ॥

ತ್ರಿನೇತ್ರಕಂ ತ್ರಯೀನೇತ್ರಂ ಸೋಮಸೂರ್ಯಾಗ್ನಿಲೋಚನಂ ।
ತಂ ನಮಸ್ಕೃತ್ಯ ದೂರಸ್ಥೋ ಭವ ಮೃತ್ಯೋ ಮಮಾಜ್ಞಯಾ ॥ ೪೮ ॥

ಅಥಾಕರ್ಣ್ಯ ಶಿವಪ್ರೋಕ್ತಂ ಮೃತ್ಯುಸ್ತುಷ್ಟಾವ ಶಂಕರಂ ।
ನಮಸ್ತೇ ದೇವತಾನಾಥ ನಮಸ್ತೇ ದೇವಮೂರ್ತಯೇ ॥ ೪೯ ॥

ಸರ್ವಜ್ಞಾಯ ನಮಸ್ತುಭ್ಯಂ ಪಶೂನಾಂ ಪತಯೇ ನಮಃ ।
ಅಥ ದೇವೋ ಮಹಾದೇವೋ ಮೃತ್ಯುಂ ಪ್ರಾಹ ವರಂ ವೃಣು ॥ ೫೦ ॥

ಸ್ತೋತ್ರೇಣಾನೇನ ತುಷ್ಟೋಽಸ್ಮಿ ಮೃತ್ಯುರ್ವರಮಯಾಚತ ।
ತ್ವದೀಯಂ ಪಾಲಯ ವಿಭೋ ಮಾಂ ಚ ಶಂಕರ ಪಾಪಿನಂ ॥ ೫೧ ॥

---

೪೭-೪೮. ತ್ರಿಯಂಬಕ, ವಿರೂಪಾಕ್ಷ, ಉಮೆಯಿಂದ ಕೂಡಿದವನು, ಚಂದ್ರಮೌಳಿ, ತ್ರಿಣೇತ್ರ, ತ್ರಯೀನೇತ್ರ, ಸೂರ್ಯಚಂದ್ರರೇ ಕಣ್ಣಾಗಿ ಉಳ್ಳವನು, ಎಂಬ ಈ ಹೆಸರುಗಳನ್ನು ಯಾವನು ಹೃದಯದಲ್ಲಿ ಸ್ಮರಿಸುತ್ತಾ ನಮಸ್ಕರಿಸುತ್ತಾನೆಯೋ, ಅವನನ್ನು ಎಲೈ ಮೃತ್ಯುವೇ, ನನ್ನ ಅಪ್ಪಣೆಯಿಂದ ದೂರದಲ್ಲಿಯೇ ಬಿಟ್ಟುಬಿಡು.

೪೯. ಶಿವನು ಹೇಳಿದುದನ್ನು ಮೃತ್ಯುವು ಕೇಳಿ ಶಂಕರನನ್ನು ದೇವತಾನಾಥನೇ, ನಿನಗೆ ನಮಸ್ಕಾರವು, ದೇವಮೂರ್ತಿಯೇ ನಿನಗೆ ನಮಸ್ಕಾರವು, ಸರ್ವಜ್ಞನೇ ನಿನಗೆ ನಮಸ್ಕಾರವು, ಪಶುಗಳ ಒಡೆಯನೇ ನಿನಗೆ ನಮಸ್ಕಾರವು ಎಂದು ಸ್ತೋತ್ರ ಮಾಡಿದನು.

೫೦ ಅನಂತರ ಮಹಾದೇವನು ಮೃತ್ಯುವನ್ನು ಕುರಿತು ವರವನ್ನು ಕೇಳಿಕೋ. ನಿನ್ನ ಈ ಸ್ತೋತ್ರದಿಂದ ಸಂತೋಷಗೊಂಡಿದ್ದೇನೆ ಎಂದನು. ಆಗ ಮೃತ್ಯುವು ವರವನ್ನು ಕೇಳಿಕೊಂಡನು.

೫೧. ನಿನ್ನವನಾದ ಪಾಪಿಯಾದ ನನ್ನನ್ನು ಕಾಪಾಡು ಸ್ವಾಮಿ ಎಂದನು.

ತಥೇತ್ಯುಕ್ತ್ವಾ ಮೃತ್ಯುಮೀಶೋ ಗಚ್ಛ ವತ್ಸೇತಿ ಚಾಬ್ರವೀತ್ ।
ಯಮಲೋಕಂ ಗತಸ್ಸೋಽಥ ಯಮಾಯಾಶೇಷಮುಕ್ತವಾನ್ ॥ ೫೨ ॥

॥ ಶಂಭುರುವಾಚ ॥

ಯ ಇದಂ ಶೃಣುಯಾನ್ನಿತ್ಯಂ ಪುಣ್ಯಾಖ್ಯಾನಮನುತ್ತಮಂ ।
ವಿಮುಕ್ತಸ್ಸರ್ವಪಾಪೇಭ್ಯೋ ಯಾತಿ ಶಂಕರಸನ್ನಿಧಿಂ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ ಸಪ್ತಾಧಿಕಶತತಮೋಽಧ್ಯಾಯಃ



---

೫೨. ಆಗ ಸ್ವಾಮಿಯು ಹಾಗೆಯೇ ಆಗಲಿ ಹೋಗು ಎಂದು ಹೇಳಿದನು. ಆ ಮೃತ್ಯುವು ಯಮಲೋಕಕ್ಕೆ ಹೋಗಿ ಯಮನಿಗೆ ಎಲ್ಲವನ್ನೂ ಹೇಳಿದನು

೫೩. ಶಂಭುವು ಹೇಳಿದನು :—ಈ ಪುಣ್ಯಾಖ್ಯಾನವನ್ನು ಕೇಳಿದವನು ಸರ್ವ ಪಾಪವನ್ನು ಕಳೆದುಕೊಂಡು ಶಂಕರನ ಸನ್ನಿಧಿಗೆ ಹೋಗುತ್ತಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ನೂರ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಅಷ್ಟಾಧಿಕಶತತಮೋಽಧ್ಯಾಯಃ

॥ ಶಂಭುರುವಾಚ ॥

ಅಥಾನ್ಯದಪಿ ನಿರ್ವಚ್ಮಿ ಪ್ರಮದಾಖ್ಯಾನಮುತ್ತಮಂ ।
ಸುತಯಾ ದೇವರಾತಸ್ಯ ಯತ್ಪ್ರಾಪ್ತಂ ನಾಮಕೀರ್ತನಾತ್ ॥ ೧ ॥

ದೇವರಾತಸುತಾ ಬಾಲಾ ಕಲಾನಾಮಾ ತಿರೂಪಿಣೀ ।
ಧನಂಜಯಸುತಸ್ಯಾಸೀದ್ಭಾರ್ಯಾ ಶೋಣಸ್ಯ ಧೀಮತಃ ॥ ೨ ॥

ತಾವುಭೌ ನಿಯತೌ ನಿತ್ಯಂ ಧರ್ಮೈಕಪ್ರವಣೌ ಶುಭೌ ।
ಲಬ್ಧವಂತೌ ನಿಧಿಮಥೋ ಗಂಗಾಸ್ನಾನಾಯ ತೌ ಗತೌ ॥ ೩ ॥

---

## ನೂರಎಂಟನೆಯ ಅಧ್ಯಾಯವು

೧. ಶಂಭುವು ಹೇಳಿದನು :—ದೇವರಾತನ ಮಗಳು ನಾಮಸಂಕೀರ್ತನದಿಂದ ಏನನ್ನು ಹೊಂದಿದಳೆಂಬ ವಿಷಯದಲ್ಲಿ ಉತ್ತಮವಾದ ಆ ಹೆಂಗಸಿನ ಕಥೆಯನ್ನು ಹೇಳುತ್ತೇನೆ.

೨. ದೇವರಾತನ ಮಗಳ ಹೆಸರು ಕಲೆಯೆಂದು. ಅವಳು ಬಹು ಸುಂದರಿ. ಅವಳನ್ನು ಧನಂಜಯನೆಂಬ ಬ್ರಾಹ್ಮಣನ ಮಗನಾದ ಶೋಣನೆಂಬವನಿಗೆ ಕೊಟ್ಟಿದ್ದಿತು.

೩. ಅವರಿಬ್ಬರೂ ನಿಯಮಿಷ್ಠರು. ಧರ್ಮದಲ್ಲಿ ಆಸಕ್ತಿಯುಳ್ಳವರು. ಒಂದು ಕಾಲದಲ್ಲಿ ಅವರು ನಿಧಿಯನ್ನು ಹೊಂದಿದರು. ಹೇಗೆಂದರೆ, ಒಂದುಸಾರಿ ಅವರಿಬ್ಬರೂ ಗಂಗಾಸ್ನಾನಕ್ಕೆ ಹೊರಟರು.

ಪ್ರವಾಹಪತಿತೇ ಕೂಲೇ ಮೃತ್ತಿಕಾನಯನಾಯ ತೌ ।
ಕೂಲಾಪಾಪಾಯ ಮೃಲ್ಲೋಷ್ಟಂ ದೃಷ್ಟವಂತೌ ಮಹಾಘಟಂ ॥ ೪ ॥

ರಾಜತಂ ಚೋರ್ಧ್ವಪಾಷಾಣಮಥ ಶೋಣಃ ಪ್ರಿಯಾಂ ವಚಃ ।
ಇದಮಾಪ ಕಥಂ ಕಾರ್ಯಂ ಕಿಂ ಕರ್ತವ್ಯಂ ಹಿ ನೋ ಹಿತಂ ॥ ೫ ॥

॥ ಭಾರ್ಯೋವಾಚ ॥

ನ ನಾರೀಮತಮಾಲಂಬ್ಯ ಕಿಂಚಿತ್ಕಾರ್ಯಂ ಸಮಾಚರೇತ್ ।
ನ ಚ ನಾರ್ಯಾ ವದೇದ್ಗುಹ್ಯಮಪ್ರಿಯಂ ವಾ ಕಥಂಚನ ॥ ೬ ॥

ಯದಿ ನಾರೀಸಮಕ್ಷಂ ತು ದ್ರವಿಣಂ ದೃಷ್ಟಿಮಾಪತೇತ್ ।
ವಂಚಯೀತ ತಥಾ ನಾರೀಮೀದೃಶೈರ್ವಾಕ್ಯಸಂಚಯೈಃ ॥ ೭ ॥

ಅಸ್ಮಾಭಿರ್ನಹಿ ಸಂಪ್ರೇಕ್ಷ್ಯಂ ಕಿಂ ವಾ ತತ್ರ ಹಿ ತಿಷ್ಠತಿ ।
ದ್ರವಿಣಂ ಚೇನ್ನ ಸಂಪ್ರೇಕ್ಷ್ಯಂ ಬಾಧೋದರ್ಕಂ ಭವಿಷ್ಯತಿ ॥ ೮ ॥

---

೪. ಪ್ರವಾಹದಿಂದ ಬಿದ್ದುಹೋಗುತ್ತಿರುವ ದಡದಲ್ಲಿ ಮಣ್ಣನ್ನು ತೆಗೆದು ಕೊಂಡು ಬರಲು ಹೋಗಿ ಆ ದಡದಲ್ಲಿ ಮಣ್ಣಿನ ಹೆಂಟೆಯನ್ನು ತೆಗೆದುಕೊಂಡು ಅಲ್ಲೇ ಒಂದು ಬಿಂದಿಗೆಯನ್ನು ಕಂಡರು.

೫. ಆ ಬಿಂದಿಗೆಯು ಬೆಳ್ಳಿಯ ಬಿಂದಿಗೆ. ಮೇಲೆ ಮಣ್ಣು ಅಂಟಿಕೊಂಡಿದ್ದಿತು. ಆಗ ಶೋಣನು ಹೆಂಡತಿಯನ್ನು ಕುರಿತು ನಮಗೆ ಅನುಕೂಲವಾಗುವಂತೆ ಏನು ಮಾಡಬೇಕೆಂದನು.

೬. ಹೆಂಡತಿಯು ಹೇಳಿದನು :—ಹೆಂಗಸರ ಇಷ್ಟವನ್ನು ಕೇಳಿಕೊಂಡು ಯಾವ ಕೆಲಸವನ್ನೂ ಮಾಡಬಾರದು. ಹೆಂಗಸಿಗೆ ಗುಟ್ಟುಗಳೊಂದನ್ನೂ ಹೇಳ ಬಾರದು. ಹಾಗೆಯೇ ಪ್ರಿಯವಲ್ಲದ್ದನ್ನೂ ಹೇಳಬಾರದು.

೭. ಹೆಂಗಸರೆದುರಿಗೆ ಹಣವು ಕಣ್ಣಿಗೆ ಬಿದ್ದರೆ, ಆಗ ಮುಂದೆ ಹೇಳುವ ಮಾತುಗಳಿಂದ ಆಕೆಯನ್ನು ವಂಚಿಸಬೇಕು.

೮. ನಾವು ನೋಡಬಾರದು ಅಲ್ಲೇನಿದೆಯೋ? ಹಣವಾದರಂತೂ ನೋಡಲೇ ಬಾರದು. ಮುಂದೆ ಅದರಿಂದ ತೊಂದರೆಯುಂಟು.

ಅನ್ಯಾಜ್ಞಾತಂ ತು ಯದಿ ಚೇತ್ತ್ವತ್ತೋ ಜ್ಞಾನವಿನಿಶ್ಚಯಃ ।
ಅಪ್ರದೃಷ್ಟಸ್ತ್ವಿದಾನೀಂ ಚೇನ್ನಿಭೃತಃ ಕೋಽಪಿ ತಿಷ್ಠತಿ ॥ ೯ ॥

ತಿರೋಧಾನಂ ನ ಕಿಂಚಿಚ್ಚೇನ್ಮಾಯಯಾ ಕೋಽಪಿ ತಿಷ್ಠತಿ ।
ನ ಚೇನ್ಮಾಯಾ ಮನುಷ್ಯಾಣಾಂ ಕ್ಷೇತ್ರಪಾಲಸ್ತು ತಿಷ್ಠತಿ ॥ ೧೦ ॥

ನ ಹಿ ಚೇದ್ಭೈರವಶ್ಚೇಹ ತಿಷ್ಠತಿ ಬ್ರಹ್ಮರಾಕ್ಷಸಃ ।
ನ ಸೋಽಪಿ ಚೇನ್ಮಹಾಬಾಧಾ ರಾಜ್ಞಾಂ ತತ್ರ ಭವಿಷ್ಯತಿ ॥ ೧೧ ॥

ನ ಚ ಜಾನಾತಿ ಚೇದ್ರಾಜಾ ವ್ಯವಹಾರಾದಿಸಂಭವಃ ।
ಸ ಚೇದ್ಗೂಢಪ್ರಕಾರೇಣ ಚೋರಬಾಧಾ ಭವಿಷ್ಯತಿ ॥ ೧೨ ॥

ಅಪ್ರಮತ್ತಸ್ಯ ಭವತೋ ಮಹಾನರ್ಥೋ ಭವಿಷ್ಯತಿ ।
ಪ್ರಾಯೇಣಾರ್ಥವತಾಂ ನೃಣಾಂ ಭೋಗಲಿಪ್ಸೋಪಜಾಯತೇ ॥ ೧೩ ॥

---

೯. ಮಿಕ್ಕವರಿಗೊಬ್ಬರಿಗೂ ತಿಳಿಯದಿದ್ದರೆ ನಮಗೆ ತಾನೆ ಅದರ ಜ್ಞಾನದಲ್ಲಿ ನಿಶ್ಚಯವೇನಿದೆ?

೧೦. ಅವಿತುಕೊಂಡು ಒಬ್ಬನೂ ಇರದಿದ್ದಲ್ಲಿ ಮಾಯೆಯಿಂದ ಯಾರೋ ಇರಬೇಕು. ಮನುಷ್ಯರ ಮಾಯೆಯಲ್ಲವೆಂದರೆ ಆ ಸ್ಥಳದಲ್ಲಿ ಭೈರವನೆಂಬ ಕ್ಷೇತ್ರ ಪಾಲನಿರುವನು.

೧೧. ಅಲ್ಲಿ ಭೈರವನೂ ಇಲ್ಲದಿದ್ದರೆ ಬ್ರಹ್ಮರಾಕ್ಷಸವು ಕಾವಲಾಗಿರುತ್ತದೆ. ಅದೂ ಇಲ್ಲದಿದ್ದರೆ ರಾಜರ ತೊಂದರೆಯು ಬಹುವಾಗಿ ಅದಕ್ಕೆ ಬರುತ್ತದೆ.

೧೨. ರಾಜನಿಗೆ ಗೊತ್ತಾಗದೆ ಹೋದರೆ ಜಗಳ ಹುಟ್ಟುತ್ತದೆ. ಅದಕ್ಕೂ ಅವಕಾಶಕೊಡದೆ ಗುಟ್ಟಾಗಿದ್ದರೆ ಕಳ್ಳರ ಬಾಧೆ ಬರುತ್ತದೆ.

೧೩. ಜಾಗರೂಕನಾಗಿದ್ದರೂ ನಿನಗೆ ಬಹು ಅನರ್ಥ ಒದಗುತ್ತದೆ. ಸಾಧಾರಣವಾಗಿ ಹಣವಿರುವವರಿಗೆ ಭೋಗದ ಆಸೆಯು ಉಂಟಾಗುತ್ತದೆ.

ಭೋಗಾದ್ಭೋಗಾಂತರೇಚ್ಛಾ ಚ ಸರ್ವಾನುಷ್ಠಾನನಾಶಿನೀ ।
ಜಾನಾತಿ ಯದಿ ನಾರೀ ಸ್ವಂ ಭಾವಯೋಗಗತಂ ತಥಾ ॥ ೧೪ ॥

ನಾರೀ ಸ್ವತಂತ್ರತಾಮೇತಿ ರೋಷಾಲ್ಲಬ್ಧಪ್ರಕಾಶಿನೀ ।
ರೋಷೇಽವಿಶ್ವಾಸತಾಂ ಯಾತಿ ತದಾ ರೋಷಃ ಪುರೋದಿತಃ ॥ ೧೫ ॥

ವಿಶ್ವಾಸಿನಿ ಚ ವಿಶ್ರಂಭಃ ಪ್ರವಾಸೇ ಚಾನ್ಯಚಿತ್ತತಾ ।
ವಿಶ್ರಂಭಾಜ್ಜಾಯತೇ ಸ್ತ್ರೀಣಾಂ ನಾನಾವಿಧವಿಚೇಷ್ಟಿತಾ ॥ ೧೬ ॥

ಯಂ ಕಂಚಿತ್ಪುರುಷಂ ದೃಷ್ಟ್ವಾ ಯುವಾನಂ ಪ್ರೀತಿರಾಪತೇತ್ ।
ಪ್ರೀತ್ಯಾ ಸಂಜಾಯತೇ ಯೋಗೋ ಯೋಗಾನ್ಮೈಥುನಸಂಗತಿಃ ॥ ೧೭ ॥

ಸತತಂ ಮೈಥುನೇ ಜಾತೇ ವಿಶ್ರಂಭಾಂತರಮಾಪತೇತ್ ।
ಭವತಾ ವಾ ತಥಾ ಪೂರ್ವಂ ಭುಕ್ತೇದಾನೀಂ ಚ ಭುಜ್ಯತೇ ॥ ೧೮ ॥

---

೧೪. ಒಂದು ಭೋಗವಾದ ಮೇಲೆ ಮತ್ತೊಂದು ಭೋಗದ ಅಪೇಕ್ಷೆ ಈ ರೀತಿ ಯಾಗುವುದು. ಅನುಷ್ಠಾನಗಳನ್ನು ನಾಶಮಾಡುವುದಕ್ಕೆ ಹೊರತು ಬೇರೆಯಲ್ಲ. ಈರೀತಿ ಸಿಕ್ಕಿದ ಹಣವನ್ನು ಹೆಂಗಸು ತಿಳಿದರೆ, ಕೋಪದಿಂದ, ಸಿಕ್ಕಿದುದನ್ನು ಎಲ್ಲರ ಲ್ಲಿಯೂ ಹೇಳುತ್ತ ಸ್ವತಂತ್ರತೆಯನ್ನು ಹೊಂದುತ್ತಾಳೆ.

೧೫. ರೋಷಬಂದರೆ ವಿಶ್ವಾಸವು ಹೋಗುತ್ತದೆ. ಆಗ ಮುಂದೆ ಹೇಳುವ ದೋಷಬರುತ್ತದೆ.

೧೬. ವಿಶ್ವಾಸವಿದ್ದರೆ ನಂಬಿಕೆಯಿರುತ್ತದೆ. ಎಲ್ಲಿಯಾದರೂ ಬಿಟ್ಟುಹೋದರೆ ಬೇರೆಯವನಲ್ಲಿ ಮನಸ್ಸು ಹುಟ್ಟುತ್ತದೆ. ಮನಸ್ಸು ತಿರುಗುತ್ತದೆ. ಗಂಡಸಿನಲ್ಲಿ ಹೆಂಗಸರಿಗೆ ಸ್ವಾತಂತ್ರ್ಯದಿಂದ, ಹೆಂಗಸರಿಗೆ ನಾನಾಬಗೆಯಾದ ಚೇಷ್ಟೆಗಳು ಹುಟ್ಟುತ್ತವೆ.

೧೭. ಯಾವನಾದರೂ ಸುಂದರನನ್ನು ನೋಡಿ ಅವನನ್ನು ಪ್ರೀತಿಸುತ್ತಾಳೆ. ಪ್ರೀತಿಯಿಂದ ಸಂಬಂಧವುಂಟಾಗಿ ಆ ಸಂಬಂಧದಿಂದ ಮೈಥುನವುಂಟಾಗುತ್ತದೆ.

೧೮. ಯಾವಾಗಲೂ ಮೈಥುನವು ನಡೆಯುತ್ತಿದ್ದರೆ ಬೇರೆಕಡೆಯಲ್ಲಿ ನಂಬಿಕೆ ಹುಟ್ಟುತ್ತದೆ. ನೀನು ಮೊದಲು ಅನುಭವಿಸುತ್ತಿದ್ದವಳನ್ನೇ ಈಗಲೂ ಅನುಭವಿಸು ತ್ತೀಯೆ.

**ತಾಂ ಪ್ರತೀಚ್ಛಾ ತವೇದಾನೀಂ ಪ್ರೀತಿಃ ಕಸ್ಯಾಮಥಾಪಿ ವಾ ।**
**ಕಾ ವಿದಗ್ಧಾ ಸುಸಂಸ್ನಿಗ್ಧಾ ಪುರುಷಾದನ್ಯತಶ್ಚರೇತ್ ॥ ೧೯ ॥**

**ಯೋಽಬ್ರವೀದಥ ವಾಕ್ಯಂ ತಾಂ ಯದಿ ಬ್ರೂಯಾತ್ತ್ವಮಧ್ಯಸೇ ।**
**ಸರ್ವಮೇವ ತಥಾ ವಚ್ಮಿ ನಾನ್ಯಥಾ ವಾಕ್ಯಮುಚ್ಯತೇ ॥ ೨೦ ॥**

**ಇತ್ಥಂ ಪ್ರಹೃಷ್ಟತಾಂ ಯಾತಾ ತಥಾ ರೂಪಾಂತರೇಣ ಚ ।**
**ದ್ರವ್ಯಮಾದಾಯ ಯತ್ಕಿಂಚಿದನುವರ್ತೇತ್ಸ್ವತಂತ್ರತಃ ॥ ೨೧ ॥**

**ಸ ಮಾರಯಿತ್ವಾ ತಾಂ ದ್ರವ್ಯಂ ಗೃಹೀತ್ವಾ ಪಾತಯಿಷ್ಯತಿ ।**
**ಅಥ ಪೂರ್ವಪತಿಮೃತೌ ಪ್ರವಿಶೇನ್ನಾಶುಶುಕ್ಷಣೀಂ ॥ ೨೨ ॥**

**ವೈಧವ್ಯೇ ದ್ರವಿಣಂ ಸರ್ವಂ ಭುಕ್ತೇದಾನೀಂ ಚ ಭುಜ್ಯತೇ ।**
**ಇತಿ ನಿಶ್ಚಿತ್ಯ ಮನಸಾ ವೈಧವ್ಯೇ ಸಮುಪಸ್ಥಿತೇ ॥ ೨೩ ॥**

---

೧೯. ನಿನಗೆ ಯಾವಳಲ್ಲಿಯೂ ಇಚ್ಛೆ ಅಥವಾ ಪ್ರೀತಿ ಎಂಬುದಿಲ್ಲ. ಎಲ್ಲರೂ ಒಂದೇ ಆಗುತ್ತಾರೆ. ಯಾರಲ್ಲಿ ಏನೆಂಬುದು ಗೊತ್ತಾಗುವುದಿಲ್ಲ.

೨೦. ಬುದ್ಧಿವಂತಳಾದ ಯಾವ ಪ್ರೀತಿಪಾತ್ರಳು ತಾನೇ ಪುರುಷನಿಗೆ ಬೇಡದ್ದನ್ನು ಮಾಡಿಯಾಳು? ಯಾವಳುತಾನೆ ಬೇರೆ ಮಾತಾಡಿಯಾಳು? ಒಂದುವೇಳೆ ಹೇಳಿದರೆ ನೀನು ನಂಬುತ್ತೀಯೆ. ಇದ್ದದ್ದೆಲ್ಲವನ್ನೂ ಇದ್ದಂತೆ ಹೇಳುತ್ತೇನೆ. ಬೇರೇನನ್ನೂ ಹೇಳುವುದಿಲ್ಲ.

೨೧. ಈರೀತಿ ನಂಬಿಕೆವಂತಳಾಗಿ, ಈರೀತಿಯಿಂದಲೂ ಬೇರೆ ರೀತಿಯಿಂದಲೂ ಸ್ವಲ್ಪ ಹಣವನ್ನು ತೆಗೆದುಕೊಂಡು ಸ್ವತಂತ್ರವಾಗಿ ದ್ರವ್ಯ ವ್ಯವಹಾರಮಾಡುತ್ತಾಳೆ.

೨೨. ಅವನು ಸತ್ತಮೇಲೆ ಆ ಹಣವನ್ನು ತೆಗೆದುಕೊಂಡು ನಾಶವಾಗುತ್ತಾನೆ. ಆಗ ಆಕೆಯು ಹಿಂದಿನ ಗಂಡನು ಸತ್ತರೆ ತಾನು ಅಗ್ನಿಪ್ರವೇಶಮಾಡುವುದಿಲ್ಲ.

೨೩. ಮೊದಲು ಹಣವನ್ನು ಅನುಭವಿಸಿದ್ದು ವೈಧವ್ಯ ಬಂದಮೇಲೂ ಈಗಲೂ ಆ ಹಣವನ್ನೆಲ್ಲಾ ಅನುಭವಿಸುತ್ತೇನೆ ಎಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಅನುಭವಿಸುತ್ತಾಳೆ.

ಯೋನಿಕಂಡೂಂ ಸಮಾಸಾದ್ಯ ದಿವಾ ವಾ ಯದಿ ವಾ ನಿಶಿ ।
ಏಕಾಂತಸ್ಥಾನಮಭ್ಯೇತ್ಯ ನಿವೃತ್ಯ ವಸನಂ ಭಗಂ ॥ ೨೪ ॥

ಇದಮೂಚೇ ವಚೋ ದುಃಖಾದುಪಸ್ಥಸ್ಥಕರಾ ಸತೀ ।
ಕಿಂ ತ್ವಯಾ ಷ್ನ ಕೃತಂ ಯೋನೇ ಕಿಂ ವಾ ಪಾಪಮುಪಾಶ್ರಿತಾ ॥ ೨೫ ॥

ಶಿಶ್ನಸ್ಯ ವಾಽಥವಾ ಪಾಪಂ ಯತ್ತ್ವದಂತರವೇಶನಾತ್ ।
ಯಚ್ಚ ಕರ್ತೃಕೃತಂ ಪಾಪಂ ಮಾದೃಕ್ಸೇವಾವಿವರ್ಜನಾತ್ ॥ ೨೬ ॥

ಅತೋಽಪಿ ಕಂಡೂಸಂಭೂತೌ ಪ್ರವೇಶಯೇದಥಾಂಗುಳೀಂ ।
ವಿಚಿತ್ರಚೇಷ್ಟಾಂ ಕೃತ್ವಾ ತು ಕಂಡೂಬುದ್ಧೇರತಃ ಪರಂ ॥ ೨೭ ॥

ಮರ್ದಯಿತ್ವಾ ಕರಾಭ್ಯಾಂ ತತ್ಸಂತಾಡ್ಯ ಚ ವಿವೃತ್ಯ ಚ ।
ಅಸಕೃದ್ಧುನ್ವತೀ ಪಾದೌ ವಿವೃತಾಸ್ಯಾಽತಿದುಃಖಿತಾ ॥ ೨೮ ॥

---

೨೪-೨೫. ವೈಧವ್ಯವು ಬಂದಮೇಲೆ ಯೋನಿಯಲ್ಲಿ ಕಡಿತಬಂದು ಹಗಲೂ ರಾತ್ರಿಯೂ ನಿರ್ಜನಪ್ರದೇಶವನ್ನು ಹೊಂದಿ ಬಟ್ಟೆಯನ್ನು ಅರುಗುಮಾಡಿ ಯೋನಿಯನ್ನು ಕುರಿತು, ಯೋನಿಯಲ್ಲಿ ಕೈಯಿಟ್ಟುಕೊಂಡು ದುಃಖದಿಂದ ಎಲೈ ಯೋನಿಯೇ, ನೀನು ಏನು ಕೆಲಸಮಾಡಿದೆ? ಯಾವ ಪಾಪವನ್ನು ಮಾಡಿದ್ದೀಯೆ?

೨೬. ಅದಿಲ್ಲದಿದ್ದರೆ ನಿನ್ನ ಒಳಕ್ಕೆ ಪ್ರವೇಶಮಾಡಲು ಶಿಶ್ನವು ತಾನೆ ಏನು ಪಾಪಮಾಡಿದೆ? ನನ್ನಂತಹವರ ಸೇವೆಮಾಡದಿರುವುದರಿಂದ ಆ ಶಿಶ್ನವು ಎಷ್ಟು ಪಾಪವನ್ನು ಹೊಂದುತ್ತದೆ? ಎಂದೆನ್ನುತ್ತಾಳೆ.

೨೭-೨೮. ಯೋನಿಯಲ್ಲಿ ಇನ್ನೂ ಹೆಚ್ಚಾಗಿ ಕಡಿತಬಂದರೆ ಬೆರಳನ್ನು ಒಳಗೆ ಹಾಕಿ ನಾನಾಬಗೆಯ ಚೇಷ್ಟೆಗಳಿಂದ ಪರಿಹರಿಸಿಕೊಳ್ಳಲು ಪ್ರಯತ್ನಪಡುತ್ತಾಳೆ. ಅನಂತರವೂ ಕೂಡ ಎರಡು ಕೈಗಳಿಂದಲೂ ಮರ್ದನಮಾಡುತ್ತಾಳೆ. ಹೊಡೆಯುತ್ತಾಳೆ. ಬೆರಳನ್ನು ತಿರುಗಿಸುತ್ತಾಳೆ. ಬಾರಿಬಾರಿಗೂ ಕಾಲನ್ನು ಕೊಡುವುತ್ತಿರುತ್ತಾಳೆ. ಮೋರೆಯನ್ನು ಸೊಟ್ಟೆಮಾಡಿಕ್ಕೊಂಡು ಅಳುತ್ತಾಳೆ.

**ಖಟ್ವಾಕಾಷ್ಠಮಥಾಲಿಂಗ್ಯ ಸ್ತನಪೀಡಂ ಯಥಾಪ್ರಿಯಂ ।**
**ಅಥೋ ವಿಚಿತ್ರಚಿತ್ತತ್ವಂ ತತಃ ಪ್ರದ್ಯುಷ್ಟತಾ ಭವೇತ್ ॥ ೨೯ ॥**

**ಅಥ ವಾಸ್ಥಿ ಪುರೇ ಸ್ಥಿತ್ವಾ ಶಾಕಂ ವ್ಯವಹೃತಂ ಚ ಯತ್ ।**
**ಆಲಂಬ್ಯ ವೇಶ್ಮನಿ ನಿಶಿ ಸಂಧ್ಯಾಯಾಂ ವಿಶಿಖಾಸು ಚ ॥ ೩೦ ॥**

**ಕೃತ್ವಾನ್ಯವೇಶಮಾತ್ಮಾನಂ ಯೈಃ ಕ್ಯೈರಪ್ಯುಪಭುಜ್ಯತೇ ।**
**ಯಥಾವಾಚ್ಯಪ್ರಭಾವೇನ ಶಂಕಿತಾ ಯೋಗ್ಯಮಾಹರೇತ್ ॥ ೩೧ ॥**

**ಅಜ್ಞಾತಂ ಚ ಗೃಹಂ ಗತ್ವಾ ರಮಯೇದೇವ ನಿಶ್ಚಿತಂ ।**
**ನಾರೀ ಸಮಕ್ಷಂ ಲಬ್ಧೇ ತು ದ್ರವಿಣೇ ಹ್ಯೇತದಿಷ್ಯತೇ ।**
**ತಸ್ಮಾನ್ಮಮಾಪಿ ಭವತೋ ನ ವಿಚಾರಪ್ರಯೋಜನಂ ॥ ೩೨ ॥**

---

೨೯. ಸ್ತನಗಳ ಕಡಿತ ಹೋಗುವಂತೆ ಪ್ರಿಯನನ್ನಾಲಿಂಗಿಸುವಂತೆ ಮಂಚದ ಮರವನ್ನು ಆಲಿಂಗಿಸಿಕೊಳ್ಳುತ್ತಾಳೆ. ಅನಂತರ ಮನಸ್ಸು ವಿಚಿತ್ರವಾಗುತ್ತದೆ. ಅನಂತರ ಬೆಳ್ಳಗಾಗುತ್ತದೆ.

೩೦. ಅನಂತರ ಹಗಲು ಹೊತ್ತಿನಲ್ಲಿ ಪಟ್ಟಣದಲ್ಲಿ ನಿಂತು ಕಾಯಿಪಲ್ಯಗಳನ್ನು ವ್ಯಾಪಾರಮಾಡುವ ನೆಪದಿಂದಲೋ, ಸಂಧ್ಯಾಕಾಲದಲ್ಲಿ ಬೀದಿಯಲ್ಲಿ ನಿಂತು ನೋಡಿಯೋ, ಅಥವಾ ರಾತ್ರಿ ಮನೆಯಲ್ಲಿ ನಿಂತು ನೋಡುವುದರಿಂದಲೋ, ಯಾರ ನ್ನಾದರೂ ಹೊಂದಿ ಬೇರೆಯ ವೇಷವನ್ನಾದರೂ ಹಾಕಿಕೊಂಡು ಯಾರನ್ನಾದರೂ ಅನುಭವಿಸುತ್ತಾಳೆ.

೩೧. ಅನಂತರ ದೂರು ಬಂದೀತೆಂಬ ಭಯದಿಂದ ಯಾವನಾದರೂ ಒಬ್ಬ ಯೋಗ್ಯನನ್ನೇ ಹೊಂದುತ್ತಾಳೆ. ಕಾಣದಂತೆ ಅವನ ಮನೆಗೆ ಹೋಗಿ ನಿಶ್ಚಿತ ವಾಗಿಯೂ ರಮಿಸುತ್ತಾಳೆ.

೩೨. ಹೆಂಗಸಿನ ಎದುರಿಗೆ ಹಣವು ಸಿಕ್ಕಿದರೆ ಹೀಗಾಗುತ್ತದೆ. ಆದ್ದರಿಂದ ನಿನಗೆ ನನ್ನೊಡನೆ ಚರ್ಚೆಯಿಂದ ಪ್ರಯೋಜನವಿಲ್ಲ.

॥ ಶೌನಕ ಉವಾಚ ॥

ಏವಮೇತನ್ನ ಸಂದೇಹೋ ಗಚ್ಛ ತ್ವಂ ತಿಷ್ಠ ದೂರತಃ ।
ಮಲಮೂತ್ರವಿಸರ್ಗಾರ್ಥಂ ಸ್ಥಿತ್ವಾ ಗಚ್ಛಾಮ್ಯತಃ ಪರಂ ॥ ೩೩ ॥

ತಸ್ಯಾಂ ಗತಾಯಾಂ ಶೌಣೋಽಪಿ ವಸ್ತ್ರಖಂಡಂ ತ್ವಕಲ್ಪಯತ್ ।
ಏಕೈಕಸ್ಮಿಂಸ್ತಥಾ ಖಂಡೇ ತ್ವಗ್ರಹೀದ್ದ್ರವಿಣಂ ಬಹು ॥ ೩೪ ॥

ಸೈಕತೇ ತ್ವವರಂ ಜಾನುದಘ್ನಂ ಕೃತ್ವಾ ತತಸ್ತತಃ ।
ಕ್ಷಿಪ್ತ್ವಾ ಧನಂ ಪೂರಯಿತ್ವಾ ವಿಷ್ಠಾಂ ಚಕ್ರೇ ತತೋಪರಿ ॥ ೩೫ ॥

ವಸ್ತ್ರಾಧಾರಂ ಘಟಂ ತಂ ಚ ಪ್ರತಿಚಿಕ್ಷೇಪ ಕುತ್ರಚಿತ್ ।
ಸರ್ವಮಜ್ಞಾತವತ್ಕೃತ್ವಾ ಸ್ನಾನಾಯ ಪ್ರಯಯೌ ಮುನಿಃ ॥ ೩೬ ॥

ತಸ್ಯ ಭಾರ್ಯಾ ತತಸ್ಸ್ನಾನಂ ಕೃತ್ವಾ ಸಂಪೂಜ್ಯ ಪಾರ್ವತೀಂ ।
ಗಚ್ಛೇತಿ ಭರ್ತ್ರಾ ಸಾ ಪ್ರೋಕ್ತಾ ಸ್ವವೇಶ್ಮಾಭ್ಯಗಮತ್ಸತೀ ॥ ೩೭ ॥

---

೩೩. ಶೋಣಕನು ಹೇಳಿದನು :—ಇದು ನಿಶ್ಚಯವು. ಸಂದೇಹವಿಲ್ಲ. ನೀನು ದೂರದಲ್ಲಿ ಹೋಗಿರು. ನಾನು ಮಲ ಮೂತ್ರಗಳನ್ನು ವಿಸರ್ಜಿಸಿ ಆಮೇಲೆ ಹೋಗುತ್ತೇನೆ.

೩೪. ಆಕೆಯು ಅತ್ತಹೋಗಲು ಶೋಣನು ಬಟ್ಟೆಯನ್ನು ಹರಿದು ಅನೇಕ ಚೂರುಗಳನ್ನು ಮಾಡಿದನು. ಒಂದೊಂದು ಚೂರಿನಲ್ಲಿಯೂ, ಬಹಳವಾಗಿ ಹಣ ವನ್ನು ಕಟ್ಟಿಕೊಂಡನು.

೩೫. ಮರಳಿನಲ್ಲಿ ತೊಡೆಯುದ್ದದ ಗುಂಡಿಗಳನ್ನು ತೆಗೆದು ಅದರಲ್ಲಿಯೂ ಹಣವನ್ನು ತುಂಬಿ ಅದರ ಮೇಲೆ ಮರಳು ಮುಚ್ಚಿ ಅದರ ಮೇಲೆ ಪಾಯಖಾನೆ ಮಾಡಿದನು.

೩೬. ಆ ಬಿಂದಿಗೆಗೂ ಬಟ್ಟೆಯನ್ನು ಕಟ್ಟಿ ಅಲ್ಲಿ ಒಬ್ಬರಿಗೂ ತಿಳಿಯದಂತೆ ಒಂದೆಡೆಯಲ್ಲಿಟ್ಟನು. ಇದೊಂದನ್ನೂ ಯಾರಿಗೂ ಕಾಣದಂತೆ ಮಾಡಿ ಆತನು ಸ್ನಾನಕ್ಕೆ ಹೋದನು.

೩೭. ಆತನ ಹೆಂಡತಿಯೂ ಸ್ನಾನಮಾಡಿ ಗೌರೀಪೂಜೆಯನ್ನು ಮಾಡಿದಳು. ಗಂಡನು ಮನೆಗೆ ಹೋಗೆನ್ನಲು ಆಕೆಯು ಹೊರಟುಹೋದಳು.

ಏತಾಮೇಕಾಕಿನೀಂ ಜ್ಞಾತ್ವಾ ಮಾರೀಚೋ ನಾಮ ರಾಕ್ಷಸಃ ।
ಭರ್ತೃರೂಪಮಥಾಸ್ಥಾಯ ಕಲಾಮೇತದುವಾಚ ಹ ॥ ೩೮ ॥

॥ ಮಾರೀಚ ಉವಾಚ ॥

ಸಪ್ತಗೋದಾವರೀತೀರೇ ಪವಿತ್ರಂ ಪಾಪನಾಶನಂ ।
ದ್ರಾಕ್ಷಾರಾಮಮಿತಿ ಪ್ರೋಕ್ತಂ ಯತ್ರ ಭೀಮಃ ಸ್ವಯಂ ಸ್ಥಿತಃ ॥ ೩೯ ॥

ಭುಕ್ತಿಮುಕ್ತಿಪ್ರದೋ ನೃಣಾಂ ಸ್ಮರಣಾತ್ಪಾಪನಾಶನಃ ।
ತತ್ರ ಗಚ್ಛಾವಹೇ ಶೀಘ್ರಂ ತ್ವಂ ತು ನಿರ್ಗಚ್ಛ ಸುಂದರಿ ॥ ೪೦ ॥

॥ ಕಲೋವಾಚ ॥

ಇದಾನೀಮಭಿಷೇಕಾಯ ಪ್ರವೃತ್ತೋ ನಾಭಿಷಿಕ್ತವಾನ್ ।
ಕಥಮೇತಾದೃಶಂ ತ್ವಂ ಹಿ ಪೂರ್ವಾನುಕ್ತಂ ವದಿಷ್ಯಸಿ ॥ ೪೧ ॥

ಪ್ರಕೃತೇರನ್ಯಥಾಭಾವಮುತ್ಪಾತಂ ವಿದುರುತ್ತಮಾಃ ॥ ೪೨ ॥

---

೩೮. ಇವಳು ಒಬ್ಬಂಟಿಗಳಾಗಿ ಹೋಗುತ್ತಿರುವುದನ್ನು ತಿಳಿದು ಮಾರೀಚ ನೆಂಬ ರಾಕ್ಷಸನು ಗಂಡನ ವೇಷಧಾರಿಯಾಗಿ ಬಂದು ಕಲೆಗೆ ಇಂತೆಂದನು.

೩೯. ಮಾರೀಚನು ಹೇಳಿದನು :—ಸಪ್ತಗೋದಾವರಿಯ ದಡದಲ್ಲಿ ಪಾಪ ನಾಶಕವಾದ ಪವಿತ್ರವಾದ ದ್ರಾಕ್ಷಾರಾಮವೆಂಬ ಸ್ಥಳವಿದೆ. ಅಲ್ಲಿ ಶಿವನು ತಾನೇ ಉದ್ಭವಿಸಿದ್ದಾನೆ.

೪೦. ಅಲ್ಲಿ ಊಟವೂ ಸಿಕ್ಕುತ್ತದೆ. ಮುಕ್ತಿಯೂ ಸಿಕ್ಕುತ್ತದೆ. ಸ್ಮರಣೆ ಮಾಡುವುದರಿಂದಲೇ ಪಾಪವೆಲ್ಲವೂ ನಾಶವಾಗುತ್ತದೆ. ಅಲ್ಲಿಗೆ ಹೋಗೋಣ ಬಾ.

೪೧-೪೨. ಕಲೆಯು ಹೇಳಿದಳು :—ನೀನು ಈಗ ಇನ್ನೂ ಸ್ನಾನಕ್ಕೆ ಮೊದಲು ಮಾಡಿದ್ದೀಯೆ ಅದೇ ಇನ್ನೂ ಮುಗಿದಿಲ್ಲ. ಇಂತಹ ನೀನು ಹಿಂದೆ ಯೋಚಿಸದಿರುವುದನ್ನು ಹೇಳುತ್ತಿದ್ದೀಯಲ್ಲ? ಸ್ವಭಾವಕ್ಕೆ ವಿರುದ್ಧವಾದುದನ್ನು ಉತ್ಪಾತವೆಂದು ಹೇಳುತ್ತಾರೆ. ಇದೇನು ಈಗ ಬದಲಾವಣೆ?

॥ ಮಾರೀಚ ಉವಾಚ ॥

ಭರ್ತುರಪ್ರತಿಕೂಲತ್ವಂ ನಾರೀಣಾಂ ಧರ್ಮ ಉಚ್ಯತೇ ।
ಪ್ರತಿಕೂಲಾನುಕೂಲಾ ವಾ ಮಮ ಶೀಘ್ರಂ ವದಸ್ವ ತತ್ ॥ ೪೩ ॥

ತೂಷ್ಣೀಂ ಭೂತ್ವಾಽಥ ಸಾ ಸಾಧ್ವೀ ಭರ್ತೇತ್ಯೇವ ವಿಚಾರ್ಯ ತಂ ।
ನಿರ್ಯಯೌ ತೇನ ಸಾ ಬಾಲಾ ವನಮಧ್ಯೇ ಗತಾ ಸತೀ ॥ ೪೪ ॥

ಅಥ ಮಧ್ಯಾಹ್ನಕಾಲೋಽಸೌ ಕ್ರಿಯತಾಮಾಹ್ನಿಕಕ್ರಿಯಾ ।
ರಾಕ್ಷಸೋಽಥ ವಚಶ್ರುತ್ವಾ ನಾನುಷ್ಠಾನಸ್ಥಲಂ ತ್ವಿಹ ॥ ೪೫ ॥

ಯತ್ರ ತತ್ರಾಸ್ತಿ ಗನ್ತವ್ಯಮಿತೋ ಗಚ್ಛಾವಹೇ ತತಃ ।
ಕಿಂಚಿತ್ಪ್ರದೇಶಂ ಗತ್ವಾ ತು ಗುಹಾಂ ವೀಕ್ಷ್ಯ ಸರಸ್ತಥಾ ॥ ೪೬ ॥

ಇಹ ಸ್ಥಾನಂ ಹಿ ಮೇ ಸ್ಥಾತುಂ ಕಾರ್ಯಂ ಸ್ನಾನಮಥಾವದೇತ್ ।
ಇತ್ಯುಕ್ತ್ವಾ ಸರಸಿ ಸ್ನಾತ್ವಾ ಫಲಾಹಾರಂ ಪ್ರಕಲ್ಪ್ಯ ಚ ॥ ೪೭ ॥

---

೪೩. ಮಾರೀಚನು ಹೇಳಿದನು :—ಗಂಡನಿಗೆ ವಿರುದ್ಧವಾಗಿ ನಡೆಯದಿರುವುದು ಹೆಂಡತಿಗೆ ಧರ್ಮವೆಂದು ಹೇಳಿದ್ದಾರೆ. ನಾನು ಹೇಳಿದಂತೆ ಮಾಡುತ್ತೀಯಾ ? ಇಲ್ಲವೇ ? ಅದನ್ನು ನನಗೆ ಬೇಗ ಹೇಳು.

೪೪. ಆಗ ಗಂಡನೆಂದೇ ತಿಳಿದು ಸುಮ್ಮನಾಗಿ ಅವನ ಜೊತೆಯಲ್ಲಿ ಕಾಡಿನ ಮಧ್ಯದಲ್ಲಿ ಹೊರಟಳು.

೪೫. ಆಗ ಮಧ್ಯಾಹ್ನ ಕಾಲವಾಗಲು ಮಾಧ್ಯಾನಿಕ ಕ್ರಿಯೆಗಳನ್ನು ಮಾಡು ಎಂದು ಗಂಡನಿಗೆ ಹೇಳಿದಳು. ಆ ರಾಕ್ಷಸನು ಅದನ್ನು ಕೇಳಿ ಇದು ಅನುಷ್ಠಾನಕ್ಕೆ ಸ್ಥಳವಲ್ಲ. ಬೇರೆ ಜಾಗದಲ್ಲಿ ಮಾಡಿಕೊಳ್ಳೋಣ ಇಲ್ಲಿಂದ ಮೊದಲು ಹೊರಡೋಣ ಎಂದನು

೪೬. ಒಂದು ಜಾಗಕ್ಕೆ ಹೋಗಿ ಅಲ್ಲಿ ಒಂದು ಗುಹೆಯನ್ನೂ, ಕೊಳವನ್ನೂ ನೋಡಿ, ಇಲ್ಲಿ ನಾನಿರಲು ಯೋಗ್ಯವೆಂದು ತಿಳಿದು, ಕಲೆಯನ್ನು ಕುರಿತು ಸ್ನಾನವನ್ನು ಮಾಡುತ್ತೇನೆ ಎಂದು ಹೇಳಿದನು.

೪೭-೪೮. ಆಗ ಆ ಸರೋವರದಲ್ಲಿ ಸ್ನಾನಮಾಡಿ ಫಲಾಹಾರಕ್ಕೆ ಸಿದ್ಧಪಡಿಸಿಕೊಂಡು ಊಟದ ಸಮಯ ಬರಲು, ಶಿವನನ್ನೂ ಪಾರ್ವತಿಯನ್ನೂ ಧ್ಯಾನಮಾಡಿ

ಭೋಜನಾವಸರೇ ಪ್ರಾಪ್ತೇ ಕಲಾ ದಧ್ಯಾವುಮಾಂ ಶಿವಂ ।
ಅಯಂ ಧವೋ ಮಮ ನ ವಾ ಇತಿ ಧ್ಯಾನಪರಾಭವತ್ ॥ ೪೮ ॥

ಅಥ ಧ್ಯಾನೇನ ತಂ ಚೋರಂ ನಿಶ್ಚಿತ್ಯ ಚ ಪತಿವ್ರತಾ ।
ಭೀತಾತಿನಮ್ರವದನಾ ತ್ವಶ್ರುಪೂರ್ಣಮುಖೀ ತದಾ ॥ ೪೯ ॥

ಕಷ್ಟಮಾಪತಿತಂ ಪಾಪಮಿತ್ಯುಕ್ತ್ವಾ ನಿಪಪಾತ ಹ ।
ರುದತೀಂ ತಾಮಥೋ ದೃಷ್ಟ್ವಾ ರಾಕ್ಷಸಃ ಪಾಪನಿಶ್ಚಯಃ ॥ ೫೦ ॥

ಧರ್ಷಿತುಂ ತಾಮಥಾರೇಭೇ ನ ಚೈತದ್ಧರ್ಷಣಂ ಪ್ರತಿ ।
ಬಲಾತ್ಕಾರಮಥೋ ಕರ್ತುಂ ಪತಮಾನೇ ತು ರಾಕ್ಷಸೇ ॥ ೫೧ ॥

ಆಜಾನುನಾಭಿಪರ್ಯಂತಂ ಶೈಲಂ ಸ್ಥಾನಮಕಲ್ಪಯತ್ ।
ಶಿಲಾತ್ವಮಗಮದ್ವಸ್ತ್ರಂ ರಾಕ್ಷಸೋ ವೀಕ್ಷ್ಯ ತಾಮಥ ॥ ೫೨ ॥

ಇತ್ಯೇವಂ ತಾಂ ಹನಿಷ್ಯಾಮಿ ಖಾದಯಿಷ್ಯಾಮ್ಯತಃ ಪರಂ ।
ಇತ್ಯುಕ್ತ್ವಾ ಭ್ರಾಮಯಿತ್ವಾಸಿಂ ಶಿರಶ್ಛೇತ್ತುಂ ಪ್ರಚಕ್ರಮೇ ॥ ೫೩ ॥

---

ಇವನಲ್ಲಿ ಅನುಮಾನ ಬರಲು ಇವನು ನನ್ನ ಗಂಡನು ಹೌದೋ ಅಲ್ಲವೋ ಎಂದು ತಿಳಿಯಲು ಧ್ಯಾನಾಸಕ್ತಳಾದಳು.

೪೯. ಅನಂತರ ಧ್ಯಾನದಿಂದ ಗಂಡನಲ್ಲವೆಂದು ನಿಶ್ಚಯಿಸಿ, ಆ ಪತಿವ್ರತೆಯು ಹೆದರಿ ತಲೆತಗ್ಗಿಸಿಕೊಂಡು ಅಳುತ್ತಾ ಕಷ್ಟವು ಒದಗಿತು ಎಂದು ಹೇಳಿ ಬಿದ್ದುಬಿಟ್ಟಳು.

೫೦-೫೧. ಅಳುತ್ತಿರಲು ಆಕೆಯನ್ನು ನೋಡಿ ರಾಕ್ಷಸನು ಪಾಪಬುದ್ಧಿಯುಳ್ಳವನಾಗಿ ಆಕೆಯನ್ನು ಕಾಮಬುದ್ಧಿಯಿಂದೆಳೆದನು. ಹಾಗೆ ಮಾಡಬೇಡವೆನ್ನಲು, ಬಲಾತ್ಕಾರದಿಂದ ವಶಪಡಿಸಿಕೊಳ್ಳಲು ಉದ್ಯುಕ್ತನಾದನು. ಆಗ ಆಕೆಯು ಹೊಕ್ಕಳಿನಿಂದ ಹಿಡಿದು ತೊಡೆಯವರೆಗೂ ಮೈಯ್ಯನ್ನು ಕಲ್ಲನ್ನಾಗಿ ಮಾಡಿಕೊಂಡು ಬಿಟ್ಟಳು.

೫೨-೫೩. ಬಟ್ಟೆಯೂ ಕೂಡ ಕಲ್ಲಾಗಲು ರಾಕ್ಷಸನು ಅದನ್ನು ತಿಳಿದು ಹಾಗಾದರೆ ಈಕೆಯನ್ನು ಕೊಂದು ತಿಂದುಬಿಡುವನೆಂದು ಕತ್ತಿಯನ್ನು ಝಳಪಿಸುತ್ತಾ ಕೊಲ್ಲಲುದ್ಯುಕ್ತನಾದನು.

ಕಲಾಪಂ ಮತ್ಪತಿರ್ಜ್ಞಾತ್ವಾ ಶಾಪಂ ದಾಸ್ಯತಿ ಮಾ ಹರ ।
ಇತ್ಯುಕ್ತಮಾತ್ರೇ ವಚಸಿ ಶಿರಶ್ಚಿಚ್ಛೇದ ರಾಕ್ಷಸಃ ॥ ೫೪ ॥

ಪ್ರಾಪ್ತಾಯಾಂ ದುರ್ಮೃತಿಂ ತಸ್ಯಾಮಥ ಶೈವಾಸ್ಸಮಾಗತಾಃ ।
ದೂತಾ ವಿಚಿತ್ರಾಭರಣಾಃ ಸರ್ವಾಯುಧಧರಾಶ್ಶುಭಾಃ ॥ ೫೫ ॥

ಏನಾಂ ವಿಮಾನಮಾರೋಪ್ಯ ಶಿವಲೋಕಮುಪಾಗಮನ್ ।
ತಾಮಾಗತಾಂ ಗಿರಿಸುತಾ ಹರ್ಷೇಣ ಪ್ರತಿಪೂಜ್ಯ ಚ ॥ ೫೬ ॥

ಸ್ವಪಾದಪ್ರಣತಾಂ ಶುದ್ಧಾಮುಮಾ ವಾಕ್ಯಮಭಾಷತ ।
ಪಾತಿವ್ರತ್ಯೇನ ತೇ ತುಷ್ಟಾ ತ್ವಭೀಷ್ಟಂ ಪ್ರದದಾಮಿ ತೇ ॥ ೫೭ ॥

॥ ಕಲಿರುವಾಚ ॥

ದಾಸೀಭಾವಂ ಪ್ರಯಚ್ಛ ತ್ವಂ ತ್ವತ್ಪಾದಾಬ್ಜಂ ಮಮ ಪ್ರಿಯಂ ।
ಪ್ರಾರ್ಥ್ಯೈಃ ಕಿಮನ್ಯೈರ್ಬಹುಭಿಸ್ತಥಾಸ್ತ್ವಿತಿ ಶಿವಾಬ್ರವೀತ್ ॥ ೫೮ ॥

---

೫೪. ನಾನು ಕಲಿಯು. ನನ್ನ ಗಂಡನಿಗೆ ಗೊತ್ತಾದರೆ ಶಾಪವನ್ನು ಕೊಡುತ್ತಾನೆ. ಕೊಲ್ಲಬೇಡ ಎನ್ನುವಾಗ ಹರಶಬ್ದವನ್ನುಚ್ಚರಿಸಿದಳು. ಈ ಮಾತನ್ನು ಹೇಳಿದ ಒಡನೆಯೇ ರಾಕ್ಷಸನು ಆಕೆಯ ತಲೆಯನ್ನು ಕಡಿದುಬಿಟ್ಟನು.

೫೫. ಈಕೆಯು ದುರ್ಮರಣವನ್ನು ಹೊಂದಲು ಸರ್ವಾಭರಣ ಸರ್ವಾಯುಧಗಳನ್ನೂ ಧರಿಸಿರುವ ಶಿವದೂತರು ಬಂದರು.

೫೬. ಈಕೆಯನ್ನು ವಿಮಾನದಲ್ಲಿ ಕೂರಿಸಿಕೊಂಡು ಶಿವಲೋಕಕ್ಕೆ ಹೋದರು. ಈಕೆಯು ಬಂದುದನ್ನು ನೋಡಿ ಪಾರ್ವತಿಯು ಗೌರವಿಸಿದಳು.

೫೭. ತನ್ನ ಪಾದದಲ್ಲಿ ನಮಸ್ಕರಿಸುತ್ತಿರುವ, ಶುದ್ಧಳಾದ ಈಕೆಯನ್ನು ಪಾರ್ವತಿಯು ನೋಡಿ ನಿನ್ನ ಪಾತಿವ್ರತ್ಯಕ್ಕೆ ಸಂತೋಷಪಟ್ಟಿದ್ದೇನೆ. ಬೇಕಾದುದನ್ನು ಕೇಳಿಕೋ, ಕೊಡುತ್ತೇನೆ ಎಂದಳು.

೫೮. ಕಲಿಯು ಹೇಳಿದಳು:—ನೀನು ನನ್ನನ್ನು ದಾಸಿಯನ್ನಾಗಿ ಮಾಡಿಕೋ. ನಿನ್ನ ಪಾದಕಮಲವೇ ನನಗೆ ಪ್ರೀತಿಕರವಾದುದು. ಮಿಕ್ಕದ್ದನ್ನೆಲ್ಲಾ ಕೇಳಿಕೊಳ್ಳುವುದರಿಂದ ಉಪಯೋಗವೇನಿದೆ? ಎನ್ನಲು, ಪಾರ್ವತಿಯು ಹಾಗೆಯೇ ಆಗಲೆಂದಳು.

ಇಂದ್ರಾದಿವನಿತಾಭಿಸ್ಸಾ ಪೂಜಿತಾಥ ಕಲಾನಿಧಿಃ ।
ಏತಸ್ಮಿನ್ನಂತರೇ ಪ್ರಾಪ್ತಃ ಶೋಣೋ ಮುನಿರಥೋ ಗೃಹಂ ॥ ೫೯ ॥

ನ ತತ್ರ ದೃಷ್ಟ್ವಾ ತಾಂ ಭಾರ್ಯಾಂ ಧ್ಯಾನಯೋಗಪರೋಽಭವತ್ ।
ರಕ್ಷೋಽಹೃತಾಂ ಮೃತಾಂ ಪ್ರಾಪ್ತಾಂ ಶಿವಾಲೋಕಮುಮಾಂ ಪ್ರತಿ ॥ ೬೦ ॥

ಉಮಾದತ್ತವರಾ ಚಾಪಿ ದೃಷ್ಟ್ವಾರ್ಜ್ಞಾನಚಕ್ಷುಷಾ ।
ಕಿಂಚಿದ್ದುಃಖಮುಖಶ್ಚಿತ್ತಂ ಪರಾವೃತ್ಯ ಮುನಿಸ್ತದಾ ॥ ೬೧ ॥

ಶ್ವಶುರಂ ಗತವಾನ್ಸೋಽಥ ದೇವರಾತಂ ಮುನೀಶ್ವರಃ ।
ನಿವೇದ್ಯ ಸರ್ವಂ ಸಹಿತೋ ವಿಶ್ವಾಮಿತ್ರಮುಗಾನ್ಮುನಿಂ ॥ ೬೨ ॥

ನಿವೇದ್ಯ ತದ್ವಸಿಷ್ಠಸ್ಯ ವಸಿಷ್ಠೋಽಪ್ಯಾಹ ತಾನ್ಮುನೀನ್ ।
ಗತ್ವಾ ಕೈಲಾಸಮಾದೌ ತು ದೃಷ್ಟ್ವಾ ದೇವಂ ಮಹೇಶ್ವರಂ ॥ ೬೩ ॥

---

೫೯. ಇಂದ್ರಾಣಿಯೇ ಮುಂತಾದವರಿಂದಲೂ ಪೂಜಿತಳಾದಳು. ಇಷ್ಟರೊಳಗೆ ಶೋಣನು ಮನೆಗೆ ಬಂದನು.

೬೦. ಮನೆಯಲ್ಲಿ ಹೆಂಡತಿಯನ್ನು ಕಾಣದೆ ಧ್ಯಾನಯೋಗದಿಂದ ನೋಡಲು, ರಾಕ್ಷಸನು ಕದ್ದಿರುವುದೂ, ಅವಳನ್ನು ಕೊಂದಿರುವುದೂ, ಅವಳು ಪಾರ್ವತಿಯ ಬಳಿ ಇರುವುದೂ, ಆಕೆಯು ವರಕೊಟ್ಟಿರುವುದೂ ಗೊತ್ತಾಯಿತು.

೬೧. ದುಃಖಪಟ್ಟು ಮುಖವನ್ನು ತಿರುಗಿಸಿಕೊಂಡು ಅಳುತ್ತ, ಮಾವನಾದ ದೇವರಾತನ ಬಳಿಗೆ ಹೋದನು.

೬೨. ಆ ಮಾವನಿಗೆ ಎಲ್ಲವನ್ನೂ ತಿಳಿಸಿ ವಿಶ್ವಾಮಿತ್ರನ ಬಳಿಗೆ ಹೋಗಿ ಅಲ್ಲಿ ಎಲ್ಲವನ್ನೂ ತಿಳಿಸಿ, ಅನಂತರ ವಸಿಷ್ಠನ ಬಳಿಗೆ ಹೋಗಿ ತಿಳಿಸಲು ವಸಿಷ್ಠನು ಅವರನ್ನು ಕುರಿತು ಇಂತೆಂದನು.

೬೩. ಮೊದಲು ಕೈಲಾಸಕ್ಕೆ ಹೋಗಿ ಮಹಾದೇವನನ್ನು ನೋಡಿ. ಅವನ ಒಪ್ಪಿಗೆ ಪಡೆದು ಪಾರ್ವತಿಯ ಮನೆಗೆ ಹೋಗೋಣ.

ಅನುಜ್ಞಾಂ ಶಿವತೋ ಲಬ್ಧ್ವಾ ಪಾರ್ವತೀಮಂದಿರಂ ಗತಃ ।
ದೇವ್ಯೈ ವಿಜ್ಞಾಪ್ಯ ತತ್ಸರ್ವಂ ಯಥಾರ್ಥಂ ಪ್ರವದಾಮಿ ತತ್ ॥ ೬೪ ॥

ತಥೇತ್ಯುಕ್ತ್ವಾ ಮುನಿವರಾಃ ಕೈಲಾಸಂ ಶಂಕರಾಲಯಂ ।
ಗತ್ವಾ ಪ್ರಣಮ್ಯ ದೇವೇಶಂ ವೀರಭದ್ರೇಣ ಪೂಜಿತಾಃ ॥ ೬೫ ॥

ವಿಜ್ಞಾಪಯಾಮಾಸುರಿದಂ ಶೋಣಭಾರ್ಯಾ ಹೃತೇತಿ ಚ ।
ಶಿವಃ ಪ್ರಾಹ ಮುನೀಂದ್ರಾಂಸ್ತಾನ್ ಜ್ಞಾತಮೇವಂ ಮಯಾ ತ್ವಿದಂ ॥ ೬೬ ॥

ಅಕಾಲಮರಣಂ ತಸ್ಯಾ ಆಯುರ್ವರ್ಷಶತಂ ಸ್ಥಿತಂ ।
ಅಕಾಲಮೃತ್ಯುಯುಕ್ತಾನಾಂ ಪುನರ್ಜೀವನಮಸ್ತಿ ಚ ॥ ೬೭ ॥

ದಶಪುತ್ರಪ್ರಸವಿನೀ ರೂಪಸೌಭಾಗ್ಯವತ್ಯಪಿ ।
ಭವದ್ಭಿರಿತಿ ನಿಶ್ಚಿತ್ಯ ಸಮಾಗತಮಿಹ ದ್ವಿಜಾಃ ॥ ೬೮ ॥

ಯಮಲೋಕಗತಾನಾಂ ತು ಸರ್ವಮೇತದ್ವಿನಿಶ್ಚಿತಂ ।
ಮಮ ಲೋಕಗತಾನಾಂ ತು ಗತಿರನ್ಯಾ ನ ವಿದ್ಯತೇ ॥ ೬೯ ॥

---

೬೪. ಅಲ್ಲಿ ಪಾರ್ವತೀದೇವಿಗೆ ಎಲ್ಲವನ್ನೂ ವಿಜ್ಞಾಪನೆಮಾಡಿಕೊಳ್ಳೋಣ. ಇದು ಸರಿಯಾದ ಮಾರ್ಗವೆಂದನು.

೬೫. ಆ ರೀತಿಯಾಗಿ ಎಲ್ಲರೂ ಕೈಲಾಸಕ್ಕೆ ಹೋಗಲು ಅಲ್ಲಿ ವೀರಭದ್ರನು ಅವರೆಲ್ಲರನ್ನೂ ಗೌರವಿಸಿದನು.

೬೬. ಶೋಣನು, ಹೆಂಡತಿಯನ್ನು ಕದ್ದ ವಿಷಯವನ್ನು ವಿಜ್ಞಾಪಿಸಿದನು. ಶಿವನು ಅದೆಲ್ಲವೂ ನನಗೆ ತಿಳಿದಿದೆ ಎಂದನು.

೬೭. ಈಕೆಗೆ ಬಂದಿರುವುದು ಅಕಾಲಮೃತ್ಯುವು. ಈಕೆಗಿನ್ನೂ ನೂರುವರ್ಷ ಆಯುಸ್ಸಿರುವುದು. ಅಕಾಲದಲ್ಲಿ ಸತ್ತವರಿಗೆ ಪುನಃ ಬರುವಿಕೆಯುಂಟು.

೬೮. ಹತ್ತುಜನ ಮಕ್ಕಳುಗಳನ್ನು ಹೆತ್ತು, ರೂಪಸೌಭಾಗ್ಯಗಳಿಂದ ಕೂಡಿದ್ದರೂ, ಪುನರ್ಜೀವನವುಂಟು ಎಂದು ನೀವು ನಿಶ್ಚಯಮಾಡಿಕೊಂಡು ಬಂದಿದ್ದೀರಿ.

೬೯. ಆದರೆ ಯಮಲೋಕಕ್ಕೆ ಹೋದವರು ನೀವು ಹೇಳಿದಂತೆ ಹಿಂತಿರುಗಿ ಬರುತ್ತಾರೆ. ನನ್ನ ಲೋಕಕ್ಕೆ ಬಂದಮೇಲೆ ಅವರಿಗೆ ಬೇರೆ ಗತಿಯಿರುವುದಿಲ್ಲ.

**ಅನಯಾ ಕೀರ್ತಿತಂ ನಾಮ ಪ್ರಾಣನಿರ್ಗಮನೇ ಪುರಾ ।**
**ನಷ್ಟಾ ಯಮಲಿಪಿಃ ಸ್ಪಷ್ಟಾ ಕಥಮಾಯುಷ್ಯನಿರ್ಣಯಃ ॥ ೭೦ ॥**

**ಅಥವಾ ಗಿರಿಜಾಯೈ ಚ ನಿವೇದಯತ ಕೃತ್ಸ್ನಶಃ ।**
**ಅಥ ತೇ ಪಾರ್ವತೀಪಾದದರ್ಶನಾಯ ಗತಾ ದ್ವಿಜಾಃ ॥ ೭೧ ॥**

**ಪ್ರಣಮ್ಯ ಮಾತರಂ ಸರ್ವೇ ವಿಶ್ವಾಮಿತ್ರೋಽಬ್ರವೀದಿದಂ ।**
**ದೀನಾನಾಥಕೃಶಾಭಾರ್ಯಾಪ್ರಣಷ್ಟಪಿತೃಕಾನ್ ಶಿಶೂನ್ ॥ ೭೨ ॥**

**ರಕ್ಷಯಿತ್ವಾ ಪುರಾ ಮಾತರಿಷ್ಟದಾ ತ್ವಂ ಸದಾ ಹ್ಯಭೂಃ ।**
**ಕಲಾ ಪೌತ್ರೀ ಮಮೈವೇಯಂ ತ್ವಾಮಾರಾಧ್ಯ ಪತಿಂ ತ್ವಮುಂ ॥ ೭೩ ॥**

**ಶೋಣಂ ಲಬ್ಧವತೀ ಮಾತಸ್ತ್ವತ್ಪೂಜಾಯಾಃ ಫಲಂ ತ್ವಿದಂ ।**
**ತಪಸಾ ಲಭ್ಯತೇಽಪರ್ಣೇ ದಾನೇನ ಯದಿ ವಾಽಪಿ ಚ ॥ ೭೪ ॥**

---

೭೦. ಈಕೆಯು ಪ್ರಾಣಬಿಡುತ್ತಿರುವಾಗ ನನ್ನ ಹೆಸರನ್ನು ಉಚ್ಚರಿಸಿದಳು. ಆದುದರಿಂದ ಯಮನು ಹಣೆಯಲ್ಲಿ ಬರೆದಿದ್ದುದು ನಷ್ಟವಾಯಿತು. ಆಯುಸ್ಸನ್ನು ನಿರ್ಣಯಿಸುವುದಕ್ಕೆ ಸಾಧ್ಯವಿಲ್ಲ. ಹಾಗಿಲ್ಲದಿದ್ದರೆ ಗಿರಿಜೆಗೆ ಎಲ್ಲವನ್ನೂ ಹೇಳಿರೆಂದನು.

೭೧. ಅನಂತರ ಅವರೆಲ್ಲರೂ, ಪಾರ್ವತಿಯ ದರ್ಶನಕ್ಕೆ ಹೋಗಿ ಆ ತಾಯಿಗೆ ನಮಸ್ಕರಿಸಿದರು. ಆಗ ವಿಶ್ವಾಮಿತ್ರನು ಇಂತೆದನು.

೭೨. ಅಮ್ಮ! ದೀನರೂ, ಅನಾಥರೂ, ಕೃಶರೂ, ಆಗಿ ನಾಶವಾಗಿ ಹೋಗುತ್ತಿದ್ದ ಮಕ್ಕಳನ್ನೂ, ಹೆಂಡತಿಯನ್ನೂ ನೀನು ಕಾಪಾಡಿ ನನಗೆ ಯಾವಾಗಲೂ ಇಷ್ಟವಾದುದನ್ನು ಕೊಡತಕ್ಕವಳಾಗಿದ್ದೆ.

೭೩. ಕಲೆಯೆಂಬ ಈಕೆಯು ನನಗೆ ಮೊಮ್ಮಗಳು. ನಿನ್ನನ್ನು ಪೂಜಿಸಿ ಈ ಶೋಣಮುನಿಯನ್ನು ಗಂಡನನ್ನಾಗಿ ಹೊಂದಿದಳು. ನಿನ್ನ ಪೂಜೆಗೆ ಇದೇ ಫಲವು.

೭೪. ತಪಸ್ಸು, ದಾನ, ವ್ರತ, ಉಪವಾಸ, ಇವುಗಳಲ್ಲಿ ಯಾವುದನ್ನು ಆಚರಿಸಿದರೆ ಈ ಕಲೆಯು ನಮಗೆ ಮತ್ತೆ ಸಿಕ್ಕುವಳು ?

ವ್ರತೋಪವಾಸೈರಥವಾ ಕಲಾ ಸಾ ಲಭ್ಯತೇ ಮಯಾ ।
ಏತಯಾ ಪರಿವಿಷ್ಟಾನ್ನಂ ಭೋಕ್ತುಮಿಚ್ಛಾಮಿ ತತ್ಕಥಂ ॥ ೭೫ ॥

॥ ಪಾರ್ವತ್ಯುವಾಚ ॥

ಯಾದೃಶೀ ಚೈವ ತೇ ಭಾರ್ಯಾ ತಾದೃಶೀ ದೀಯತೇ ಮಯಾ ।
ನೈನಾಂ ತ್ಯಕ್ತುಮಹಂ ಶಕ್ತಾ ಕಿಂ ವಾ ತ್ವಂ ಮನ್ಯಸೇ ಮುನೇ ॥ ೭೬ ॥

॥ ವಿಶ್ವಾಮಿತ್ರ ಉವಾಚ ॥

ಮಾತಾ ತ್ವಮಿತ್ಯೇವ ಮಯಾ ಹ್ಯವಿಶಂಕಿತಮೀರಿತಂ ।
ಶೋಣೋ ಮುನಿರಯಂ ಮಾತಸ್ತವ ವಿಜ್ಞಾಪಯಿಷ್ಯತಿ ॥ ೭೭ ॥

॥ ಶೋಣ ಉವಾಚ ॥

ತಾಮೇವ ಭಾರ್ಯಾಂ ಪ್ರತಿ ಮೇ ಪ್ರೀತಿರತ್ಯುತ್ಕಟಾ ಸತೀ ।
ಸೈವ ಮೇ ದೀಯತಾಂ ಭಾರ್ಯಾ ಚಾನ್ಯಥಾ ಮರಣಂ ಭವೇತ್ ॥ ೭೮ ॥

---

೭೫. ಈಕೆಯು ಬಡಿಸಿದ ಅನ್ನವನ್ನು ಊಟಮಾಡಬೇಕೆಂಬ ಇಚ್ಛೆ ನನಗಿದೆ. ಅದು ಹೇಗೆ ಸಿದ್ಧಿಸೀತು?

೭೬. ಪಾರ್ವತಿಯು ಹೇಳಿದಳು:—ಎಲೈ ಋಷಿಯೇ, ನಿನ್ನ ಹೆಂಡತಿಯು ಹೇಗಿದ್ದಳೋ ಅಂತಹ ಬೇರೊಬ್ಬಳನ್ನು ನಾನು ಕೊಡುತ್ತೇನೆ. ಇವಳನ್ನು ಬಿಡಲು ನನಗೆ ಸಾಧ್ಯವಿಲ್ಲ. ನಿನ್ನಿಷ್ಟವೇನು?

೭೭. ವಿಶ್ವಾಮಿತ್ರನು ಹೇಳಿದನು:—ಅಮ್ಮಾ! ನೀನು ತಾಯಿಯೆಂದು ತಿಳಿದೇ ಈರೀತಿ ನಿಶ್ಶಂಕೆಯಿಂದ ಹೇಳಿದೆನು. ಶೋಣನೇ ನಿನಗೆ ವಿಜ್ಞಾಪಿಸಿಕೊಳ್ಳುತ್ತಾನೆ.

೭೮. ಶೋಣನು ಹೇಳಿದನು:—ಅಮ್ಮಾ! ಆ ಹೆಂಡತಿಯ ಮೇಲೆಯೇ ನನಗೆ ಬಹು ಪ್ರೀತಿಯಿದೆ. ಅವಳನ್ನೇ ನನಗೆ ಕೊಡು. ಹಾಗಿಲ್ಲದಿದ್ದರೆ ಪ್ರಾಣಗಳು ಹೋಗುತ್ತವೆ.

॥ ಪಾರ್ವತ್ಯುವಾಚ ॥

ಭಾರ್ಯಾಪತೀ ಸಮಾವೇವ ವಿಷಮೌ ತು ವಿಗರ್ಹಿತೌ ।
ತವ ಚಾಸದೃಶೀ ಚೇಯಂ ಸದೃಶೀಂ ಪ್ರವದಾಮ್ಯಹಂ ।
ನ ಚ ಮನ್ಮಂದಿರಂ ಪ್ರಾಪ್ತಾಂ ತ್ಯಕ್ಷೇ ದೇಹವಿವರ್ಜಿತಾಂ ॥ ೭೯ ॥

॥ ಶೋಣ ಉವಾಚ ॥

ಯದಿ ನೋ ದೀಯತೇ ಚೇಯಂ ಭಾರ್ಯಾಮನ್ಯಾಂ ಮಮ ಪ್ರಿಯಾಂ ।
ರಾಜ್ಯಂ ಮಹೇಶ್ವರೇ ಭಕ್ತಿಂ ಪ್ರಯಚ್ಛ ವರಮುತ್ತಮಂ ॥ ೮೦ ॥

ಭವಿಷ್ಯತ್ಯೇವಮೇವೈತದಿತ್ಯುಕ್ತ್ವಾ ಚಾಬ್ರವೀನ್ಮುನೀನ್ ।
ಭೋಕ್ತವ್ಯಮಿಹ ಯುಷ್ಮಾಭಿರ್ಮಹಾಸ್ಮಿನ್ದಿವಸತ್ರಯಂ ॥ ೮೧ ॥

ಪ್ರತೀಂದುವಾರೇ ದೇವಸ್ಯ ಮಹೇಶಸ್ಯೈವ ತುಷ್ಟಯೇ ।
ಭೋಜನೀಯಾಸ್ಸದಾಕಾಲಮಷ್ಟೌ ವಿಪ್ರಾ ಮುನೀಶ್ವರ ॥ ೮೨ ॥

---

೭೯. ಪಾರ್ವತಿಯು ಹೇಳಿದಳು :—ಗಂಡಹೆಂಡಿರು ಸಮವಾಗಿದ್ದರೆ ಅದು ಸರಿಹೋಗುವುದು. ಸುಖವೂ ಉಂಟು. ಅವರು ಗುಣಾದಿಗಳಿಂದ ವ್ಯತ್ಯಾಸವಾಗಿದ್ದರೆ ಅದು ಯೋಗ್ಯವಲ್ಲ. ನಿಂದ್ಯವಾದುದು. ಈಕೆಯು ನಿನಗೆ ಯೋಗ್ಯಳಲ್ಲ. ನಿನಗೆ ಯೋಗ್ಯಳಾದವಳನ್ನು ಬೇರೆ ಹೇಳುತ್ತೇನೆ. ದೇಹವನ್ನು ಬಿಟ್ಟು ನನ್ನ ಮನೆಗೆ ಬಂದವಳನ್ನು ನಾನು ಹಿಂದಕ್ಕೆ ಕಳುಹಿಸುವುದಿಲ್ಲ.

೮೦. ಶೋಣನು ಹೇಳಿದನು :—ಈಕೆಯನ್ನು ನೀನು ಕೊಡದಿದ್ದರೆ ನನಗೆ ಇಷ್ಟಳಾದ ಹೆಂಡತಿಯೊಬ್ಬಳನ್ನೂ, ರಾಜ್ಯವನ್ನೂ, ಮಹೇಶ್ವರನಲ್ಲಿ ಭಕ್ತಿಯನ್ನೂ ಉಳ್ಳ ಈ ವರಗಳನ್ನು ಕೊಡು.

೮೧. ಅದು ಹಾಗೇ ಆಗಲೆಂದು ಹೇಳಿ, ಮಹರ್ಷಿಗಳನ್ನು ಕುರಿತು ನೀವು ಇಲ್ಲಿ ಇನ್ನು ಮೂರು ದಿವಸವಿದ್ದು ಊಟಮಾಡಿಕೊಂಡು ಹೋಗಬೇಕೆಂದು ಹೇಳಿದಳು.

೮೨. ಮಹೇಶ್ವರನ ಪ್ರೀತ್ಯರ್ಥವಾಗಿ ಪ್ರತಿ ಸೋಮವಾರವೂ, ಎಂಟುಜನ ಬ್ರಾಹ್ಮಣರನ್ನು ಭೋಜನಮಾಡಿಸಬೇಕು.

ಇಚ್ಛಯಾ ಯತ್ರ ಕುತ್ರಾಪಿ ವ್ರತಮೇತದುಪಕ್ರಮೇತ್ ।
ವತ್ಸರೇ ಪರಿಪೂರ್ಣೇ ತು ಮಹಾರಾಜತಮೀಶ್ವರಂ ॥ ೮೩ ॥

ಚತುರ್ನಿಷ್ಕಪ್ರಮಾಣೇನ ತದರ್ಧೇನೈವ ಕಾರಯೇತ್ ।
ಶ್ವೇತವಸ್ತ್ರಯುಗಂ ಸೂಕ್ಷ್ಮಂ ಚಾಮರೇ ವ್ಯಜನೇ ತಥಾ ॥ ೮೪ ॥

ಪಾದುಕೋಪಾನಹಂ ಛತ್ರಂ ಸರ್ವಂ ವಿಪ್ರೇ ನಿಯೋಜಯೇತ್ ।
ಸ್ವಶಕ್ತ್ಯಾ ದಕ್ಷಿಣಾಂ ದತ್ವಾ ಬ್ರಾಹ್ಮಣಾಂಶ್ಚ ವಿಸರ್ಜಯೇತ್ ॥ ೮೫ ॥

ಏತದುದ್ಯಾಪನೇ ಕುರ್ಯಾದಾದೌ ಮಧ್ಯೇ ತಥಾ ಸುಧೀಃ ।
ದಿನೇ ದಿನೇ ತಥಾ ಪೂಜಾ ಸೋಮಸ್ಯ ಪರಮಾತ್ಮನಃ ॥ ೮೬ ॥

ತತ್ಪುರುಷಾಯ ವಿದ್ಮಹೇ ಮಹಾದೇವಸ್ಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥ ಇತಿಪೂಜಾಮಂತ್ರಃ ॥ ೮೭ ॥

---

೮೩. ಅವನ ಇಚ್ಛೆಯಂತೆ ಯಾವ ಸೋಮವಾರವಾದರೂ, ಈ ವ್ರತವನ್ನು ಮೊದಲು ಮಾಡಬಹುದು. ವರ್ಷ ತುಂಬಿದಮೇಲೆ ಚಿನ್ನದಲ್ಲಿ ನಾಲ್ಕು ನಿಷ್ಕದ ಪ್ರಮಾಣಕ್ಕೆ ಒಂದು ಈಶ್ವರ ಪ್ರತಿಮೆಯನ್ನು ಮಾಡಿಸಬೇಕು. ಇಲ್ಲದಿದ್ದರೆ ಎರಡು ನಿಷ್ಕದಲ್ಲಾದರೂ ಆಗಬಹುದು.

೮೪-೮೫. ಬಿಳಿಯ ಬಟ್ಟೆಯನ್ನು, ಚಾಮರ, ಬೀಸಣಿಗೆ, ಪಾದುಕೆ, ಕೆರ, ಛತ್ರಿ, ಎಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು. ಶಕ್ತಿಯನ್ನನುಸರಿಸಿ ದಕ್ಷಿಣೆಯನ್ನು ಕೊಡಬೇಕು. ಅನಂತರ ಬ್ರಾಹ್ಮಣರನ್ನು ಕಳುಹಿಸಬೇಕು.

೮೬. ಈ ರೀತಿಯಾದ ದಾನವನ್ನು ಆದಿಯಲ್ಲಿಯೂ, ಮಧ್ಯದಲ್ಲಿಯೂ, ಉದ್ಯಾಪನೆಯಲ್ಲಿಯೂ, ಮಾಡಬೇಕು. ಪ್ರತಿದಿನವೂ ಆ ಈಶ್ವರನಿಗೆ ಪೂಜೆ ಮಾಡಬೇಕು.

೮೭. ಮಹಾದೇವನಾದ ಆ ಸ್ವಾಮಿಯನ್ನು ನಮಸ್ಕರಿಸಿ ಸ್ತುತಿಸುತ್ತೇನೆ. ಅವನು ನನ್ನನ್ನು ಕಾಪಾಡಲಿ. ಈ ಮಂತ್ರದಿಂದ ಪೂಜೆಯನ್ನು ಮಾಡಬೇಕು. ಇದು ಪೂಜೆಯ ಮಂತ್ರವು—

ಸ್ಥಂಡಿಲೇ ಪೂಜಯೇದ್ದೇವಂ ಪ್ರತಿಮಾಯಾಮಥಾಪಿ ವಾ ।
ಏಕಭುಕ್ತಂ ಸ್ವಯಂ ಕುರ್ಯಾದ್ಬ್ರಹ್ಮಚರ್ಯಸಮನ್ವಿತಂ ॥ ೮೮ ॥

ಏತತ್ಸೋಮವ್ರತಂ ಪ್ರೋಕ್ತಂ ಶಿವತುಷ್ಟಿಪ್ರದಂ ಶುಭಂ ।
ಯ ಏವಂ ಕುರುತೇ ಭಕ್ತ್ಯಾ ನಾರೀ ವಾ ಪುರುಷೋಽಪಿ ವಾ ॥ ೮೯ ॥

ಛಾಯೇವ ಶಂಕರಸ್ಯಾಸೌ ನಿತ್ಯಮೇವಾನುವರ್ತತೇ ।
ಅದ್ಯ ಸೋಮದಿನಂ ಪ್ರಾಪ್ತಂ ಮಧ್ಯಾಹ್ನಾತ್ಪರತೋ ಭುಜಿಃ ॥ ೯೦ ॥

ಯೂಯಂ ಚ ಸರ್ವೇ ಮುನಯಃ ಕೃತಪೌರ್ವಾಹ್ನಿಕಕ್ರಿಯಾಃ ।
ಮಾಧ್ಯಾಹ್ನಿಕೀಂ ಕ್ರಿಯಾಂ ಕೃತ್ವಾ ಭೋಕ್ತುಮರ್ಹಥ ಸತ್ತಮಾಃ ॥ ೯೧ ॥

ಮಾತುರ್ವಚನಮಾಕರ್ಣ್ಯ ತಥೇತ್ಯುಕ್ತ್ವಾ ನಮಸ್ಯ ಚ ।
ಅನುಷ್ಠಾನಾಯ ತೇ ಸರ್ವೇ ಗತಾ ಭಾಗೀರಥೀಂ ನದೀಂ ॥ ೯೨ ॥

---

೮೮. ಮಂಡಲದಲ್ಲಿಯಾಗಲಿ, ಪ್ರತಿಮೆಯಲ್ಲಿಯಾಗಲಿ, ಸ್ವಾಮಿಯನ್ನು ಪೂಜಿಸಬೇಕು. ಒಪ್ಪತ್ತು ಊಟಮಾಡಬೇಕು. ಬ್ರಹ್ಮಚಾರಿಯಾಗಿರಬೇಕು. ಇದೇನೇ ಸೋಮವ್ರತವೆಂಬುದು. ಇದು ಶಿವನಿಗೆ ಪ್ರೀತಿಯನ್ನುಂಟುಮಾಡುತ್ತದೆ.

೮೯. ಭಕ್ತಿಯಿಂದ ಹೆಂಗಸಾಗಲಿ, ಗಂಡಸಾಗಲಿ ಇದನ್ನು ಮಾಡಿದರೆ, ನೆರಳಿನಂತೆ ಈಶ್ವರನನ್ನೇ ಅವನು ಹೊಂದುತ್ತಾನೆ.

೯೦. ಇಂದು ಸೋಮವಾರವು. ಮಧ್ಯಾಹ್ನದ ವೇಳೆ ಊಟಮಾಡಬೇಕು.

೯೧. ನೀವೆಲ್ಲರೂ ಋಷಿಗಳು. ಪೂರ್ವಾಹ್ಣದ ಆ ಸಂಧ್ಯಾವಂದನಾದಿಗಳನ್ನು ಮಾಡಿ ಬಂದಿರುತ್ತೀರಿ. ಮಧ್ಯಾಹ್ನದ ಕ್ರಿಯೆಗಳನ್ನು ಮಾಡಿಕೊಂಡು ಪೂಜ್ಯರಾದ ನೀವು ಊಟಮಾಡಿರಿ.

೯೨. ಪಾರ್ವತೀದೇವಿಯ ಈ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಆಕೆಗೆ ನಮಸ್ಕಾರಮಾಡಿ, ಅನುಷ್ಠಾನಕ್ಕೋಸ್ಕರ ಅವರೆಲ್ಲರೂ ಗಂಗಾನದಿಗೆ ಹೋದರು.

ಸಂಗಮೇ ಮಧ್ಯತೋ ವೃತ್ತೇ ಕೃತ್ವಾ ಮಾಧ್ಯಾಹ್ನಿಕೀಂ ಕ್ರಿಯಾಂ ।
ವಿಶ್ವೇಶಪೂಜಾಂ ಕೃತ್ವಾ ಚ ಷೋಡಶೈರುಪಚಾರಕೈಃ ॥ ೯೩ ॥

ಅಥ ತೇ ಪಾರ್ವತೀಗೇಹಂ ಗತ್ವಾ ದೇವೀಂ ಪ್ರಣಮ್ಯ ಚ ।
ಲೋಕಮಾತುರ್ನಿಯೋಗೇನ ಶಾಲಂಕಾಯನಕಾತ್ಮಜಃ ॥ ೯೪ ॥

ಪಾದಪ್ರಕ್ಷಾಳನಮುಖಾನುಪಚಾರಾನಕಲ್ಪಯತ್ ।
ಪಂಚಗಂಧಕಮಾದಾಯ ತಾನ್ಮುನೀನಭ್ಯಲೇಪಯತ್ ॥ ೯೫ ॥

ರಾಜ್ಯಂ ಚ ಮಹದಾಪ್ನೋತಿ ಯೋ ದದ್ಯಾತ್ಪಂಚಗಂಧಕಂ ।
ಪಂಚಬಾಣಸಮೋ ಭೂತ್ವಾ ಸ್ತ್ರೀಣಾಂ ವಲ್ಲಭತಾಮಿಯಾತ್ ॥ ೯೬ ॥

ವಿಷ್ಣವೇ ಯೋ ಹಿ ದದ್ಯಾತ್ತು ಸೋಽಪಿ ಮಾರಸಮೋ ಭವೇತ್ ।
ಕಾಮೀ ತ್ವಕಾಮೀ ಯಃ ಕುರ್ಯಾತ್ಕೈಲಾಸೇ ಪಂಚವತ್ಸರಾನ್ ॥ ೯೭ ॥

---

೯೩. ಸಂಗಮಕಾಲವು ಬರಲು ಅವರು ಮಧ್ಯಾಹ್ನಿಕವನ್ನು ಮಾಡಿ ಷೋಡಶೋಪಚಾರಗಳಿಂದ ವಿಶ್ವೇಶ್ವರನ ಪೂಜೆಯನ್ನು ಮಾಡಿ ಹೊರಟರು.

೯೪. ಅನಂತರ ಅವರೆಲ್ಲರೂ, ಪಾರ್ವತಿಯ ಮನೆಗೆ ಹೋಗಿ ಆಕೆಗೆ ನಮಸ್ಕಾರ ಮಾಡಿದರು. ಆ ತಾಯಿಯ ಅಪ್ಪಣೆಯಂತೆ ಶಾಲಂಕಾಯನ ಮಗನು ಮುಂದೆ ಹೇಳುವಂತೆ ಮಾಡಿದನು.

೯೫. ಅವರೆಲ್ಲರಿಗೂ ಪಾದಪ್ರಕ್ಷಾಳನೆ ಮಾಡಿದನು ಮತ್ತು ಪಂಚಗಂಧಕಗಳನ್ನು ತಂದು ಆ ಋಷಿಗಳಿಗೆ ಲೇಪನಮಾಡಿದನು.

೯೬. ಪಂಚಗಂಧಕಗಳನ್ನು ದಾನಮಾಡಿದರೆ ದೊಡ್ಡ ರಾಜ್ಯವನ್ನು ಹೊಂದುತ್ತಾನೆ. ಅಲ್ಲದೆ ಮನ್ಮಥನಿಗೆ ಸಮನಾಗಿ, ಸ್ತ್ರೀಯರಿಗೆ ಪ್ರಿಯನಾಗುತ್ತಾನೆ.

೯೭-೯೮. ಯಾವನು ಈ ಪಂಚಗಂಧಗಳನ್ನು ವಿಷ್ಣುವಿಗೆ ಅರ್ಪಿಸುತ್ತಾನೆಯೋ ಅವನು ಮನ್ಮಥನಿಗೆ ಸಮನಾಗುತ್ತಾನೆ. ಕಾಮದಿಂದಾಗಲಿ, ನಿಷ್ಕಾಮದಿಂದಾಗಲಿ, ಈ ಪಂಚಗಂಧಗಳನ್ನು ಕೊಟ್ಟರೆ ಅವನು ಕೈಲಾಸದಲ್ಲಿ ಐದು ವರ್ಷಗಳ

**ಸರ್ವಗಂಧಸಮೋಪೇತೋ ಭೋಗೀ ಚೇಷ್ಟಾರ್ಥಸಂಯುತಃ ।**
**ಯಥೇಷ್ಟವರ್ತನೋ ಭೂತ್ವಾ ತತೋ ಜಾಯೇತ ಭೂಮಿಪಃ ॥ ೯೮ ॥**

**ಕಸ್ತೂರೀ ಚಂದನಂ ಚಂದ್ರಮಗರುದ್ವಿತಯಂ ತಥಾ ।**
**ಪಂಚಗಂಧಕಮಾಖ್ಯಾತಂ ಸರ್ವಕಾರ್ಯೇಷು ಶೋಭನಂ ॥ ೯೯ ॥**

**ವಿಲಿಪ್ತಪಂಚಗಂಧೇಷು ಬ್ರಾಹ್ಮಣೇಷು ಮಹಾತ್ಮಸು ।**
**ಆಸೀನೇಷು ತದಾ ಪ್ರಾಯಾದ್ಬ್ರಾಹ್ಮಣಃ ಸ್ಥವಿರಃ ಕೃಶಃ ॥ ೧೦೦ ॥**

**ಉನ್ಮತ್ತವೇಷೋ ದಿಗ್ವಾಸಾ ಜರಾಜರ್ಜರಿತಸ್ತ್ವರೀ ।**
**ಖಲ್ವಾಟಃ ಶ್ವಾಸಕಾಸೀ ಚ ಬಹುಹಿಕ್ಕೀ ಕ್ಷುಧಾನ್ವಿತಃ ॥ ೧೦೧ ॥**

**ಲಾಲಾಪ್ಲುತಃ ಶ್ಮಶ್ರುಕೂರ್ಚಶ್ಲೇಷ್ಮಾ ನಮ್ರಃ ಸ್ಖಲತ್ಪದಃ ।**
**ದ್ವ್ಯಷ್ಟವರ್ಷಾ ತದಾ ನಾರೀ ಸರ್ವಾಭರಣಭೂಷಿತಾ ॥ ೧೦೨ ॥**

---

ವರೆಗೆ ಸರ್ವಗಂಧಗಳೊಡನೆ ಭೋಗಪಡುತ್ತಾ ಇಷ್ಟಾರ್ಥವನ್ನು ಹೊಂದಿ ಮನಸ್ಸಿಗೆ ಬಂದಂತೆ ನಡೆಯುತ್ತಾ, ಅನಂತರ ರಾಜನಾಗಿ ಹುಟ್ಟುತ್ತಾನೆ.

೯೯. ಕಸ್ತೂರಿ, ಚಂದನ, ಪಚ್ಚಕರ್ಪೂರ, ಶ್ವೇತಾಗರು, ಕೃಷ್ಣಾಗರು ಈ ಐದೂ ಕೂಡಿದುದಕ್ಕೆ ಪಂಚಗಂಧವೆಂದು ಹೆಸರು. ಇದು ಸರ್ವಕಾರ್ಯಗಳಲ್ಲಿಯೂ ಮಂಗಳವು.

೧೦೦—೧೦೩. ಮಹಾತ್ಮರಾದ ಈ ಬ್ರಾಹ್ಮಣರಿಗೆ ಗಂಧವನ್ನು ಬಳಿದು ಅವರು ಕುಳಿತಿರುವಾಗ ಒಬ್ಬ ಬ್ರಾಹ್ಮಣನು ಬಂದನು. ಅವನು ಮುದುಕನಾಗಿಯೂ, ಬಡಕಲಾಗಿಯೂ ಇದ್ದನು. ಹುಚ್ಚರಂತೆ ವೇಷಹಾಕಿಕೊಂಡಿದ್ದನು. ಬಟ್ಟೆಬರೆಯಿರಲಿಲ್ಲ. ಮುಪ್ಪಿನಿಂದ ಶಕ್ತಿಗುಂದಿದವನಾಗಿ ಅವಸರಪಡುತ್ತಿದ್ದನು. ತಲೆಯಲ್ಲಿ ಕೂದಲಿರಲಿಲ್ಲ. ಉಬ್ಬುಸರೋಗವೂ ಕೆಮ್ಮೂ ಇದ್ದುವು. ಬಹುವಾಗಿ ಬಿಕ್ಕಳಿಸುತ್ತಿದ್ದನು. ಹಸಿವಿನಿಂದ ಕೂಡಿದ್ದನು. ಜೊಲ್ಲು ಹರಿಯುತ್ತಿದ್ದಿತು. ಗಡ್ಡ ಮೀಸೆಗಳಲ್ಲಿ ಶ್ಲೇಷ್ಮವು ಅಂಟಿಕೊಂಡಿದ್ದಿತು. ಬಗ್ಗಿದ್ದನು. ತಡವರಿಸಿ ತಡವರಿಸಿ ಹೆಜ್ಜೆಯಿಡುತ್ತಿದ್ದನು. ಜೊತೆಯಲ್ಲಿ ಒಬ್ಬಳು ಹೆಂಗಸಿದ್ದಳು. ಅವಳಿಗೆ ಹದಿನಾರು ವರ್ಷ.

ರೂಪಲಾವಣ್ಯಸಂಯುಕ್ತಾ ಲೋಕೋತ್ಕೃಷ್ಟಸ್ವರೂಪಿಣೀ ।
ಪುರುಷಾನ್ರೂಪಸಂಯುಕ್ತಾನ್ವೀಕ್ಷಂತೀ ಚ ತತಸ್ತತಃ ॥ ೧೦೩ ॥

ಗಾಯಂತೀ ತ್ವಥ ನೃತ್ಯಂತೀ ತಂ ದೃಷ್ಟ್ವಾ ಹಸತೀ ಪತಿಂ ।
ಪ್ರಬಾಧತೇ ವೃದ್ಧಧವ ಶೀಘ್ರಮೇಹಿ ಕ್ಷುಧಾ ಮಮ ॥ ೧೦೪ ॥

ಆಲಂಬ್ಯ ತ್ವತ್ಕರಂ ವೃದ್ಧ ದುಃಖಿತಾ ನಿತ್ಯಮಸ್ಮ್ಯಹಂ ।
ಭೂಷಣಂ ವಸನಂ ಘ್ರಾಣಂ ಸ್ರಗ್ವಿಲೇಪನಮೇವ ಚ ॥ ೧೦೫ ॥

ಹಾಸೋ ಗೀತಿಸ್ತಥಾ ಪಾನಂ ಮಂಡನಂ ಶೋಭನಂ ಗೃಹಂ ।
ಸರ್ವಮೃತುಸಮೃದ್ಧಿಶ್ಚ ಕಾಮಸ್ಯೈವಾಭಿವೃದ್ಧಯೇ ॥ ೧೦೬ ॥

ಸರ್ವೇಷಾಮೇವ ಕಾಮಾನಾಂ ರತಿರೇಕಾ ಪ್ರಯೋಜನಂ ।
ಸುಖಾನಿ ಸರ್ವಾಣ್ಯೇಕತ್ರ ರತಿರೇಕತ್ರ ಚ ಸ್ಥಿತಾ ॥ ೧೦೭ ॥

---

ಸರ್ವಾಭರಣವನ್ನೂ ಹಾಕಿಕೊಂಡಿದ್ದಳು. ರೂಪುಲಾವಣ್ಯಗಳಿಂದ ಕೂಡಿದ್ದಳು. ಲೋಕದಲ್ಲಿ ಉತ್ಕೃಷ್ಟವಾದ ಆಕಾರವನ್ನು ಹೊಂದಿದ್ದಳು. ಅಲ್ಲಲ್ಲೇ ಸುಂದರರಾದ ಪುರುಷರನ್ನು ನೋಡುತ್ತ ಬರುತ್ತಿದ್ದಳು.

೧೦೪. ಹಾಡುತ್ತಾ ಕುಣಿಯುತ್ತಾ, ಆ ವೃದ್ಧಪತಿಯನ್ನು ನೋಡಿ ಹಾಸ್ಯ ಮಾಡುತ್ತಾ, ಎಲೈ ಮುದಿಗಂಡನೇ, ನನಗೆ ಹಸಿವು ಬಹಳವಾಗಿ ತೊಂದರೆಕೊಡುತ್ತಿದೆ. ಬೇಗಬಾ ಎಂದೆನ್ನುತ್ತಿದ್ದಳು.

೧೦೫-೧೦೬. ಎಲೈ ಮುದುಕನೇ, ನಿನ್ನ ಕೈಹಿಡಿದು ನಾನು ನಿತ್ಯವೂ ದುಃಖ ಗೊಂಡವಳಾಗಿದ್ದೇನೆ. ಒಡವೆ, ಬಟ್ಟೆ, ಸುಗಂಧ, ಹೂ, ಲೇಪನಪದಾರ್ಥ, ನಗು, ಹಾಡು, ಕುಣಿತ, ಅಲಂಕಾರ, ಒಳ್ಳೆಯಮನೆ, ಋತುಗಳ ಹೆಚ್ಚುವಿಕೆ, ಇವೆಲ್ಲವೂ, ಕಾಮವನ್ನು ಹೆಚ್ಚಿಸುತ್ತವೆ.

೧೦೭. ಎಲ್ಲಾ ಆಸೆಗಳಿಗೂ ರತಿ ಒಂದೇ ಉಪಯೋಗವಾದುದು. ಮುಖ್ಯ ವಾದುದು. ಎಲ್ಲಾ ಸುಖಗಳೂ ಒಂದು. ರತಿಯೇ ಒಂದು ಎಂದರೆ ರತಿ ಸುಖವೇ ಪ್ರಪಂಚದಲ್ಲಿ ದೊಡ್ಡದು.

ತುಲಯಾ ತುಲಿತಂ ಸರ್ವಂ ರತಿಶ್ಶತಗುಣಾಧಿಕಾ ।
ತನ್ಮಾದೃಶೀ ಸಮಾಸಾದ್ಯ ಭವಂತಂ ಕಿಂ ಕರಿಷ್ಯತಿ ॥ ೧೦೮ ॥

ಇತಿ ಚಾನ್ಯಾನಿ ವಾಕ್ಯಾನಿ ಬ್ರುವಾಣಾಗೃಹ್ಯ ವೈ ಕರೇ ।
ತದುತ್ತರಮುವಾಚೇದಂ ಕಿಂ ಕುರ್ಮೋ ಭಾಗ್ಯಮೀದೃಶಂ ॥ ೧೦೯ ॥

ನ ಮಾರಯ ದುರುಕ್ತ್ಯಾ ತ್ವಂ ಮಾಂ ವಿಜ್ಞಾಯಾಥ ಚೇದೃಶಂ ।
ಏತಾದೃಶೋ ದ್ವಿಜಃ ಪ್ರಾಯಾತ್ಪಾರ್ವತೀಮಂದಿರಂ ತದಾ ।
ಅವಿಜ್ಞಾಯೈವ ಗಿರಿಜಾಮಿದಂ ವಚನಮಬ್ರವೀತ್ ॥ ೧೧೦ ॥

॥ ದ್ವಿಜ ಉವಾಚ ॥

ಅನ್ನಾರ್ಥಿನಮಿಹ ಪ್ರಾಪ್ತಂ ವಿದ್ಧಿಮಾಮತಿಥಿಂ ಮುನೇ ।
ಭೋಜನಾವಸರೇ ಪ್ರಾಪ್ತಂ ಬ್ರಾಹ್ಮಣಾನ್ನಂ ಹಿ ಭೋಜಯ ॥ ೧೧೧ ॥

---

೧೦೮. ಎಲ್ಲಾ ಸುಖಗಳನ್ನೂ ಒಂದುಕಡೆ ಹಾಕಿ ರತಿಯನ್ನು ಮತ್ತೊಂದು ಕಡೆ ಇಟ್ಟು ತೂಕಮಾಡಿದಾಗ ರತಿಯು ಮಿಕ್ಕವುಗಳಿಗಿಂತ ನೂರರಷ್ಟು ಹೆಚ್ಚಾಗಿದ್ದಿತು. ಅಂತಹದನ್ನು ಹೊಂದಿರುವ ನನ್ನಂತಹವಳು ನಿನ್ನಂತಹವನನ್ನು ಹೊಂದಿ ಏನುಮಾಡಿಯಾಳು? ಇವೇ ಮುಂತಾದ ಮಾತುಗಳನ್ನು ಕೈಹಿಡಿದುಕೊಂಡು ಆಗ ಹೇಳಿ ಚುಚ್ಚುತ್ತಿದ್ದಳು.

೧೦೯. ಅದಕ್ಕೆ ಆ ಮುದುಕನು ಏನುಮಾಡುವುದು? ನಮ್ಮ ಭಾಗ್ಯವೇ ಈರೀತಿಯದು. ನಾನು ಈರೀತಿಯವನೆಂದು ತಿಳಿದು ಕೆಟ್ಟಮಾತುಗಳಿಂದ ಕೊಲ್ಲಬೇಡ.

೧೧೦. ಈರೀತಿಯಾದ ಬ್ರಾಹ್ಮಣನು ಪಾರ್ವತಿಯ ಮನೆಗೆ ಹೋದನು. ಪಾರ್ವತಿಯೆಂಬುದನ್ನು ತಿಳಿಯದೆ ಈ ಮಾತನ್ನು ಹೇಳಿದನು.

೧೧೧. ಬ್ರಾಹ್ಮಣನು ಹೇಳಿದನು :—ಅನ್ನವನ್ನು ಯಾಚಿಸುತ್ತ ಬಂದಿದ್ದೇನೆ. ಎಲೈ ಮುನಿಯೇ, ನಾನು ಅತಿಥಿಯು. ಊಟದ ಸಮಯದಲ್ಲಿ ಬಂದಿರುವ ನನಗೆ ಬ್ರಾಹ್ಮಣಾನ್ನವನ್ನು ಹಾಕಿ ಊಟಮಾಡಿಸು.

ತದ್ಭಾರ್ಯಾ ವಚನಂ ಪ್ರಾಹ ಕ್ವ ಮುನಿರ್ಯೋಽಷಿದತ್ರ ಹಿ ।
ಅಂಧಸ್ಯ ವಚನಂ ಸರ್ವಮೇವಮೇತಾಪೃಶಂ ದೃಢಂ ॥ ೧೧೨ ॥

॥ ಪಾರ್ವತ್ಯುವಾಚ ॥

ಪ್ರಕ್ಷಾಳ್ಯ ಚರಣಾವೇತಮಾಸನೇ ಉಪವೇಶಯ ।
ಜಾಂಬೂನದಕೃತೇಽತೀವ ಭೋಜನಾತ್ತರ್ಪಯ ದ್ವಿಜಂ ॥ ೧೧೩ ॥

ಸುರತ್ನಚಷಕೋಪೇತಮಮೃತಂ ಬ್ರಹ್ಮವಾದಿನೀಂ ।
ಅರುಂಧತೀಮಥಾಹೂಯ ಪರ್ಯವೇಷಯದಂಬಿಕಾ ॥ ೧೧೪ ॥

ಕಲಾ ಚಾರುಂಧತೀ ಚೈವ ತ್ವನಸೂಯಾ ಪತಿವ್ರತಾ ।
ಪರಿವೇಷಂ ಪದಾರ್ಥಾನಾಂ ಸ್ರಗ್ಗಂಧಾಕ್ಷತಭೂಷಣಾಃ ॥ ೧೧೫ ॥

ಅಕುರ್ವನ್ನಂಬಿಕಾವಾಕ್ಯಾತ್ ಷಡ್ರಸಾನಾಂ ಪೃಥಕ್ಪೃಥಕ್ ।
ಭುಂಜಾನೇಷು ಚ ವಿಪ್ರೇಷು ದಿಗ್ವಾಸಾ ಬ್ರಾಹ್ಮಣಾಕೃತಿಃ ॥ ೧೧೬ ॥

---

೧೧೨. ಅದಕ್ಕೆ ಅವನ ಹೆಂಡತಿಯು ಇಲ್ಲಿ ಮುನಿಯಿಲ್ಲ. ಇರತಕ್ಕವಳು ಹೆಂಗಸು. ಕುರುಡರ ಮಾತೆಲ್ಲವೂ ಈ ರೀತಿಯಾದುದೇ ಸರಿ ಎಂದಳು.

೧೧೩. ಪಾರ್ವತಿಯು ಹೇಳಿದಳು :—ಆಗ ಪಾರ್ವತಿಯು ಎಲೈ ಶಾಲಂಕಾಯನನೇ ಈ ಬ್ರಾಹ್ಮಣನ ಕಾಲುಗಳನ್ನು ತೊಳೆದು ಚಿನ್ನದ ಮಣೆಯ ಮೇಲೆ ಕೂರಿಸಿ ಭೋಜನದಿಂದ ತೃಪ್ತಿಪಡಿಸು. ಎಂದಳು.

೧೧೪. ಒಳ್ಳೆಯ ರತ್ನದ ಪಾತ್ರೆಯಲ್ಲಿ ಬಿಸಿಯಾಗಿರುವ ಪದಾರ್ಥವನ್ನು ಕೊಡೆಂದು ಹೇಳಿ ಪಾರ್ವತಿಯು ಬ್ರಹ್ಮವಾದಿನಿಯಾದ ಅರುಂಧತಿಯನ್ನು ಕರೆದು ಬಡಿಸುವಂತೆ ಹೇಳಿದಳು.

೧೧೫. ಕಲೆ, ಅರುಂಧತಿ, ಅನಸೂಯೆ, ಈ ಪತಿವ್ರತೆಯರು ಹೂವು, ಗಂಧ, ಒಡವೆ ಮುಂತಾದ ಮಂಗಳದ್ರವ್ಯಗಳನ್ನು ತೊಟ್ಟುಕೊಂಡು, ಪದಾರ್ಥಗಳನ್ನು ಬಡಿಸಿದರು. ಅಂಬಿಕೆಯ ಮಾತಿನಂತೆ ಷಡ್ರಸಗಳನ್ನೂ ಬೇರೆಬೇರೆಯಾಗಿ ಬಡಿಸುತ್ತಿದ್ದರು.

೧೧೬-೧೧೭. ಎಲ್ಲರೂ ಊಟಮಾಡುತ್ತಿರಲಾಗಿ ಈ ಬೆತ್ತಲೆಯಾಗಿರುವ ಮುದುಕನು ಒಂದುಕ್ಷಣಕ್ಕೆ ಊಟಮಾಡಿಬಿಡುತ್ತಿದ್ದನು. ಹೀಗೆ ಮಾಡುತ್ತಿದ್ದುದ

**ಕ್ಷಣೇನ ಬುಭುಜೇ ಸರ್ವಂ ದಾತುಂ ನೋ ಶೇಕುರಂಗನಾಃ ।**
**ಅಥ ಸಾ ಗಿರಿಜಾ ದೇವೀ ಸ್ವಯಂ ದಾತುಂ ಪ್ರಚಕ್ರಮೇ ॥ ೧೧೭ ॥**

**ಯಥಾ ದತ್ತಮಶೇಷಂ ಚ ಕ್ಷಣೇನಾಶ್ನಾತಿ ಸ ದ್ವಿಜಃ ।**
**ಭಾಂಡಸ್ಥಿತಮಶೇಷಂ ಚ ಭೋಕ್ತುಮೈಚ್ಛತ್ಪ್ರಿಯಾಸಹ ॥ ೧೧೮ ॥**

**ತಥಾಂಬಿಕಾ ಸಮಾದಾಯ ಪ್ರಾದಾದಕ್ಷಯ್ಯಮಸ್ತ್ವಿತಿ ।**
**ಅಥ ವಾಮಕರೇಣಾಸೌ ಭೋಕ್ತುಮೈಚ್ಛತ್ತತಸ್ಸತೀ ॥ ೧೧೯ ॥**

**ತತ್ರಾಪ್ಯಕ್ಷಯ್ಯಮೇವಾಸ್ತು ತವಾನ್ನಮಿತಿ ಚಾರ್ಪಯತ್ ।**
**ಕರಾಂತರಮಥೋತ್ಪಾದ್ಯ ಭೋಕ್ತುಮೈಚ್ಛದ್ದ್ವಿಜೋತ್ತಮಃ ॥ ೧೨೦ ॥**

**ಏವಂ ಕರಸಹಸ್ರಂ ಚ ಕೃತ್ವೈಚ್ಛದ್ಭೋಜನಂ ದ್ವಿಜಃ ।**
**ದತ್ವಾ ದತ್ವಾ ಪುನರ್ದೇವೀ ಸಂತುಷ್ಟಾ ನ ಚ ಕೋಪನಾ ॥ ೧೨೧ ॥**

---

ರಿಂದ ಆ ಹೆಂಗಸರು ಬಡಿಸಿ ಬಡಿಸಿ ಸಾಕಾಗಿ ಹೋಗಿ, ಕೊನೆಗೆ ಅಶಕ್ತರಾದರು. ಆಮೇಲೆ ಪಾರ್ವತಿಯೂ, ತಾನಾಗಿಯೇ ಬಡಿಸಲು ಹೊರಟಳು.

೧೧೮. ಆ ಬ್ರಾಹ್ಮಣನು ಈಕೆಯು ಬಡಿಸುತ್ತಿದ್ದುದೆಲ್ಲವನ್ನೂ ಒಂದು ಗಳಿಗೆಯಲ್ಲಿ ತಿಂದುಬಿಡುತ್ತಿದ್ದನು. ತಾನೂ ತನ್ನ ಹೆಂಡತಿಯೂ ಪಾತ್ರೆಯಲ್ಲಿರುವುದೆಲ್ಲವನ್ನೂ ತಿಂದುಬಿಡಬೇಕೆಂದು ಮಾಡಿದರು.

೧೧೯-೧೨೦. ಅನಂತರ ಪಾರ್ವತಿಯು ಅಕ್ಷಯವಾಗಲೆಂದು ಅನ್ನವನ್ನು ಬಡಿಸಿದಳು. ಅನ್ನವು ಅಕ್ಷಯವಾದುದನ್ನು ನೋಡಿ ಆತನು ಎಡಗೈಯಿಂದಲೂ ಊಟಮಾಡಲು ಮೊದಲು ಮಾಡಿದನು. ಆದರೂ ಅಕ್ಷಯವಾಗಲೆಂದು ಮತ್ತೆ ಅನ್ನವನ್ನು ಪಾರ್ವತಿಯು ಬಡಿಸಿದಳು. ಈ ವೃದ್ಧನು ಮತ್ತೊಂದು ಕೈಯನ್ನು ಸೃಷ್ಟಿಸಿಕೊಂಡು ಊಟವನ್ನು ಮಾಡಲು ಪ್ರಾರಂಭಿಸಿದನು.

೧೨೧. ಆಗ ಆ ವೃದ್ಧನು ಸಾವಿರ ಕೈಗಳನ್ನು ಸೃಷ್ಟಿಸಿಕೊಂಡು ಊಟ ಮಾಡುತ್ತಿದ್ದನು. ಈ ಪಾರ್ವತಿಯು ಬಡಿಸಿ ಬಡಿಸಿ ಸಂತೋಷಪಡುತ್ತಿದ್ದಳೇ ಹೊರತು ಕೋಪಗೊಳ್ಳಲಿಲ್ಲ.

ನ ಚಿತ್ತಮನ್ಯಥಾಕರ್ತುಂ ಶಕ್ಯಮಸ್ಯಾ ಇತಿ ದ್ವಿಜಃ ।
ಪ್ರಕ್ಷಾಳ್ಯ ಹಸ್ತೌ ಚರಣೌ ಹಸ್ತಾರ್ಪಿತಸುಗಂಧವಾನ್ ।
ಪಾರ್ವತೀಂ ವಾಕ್ಯಮಾಹೇದಂ ತೋಷಿತೋಽಹಂ ವರಂ ವೃಣು ॥ ೧೨೨ ॥

॥ ಪಾರ್ವತ್ಯುವಾಚ ॥

ಮಮ ದಾತುಂ ವರಂ ಶಕ್ತೋ ಯದಿ ತ್ವಂ ಬ್ರಾಹ್ಮಣೋತ್ತಮ ।
ವರೇಣ ಮಮ ಕಿಂ ಕಾರ್ಯಂ ಶಂಕರೋ ಮೇ ಯತಃ ಪತಿಃ ॥ ೧೨೩ ॥

ತದಾಹ ಬ್ರಾಹ್ಮಣೋ ದೇವೀಂ ಶಂಕರಃ ಕೀದೃಶಸ್ತ್ವಿತಿ ।
ಸದೃಶೋಽಸೌ ತ್ವಯಾ ನೋ ವಾ ತ್ವದ್ಯೋಗ್ಯೋ ನಾನ್ಯಥಾ ಭವೇತ್ ॥ ೧೨೪ ॥

ಸ್ತ್ರೀವಲ್ಲಭತ್ವಂ ಮಯ್ಯೇವಂ ರೂಪದಾಕ್ಷ್ಯಂ ಶುಭಾಂಗತಾ ।
ನೋ ಚೇದೇತಾದೃಶೀ ಭಾರ್ಯಾ ಮದಧೀನಾ ಕಥಂ ಭವೇತ್ ॥ ೧೨೫ ॥

---

೧೨೨. ಆಗ ಆ ಬ್ರಾಹ್ಮಣನು ಈಕೆಯ ಮನಸ್ಸನ್ನು ಬದಲಾಯಿಸಲು ಸಾಧ್ಯವಿಲ್ಲವೆಂದು ತಿಳಿದು, ಕೈಕಾಲುಗಳನ್ನು ತೊಳೆದುಕೊಂಡು ಗಂಧಪುಷ್ಪತಾಂಬೂಲಗಳನ್ನು ತೆಗೆದುಕೊಂಡು ಪಾರ್ವತಿಯನ್ನು ಕುರಿತು ನನಗೆ ಸಂತೋಷವಾಯಿತು. ಬೇಕಾದ ವರವನ್ನು ಕೇಳಿಕೋ ಎಂದನು.

೧೨೩. ಪಾರ್ವತಿಯು ಹೇಳಿದಳು:—ಎಲೈ ದ್ವಿಜನೇ, ನೀನು ನನಗೆ ವರವನ್ನು ಕೊಡಲು ಶಕ್ತನಾಗಿರಬಹುದು. ನನಗೆ ವರವನ್ನು ತೆಗೆದುಕೊಂಡು ಪ್ರಯೋಜನವೇನು? ಸಾಕ್ಷಾಚ್ಛಂಕರನೇ ನನ್ನ ಗಂಡನಾಗಿರುವನಲ್ಲವೇ.

೧೨೪. ಆಗ ಬ್ರಾಹ್ಮಣನು ಶಂಕರನು ಹೇಗಿದ್ದಾನೆ? ನಿನಗೆ ಅನುರೂಪನಾಗಿರುವನೋ ಇಲ್ಲವೋ? ನಿನಗೆ ತಕ್ಕವನಾಗಿಯೇ ಇರಬೇಕು. ಬೇರೆ ಇರಲಾರದು.

೧೨೫. ಸ್ತ್ರೀಯರಿಗೆ ಪ್ರಿಯನಾಗಿರುವುದಾದರೆ ನನ್ನಂತಿರಬೇಕು. ರೂಪು, ಹೇಳಿದಂತೆ ನಡೆಯುವುದು, ಸೌಂದರ್ಯ, ಇವೆಲ್ಲದರಲ್ಲಿಯೂ ನಾನು ಇರುವಂತಿರಬೇಕು. ಹಾಗಿಲ್ಲದಿದ್ದರೆ ಇಂತಹ ನನ್ನ ಹೆಂಗಸು ನನ್ನ ಅಧೀನದಲ್ಲಿರುತ್ತಿದ್ದಳೇ?

॥ ಪಾರ್ವತ್ಯುವಾಚ ॥

ತ್ವದ್ಭಾರ್ಯಾವಚನಂ ಶ್ರುತ್ವಾ ತವ ವಾಕ್ಯಂ ತಥಾ ದ್ವಿಜ ।
ಅಪಲಾಪಸ್ತ್ವಯಂ ಬ್ರಹ್ಮನ್ ಶ್ರುತಂ ಕಿಂ ವಾ ತಥಾ ವಿಷಂ ॥ ೧೨೬ ॥

॥ ಬ್ರಾಹ್ಮಣ ಉವಾಚ ॥

ಧಮ್ಮಿಲ್ಲಂ ತೇ ಕರಿಷ್ಯಾಮಿ ಮಮಾಂಕಂ ತ್ವಂ ಸಮಾರುಹ ।
ಪ್ರಚಲೇದ್ಯದಿ ತೇ ಚಿತ್ತಂ ಪಾತಿವ್ರತ್ಯಂ ಕುತಸ್ತವ ॥ ೧೨೭ ॥

॥ ಪಾರ್ವತ್ಯುವಾಚ ॥

ಮಮ ವ್ರತಂ ದ್ವಿಜಶ್ರೇಷ್ಠ ಶಂಕರಾಂಕೈಕರೋಹಣಂ ।
ಅಥ ತಚ್ಚಿತ್ತಮಾಜ್ಞಾಯ ಭವಾನ್ಯಾಃ ಪರಮೇಶ್ವರಃ ॥ ೧೨೮ ॥

ದ್ವ್ಯಷ್ಟವರ್ಷವಯಾ ಭೂತ್ವಾ ಸುಸ್ನಿಗ್ಧಕಚಬಂಧನಃ ।
ಸುಸ್ನಿಗ್ಧಚಾರುನಯನೋ ಗೋಕ್ಷೀರಸಮವಿಗ್ರಹಃ ॥ ೧೨೯ ॥

---

೧೨೬. ಪಾರ್ವತಿಯು ಹೇಳಿದಳು :—ನಾನು ನಿನ್ನ ಹೆಂಡತಿಯ ಮಾತನ್ನೂ ನಿನ್ನ ಮಾತನ್ನೂ ಕೇಳಿದೆನು. ಈ ಮುಚ್ಚುಮರೆಯೂ, ಸುಳ್ಳುಹೇಳುವಿಕೆಯೂ ಬೇಡ. ಇಂತಹ ಕೆಟ್ಟ ಮಾತನ್ನು ನಾನು ಕೇಳಿರಲಿಲ್ಲ.

೧೨೭. ಬ್ರಾಹ್ಮಣನು ಹೇಳಿದನು :—ನಿನಗೆ ತಲೆಬಾಚಿ ತರುಬು ಕಟ್ಟುತ್ತೇನೆ. ನನ್ನ ತೊಡೆಯ ಮೇಲೆ ಕುಳಿತುಕೋ. ನಿನ್ನ ಮನಸ್ಸು ಚಲಿಸಿದರೆ ಆಗ ನಿನಗೆ ಪಾತಿವ್ರತ್ಯವೇ ಇಲ್ಲ. ನೋಡೋಣ.

೧೨೮-೧೨೯. ಪಾರ್ವತಿಯು ಹೇಳಿದಳು :—ಶಂಕರನ ತೊಡೆಯ ಮೇಲೆ ಒಂದರಲ್ಲಿ ಕುಳಿತುಕೊಳ್ಳುವುದೇ ನನ್ನ ವ್ರತವೆನ್ನಲು, ಆಗ ಪರಮೇಶ್ವರನು ಆಕೆಯ ಮನಸ್ಸನ್ನು ತಿಳಿದು ಹದಿನಾರು ವರ್ಷದ ಹುಡುಗನಾಗಿ ಜುಟ್ಟನ್ನು ಚೆನ್ನಾಗಿರುವಂತೆ ಗಂಟುಕಟ್ಟಿಕೊಂಡು ಮನೋಹರವಾದ ಕಣ್ಣುಳ್ಳವನಾಗಿ, ಬೆಳ್ಳಗಿರುವ ದೇಹವುಳ್ಳವನಾಗಿ, ಸರ್ಪಾಭರಣದಿಂದಲಂಕೃತನಾಗಿ ಕೋಟಿಜನ ಕಂದರ್ಪರಂತೆ ಸುಂದರನಾದನು.

ಕೋಟಿಕಂದರ್ಪಲಾವಣ್ಯಃ ಸರ್ವಾಭರಣಭೂಷಿತಃ ।
ಸ್ವಪಾರ್ಶ್ವಸ್ಥಿತನಾರ್ಯಂಸೇ ಪ್ರಸಾರಿತಭುಜದ್ವಯಂ ॥ ೧೩೦ ॥

ಗಾಯನ್ಮಂದಂ ತಯಾ ಸಾಕಮುಮಯಾ ಪಟಿಯಾ ಯಥಾ ।
ಅಥ ತಾಂ ಪಾರ್ವತೀಂ ಶಂಭುಃ ಕರೇಣಾಕೃಷ್ಯ ಚ ಸ್ಮಯನ್ ॥ ೧೩೧ ॥

ವಿನ್ಯಸ್ತ ಹಸ್ತೌ ವನಿತಾದ್ವಯಾಂಸೇ
ಗಾಯನ್ಸಮಸ್ತಾಭರಣಃ ಪ್ರಸನ್ನದೃಕ್ ।
ನನರ್ತ ಚಾನಂದಸಮೃದ್ಧಗಾತ್ರೋ
ಮುನೀಂದ್ರಗೀತಶ್ಚ ಸ ಕಾಲವೇಲಂ ॥ ೧೩೨ ॥

ಏತಾದೃಶಂ ಶಿವಂ ಧ್ಯಾತ್ವಾ ಜನ್ಮಕೋಟಿಶತೇಷ್ವಪಿ ।
ನ ದುಃಖಂ ಜಾಯತೇ ತಸ್ಯ ಸದಾ ಹರ್ಷಶ್ಚ ಜಾಯತೇ ॥ ೧೩೩ ॥

ಅಥ ಸ್ತುತೋ ಮುನಿವರ್ಯೈರ್ನಾರೀಂ ಕೃತ್ವಾ ಹರಿಂ ತತಃ ।
ಅಥ ಸಾ ಪಾರ್ವತೀ ಹೃಷ್ಟಾ ದೇವಂ ಪ್ರಾಹ ಪಿನಾಕಿನಂ ॥ ೧೩೪ ॥

---

೧೩೦-೧೩೧. ಆಗ ತನ್ನ ಹತ್ತಿರವಿರುವ ಹೆಂಗಸಿನ ಭುಜಗಳ ಮೇಲೆ ತನ್ನ ತೋಳುಗಳನ್ನು ಹಾಕಿಕೊಂಡು ಮೆಲ್ಲಗೆ ಹಾಡುತ್ತಾ ಫರದೆಯನ್ನು ತೆಗೆದುಕೊಂಡು ಬಂದವನಂತೆ ಬಂದು ಆ ಪಾರ್ವತಿಯನ್ನು ನಗುತ್ತ ಕೈಯ್ಯಿಂದೆಳೆದನು.

೧೩೨. ಆ ಪಾರ್ವತಿಯ ಹೆಗಲ ಮೇಲೆ ತನ್ನ ಕೈಗಳನ್ನು ಹಾಕಿಕೊಂಡು ಹಾಡುತ್ತ, ಆಭರಣಗಳನ್ನು ಹೊಂದಿ ಪ್ರಸನ್ನವಾದ ಕಣ್ಣುಳ್ಳವನಾಗಿ, ಆನಂದದಿಂದ ಉಬ್ಬಿದ ಶರೀರವುಳ್ಳವನಾಗಿ ಕಾಲಕ್ಕೂ, ವೇಳೆಗೂ, ತಕ್ಕರೀತಿಯಲ್ಲಿ ಮುನೀಂದ್ರರಿಂದ ಹೊಗಳಲ್ಪಟ್ಟವನಾಗಿ ಕುಣಿಯುತ್ತಿದ್ದನು.

೧೩೩. ಈರೀತಿಯಾದ ಶಿವನನ್ನು ಧ್ಯಾನಿಸಿದರೆ ನೂರುಕೋಟಿ ಜನ್ಮಗಳ ವರೆಗೂ, ದುಃಖವನ್ನು ಹೊಂದುವುದಿಲ್ಲ. ಅವನಿಗೆ ಯಾವಾಗಲೂ, ಹರ್ಷವೇ ಉಂಟಾಗುತ್ತದೆ.

೧೩೪. ಹರಿಯನ್ನು ಹೆಂಗಸನ್ನಾಗಿ ಮಾಡಿಕೊಂಡು ಬಂದಿರುವ ಈ ಶಿವನನ್ನು ಮುನಿಗಳು ಹೊಗಳಿದರು. ಅನಂತರ ಪಾರ್ವತಿಯು ಸಂತೋಷಗೊಂಡು ಶಿವನನ್ನು ಕುರಿತು ಇಂತೆಂದಳು.

॥ ಪಾರ್ವತ್ಯುವಾಚ ॥

ಕಿಮಿತ್ಯೇತಾದೃಶಂ ಭಾವಮಾಸ್ಥಾಯ ತ್ವಮಿಹಾಗತಃ ।
ನಾರೀಂ ಕೃತ್ವಾ ತಥಾ ವಿಷ್ಣುಂ ಕಿಂ ಪ್ರಕೃತ್ಯಾ ನ ಚಾಗತೌ ॥ ೧೩೫ ॥

ಶಿವಃ ಪ್ರಾಹ ವ್ರತೇ ಚಾತ್ರ ಹ್ಯತಿಥೇರ್ಭೋಜನಂ ಶುಭಂ ।
ಜಾನೇ ಸಿದ್ಧಿಮಥೋ ಯೇಷಾಂ ವಿಷಾದೋ ನಾಭಿಜಾಯತೇ ॥ ೧೩೬ ॥

ಜಾತೇ ವಿಷಾದೇ ತು ವ್ರತಮುಸನ್ಯಾಗಿತಿ ನಿಶ್ಚಯಃ ।
ಸೋಮವಾರಾಸ್ಸಮಾಯಾಂತಿ ಯಾವನ್ತೋಽಬ್ದಶತಾನಿ ತು ॥ ೧೩೭ ॥

ತಾವಂತಿ ಮತ್ಪುರೇ ದೇವಿ ಸರ್ವಭೋಗಸಮನ್ವಿತಃ ।
ಸಭಾರ್ಯಾಪುತ್ರಬಂಧುಶ್ಚ ವೇದೋಕ್ತಾಯುಷ್ಯಜೀವನಃ ॥ ೧೩೮ ॥

ಪಶ್ಚಾದ್ವಾರಾಣಸೀಂ ಗತ್ವಾ ಮೃತೋ ಮುಕ್ತಿಮವಾಪ್ಸ್ಯತಿ ॥ ೧೩೯ ॥

---

೧೩೫. ಪಾರ್ವತಿಯು ಹೇಳಿದಳು :—ಈರೀತಿಯಾದ ಆಕಾರವನ್ನು ಹೊಂದಿ ನೀನೇಕೆ ಇಲ್ಲಿಗೆ ಬಂದೆ? ವಿಷ್ಣುವನ್ನು ಹೆಂಗಸನ್ನಾಗಿ ಮಾಡಿಕೊಂಡು ಬಂದಿರುವೆ ಯಲ್ಲಾ. ನೀವಿಬ್ಬರೂ ಸರಿಯಾದ ರೀತಿಯಿಂದಲೇ ಏಕೆ ಬರಲಿಲ್ಲ?

೧೩೬. ಈ ವ್ರತದಲ್ಲಿ ಅತಿಥಿಭೋಜನವು ಶ್ರೇಷ್ಠವು. ಈ ವ್ರತವು ಯಾರಿಗೆ ಸಿದ್ಧಿಯಾಗಿರುವುದೋ ಅವರಿಗೆ ಸತ್ಕಾರದಲ್ಲಿ ದುಃಖವೇ ಉಂಟಾಗುವುದಿಲ್ಲವೆಂದು ಶಿವನು ಹೇಳಿದನು.

೧೩೭—೧೩೯. ಅತಿಥಿಸತ್ಕಾರದಲ್ಲಿ ವಿಷಾದವುಂಟಾದರೆ ವ್ರತವು ಕೆಟ್ಟು ಹೋಯಿತೆಂದು ತಿಳಿ. ಸೋಮವಾರಗಳು ಆ ವರ್ಷದಲ್ಲಿ ಎಷ್ಟು ಬರುತ್ತವೋ ಅಷ್ಟು ನೂರು ವರ್ಷಗಳು ನನ್ನ ಪುರದಲ್ಲಿ ಸರ್ವಭೋಗಗಳಿಂದ ಕೂಡಿ ಇದ್ದುಕೊಂಡು ಇರುತ್ತಾನೆ. ಇಹಲೋಕದಲ್ಲಿಯೂ ಕೂಡ ಹೆಂಡತಿಮಕ್ಕಳು ಬಂಧುಗಳೊಡನೆ ವೇದೋಕ್ತವಾದ ಆಯುಸ್ಸನ್ನು ಹೊಂದಿ ಸುಖವಾಗಿದ್ದುಕೊಂಡಿದ್ದು, ಕೊನೆಗೆ ಕಾಶಿ ಯನ್ನು ಹೊಂದಿ ಅಲ್ಲಿ ಮೃತನಾಗಿ ಮುಕ್ತಿಯನ್ನು ಹೊಂದುತ್ತಾನೆ.

॥ ಶಂಭುರುವಾಚ ॥

ಅಥ ದೇವೇ ಸ್ಥಿತೇ ತತ್ರ ಮುನಯಸ್ತ್ರಿಃ ಪ್ರದಕ್ಷಿಣಂ ।
ಕೃತ್ವಾ ಪಂಚ ನಮಸ್ಕಾರಾನ್ ಪುನಃ ಕೃತ್ವಾ ಪ್ರದಕ್ಷಿಣಂ ॥ ೧೪೦ ॥

ಪುನಶ್ಚ ದಂಡವದ್ಭೂಮೌ ವಿಸೃಷ್ಟಾ ನಿರ್ಯಯುಸ್ತತಃ ।
ಅಥ ಶೋಣಸ್ಸ್ವಾಭಿಮತಾಂ ಭಾರ್ಯಾಮಾಪ ಹ್ಯನಿಂದಿತಾಂ ॥ ೧೪೧ ॥

ರಾಜ್ಯಂ ಚ ಭಾರತೇ ವರ್ಷೇ ಧರ್ಮೇಣಾಪಾಲಯದ್ದ್ವಿಜಃ ।
ಮಾನುಷಾನಖಿಲಾನ್ ಭೋಗಾನವಾಪ ಶಿವಭಕ್ತಿಮಾನ್ ॥ ೧೪೨ ॥

ನಿತ್ಯಂ ದೇವಾರ್ಚನಪರೋ ನಿತ್ಯಂ ಬ್ರಾಹ್ಮಣಪೂಜಕಃ ।
ನಿತ್ಯದಾತಾ ನಿತ್ಯಯಾಜೀ ನಿತ್ಯಶ್ರೋತಾ ಪುರಾಣಕಂ ।
ಮೃತಸ್ಸ ಗತವಾಂಲ್ಲೋಕಂ ಶಂಕರಸ್ಯ ವಿಭೋಶ್ಶುಭಂ ॥ ೧೪೩ ॥

---

೧೪೦. ಶಂಭುವು ಹೇಳಿದನು:—ಅಲ್ಲಿ ನಿಂತಿರುವ ಸ್ವಾಮಿಯನ್ನು ಮುನಿಗಳು ಮೂರುಬಾರಿ ಪ್ರದಕ್ಷಿಣೆಮಾಡಿ ಐದುಬಾರಿ, ನಮಸ್ಕರಿಸಿ ಮತ್ತೆ ಪ್ರದಕ್ಷಿಣೆಮಾಡಿ, ಮತ್ತೆ ದಂಡಪ್ರಣಾಮುಮಾಡಿ ಆ ಶಿವನ ಅಪ್ಪಣೆಯಂತೆ ಹೊರಟುಹೋದರು.

೧೪೧. ಅನಂತರ ಶೋಣನು ತನಗೆ ಬೇಕಾದ ಹೆಂಡತಿಯನ್ನು ಹೊಂದಿದನು. ಭಾರತವರ್ಷದಲ್ಲಿ ರಾಜ್ಯವನ್ನು ಹೊಂದಿ ಧರ್ಮದಿಂದಾಳಿದನು.

೧೪೨. ಶಿವನಲ್ಲಿ ಭಕ್ತಿಯಿಟ್ಟು ಮನುಷ್ಯನು ಹೊಂದುವ ಎಲ್ಲಾ ಭೋಗಗಳನ್ನೂ ಹೊಂದಿದನು.

೧೪೩. ನಿತ್ಯವೂ ದೇವತಾರ್ಚನೆಯನ್ನು ಮಾಡುತ್ತ, ನಿತ್ಯವೂ ಬ್ರಾಹ್ಮಣರನ್ನು ಪೂಜಿಸುತ್ತ, ನಿತ್ಯವೂ ದಾನ ಯಾಗಗಳನ್ನು ಮಾಡುತ್ತ, ನಿತ್ಯವೂ ಪುರಾಣವನ್ನು ಕೇಳುತ್ತಾ ಇದ್ದು ಸತ್ತನಂತರ ವಿಭುವಾದ ಶಂಕರನ ಲೋಕವನ್ನು ಹೊಂದಿದನು.

॥ ಶಂಭುರುವಾಚ ॥

ನಾಮಕೀರ್ತನಮಾಹಾತ್ಮ್ಯಂ ಪ್ರಸಂಗಾತ್ಪರಿಕೀರ್ತಿತಂ ।
ಶೃಣ್ವತಾಂ ಸರ್ವಪಾಪಘ್ನಂ ಭಕ್ತಾನಾಂ ಚ ತಥಾ ನೃಪ ॥ ೧೪೪ ॥

ಸರ್ವಕಲ್ಯಾಣದಂ ನಿತ್ಯಂ ಸುಭಾರ್ಯಾರಾಜ್ಯದಂ ಶಿವಂ ।
ಶಿವಭಕ್ತಿಪ್ರದಂ ಗೋಪ್ಯಂ ಯಸ್ಯ ಕಸ್ಯಾಪಿ ನೇರಯೇತ್ ॥ ೧೪೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ
ನಾಮಮಾಹಾತ್ಮ್ಯಕಥನಂ ನಾಮ ಅಷ್ಟಾಧಿಕಶತತಮೋಽಧ್ಯಾಯಃ



---

೧೪೪. ಶಂಭುವು ಹೇಳಿದನು :—ಪ್ರಸಂಗದಿಂದ ನಾಮವನ್ನು ಹೇಳುವುದರ ಮಹಿಮೆಯನ್ನು ಹೇಳಿದೆನು. ಇದು ಕೇಳುವವರ ಮತ್ತು ಭಕ್ತರ ಸರ್ವಪಾಪವನ್ನೂ ಹೋಗಲಾಡಿಸುತ್ತದೆ.

೧೪೫. ಸರ್ವಕಲ್ಯಾಣಗಳನ್ನೂ ಕೊಡುತ್ತದೆ. ಒಳ್ಳೆಯ ಹೆಂಡತಿ, ರಾಜ್ಯವನ್ನು ಕೊಡುತ್ತದೆ. ಶಿವನಲ್ಲಿ ಭಕ್ತಿಯನ್ನು ಕೊಡುತ್ತದೆ. ಯಾರಿಗೂ ಹೇಳಕೂಡದು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ನಾಮಮಾಹಾತ್ಮ್ಯವೆಂಬ ನೂರ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ನವಾಧಿಕಶತತಮೋಽಧ್ಯಾಯಃ

॥ ಶ್ರೀರಾಮ ಉವಾಚ ॥

ಖೇ ದೃಶ್ಯಂತೇ ವಿಮಾನಸ್ಥಾ ನಾನಾರೂಪಧರಾಶ್ಶುಭಾಃ ।
ಸರ್ವಕಾಮಫಲೋಪೇತಾಃ ಸುಭಾರ್ಯಾಶ್ಶತಯೋಷಿತಃ ॥ ೧ ॥

ಸಹಸ್ರನರನಾರೀಭಿಃ ಪೂಜ್ಯಮಾನಾಃ ಪದೇ ಪದೇ ।
ಗಾಯಂತಿ ವಿಂಶತಿರ್ಯೋಷಾ ರೂಪಲಾವಣ್ಯಕೋಮಲಾಃ ॥ ೨ ॥

ಕರಂಕವಾಹಿನೀ ಚೈಕಾ ಚಾಮರಾಸಕ್ತಬಾಹವಃ ।
ತಾಳವೃಂತದ್ವಯಂ ನಾರ್ಯೋ ವೀಜಯಂತಿ ಪ್ರಗೃಹ್ಯ ವೈ ॥ ೩ ॥

---

## ನೂರ ಒಂಭತ್ತನೆಯ ಅಧ್ಯಾಯವು

೧. ಶ್ರೀರಾಮನು ಹೇಳಿದನು:—ನಾನಾ ರೂಪಗಳನ್ನು ಹೊಂದಿರುವ, ಚೆನ್ನಾಗಿರುವ, ಎಲ್ಲಾ ಇಷ್ಟಾರ್ಥಗಳಿಂದಲೂ ಕೂಡಿದ ಸುಂದರಿಯರಾದ ನೂರುಜನ ಹೆಂಗಸರು ವಿಮಾನದಲ್ಲಿ ಅಂತರಿಕ್ಷದಲ್ಲಿ ಕಾಣುತ್ತಿದ್ದಾರೆ.

೨. ಅನೇಕಜನ ಗಂಡಸರು, ಹೆಂಗಸರು, ಬಾರಿಬಾರಿಗೂ ಪೂಜಿಸುತ್ತಿರುತ್ತಾರೆ. ಸುಂದರಿಯರಾದ ಇಪ್ಪತ್ತು ಜನರು ಹಾಡುತ್ತಿರುತ್ತಾರೆ.

೩. ಒಬ್ಬಳು ಅಡಕೆಲೆಯ ಪೆಟ್ಟಿಗೆಯನ್ನು ಹೊಂದಿದ್ದಾಳೆ. ಮತ್ತೆ ಇಬ್ಬರು ಚಾಮರವನ್ನು ಬೀಸುತ್ತಿರುತ್ತಾರೆ. ಮತ್ತಿಬ್ಬರು ಬೀಸಣಿಗೆಗಳನ್ನು ಹಿಡಿದು ಬೀಸುತ್ತಿದ್ದಾರೆ.

ಸ ಚಕ್ರೇ ಚಾಂಕಮಧ್ಯೇಽಸ್ಯಾ ಉಪಧಾನಂ ತಥಾಽಪರಃ ।
ಏಕಸ್ಯಾಃ ಕರಯೋರ್ಹಸ್ತಂ ಸ್ತಾವಕಾನೇಕಸಂಯುತಃ ॥ ೪ ॥

ನಾನಾವಿಧಪರೀಹಾಸಕೃತೋತ್ಫುಲ್ಲಮುಖಾಂಬುಜಃ ।
ಏಕೈಕತ್ರ ವಿಮಾನೇ ತು ದೃಶ್ಯತೇ ಚಂದ್ರದೀಧಿತಿಃ ॥ ೫ ॥

ಸ್ತ್ರೀಶತೇಷು ವಿಮಾನೇಷು ದೃಶ್ಯತೇ ಈಶ್ವರಃ ಶುಭಃ ।
ಏತೇ ಕಿಂ ಪುಣ್ಯಕರ್ತಾರೋ ವಿಷ್ಣುಮಾಯಾಥವಾ ಮುನೇ ॥ ೬ ॥

॥ ಶಂಭುರುವಾಚ ॥

ಏತೇ ಹಿ ಬ್ರಾಹ್ಮಣಾಃ ಪುಣ್ಯಾ ಗೃಹಸ್ಥಾಶ್ರಮವಾಸಿನಃ ।
ಏಷಾಮೇವ ಚ ಸ ಗ್ರಾಮೋ ದತ್ತೋ ದಶರಥೇನ ತೇ ॥ ೭ ॥

ತೇಷಾಂ ತು ಮಮಚಿತ್ತಾನಾಂ ಕದಾಚಿದಭವನ್ಮತಿಃ ।
ಯಥೇಹಸುಖಿನಸ್ಸರ್ವೇ ವಯಂ ಚಾನ್ಯೋಪಜೀವಿನಃ ॥ ೮ ॥

---

೪. ಈ ಹೆಂಗಸರ ಮಧ್ಯದಲ್ಲಿ ಒಬ್ಬನು ಒಬ್ಬಳ ತೊಡೆಯನ್ನು ತಲೆದಿಂಬನ್ನಾಗಿ ಮಾಡಿಕೊಂಡು ಮಲಗಿದ್ದಾನೆ. ಮತ್ತೊಬ್ಬಳು ಅವನನ್ನು ಬಗೆಬಗೆಯಾಗಿ ಹೊಗಳುತ್ತಾ ತನ್ನ ಕೈಗಳಲ್ಲಿ ಅವನ ಕೈಯನ್ನು ಇಟ್ಟುಕೊಂಡಿದ್ದಾಳೆ.

೫. ಬಗೆಬಗೆಯಾದ ಹಾಸ್ಯಗಳಿಂದ ನಗುತ್ತಿದ್ದಾನೆ. ಒಂದೊಂದು ವಿಮಾನವಲ್ಲಿಯೂ ಚಂದ್ರನ ಚಂದ್ರಿಕೆ ಕಾಣುತ್ತಿರುವುದು.

೬. ಹೆಂಗಸರಿರುವ ಈ ಸಾವಿರಾರು ವಿಮಾನಗಳಲ್ಲಿಯೂ ಈಶ್ವರನು ಕಾಣುತ್ತಿದ್ದಾನೆ. ಇವರೇನು ಪುಣ್ಯಮಾಡಿದವರೇ ? ಅಲ್ಲದಿದ್ದರೆ ವಿಷ್ಣುವಿನ ಮಾಯೆಯೇ ?

೭. ಶಂಭುವು ಹೇಳಿದನು :—ಇವರೆಲ್ಲರೂ ಬ್ರಾಹ್ಮಣರು, ಪುಣ್ಯವಂತರು, ಗೃಹಸ್ಥರು. ಇವರಿಗೇನೇ ದಶರಥನು ಆ ಗ್ರಾಮವನ್ನು ಕೊಟ್ಟುದು.

೮. ಅವರು ಯಾವಾಗಲೂ ನನ್ನನ್ನೇ ಭಜಿಸುತ್ತಿದ್ದರು. ಹೀಗಿರಲು ಒಂದು ಸಾರಿ ಅವರಿಗೆ ಈರೀತಿ ಮನಸ್ಸಿನಲ್ಲಿ ಉಂಟಾಯಿತು ನಾವು ಇಲ್ಲಿ ಸುಖವಾಗಿದ್ದೇವೆ. ಈ ನಾವು ಇತರರಿಂದ ಜೀವಿಸುತ್ತಿದ್ದೇವೆ. ಈ ತೀರಿಯಾದ ನಮ್ಮನ್ನು ಅನುಸರಿಸಿಕ್ಕೊಂಡು ಅನೇಕ ಜನರು ಜೀವನಮಾಡುತ್ತಿದ್ದಾರೆ.

ಅಸ್ಮಾನೇವಾನು ಜೀವಂತಿ ಶತಶೋ ಮನುಜಾ ಇಹ ।
ಯೇನ ಪುಣ್ಯೇನ ಚ ವಯಂ ಸರ್ವೇ ಕಾಮಾನುಮೋದಿನಃ ॥ ೯ ॥

ಸುಸ್ತ್ರೀಕೃತೋಪಚಾರಾಶ್ಚ ಸರ್ವೇ ರಾಜ್ಯಸುಖಾನ್ವಿತಾಃ ।
ಜರಾಮರಣಹೀನಾಶ್ಚ ಯುವಾನಃ ಸರ್ವದೈವ ಹಿ ॥ ೧೦ ॥

ವಿಚಾರ್ಯೈವಂ ದ್ವಿಜಾಸ್ಸರ್ವೇ ವಸಿಷ್ಠಸ್ಯಾಶ್ರಮಂ ಯಯುಃ ।
ಆಗತಾನಥ ಸಂಪೂಜ್ಯ ವಸಿಷ್ಠೋ ವಾಕ್ಯಮಬ್ರವೀತ್ ।
ಕಿಮರ್ಥಮಾಗತಾ ಯೂಯಂ ಶೀಘ್ರಂ ಬ್ರೂತ ದ್ವಿಜೋತ್ತಮಾಃ ॥ ೧೧ ॥

॥ ದ್ವಿಜಾ ಊಚುಃ ॥

ವಯಮಿಚ್ಛಾಮಹೇ ಸರ್ವೇ ಸರ್ವಸಂಪತ್ಸಮನ್ವಿತೇ ।
ವಿಮಾನೇ ಕಾಮಗೇ ರೋಢುಂ ತತ್ಸಂಪಾದಯ ನೋ ಗುರೋ ॥ ೧೨ ॥

---

೯-೧೦. ಯಾವ ಪುಣ್ಯವನ್ನು ನಾವು ಮಾಡಿದುದರಿಂದ ಈ ರೀತಿಯಾದ ಸುಖಗಳನ್ನು ಯಾರು ನಮಗೆ ಕೊಟ್ಟರೋ, ಇಷ್ಟಾರ್ಥವನ್ನೂ ಪೂರೈಸಿದರೋ ಆ ಪುಣ್ಯದಿಂದ ಅವರು ಒಳ್ಳೆಯ ಸುಂದರಿಯರೂ, ಗುಣವಂತೆಯರೂ ಆದ ಹೆಂಡಿರನ್ನು ಹೊಂದಿ, ರಾಜ್ಯದ ಸುಖವನ್ನೂ ಹೊಂದಿ, ಮುಪ್ಪು ಮರಣ ಇವುಗಳಿಲ್ಲದೆ ಯುವಕರಾಗಿ ಯಾವಾಗಲೂ ಇದ್ದಾರೆ.

೧೧. ಹೀಗೆಂದು ಯೋಚಿಸಿ ಅವರು ವಸಿಷ್ಠನ ಆಶ್ರಮಕ್ಕೆ ಹೋದರು. ವಸಿಷ್ಠನು ಅವರನ್ನು ಗೌರವಿಸಿ ನಿವೇತಕ್ಕೆ ಬಂದಿರಿ? ಅದನ್ನು ಜಾಗ್ರತೆ ಹೇಳಿರಿ ಎಂದನು.

೧೨. ಬ್ರಾಹ್ಮಣರು ಹೇಳಿದರು :—ಎಲೈ ಗುರುವೇ, ಸರ್ವಸಂಪತ್ತಿನಿಂದ ಕೂಡಿದ, ಇಚ್ಛೆಬಂದಂತೆ ಹೋಗುವ ವಿಮಾನದಲ್ಲಿ ಹತ್ತಲು ಅಪೇಕ್ಷಿಸುತ್ತೇವೆ. ನಮಗೆ ಹಾಗೆ ಮಾಡಿಕೊಡು ಎಂದರು.

ತತ್ತೇಷಾಂ ಚಿಂತಿತಂ ಶ್ರುತ್ವಾ ವಸಿಷ್ಠೋ ವಾಕ್ಯಮಬ್ರವೀತ್ ।
ಪುರಾಣಂ ಸರ್ವದಾ ವಿಪ್ರಾಃ ಶ್ರೋತವ್ಯಂ ಪಾಪನಾಶನಂ ॥ ೧೩ ॥

ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಸ್ತತ್ರೈವ ದೃಶ್ಯತೇ ।
ತಥೇತ್ಯುಕ್ತ್ವಾಥ ಮುನಯಃ ಪುರಾಣಕುಶಲಂ ಮುನಿಂ ॥ ೧೪ ॥

ಜಗ್ಮುರಂಗಿರಸಂ ಶ್ರೇಷ್ಠಂ ಸರ್ವಶಾಸ್ತ್ರವಿಶಾರದಂ ।
ಸರ್ವಾಗಮಪುರಾಣಜ್ಞಂ ಸದಾ ಸತ್ಕರ್ಮಚಾರಿಣಂ ॥ ೧೫ ॥

ಇದಮೂಚುರ್ನಮಸ್ಕೃತ್ಯ ವಯಂ ಸಫಲಜೀವಿನಃ ।
ಕೃತಕೃತ್ಯಾ ವಯಂ ಬ್ರಹ್ಮನ್ ಸಾಕ್ಷಾದ್ದೃಷ್ಟೋಽಸಿ ಯನ್ಮುನೇ ॥ ೧೬ ॥

ಅಂಗಿರಾ ಉವಾಚ ॥

ಯತ್ಕಾರ್ಯಮಾಗತಾ ಯೂಯಂ ತತ್ಕಾರ್ಯಂ ಕರವಾಣ್ಯಹಂ ।
ಪುರಾಣಂ ಶ್ರೋತುಕಾಮಾಸ್ತು ಯೂಯಮತ್ರ ಸಮಾಗತಾಃ ॥ ೧೭ ॥

---

೧೩. ಅವರ ಯೋಚನೆಯನ್ನು ಕೇಳಿ ಎಲೈ ಬ್ರಾಹ್ಮಣರೇ, ಯಾವಾಗಲೂ ಪುರಾಣವನ್ನು ಕೇಳಿರಿ. ಅದು ಪಾಪನಾಶಕವಾದುದು ಎಂದನು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಲ್ಲವೂ ಅದರಲ್ಲಿಯೇ ಇರುತ್ತವೆ.

೧೪—೧೬. ಆ ಋಷಿಗಳು ಹಾಗೇ ಆಗಲೆಂದು ಹೇಳಿ ಸರ್ವಶಾಸ್ತ್ರಗಳಲ್ಲಿ ನಿಪುಣನಾದ, ಎಲ್ಲಾ ವೇದಪುರಾಣಗಳನ್ನೂ ಬಲ್ಲ, ಯಾವಾಗಲೂ ಒಳ್ಳೆಯ ಕೆಲಸದಲ್ಲಿ ನಿಪುಣನಾದ (ಆಸಕ್ತನಾದ) ಅಂಗಿಂರಸನ ಬಳಿಗೆ ಹೋದರು. ಅವನಿಗೆ ನಮಸ್ಕರಿಸಿ ನಿನ್ನನ್ನು ನೋಡಿದುದರಿಂದ ನಮ್ಮ ಜೀವನವು ಸಫಲವಾಯಿತು. ಕೃತಕೃತ್ಯರಾದೆವು.

೧೭. ಅಂಗೀರಸನು ಹೇಳಿದನು:—ನೀವು ಯಾವ ಕೆಲಸಕ್ಕೋಸ್ಕರ ಬಂದಿದ್ದೀರೋ ಆ ಕೆಲಸವನ್ನು ಮಾಡಿಕೊಡುತ್ತೇನೆ. ನೀವೆಲ್ಲರೂ ಇಲ್ಲಿಗೆ ಪುರಾಣವನ್ನು ಕೇಳಲು ಬಂದಿದ್ದೀರಿ.

ಕೀರ್ತಯಿಷ್ಯೇ ವಿಧಾನಂ ವಃ ಸಮಸ್ತಾಘವಿನಾಶನಂ ।
ಸರ್ವಜ್ಞಾನಪ್ರದಂ ದೇವಂ ತತ್ತ್ವವಿಜ್ಞಾನಸಂಭವಂ ॥ ೧೮ ॥

ಶಿವಭಕ್ತಿಪ್ರದಂ ಹೃದ್ಯಂ ವಿಷ್ಣುಭಕ್ತಿಪ್ರದಂ ಶುಭಂ ।
ವಿಚಿತ್ರಸ್ಯ ಗತಿಪ್ರಾಪ್ತಿಜ್ಞಾನದಂ ರಮಣೀಪ್ರದಂ ॥ ೧೯ ॥

ನಾನಾವಿಧಶುಭಜ್ಞಾನರತಿತಂತ್ರಪ್ರಕಾಶಕಂ ।
ಭುಕ್ತಿಮುಕ್ತಿಪ್ರಧಾನಂ ಚ ವಿಧಿದರ್ಶನದೀಪಕಂ ॥ ೨೦ ॥

ವಿಚಿತ್ರಭಕ್ತಿಕಥನಂ ಭಕ್ತಿಸಾಹಸ್ರಕೀರ್ತನಂ ।
ವ್ರತಪ್ರತಿಷ್ಠಾದಾನಾದಿಭಸ್ಮಪೂಜಾವಿಧಿಪ್ರದಂ ॥ ೨೧ ॥

ಪುರಾಣಂ ಪಾದ್ಮಮುದಿತಂ ಬ್ರಹ್ಮಪದ್ಮೋಪನಿರ್ವೃತಂ ।
ಮಹೇಶ್ವರೇಣ ಕಥಿತಂ ಪ್ರಮಥಾಕೃತಿವರ್ಣನಂ ॥ ೨೨ ॥

---

೧೮-೧೯. ಅದರ ವಿಧಾನವನ್ನು ಹೇಳುತ್ತೇನೆ. ಅದು ಸಮಸ್ತ ಪಾಪಹರವಾದುದು. ಎಲ್ಲಾ ಜ್ಞಾನವನ್ನೂ ಕೊಡುತ್ತದೆ. ದೇವಸ್ವರೂಪವಾದುದು. ತತ್ವ ವಿಜ್ಞಾನವು ಹುಟ್ಟುತ್ತದೆ. ಶಿವಭಕ್ತಿಯನ್ನೂ ಕೊಡುತ್ತದೆ. ಹೃದ್ಯವಾದುದು. ವಿಷ್ಣುಭಕ್ತಿಯನ್ನೂ ಕೊಡುತ್ತದೆ. ಉತ್ತಮವಾದ ಗತಿಯು ಸಿಕ್ಕುತ್ತದೆ. ಜ್ಞಾನವನ್ನೂ ಸ್ತ್ರೀಯನ್ನೂ ಕೊಡುತ್ತದೆ.

೨೦-೨೧. ಬಗೆಬಗೆಯಾದ ಶುಭಜ್ಞಾನ ಮತ್ತು ರತಿತಂತ್ರಗಳನ್ನು ಪ್ರಕಾಶಿಸುತ್ತದೆ. ತಿನ್ನುವುದಕ್ಕೆ ಅನ್ನವನ್ನೂ ಪರದಲ್ಲಿ ಮುಕ್ತಿಯನ್ನೂ ಕೊಡುತ್ತದೆ. ವಿಧಿಗಳ ತೋರಿಸುವುದರಲ್ಲಿ ದೀಪದಂತಿದೆ. ನಾನಾ ಭಕ್ತಿಯನ್ನು ಕೊಡುತ್ತದೆ. ಸಹಸ್ರಾರು ವಿಧದಲ್ಲಿ ಭಕ್ತಿಯನ್ನು ತಿಳಿಸುತ್ತದೆ. ವ್ರತ, ಪ್ರತಿಷ್ಠೆ, ದಾನ, ಭಸ್ಮವಿಧಿ, ಪೂಜಾವಿಧಿಗಳನ್ನು ಹೇಳುತ್ತದೆ.

೨೨. ಪದ್ಮಪುರಾಣವೆಂಬುದು, ಬ್ರಹ್ಮನು ಪದ್ಮದಿಂದ ಈಚೆಗೆ ಬಂದುದೆಂದು, ಸಾಕ್ಷಾನ್ಮಹೇಶ್ವರನೇ ಹೇಳಿದ್ದಾನೆ. ಇದು ಪ್ರಮಥಗಣದ ವರ್ಣನೆಯು.

ಏತದನ್ಯತ್ರ ಕಥಿತಂ ಪುರಾಣೇ ಪಾದ್ಮ ಏವ ತು ।
ದಿಲೀಪೇನ ಪುರಾ ಪೃಷ್ಟೋ ವಸಿಷ್ಠಃ ಪ್ರೋಕ್ತವಾನಿದಂ ॥ ೨೩ ॥

ತಚ್ಛೃಣುಧ್ವಂ ಮುನಿವರಾ ಜ್ಞಾನಂ ಸರ್ವಂ ಭವಿಷ್ಯತಿ ।
ಅಥ ತದ್ವಚನಾದ್ವಿಪ್ರಾಃ ಪುರಾಣಶ್ರವಣೇ ರತಾಃ ॥ ೨೪ ॥

ಕಥಂ ಶ್ರೋತವ್ಯಮಧುನಾ ಕಿಂ ಕೃತ್ವೇತ್ಯಬ್ರವೀನ್ಮುನಿಂ ।
ಸೋಽಪಿ ಸರ್ವಂ ಸಮಾಚಷ್ಟೇ ಶೃಣು ಧರ್ಮಂ ಸನಾತನಂ ॥ ೨೫ ॥

ನಮಸ್ಕೃತ್ಯ ಪುರಾಣಜ್ಞಂ ದದ್ಯಾಚ್ಚಾರ್ಘ್ಯಾಸನಂ ತತಃ ।
ನಿಷೀದ ತತ್ರ ಚೇತ್ಯುಕ್ತ್ವಾ ಗಂಧಪುಷ್ಪೈಸ್ಸಮರ್ಚಯೇತ್ ॥ ೨೬ ॥

ಆತ್ಮಯೋಗ್ಯಂ ಚ ತಾಂಬೂಲಮಧಿಕಂ ವಾ ಸಮರ್ಚಯೇತ್ ।
ಬ್ರೂಹಿ ಪುಣ್ಯಕಥಾಂ ಬ್ರಹ್ಮನ್ಪೌರಾಣಿಕೀಮಿತೀರಯೇತ್ ॥ ೨೭ ॥

---

೨೩. ಈ ಪದ್ಮಪುರಾಣದಲ್ಲಿಯೇ ಈ ಪ್ರಮಥಾಕೃತಿ ವರ್ಣನೆಯು ಬೇರೆಕಡೆ ಹೇಳಲ್ಪಟ್ಟಿದೆ. ಪೂರ್ವದಲ್ಲಿ ದಿಲೀಪನು ಕೇಳಲು, ವಸಿಷ್ಠನು ಹೇಳಿದನು

೨೪. ಅದನ್ನು ಕೇಳಿರಿ. ಎಲ್ಲಾ ಜ್ಞಾನವು ಉಂಟಾಗುತ್ತದೆ ಎನ್ನಲು, ಆ ಮಾತಿನಂತೆ ಬ್ರಾಹ್ಮಣರೆಲ್ಲರೂ ಪುರಾಣ ಕೇಳುವುದರಲ್ಲಿ ಆಸಕ್ತರಾದರು.

೨೫. ಈ ಪುರಾಣವನ್ನು ಈಗ ಹೇಗೆ ಕೇಳಬೇಕು? ಏನು ಮಾಡಬೇಕೆಂದರು. ಆ ಅಂಗೀರಸನು ಎಲ್ಲವನ್ನೂ ಹೇಳುತ್ತೇನೆ. ಅನೂಚಾನವಾದ ಧರ್ಮವನ್ನು ಕೇಳೆಂದನು.

೨೬. ಪುರಾಣವನ್ನು ಹೇಳುವವನಿಗೆ ಮೊದಲು ಅರ್ಘ್ಯವನ್ನೂ, ಆಸನವನ್ನೂ ಕೊಡಬೇಕು. ಅಲ್ಲಿ ಕುಳಿತುಕೋ ಎಂದು ಹೇಳಿ ಕುಳ್ಳಿರಿಸಿ ಗಂಧಪುಷ್ಪಗಳಿಂದ ಪೂಜಿಸಬೇಕು.

೨೭. ತನ್ನ ಯೋಗ್ಯತೆಗೆ ತಕ್ಕಂತೆ ತಾಂಬೂಲವನ್ನೂ ಕೊಡಬೇಕು. ಅಥವಾ ಅಧಿಕವಾಗಿಯೂ ಕೊಡಬಹುದು. ಕೊಟ್ಟು ಪೂಜಿಸಬೇಕು. ಪುಣ್ಯಕಥೆಯಾದ ಪುರಾಣವನ್ನು ಹೇಳು ಎಂದು ಕೇಳಬೇಕು.

ನ ಖಟ್ವಾಸನಮಾರುಹ್ಯ ನೋಚ್ಚಾಸನಮಥಾಪಿ ವಾ ।
ನೀಚಾಸನೋ ವೈ ಶೃಣುಯಾದ್ಧರ್ಮಕಾಮಾರ್ಥಸಿದ್ಧಯೇ ॥ ೨೮ ॥

ಶೃಣ್ವೀತ್ಯುಕ್ತ್ವಾ ಪುರಾಣಜ್ಞ ಇಮಂ ಮಂತ್ರಮುದೀರಯೇತ್ ।
ನಮೋ ಹರಿಂ ಹರಮಥೋ ಗಣೇಶಂ ಭಾರತೀಮಥ ॥ ೨೯ ॥

ಇಷ್ಟದೇವಂ ನಮಸ್ಕೃತ್ವಾ ಪುರಾಣಂ ವಕ್ತುಮರ್ಹತಿ ।
ಅರ್ಧಯಾಮಂ ಪ್ರತಿದಿನಂ ಯದಿ ವಾಪೀಚ್ಛಯಾ ಭವೇತ್ ॥ ೩೦ ॥

ಏವಂ ದಿನಸಮಾಪ್ತಿಂ ಚ ಕೃತ್ವಾ ಕೃತ್ಯಂ ಸಮಾಚರೇತ್ ।
ಶ್ರೋತುಶ್ಚ ತೂಷ್ಣೀಂ ಮನನಂ ತೂಷ್ಣೀಂ ಶ್ರವಣಮೇವ ವಾ ॥ ೩೧ ॥

ಅನ್ಯಥಾ ಭಾರತೀ ಕ್ರುದ್ಧಾ ಶ್ರೋತೄನ್ಮೂಕತಾ ಭವೇತ್ ।
ತಸ್ಮಾತ್ಪುರಾಣಶ್ರೋತಾ ಚ ತಾಂಬೂಲಾದಿಸಮರ್ಪಣಂ ॥ ೩೨ ॥

---

೨೮. ಕೇಳುವಾಗ ಮಂಚದ ಮೇಲೆ ಕುಳಿತುಕೊಳ್ಳಬಾರದು. ಅಥವಾ ಹೇಳುವವನು ಕುಳಿತಿರುವ ಆಸನಕ್ಕಿಂತ ಉನ್ನತಾಸನದಲ್ಲಿ ಕುಳಿತುಕೊಳ್ಳಬಾರದು. ಅವನ ಆಸನಕ್ಕಿಂತ ಚಿಕ್ಕದಾದ ಆಸನದಲ್ಲಿ ಕುಳಿತು ಕೇಳಬೇಕು. ಹಾಗಾದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳು ಸಿದ್ಧಿಸುತ್ತವೆ.

೨೯. ಕೇಳಿಂಬುದಾಗಿ ಹೇಳಿ ಪುರಾಣಜ್ಞನು ಹರಿಗೂ, ಹರನಿಗೂ, ಗಣೇಶನಿಗೂ, ಸರಸ್ವತಿಗೂ ನಮಸ್ಕಾರವೆಂದು ಮಂತ್ರವನ್ನು ಹೇಳಬೇಕು.

೩೦. ಇಷ್ಟದೇವರನ್ನು ನಮಸ್ಕರಿಸಿ ಪುರಾಣವನ್ನು ಹೇಳಬೇಕು. ಪ್ರತಿದಿನವೂ ಅರ್ಧಯಾಮಕಾಲ ಹೇಳಬೇಕು. ಅದಿಲ್ಲದಿದ್ದರೆ ಇಷ್ಟಬಂದಷ್ಟು ಹೊತ್ತು ಹೇಳಬಹುದು.

೩೧. ಈರೀತಿ ದಿನವು ಕಳೆದುದನ್ನು ಕೇಳಿ ಸಂಧ್ಯಾಕಾಲದ ಆಹ್ನಿಕವನ್ನು ಮಾಡಬೇಕು. ಇಲ್ಲವೇ ಕೇಳಬೇಕು.

೩೨. ಹಾಗಿಲ್ಲದಿದ್ದರೆ ಸರಸ್ವತಿಯು ಕೋಪಗೊಳ್ಳುತ್ತಾಳೆ. ಆ ಕೋಪದಿಂದ ಮೂಕರಾಗುತ್ತಾರೆ. ಆಮೇಲೆ ಪುರಾಣವನ್ನು ಕೇಳತಕ್ಕವರು ತಾಂಬೂಲವನ್ನು ಹೇಳುವವರಿಗೆ ಕೊಡಬೇಕು.

**ವಕ್ತುಶ್ಚ ಜೀವಿಕಾ ಕಾರ್ಯಾ ಸ್ವಸಾಮರ್ಥ್ಯಾನುಸಾರತಃ ।**
**ಪುರಾಣಪ್ರಕ್ರಮೇ ದೇಯಂ ಸಚೇಲೋದ್ಗಮನೀಯಕಂ ॥ ೩೩ ॥**

**ಸೂಕ್ಷ್ಮಾಂಬರಮಥೋ ವಾಪಿ ವಸ್ತ್ರದ್ವಿತಯಮರ್ಪಯೇತ್ ।**
**ಆಸನಂ ತು ಮಹಚ್ಚಿತ್ರಂ ರಮ್ಯಮೂರ್ಜಸ್ವಲಂ ಮೃದು ॥ ೩೪ ॥**

**ಸುವರ್ಣಂ ವಾ ತಥಾ ದದ್ಯಾದ್ಗೋಭೂಗೇಹಾದಿಕಂ ತಥಾ ।**
**ಏತತ್ಸಮಸ್ತಂ ವಿಪ್ರೇಂದ್ರಾ ದಕ್ಷಿಣಾಮೂರ್ತಿನಾ ಪುರಾ ॥ ೩೫ ॥**

**ಶಂಕರೇಣ ಮುನೀನಾಂ ಹಿ ಭಾಷಿತಂ ಚ ದಿವೌಕಸಾಂ ।**
**ಅಥ ತೇ ಮುನಯಸ್ಸರ್ವೇ ತಂ ಪ್ರಣಮ್ಯಾಸನಸ್ಥಿತಂ ॥ ೩೬ ॥**

**ಪೃಥಕ್ಪೃಥಕ್ಚ ತಾಂಬೂಲಂ ದತ್ವಾ ಶುಶ್ರೂಷವಃ ಸ್ಥಿತಾಃ ।**
**ತೇನಾಪಿ ಕಥಿತಂ ಸರ್ವಂ ಪುರಾಣಂ ಸರ್ವಸಂಪದಂ ॥ ೩೭ ॥**

---

೩೩. ಪುರಾಣಹೇಳುವವರಿಗೆ ತನ್ನ ಶಕ್ತ್ಯಾನುಸಾರ ವಸ್ತ್ರಾದಿಗಳನ್ನು ಕೊಟ್ಟು ಅವರ ಜೀವನೋಪಾಯಕ್ಕೆ ಅನುಕೂಲಪಡಿಸಬೇಕು.

೩೪. ಮಲ್ಲುಬಟ್ಟೆಗಳನ್ನು ಕೊಡಬೇಕು. ಇಲ್ಲದಿದ್ದರೆ ಜೊತೆ ವಸ್ತ್ರಗಳನ್ನು ಕೊಡಬೇಕು. ಚಿತ್ರವೂ, ಚೆನ್ನಾಗಿಯೂ, ಪ್ರಕಾಶವೂ, ಮೃದುವೂ ಆದ ಆಸನವನ್ನು ಕೊಡಬೇಕು.

೩೫. ಚಿನ್ನವಾಗಲಿ, ಗೋವು, ಭೂಮಿ, ಮನೆ ಮೊದಲಾದುವುಗಳನ್ನು ಕೊಡಬೇಕು. ಇದೆಲ್ಲವನ್ನೂ ಪೂರ್ವದಲ್ಲಿ ದಕ್ಷಿಣಾಮೂರ್ತಿಯಾದ ಶಂಕರನು ಮುನಿಗಳಿಗೂ, ದೇವತೆಗಳಿಗೂ ಹೇಳಿದನು.

೩೬. ಅನಂತರ ಋಷಿಗಳು ಆಸನದಲ್ಲಿರುವ ಅವನಿಗೆ ನಮಸ್ಕರಿಸಿ, ಒಬ್ಬೊಬ್ಬರೂ ತಾಂಬೂಲವನ್ನು ಕೊಟ್ಟು ಕೇಳಬೇಕೆಂಬಾಸೆಯಿಂದಿದ್ದರು.

೩೭. ಅವನೂ ಕೂಡ ಸರ್ವಸಂಪತ್ತುಗಳನ್ನು ಕೊಡುವ ಪುರಾಣವನ್ನು ಹೇಳಿದನು. ಕೊನೆಯ ಅಧ್ಯಾಯದ ಹಿಂದಿನ ಅಧ್ಯಾಯದವರೆಗೆ ಅವರೆಲ್ಲರೂ ಕೇಳಿದರು.

ಉಪಾಂತಾಧ್ಯಾಯಪರ್ಯಂತಂ ಶ್ರುತವಂತೋ ದ್ವಿಜೋತ್ತಮಾಃ ।

॥ ದಿಲೀಪ ಉವಾಚ ॥

ಕಾಮಗೇನ ವಿಮಾನೇನ ಸರ್ವಸಂಪತ್ಸಮೃದ್ಧಿನಾ ॥ ೩೮ ॥

ಸರ್ವತಸ್ಸುಖಯುಕ್ತೇನ ಪುಣ್ಯಸ್ಥಾನಮುಪಸ್ಥಿತಂ ॥ ೩೯ ॥

॥ ವಸಿಷ್ಠ ಉವಾಚ ॥

ನಾಲಂ ಪೃಷ್ಟಂ ತ್ವಯಾ ರಾಜನ್ನಿತೋಽಪ್ಯತಿಶಯಾನ್ತರೈಃ ।
ಕ್ರೀಡಮಾನಾ ಭವಿಷ್ಯಂತಿ ಯೇನ ತತ್ಪುಣ್ಯಮುಚ್ಯತೇ ॥ ೪೦ ॥

ಸುಧಾಧವಳಿತಂ ಕೃತ್ವಾ ಶಿವವೇಶ್ಮ ಸಮಂತತಃ ।
ಸ್ತ್ರೀಯೋ ರೂಪವಿಲಾಸಾಢ್ಯಾಃ ಸರ್ವಾಲಂಕಾರಭೂಷಿತಾಃ ॥ ೪೧ ॥

ನಾನಾಸುಗೀತಕುಶಲಾ ನಾನಾನೃತ್ಯವಿಶಾರದಾಃ ।
ಚತಸ್ರೋಽಷ್ಟೌ ಷಡಥವಾ ಮರ್ದಲಧ್ವನಿಕಾಃ ಸ್ತ್ರಿಯಃ ॥ ೪೨ ॥

---

೩೮-೩೯. ದಿಲೀಪನು ಹೇಳಿದನು :—ಇಷ್ಟಬಂದಂತೆ ನಡೆಯುವ, ಎಲ್ಲಾ ಸಂಪತ್ತುಗಳಿಂದ ಕೂಡಿರುವ ಎಲ್ಲಾ ವಿಷಯದಲ್ಲಿಯೂ, ಸುಖದಿಂದ ಕೂಡಿದ ವಿಮಾನದಿಂದ ಪುಣ್ಯಸ್ಥಾನವು ಸಿಕ್ಕಿತು.

೪೦. ವಸಿಷ್ಠನು ಹೇಳಿದನು :—ಎಲೈ ರಾಜನೇ, ನೀನು ಸರಿಯಾಗಿ ಕೇಳಲಿಲ್ಲ. ಇದಕ್ಕಿಂತ ಅತಿಶಯರಾಗಿ ಕ್ರೀಡಿಸುತ್ತಾ ಇರುತ್ತಾರೆ. ಆ ಪುಣ್ಯವು ಬರುವುದು ಹೇಗೆಂದು ಕೇಳು.

೪೧-೪೨. ಶಿವದೇವಸ್ಥಾನಕ್ಕೆ ಸುಣ್ಣವನ್ನು ತೊಡೆದು ಬೆಳ್ಳಗೆ ಮಾಡಿ ರೂಪವತಿಯರೂ, ಅಲಂಕಾರವುಳ್ಳವರೂ, ಬಗೆಬಗೆಯ ಸಂಗೀತ ಬಲ್ಲವರೂ, ಕುಣಿಯುವುದರಲ್ಲಿ ಕುಶಲರೂ ಆದ ನಾಲ್ಕು ಅಥವಾ ಆರು ಇಲ್ಲದಿದ್ದರೆ ಎಂಟುಜನ ಸ್ತ್ರೀಯರು ಸೇರಿಕೊಳ್ಳುತ್ತಾರೆ.

ವಾಸಿನ್ಯೌ ದ್ವೇ ಆವಜಿಕ್ಯೌ ಕೋಣಿಕಾಧಮನೇ ಉಭೇ ।
ಲಾಸಿಕ್ಯಸ್ತು ಚತಸ್ರಸ್ಸ್ಯುಃ ಸಂತುಷ್ಟೈಕಾಥ ಗಾಯಿಕಾ ॥ ೪೩ ॥

ಏಕಾ ದ್ವೇ ವಾ ಸುಗೀತಜ್ಞೇ ಮುಖರೇ ಹಿ ಪ್ರಕೀರ್ತನೇ ।
ಕೋಣವಾದ್ಯಕೃತೇ ದ್ವೇ ತು ತೂಷ್ಣೀಂ ಭೂತಾಃ ಷಡಷ್ಟ ವಾ ॥ ೪೪ ॥

ಸರ್ವಾ ರೂಪವಿಲಾಸಿನ್ಯಃ ಸರ್ವಾಶ್ಚಾಪತಿತಸ್ತನಾಃ ।
ರತಿತಂತ್ರಾಬ್ಧಿಕುಶಲಾಸ್ತತ ಏವ ವಿಶಂಕಿತಾಃ ॥ ೪೫ ॥

ಸುಸೂಕ್ಷ್ಮವಸ್ತ್ರವೇಷಾಶ್ಚ ವಿದ್ಯುಚ್ಚಂಚಲದೃಷ್ಟಯಃ ।
ಏತಾದೃಶೀಭಿರ್ಯೋಷಾಭಿರ್ಯೇನ ನೃತ್ಯಂ ಹಿ ಕಾರಿತಂ ॥ ೪೬ ॥

ಏಕಸ್ಮಿನ್ದಿವಸೇ ರಾಜನ್ವತ್ಸರಾತ್ಸ ವಿಮಾನತಃ ।
ಶತಸ್ತ್ರೀವೀಕ್ಷಿತಮುಖೋ ಯುವಾ ಬಹುಭಿರರ್ಚಿತಃ ॥ ೪೭ ॥

---

೪೩. ಇಬ್ಬರು ಹೆಂಗಸರು ತಾಳಹಾಕುವವರು. ಇಬ್ಬರು ವೀಣೆಯನ್ನು ಒಡಿದು ಬಾರಿಸುತ್ತಾರೆ. ನಾಲ್ಕುಜನ ಕುಣಿಯುವವರು. ಒಬ್ಬಳು ಹಾಡುವವಳು.

೪೪. ಒಬ್ಬಳೋ ಇಬ್ಬರೋ ಒಳ್ಳೆಯ ಗೀತವನ್ನು ತಿಳಿದು ಮಾತುಗಾರಳಾಗಿರುತ್ತಾಳೆ. ಕೋಣವಾದ್ಯವನ್ನು ಬಾರಿಸುವವರು ಇಬ್ಬರಿದ್ದರೆ ಆರು ಅಥವಾ ಎಂಟು ಜನರು ಸುಮ್ಮನಿರುವರು.

೪೫. ಅವರೆಲ್ಲರೂ ಸುಂದರಿಯರಾಗಿರಬೇಕು. ಸ್ತನವು ಬೀಳದಿರುವ (ಜೋಲು ಬೀಳದಿರುವ) ಯುವತಿಯರಾಗಿರಬೇಕು. ರತಿತಂತ್ರದಲ್ಲಿ ಕುಶಲರಾಗಿರಬೇಕು. ಆ ರತಿಯರಿಂದಲೇ ಲಜ್ಜೆಗೊಂಡವರಾಗಿರಬೇಕು.

೪೬. ಅವರೆಲ್ಲರೂ ಒಳ್ಳೆಯ ಸೂಕ್ಷ್ಮವಾದ ಬಟ್ಟೆಗಳನ್ನು ಉಟ್ಟುಕೊಂಡು ಮಿಂಚಿನಂತೆ ದೃಷ್ಟಿಯುಳ್ಳವರಾಗಿರಬೇಕು.

೪೭. ಈರೀತಿಯಾದ ಹೆಂಗಸರಿಂದ ಯಾವನು ನಾಟ್ಯವನ್ನು ಶಿವದೇವಾಲಯದಲ್ಲಿ ಒಂದು ದಿನ ಮಾಡಿಸುತ್ತಾನೋ ಅವನು ವರ್ಷದೊಳಗೆ ವಿಮಾನದಲ್ಲಿ ಕುಳಿತು ಹೋಗುತ್ತಾನೆ. ಆಗ ಅವನನ್ನು ನೂರುಜನ ಸ್ತ್ರೀಯರು ಮುಖ ನೋಡುತ್ತ ಸಂತೋಷಪಡಿಸುತ್ತಿರುತ್ತಾರೆ ಯುವಕನಾಗಿರುತ್ತಾನೆ. ಬಹಳ ಜನರು ಪೂಜಿಸುತ್ತಾರೆ. ಇದು ಕ್ರೋಧೇರ್ಷ್ಯಾದಿಗಳಿಂದ ಬಿಡಲ್ಪಟ್ಟ ಸಂಪೂರ್ಣಾನಂದವು.

ಆನಂದ ಏಷ ಸಂಪೂರ್ಣಃ ಕ್ರೋಧೇರ್ಷ್ಯಾದಿವಿವರ್ಜಿತಃ ।
ಪಂಚಗಂಧವಿಲಿಪ್ತಾಂಗಃ ಸಚಂದ್ರಾಹಿದಲಾನನಃ ॥ ೪೮ ॥

ಸೂರ್ಯೋ ಯಮಸ್ತು ಯೋಷಾಶ್ಚ ಸರ್ವಾಸ್ತಾದೃಶಭಾನ್ವಿತಾಃ ।
ಸದ್ಯೋವಿಕಸಿತಾಮೋದಿಪಾರಿಜಾತಕೃತಸ್ರಜಃ ॥ ೪೯ ॥

ಸರ್ವಾ ವಿಕಸಿತಾರೋಹಿರಕ್ತಸಂಧ್ಯಾಕೃತಸ್ರಜಃ ।
ಧಮ್ಮಿಲ್ಲೇ ವಕ್ಷಸಿ ತಥಾ ಬಿಭ್ರತ್ಯಃ ಸುಸ್ಮಿತಾಧರಾಃ ॥ ೫೦ ॥

ಚರತ್ಯೇತಾದೃಶೀಭಿಸ್ತು ನೃತ್ಯಗೀತಾನುಮೋದಿತಃ ।
ಏವಂ ವಿಮಾನಗೋ ಭೂತ್ವಾ ಉಷಿತ್ವಾ ಕಾಲಮಕ್ಷಯಂ ॥ ೫೧ ॥

ಪಶ್ಚಾಜ್ಜಾಯೇತ ನೃಪತಿರೇವಂ ಕೃತ್ವಾ ಪುನಸ್ತಥಾ ।
ರಾಜ್ಯಂ ಸ್ವರ್ಗಫಲಂ ಭುಕ್ತ್ವಾ ಶಿವಭಕ್ತೋ ಭವಿಷ್ಯತಿ ॥ ೫೨ ॥

---

೪೮. ಅವನು ಪಂಚಗಂಧವನ್ನು ಮೈಗೆ ಪೂಸಿಕೊಂಡಿರುತ್ತಾನೆ. ಪಚ್ಚ ಕರ್ಪೂರದೊಡನೆ ಕೂಡಿರುವ ಕಸ್ತೂರಿಯನ್ನೂ ಹಣೆಗೆ ಹಚ್ಚಿಕೊಂಡಿರುತ್ತಾನೆ.

೪೯. ಸೂರ್ಯನೂ, ಯಮನೂ ಅವನ ಜೊತೆಯಲ್ಲಿರುತ್ತಾರೆ. ಅವನಂತೆ ಅಲಂಕಾರಮಾಡಿಕೊಂಡಿರುವ ಹೆಂಗಸರು ಅವನನ್ನು ಅನುಸರಿಸುತ್ತಿರುತ್ತಾರೆ. ಅವರೆಲ್ಲರೂ ಆಗತಾನೆ ಅರಳಿದ ವಾಸನೆ ಬರುತ್ತಿರುವ ಪಾರಿಜಾತದ ಹೂಮಾಲೆಯನ್ನು ಧರಿಸಿರುತ್ತಾರೆ.

೫೦. ಎಲ್ಲರೂ ಪ್ರಾರಂಭವಾಗುತ್ತಿರುವ ಸಂಧ್ಯೆಯಂತೆ ಕೆಂಪಗಿರುವ ಹೂಮಾಲೆಯನ್ನು ತುರುಬಿನಲ್ಲಿಯೂ, ಕತ್ತಿನಲ್ಲಿಯೂ, ಹಾಕಿಕೊಂಡು ಮುಗುಳುನಗೆಯಿಂದ ಕೂಡಿರುತ್ತಾರೆ.

೫೧-೫೨. ಈ ರೀತಿಯಾದ ಹೆಂಗಸರಿಂದ ಅನುಸರಿಸಲ್ಪಟ್ಟವನಾಗಿ ಸಂಚರಿಸುತ್ತಾನೆ. ಈರೀತಿ ವಿಮಾನದಲ್ಲಿ ಓಡಾಡುತ್ತ ಅನೇಕ ಕಾಲವಿದ್ದು ಮತ್ತೆ ರಾಜನಾಗಿ ಹುಟ್ಟಿ, ಮತ್ತೆ ಹೀಗೆ ದೇವರನ್ನಾರಾಧಿಸಿ ಸ್ವರ್ಗಫಲವನ್ನು ಕೊಡುವ ರಾಜ್ಯವನ್ನನುಭವಿಸಿ ಶಿವಭಕ್ತನಾಗಿರುತ್ತಾನೆ.

॥ ಶಂಭುರುವಾಚ ॥

ದಿಲೀಪಾಯ ವಸಿಷ್ಠೋಕ್ತಂ ಮುನೀನಾಮಂಗಿರೋಽಬ್ರವೀತ್ ।
ತೇ ತಥಾ ಕೃತವಂತಶ್ಚ ತೌರ್ಯತ್ರಿಕಮುಮಾಪತೇಃ ॥ ೫೩ ॥

ಶ್ರುತ್ವಾ ಪುರಾಣಂ ಪದ್ಮಂ ಚ ಸಮಗ್ರಂ ಸುಖಿನೋಽ ಭವನ್ ।
ತ ಏತೇ ಬ್ರಾಹ್ಮಣಾ ರಾಮ ವಿಮಾನವರಮಾಸ್ಥಿತಾಃ ॥ ೫೪ ॥

ದೃಶ್ಯಂತೇ ಖೇ ಚ ಸುಖಿನಃ ಸದಾ ಮುದಿತಮಾನಸಾಃ ।
ಏತತ್ತೇ ಸರ್ವಮಾಖ್ಯಾತಂ ಪುರಾಣೇಷು ವಿನಿಶ್ಚಿತಂ ।
ಇತಃ ಪರಂ ಚ ಕಿಂ ಭೂಯಃ ಶ್ರೋತುಮಿಚ್ಛಸಿ ರಾಘವ ॥ ೫೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ
ನವಾಧಿಕಶತತಮೋಽಧ್ಯಾಯಃ



---

೫೩. ಶಂಭುವು ಹೇಳಿದನು :—ದಿಲೀಪನಿಗೆ ವಸಿಷ್ಠನು ಹೇಳಿದುದನ್ನು ಮುನಿಗಳಿಗೆ ಅಂಗಿರನು ಹೇಳಿದನು. ಆ ಮುನಿಗಳೂ ಹಾಗೆಯೇ ನೃತ್ಯಗೀತ ವಾದ್ಯಗಳನ್ನು ಶಿವನಿಗೆ ಸಲ್ಲಿಸಿದರು.

೫೪. ಸಮಗ್ರವಾಗಿ ಪದ್ಮಪುರಾಣವನ್ನು ಕೇಳಿ ಸುಖಿಗಳಾದರು. ಆ ಬ್ರಾಹ್ಮಣರೇ ಇವರು. ವಿಮಾನದಲ್ಲಿ ಕುಳಿತಿದ್ದಾರೆ. ಅವರೆಲ್ಲರೂ ಅಂತರಿಕ್ಷದಲ್ಲಿ ಸರ್ವಕಾಲದಲ್ಲಿಯೂ, ಸಂತೋಷಯುತವಾದ ಮನಸ್ಸುಳ್ಳವರಾಗಿ ಸುಖಿಗಳಾಗಿ ಕಾಣುತ್ತಿದ್ದಾರೆ.

೫೫. ಪುರಾಣದಲ್ಲಿ ನಿಶ್ಚಿತವಾಗಿರುವ ಈ ವಿಷಯಗಳನ್ನು ನಿನಗೆ ಹೇಳಿದ್ದೇನೆ. ಇದರ ಮೇಲೆ ಇನ್ನೂ ಹೆಚ್ಚಾಗಿ ಏನು ಕೇಳಬೇಕೆಂದಿದ್ದೀಯೆ ? ರಾಮನೇ ಕೇಳು.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ನೂರ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದಶಾಧಿಕಶತತಮೋಽಧ್ಯಾಯಃ

॥ ರಾಮ ಉವಾಚ ॥

ಕ ಏಷ ದೃಶ್ಯತೇ ವ್ಯೋಮ್ನಿ ಸರ್ವಾಭರಣಭೂಷಿತಃ ।
ವಿಮಾನಸ್ಥೋ ಮಹಾದೀಪ್ತಮಧ್ಯಾಹ್ನಾರ್ಕ ಇವಾಪರಃ ॥ ೧ ॥

ದುಷ್ಪ್ರೇಕ್ಷ್ಯಸ್ಸರ್ವಮರ್ತ್ಯಾನಾಂ ತಸ್ಯಾಂಕೇ ಚಾರುಹಾಸಿನೀ ।
ಅಪರಾ ಶ್ರೀರಿವ ಬ್ರಹ್ಮಂಸ್ತಥಾ ಪಂಚ ಸುಯೋಷಿತಃ ॥ ೨ ॥

ಗಾಯಂತಿ ಮಧುರಾಂ ಗೀತಿಂ ಸಭ್ರೂಭಂಗನಿರೀಕ್ಷಣೈಃ ।
ಮಂದಸ್ಮಿತೈಃ ಕರತಲಶಬ್ದಸ್ಫೋಟಿಕಯಾ ತಥಾ ॥ ೩ ॥

---

## ನೂರಹತ್ತನೆಯ ಅಧ್ಯಾಯವು

೧. ಶ್ರೀರಾಮನು ಹೇಳಿದನು :—ಆಕಾಶದಲ್ಲಿ ಸರ್ವಾಭರಣಭೂಷಿತನಾಗಿ ವಿಮಾನದಲ್ಲಿ ಕುಳಿತು ಮಧ್ಯಾಹ್ನದ ಸೂರ್ಯದಂತೆ ಕಾಂತಿಯುಳ್ಳ ಇವನಾರು ?

೨. ಅವನನ್ನು ಎಲ್ಲರೂ ನೋಡಲು ಆಗದಿರುವಷ್ಟು ಕಾಂತಿಯುಳ್ಳವನಾಗಿದ್ದಾನೆ. ಅವನ ತೊಡೆಯ ಮೇಲೆ ಲಕ್ಷ್ಮಿಯಂತಿರುವ ಒಬ್ಬಳು ಹೆಂಗಸು ಕೂತಿದ್ದಾಳೆ. ಜೊತೆಯಲ್ಲಿ ಐದುಜನ ಹೆಂಗಸರಿದ್ದಾರೆ.

೩. ಹುಬ್ಬನ್ನು ವಕ್ರಮಾಡಿಕ್ಕೊಂಡು, ಮಂದಹಾಸದಿಂದ ನೋಡುತ್ತ, ಕೈಯಲ್ಲಿ ಚಿಟಿಕಿಯನ್ನು ಹಾಕಿಕೊಂಡು ಮಧುರವಾಗಿ ಗಾನಮಾಡುತ್ತಿದ್ದಾರೆ.

ಕ್ವಚಿದ್ಗಲಕೃತೈರ್ಗೀತೈರನ್ಯೋನ್ಯಕರತಾಡನೈಃ ।
ಅನ್ಯೋನ್ಯಮುಖಮಾಲೋಕ್ಯ ಪ್ರಲೋಭೈರ್ಗೀತಪೂರ್ವಕೈಃ ॥ ೪ ॥

ಕ್ರೀಡನ್ನಾಸ್ತೇ ಮಹಾಯೋಗೀ ಪದ್ಮಕಿಂಜಲ್ಕಸನ್ನಿಭಃ ।
ಏವಂ ಚರಿತಪುಣ್ಯೇನ ಕೇನ ವಾ ತದ್ವದಸ್ವ ಮೇ ॥ ೫ ॥

॥ ಶಂಭುರುವಾಚ ॥

ಏಷ ವಿಪ್ರಃ ಪುರಾ ರಾಮ ಸರ್ವಸಂಪತ್ಸಮನ್ವಿತಃ ।
ನಾನಾವಿಧಸುಖೋಪೇತೋ ಭಾರ್ಯಾಪೋಷಣತತ್ಪರಃ ॥ ೬ ॥

ಅಪುತ್ರೋ ದಾನಹೀನಶ್ಚ ದೇವತಾರ್ಚನವರ್ಜಿತಃ ।
ಪಂಚಯಜ್ಞವಿಹೀನಶ್ಚ ಸ್ವಾಧ್ಯಾಯಪರಿವರ್ಜಿತಃ ॥ ೭ ॥

ಪ್ರಾತರ್ಮಧ್ಯಾಹ್ನಸಾಯಾಹ್ನೇ ಭೋಜನಪ್ರವಣೋಽಶುಚಿಃ ।
ಕದಾಚಿದಗಮದ್ಗೇಹಂ ಗೌತಮಸ್ಯ ಮಹಾತ್ಮನಃ ॥ ೮ ॥

---

೪-೫. ಒಂದುಸಾರಿ ಹಾಡುತ್ತ, ಪರಸ್ಪರ ಚಪ್ಪಾಳೆ ತಟ್ಟುತ್ತಾ, ಒಬ್ಬೊಬ್ಬರ ಮುಖವನ್ನು ನೋಡುತ್ತ, ಆಸೆ ಹುಟ್ಟುವ ಅರ್ಥವುಳ್ಳ ಗೀತಗಳನ್ನು ಹಾಡುತ್ತ, ಆ ಪದ್ಮದ ರೇಣುವಿನಂತೆ ಬಣ್ಣವಿರುವ ಯೋಗಿಯೊಡನೆ ಕ್ರೀಡಿಸುತ್ತಾ ಇರುವ ಈರೀತಿ ಯಾದ ಪುಣ್ಯವಂತನು ಯಾರು? ಅದನ್ನು ದಯವಿಟ್ಟು ನನಗೆ ಹೇಳು.

೬-೭. ಶಂಭುವು ಹೇಳಿದನು :—ಎಲೈ ರಾಮನೇ, ಈತನು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನು. ಸರ್ವಸಂಪತ್ತಿನಿಂದ ಸಮೃದ್ಧನಾಗಿದ್ದನು. ನಾನಾಬಗೆಯಾದ ಸುಖ ಗಳನ್ನು ಅನುಭವಿಸುತ್ತ ಹೆಂಡತಿಯನ್ನು ಕಾಪಾಡುವುದರೊಂದರಲ್ಲೇ ಬಹು ಆಸಕ್ತ ನಾಗಿದ್ದನು. ಇವನಿಗೆ ಮಕ್ಕಳಿರಲಿಲ್ಲ. ದಾನಮಾಡುತ್ತಿರಲಿಲ್ಲ. ದೇವತಾರ್ಚನೆ ಮಾಡುತ್ತಿರಲಿಲ್ಲ. ಪಂಚಯಜ್ಞಗಳನ್ನು ಬಿಟ್ಟಿದ್ದನು. ವೇದಾಭ್ಯಾಸವನ್ನು ಮಾಡು ತ್ತಿರಲಿಲ್ಲ. ಬೆಳಗ್ಗೆ ಮಧ್ಯಾಹ್ನ ಸಾಯಂಕಾಲಗಳಲ್ಲಿ ಮೂರುವೇಳೆ ಊಟಮಾಡು ತ್ತಿದ್ದನು. ಅಶುಚಿಯು.

೮-೯. ಒಂದುಸಾರಿ ಗೌತಮಋಷಿಯನ್ನು ನೋಡಬೇಕೆಂದು ಮೇರುಪರ್ವತದ

ತ್ರ್ಯಂಬಕಸ್ಯ ಗಿರೌ ಪುಣ್ಯೇ ನಾನಾಮುನಿಗಣಾಶ್ರಿತೇ ।
ತತ್ರಾತಿಶೋಭಿತಗೃಹಂ ಸ್ಫಟಿಕಸ್ತಂಭಕಲ್ಪಿತಂ ॥ ೯ ॥

ಅಗುರುದ್ರವ್ಯಕಸ್ತೂರೀಚಂದ್ರಕುಂಕುಮಚರ್ಚಿತಾ ।
ಭಿತ್ತಿರ್ಯಸ್ಯ ಚ ಸಂತಾನಕುಸುಮಾಮೋದಸೌಷ್ಠವಂ ॥ ೧೦ ॥

ಕಸ್ತೂರಿಕಾಪುಷ್ಪರಸಸಮುತ್ಸೇಚಿತ ಭೂತಲಂ ।
ಸೂಕ್ಷ್ಮಸುಶ್ವೇತವಿವಿಧವಿತಾನೋಪರಿಶೋಭಿತಂ ॥ ೧೧ ॥

ಅಂಗಣಂ ಶೋಭಿತಮಹಾಕದಳೀಪೂಗಶೋಭಿತಂ ।
ಸಮೀಪಸರಸೀಜಾತಮಂಜುಕುಂಜನ್ಮಧುವ್ರತಂ ॥ ೧೨ ॥

ಪಟೀರತರುಸಂಭೂತಗಂಧಪೂರಿತದಿಙ್ಮುಖಂ ।
ಶಿಕ್ಷಾಗತಕೃತಾಹ್ಲಾದಗೀತಪೂರಿತದಿಙ್ಮುಖಂ ॥ ೧೩ ॥

---

ತಪ್ಪಲಲ್ಲಿರುವ ಆತನ ಮನೆಗೆ ಹೋದನು. ಅಲ್ಲಿ ಅನೇಕ ಋಷಿಗಳಿದ್ದರು. ಅಲ್ಲಿ ಒಂದು ಮನೆಯು ಬಹು ರಮ್ಯವಾಗಿದ್ದಿತು. ಅದಕ್ಕೆ ಸ್ಫಟಿಕಶಿಲೆಯ ಕಂಬಗಳಿದ್ದುವು.

೧೦. ಅದರ ಗೋಡೆಗಳಿಗೆ ಅಗರು, ಕಸ್ತೂರಿ, ಪಚ್ಚಕರ್ಪೂರ, ಕುಂಕುಮ ಕೇಸರಿಗಳನ್ನು ಬಳಿದಿದ್ದಿತು. ಆ ಮನೆಯು ಗೋಡೆಗಳನ್ನು ಕಲ್ಪವೃಕ್ಷದ ಹೂಗಳಿಂದ ವಾಸನೆ ಬರುವಂತೆ ಮಾಡಿದ್ದಿತು.

೧೧. ಅಲ್ಲಿ ನೆಲಕ್ಕೆ ಕಸ್ತೂರಿಯನ್ನು ಹಾಕಿದ ಪುಷ್ಪರಸ (ಸೆಂಟ್) ಗಳನ್ನು ಚುಮುಕಿಸಿದ್ದರು. ಮೇಲುಗಡೆಯಲ್ಲಿ ಬಿಳಿಯ ಮಲ್ಲುಬಟ್ಟೆಯ ಮೇಲ್ಕಟ್ಟನ್ನು ಕಟ್ಟಿದ್ದರು.

೧೨. ಅದರ ಅಂಗಳದಲ್ಲಿ ಬಾಳೆಯ ಮರಗಳೂ, ಅಡಕೆ ಮರಗಳೂ ಇದ್ದು ಶೋಭಿಸುತ್ತಿದ್ದುವು. ಸಮೀಪದಲ್ಲಿರುವ ಕೊಳದಲ್ಲಿ ಕಮಲಗಳಿಗೆ ಮುತ್ತಿರುವ ದುಂಬಿಗಳ ಧ್ವನಿಯಿಂದ ಮನೋಹರ ಶಬ್ದವುಳ್ಳದ್ದಾಗಿದ್ದಿತು.

೧೩. ಪಟಿಕದ ಹೂವಿನ ವಾಸನೆಯು ದಿಕ್ಕುಗಳನ್ನೆಲ್ಲಾ ತುಂಬಿದ್ದಿತು. ಕಲಿಯುವುದಕ್ಕೋಸ್ಕರ ಬಂದು ಹಾಡುತ್ತಿರುವವರ ಗೀತದಿಂದ ದಿಙ್ಮುಖವು ತುಂಬಿದ್ದಿತು.

ನಿದಾಘಜನಿತಾತಾಪನಾಶನಾಯ ವಿನಿರ್ಮಿತಂ ।
ಕದಳೀದಳಸಂಛಾದಿ ಪಾವಕಾಕಲ್ಪಿತಚ್ಛದಂ ॥ ೧೪ ॥

ಪಟೀರತರುಸುಸ್ನಿಗ್ಧಸಾಂದ್ರದ್ವಾರಕಪಾಟಕಂ ।
ಸೌಗಂಧಿಕಮಹಾನೋೀವಿಕಲ್ಪಿತಾಂತರಭಿತ್ತಿಕಂ ॥ ೧೫ ॥

ಈಶಾನಭೋಗಸುಭಗರತಿಕಲ್ಪಿತವೇದಿಕಂ ।
ಹಾಟಕಾಕಲ್ಪಿತಪದಂ ವಿಚಿತ್ರವನಿಕಾಯುತಂ ॥ ೧೬ ॥

ಸುಸ್ನಿಗ್ಧನಿಬಿಡಚ್ಛಾಯವಟಮೂಲೋಪಕಲ್ಪಿತಂ ।
ಪ್ರಸೂನಕದಳೀಖಂಡಸರೋಭಿಸ್ಸ್ರಾನ್ತಶೋಭಿತಂ ॥ ೧೭ ॥

ಮಹಾವಟಾಗ್ರಸಂಲಗ್ನತುಷಾರಿತಪಯೋಧರಂ ।
ನಾಕೋಪವನಸಂಪನ್ನವಿಚಿತ್ರಾರಾಮಶೋಭಿತಂ ॥ ೧೮ ॥

---

೧೪. ಬಿಸಿಲುಕಾಲದಲ್ಲಿ ತಾಪಕ್ಕೋಸ್ಕರ ಬಾಳೆಯ ದಳವನ್ನು ಹೊದ್ದಿಸಿ ಗಾಳಿ ಬರುವಂತೆ ಮಾಡಿರುವ ಮೇಲ್ಕಟ್ಟನ್ನು ಹಾಕಿದ್ದರು.

೧೫. ಪಟಿಕದ ಮರದಿಂದ ನುಣುಪಾಗಿ ಚೆನ್ನಾಗಿ ಸಂದಿಲ್ಲದಂತೆ ಮಾಡಿರುವ ಕದಗಳುಳ್ಳದ್ದು. ಸುಂಗಧದ ವಾಸನೆ ಬರುವಂತೆ ಗೋಡೆಯ ಒಳಗೆ ಮಾಡಿದ್ದಾರೆ.

೧೬. ಈಶ್ವರನ ಭೋಗಕ್ಕೆ ಮನೋಹರವಾದ ರತಿಗೋಸ್ಕರ ಮಾಡಿರುವ ಜಗುಲಿಗಳಿವೆ. ಮತ್ತು ವಜ್ರದಿಂದ ಮಾಡಿದ ಕೂತುಕೊಳ್ಳುವ ಸ್ಥಳಗಳಿವೆ. ಇಂತಹ ವಿಚಿತ್ರವಾದ ಕೈದೋಟಗಳಿಂದ ಕೂಡಿದೆ.

೧೭. ಮನೋಹರವಾಗಿಯೂ ತಣ್ಣಗೂ ಒತ್ತಾಗಿಯೂ ಇರುವ ನೆರಳನ್ನು ಆಲದ ಮರದ ಬುಡದಲ್ಲಿ ಕಟ್ಟಿದೆ. ಹೂ, ಬಾಳೆಗಳುಳ್ಳ ಸರಸ್ಸಿನಿಂದ ಕೂಡಿರುವ ಅಕ್ಕಪಕ್ಕ ಪ್ರದೇಶಗಳಿವೆ.

೧೮. ಅಲ್ಲಿ ಮೇಘವು ದೊಡ್ಡ ಆಲದಮರದ ಮೇಲಿದ್ದುಕೊಂಡು ತುಂತುರು ಹನಿಯನ್ನು ಸುರಿಸುತ್ತದೆ. ಸ್ವರ್ಗದಲ್ಲಿರುವ ನಂದನವನದಂತಿರುವ ವನದಿಂದ ಕೂಡಿದ ತೋಟಗಳಿಂದ ಪ್ರಕಾಶಮಾನವಾಗಿದೆ.

ವಾಪೀಕೂಪತಟಾಕಾಢ್ಯಮನೇಕಗೃಹಶೋಭಿತಂ ।
ಮಂದಂ ಮಂದಂ ವವೌ ವಾಯುರ್ಯತ್ರ ಗೇಹೇ ಸುಖಪ್ರದಃ ॥ ೧೯ ॥

ವಾದಿನ್ಯಶ್ಚಾರುಸರ್ವಾಂಗ್ಯೋ ವಾದ್ಯಾನಿ ಸ್ಮರಸಂಪದಃ ।
ವೀಣಾವೇಣೂತ್ರಿವೇಣುಂ ಚ ವಾದಯಂತಿ ವರಾಂಗನಾಃ ॥ ೨೦ ॥

ತೌರ್ಯತ್ರಿಕಕೃತೋ ನಾರ್ಯಶ್ಚತುರ್ದಿಕ್ಷು ತಥೋರ್ಧ್ವತಃ ।
ಸುವರ್ಣಾದಿಕಪಾತ್ರೇಷು ವಟಿಕಾ ಭಸ್ಮಸಂಭ್ರಾಃ ॥ ೨೧ ॥

ವಾಸಿತಾಸ್ಸರ್ವಗಂಧೈಶ್ಚ ಸುಧೂಪೈರಪಿ ಧೂಪಿತಾಃ ।
ಕುಶಗ್ರಥಿತಸಂಘಾಶ್ಚ ತ್ವಕ್ಷಮಾಲಾಶ್ಚ ಕೋಟಿಶಃ ॥ ೨೨ ॥

ಕೃಷ್ಣಾಜಿನಸಹಸ್ರಾಣಿ ಬಹಿಷ್ಪ್ರಾಂತೇ ಸ್ಥಿತಾನಿ ಚ ।
ಏತಾದೃಶೇ ಗೃಹವರೇ ದೇವವಂದ್ಯೋ ಮುನೀಶ್ವರಃ ॥ ೨೩ ॥

---

೧೯. ಭಾವಿ, ಕೊಳ, ಕೆರೆಗಳಿಂದ ಕೂಡಿದ ಮನೋಹರವಾದ ಮನೆಗಳಿಂದ ಕೂಡಿದೆ. ಆ ಮನೆಗಳಲ್ಲಿ ಗಾಳಿಯು ಮೆಲ್ಲಮೆಲ್ಲಗೆ ಬೀಸುತ್ತ ಸುಖಪ್ರದವಾಗಿರುತ್ತದೆ.

೨೦. ಅಲ್ಲಿ ವಾದ್ಯಗಳನ್ನು ನುಡಿಸುವವರು ಬಹು ಸುಂದರಿಯರು. ಸ್ಮರನ ಸಂಪತ್ತಿನಿಂದಿರುವಂತೆ ಕಾಣುವ ವೀಣೆ, ಕೊಳಲು, ತ್ರಿವೇಣುವೆಂಬ ವಾದ್ಯಗಳನ್ನು ಹೆಂಗಸರು ವಾದಿಸುತ್ತಿದ್ದರು.

೨೧. ಅಲ್ಲಿರುವ ಹೆಂಗಸರು ನೃತ್ಯಗೀತ, ವಾದ್ಯಗಳನ್ನು ಬಾರಿಸಲು ಬಲ್ಲವರು, ಬಾರಿಸುತ್ತಲೂ ಇರುವರು. ನಾಲ್ಕು ದಿಕ್ಕುಗಳಲ್ಲೂ, ಮೇಲುಗಡೆಯಲ್ಲೂ, ಎಲ್ಲಿ ನೋಡಿದರೂ ಚಿನ್ನದ ಪಾತ್ರೆಗಳಲ್ಲಿ ವಿಭೂತಿಯ ಉಂಡೆಗಳೇ ಇರುತ್ತವೆ.

೨೨. ಅವೆಲ್ಲವೂ ಸುಗಂಧಗಳಿಂದ ವಾಸಿತವಾಗಿವೆ. ಧೂಪಗಳಿಂದಲೂ ಸುವಾಸನೆಯನ್ನು ಹೊಂದಿವೆ. ಅಲ್ಲಿ ದರ್ಭೆಯ ಕಂತೆಗಳೂ, ಜಪಸರದ ಮಾಲೆಗಳೂ ಕೋಟಿಗಟ್ಟಲೆ ಇವೆ.

೨೩. ಸಾವಿರಾರು ಕೃಷ್ಣಾಜಿನಗಳು ಹೊರಗಡೆಯಲ್ಲಿಡಲ್ಪಟ್ಟಿವೆ. ಇಂತಹ ಉತ್ತಮವಾದ ಮನೆಯಲ್ಲಿ ದೇವತೆಗಳಿಗೆ ವಂದ್ಯನಾದ ಆ ಋಷಿ ಇರುವನು.

**ಕರ್ಪೂರರಾದೀಂಶ್ಚ ಸಂಸ್ಥಾಪ್ಯ ಚತುರ್ದಿಕ್ಷು ಮುನೀಶ್ವರಃ ।**
**ಪಟೀರಪೀಠೇ ಕರ್ಪೂರಸಿಂಹಾಸನಮಕಲ್ಪಯತ್ ॥ ೨೪ ॥**

**ಸೂಕ್ಷ್ಮಂ ಶ್ವೇತಂ ಚ ಸುಸ್ನಿಗ್ಧಮಾವೃತಂ ಘನಸಾರಕೈಃ ।**
**ಸುಗಂಧಿವಾಸಿತಜಲೈಃ ಸ್ನಾಪ್ಯ ಕ್ಷೀರೇಣ ಶಂಕರಂ ॥ ೨೫ ॥**

**ಅನ್ಯೈಶ್ಚ ವೈದಿಕೈರ್ಮಂತ್ರೈಃ ಸ್ನಾಪಯಿತ್ವಾ ಸದಾಶಿವಂ ।**
**ದಾರುಚಂದ್ರೋಪಪೀಠೇ ತು ವಸ್ತ್ರಪೀಠಂ ನಿಧಾಯ ಚ ॥ ೨೬ ॥**

**ಪಾತ್ರಿಕಾಮಗ್ರತಃ ಸ್ಥಾಪ್ಯ ಸ್ಥಾಪಯಿತ್ವಾ ದಲೇಷ್ವಮೂನ್ ।**
**ಏಕಸ್ಮಿನ್ನಕ್ಷತಾಃ ಪಾತ್ರೇ ಹ್ಯನ್ಯಸ್ಮಿನ್ಸಲಿಲಾಕ್ಷತಾಃ ॥ ೨೭ ॥**

**ಪಂಚಗಂಧಕಮೇಕಸ್ಮಿನ್ನೇಕಸ್ಮಿನ್ನಷ್ಟಗಂಧಕಂ ।**
**ಕಾಶ್ಮೀರಂ ಮೃಗನಾಭಿಂ ತು ಕರ್ಪೂರಂ ಚಂದನಂ ತಥಾ ॥ ೨೮ ॥**

---

೨೪. ಆ ಋಷಿಯು ನಾಲ್ಕು ದಿಕ್ಕುಗಳಲ್ಲಿಯೂ ಕರ್ಪೂರವೇ ಮುಂತಾದುವುಗಳನ್ನು ಇಟ್ಟಿದ್ದನು. ಸ್ಫಟಿಕಪೀಠದಲ್ಲಿ ಕರ್ಪೂರ ಸಿಂಹಾಸನವನ್ನು ಮಾಡಿದ್ದನು.

೨೫-೨೬. ತೆಳ್ಳಗೂ, ಬೆಳ್ಳಗೂ, ಮನೋಹರವಾಗಿಯೂ ಇದ್ದು ಪಚ್ಚ ಕರ್ಪೂರದಿಂದ ಕೂಡಿದ ಸುಂಗಧದಿಂದ ವಾಸನೆಮಾಡಿರುವ ನೀರಿನಿಂದ, ಲೌಕಿಕ ಶ್ಲೋಕಗಳಿಂದಲೂ, ವೈದಿಕ ಮಂತ್ರಗಳಿಂದಲೂ, ಶಂಕರನಿಗೆ ಅಭಿಷೇಕ ಮಾಡಿ, ಮರದ ಉಪಪೀಠದಲ್ಲಿ ವಸ್ತ್ರಪೀಠವನ್ನಿಟ್ಟು ಅದರಲ್ಲಿಟ್ಟನು.

೨೭-೨೮. ಪೂಜೆಯ ಪಾತ್ರೆಯನ್ನು ಮುಂದಿಟ್ಟುಕೊಂಡು ಅವುಗಳ ಹಳ್ಳವಾದ ದಳಗಳಲ್ಲಿ ಇವುಗಳನ್ನಿಟ್ಟಿದ್ದನು. ಒಂದರಲ್ಲಿ ಅಕ್ಷತೆಯನ್ನೂ, ಮತ್ತೊಂದರಲ್ಲಿ ನೀರಿನ ಅಕ್ಷತೆಯನ್ನೂ, ಇನ್ನೊಂದರಲ್ಲಿ ಪಂಚಗಂಧವನ್ನೂ, ಮತ್ತೊಂದರಲ್ಲಿ ಅಷ್ಟಗಂಧವನ್ನೂ, ಒಂದರಲ್ಲಿ ಕುಂಕುಮಕೇಸರಿಯನ್ನೂ, ಒಂದರಲ್ಲಿ ಕಸ್ತೂರಿಯನ್ನೂ, ಒಂದರಲ್ಲಿ ಕರ್ಪೂರವನ್ನೂ, ಒಂದರಲ್ಲಿ ಚಂದನವನ್ನೂ ಇಟ್ಟಿದ್ದನು.

ಪಾತ್ರೇಷ್ವನ್ಯೇಷು ವಿನ್ಯಸ್ಯ ಪೂಜಾಸ್ಥಾನೇ ಪ್ರಕಲ್ಪ್ಯ ಚ ।
ನಾನಾವರಣಮಾರ್ಗೇಣ ಪೂಜಾ ತತ್ರ ವಿಧೀಯತೇ ॥ ೨೯ ॥

ಲಿಂಗಮಧ್ಯೇ ಸ್ಥಿತೋ ದೇವಃ ಪಂಚವಕ್ತ್ರಸ್ಸದಾಶಿವಃ ।
ತಸ್ಯ ಪ್ರಾವರಣಂ ಲಿಂಗಶಕ್ತಿಸ್ತಸ್ಯ ವಿಧೀಯತೇ ॥ ೩೦ ॥

ಶಕ್ತೇರಾವರಣಂ ವಿಷ್ಣುರ್ವಿಷ್ಣೋರಾವರಣಂ ವಿಧಿಃ ।
ಬ್ರಹ್ಮಪ್ರಾವರಣಂ ಚಂದ್ರಸ್ತಸ್ಯ ಸೂರ್ಯಸ್ತತಶ್ಶ್ರುತಿಃ ॥ ೩೧ ॥

ದಿಗ್ದೇವತಾಸ್ತು ತುದ್ವ್ಯಾಪ್ತಿಸ್ತಾಸಾಮಾವರಣಂ ದಿಶಃ ।
ದಿಶಾಮಾವರಣಂ ಶಂಭುಸ್ತಸ್ಯ ಚಾವರಣಂ ಗುಣಾಃ ॥ ೩೨ ॥

ದಶಪ್ರಾವರಣಂ ಹ್ಯೇತಚ್ಛಿವಲಿಂಗಾರ್ಚನಂ ಶುಭಂ ।
ಕೇಷಾಂಚಿನ್ಮತಮೇತತ್ಸ್ಯಾದಥ ಪ್ರಾವರಣಾಂತರಂ ॥ ೩೩ ॥

ವಿದ್ಯಾವರಣಮಾಖ್ಯಾತಂ ತದುಮಾವರಣಂ ಸ್ಮೃತಂ
ವಿಷ್ಣುರಾವರಣಂ ತಸ್ಯಾ ವಿಷ್ಣೋಶ್ಚಾವರಣಂ ವಿಧಿಃ ॥ ೩೪ ॥

---

೨೯. ಈರೀತಿ ಬೇರೆಬೇರೆ ಪಾತ್ರೆಗಳಲ್ಲಿ ಪೂಜೆಯ ಜಾಗದಲ್ಲಿ ಎಲ್ಲವನ್ನೂ ಇಟ್ಟುಕೊಂಡು, ಅನೇಕ ಬಗೆಯಾದಾವರಣಮಾರ್ಗದಿಂದ ಪೂಜೆಯನ್ನು ಮಾಡುತ್ತಿದ್ದನು.

೩೦. ಪಂಚಮುಖವುಳ್ಳ ಸದಾಶಿವನು ಲಿಂಗದ ಮಧ್ಯೆಯಿರುವನು. ಅದರ ಸುತ್ತುವಿಕೆಯು ಲಿಂಗಶಕ್ತಿ ಎನ್ನಿಸಿಕೊಳ್ಳುತ್ತದೆ.

೩೧—೩೩. ಶಕ್ತಿಗೆ ಆವರಣವು ವಿಷ್ಣುವು, ವಿಷ್ಣುವಿಗೆ ಬ್ರಹ್ಮನು, ಬ್ರಹ್ಮನಿಗೆ ಚಂದ್ರನು, ಚಂದ್ರನಿಗೆ ಸೂರ್ಯನು, ಸೂರ್ಯನಿಗೆ ಶ್ರುತಿಯು, ಶ್ರುತಿಗೆ ದಿಗ್ದೇವತೆಗಳು, ದಿಗ್ದೇವತೆಗಳಿಗೆ ದಿಕ್ಕುಗಳು, ದಿಕ್ಕುಗಳಿಗೆ ಶಂಭುವು, ಅವನಿಗೆ ಗುಣಗಳು. ಈರೀತಿ ಹತ್ತು ಪ್ರಾವರಣಗಳು. ಈ ಶಿವಲಿಂಗಾರ್ಚನೆಯು ಶುಭವು. ಇದು ಕೆಲವರ ಮತವು. ಇನ್ನು ಬೇರೆರೀತಿಯಾದುದನ್ನು ಹೇಳುತ್ತೇನೆ.

೩೪-೩೭. ಮೊದಲನೆಯದು ವಿದ್ಯಾವರಣ, ಆ ವಿದ್ಯೆಗೆ ಉಮೆಯು ಆವರಣವು, ಉಮೆಗೆ ವಿಷ್ಣುವು, ವಿಷ್ಣುವಿಗೆ ಬ್ರಹ್ಮನು, ಬ್ರಹ್ಮನಿಗೆ ಚಂದ್ರನು, ಚಂದ್ರನಿಗೆ

**ಬ್ರಹ್ಮಪ್ರಾವರಣಂ ಚಂದ್ರಸ್ತಸ್ಯ ಭಾನುರಥಾವೃತಿಃ ।**
**ಭಾನೋರಾವರಣಂ ಚೇಶ ಇತಿ ಷೋಢಾವೃತಿಃ ಸ್ಮೃತಾ ॥ ೩೫ ॥**

**ವಿಧಿಂ ವಿನಾ ಸಮಾಖ್ಯಾತಂ ಪಂಚಾವರಣಮುತ್ತಮಂ ।**
**ಶಶಾಂಕವಿಷ್ಣುಶಕ್ತೀನಾಮೇತದಾವರಣತ್ರಯಂ ॥ ೩೬ ॥**

**ಅಂಬಿಕಾವರಣಂ ಪ್ರೋಕ್ತಮೇಕಾವರಣಮುತ್ತಮಂ ।**
**ಅಥವಾ ಲೋಕಪಾಲಾಸ್ಸ್ಯುರಾವೃತಿಸ್ಸೋಮಪೂಜನೇ ॥ ೩೭ ॥**

**ಅನಾವರಣಮಥವಾ ಪೂಜನಂ ಶಕ್ಯತೇ ಶಿವೇ ।**
**ಪತ್ರಿಕಾಷ್ಟದಳೇಷ್ವೇವ ಸ್ಥಿತೈರ್ದ್ರವ್ಯೈರ್ಯಜೇಚ್ಛಿವಂ ॥ ೩೮ ॥**

**ಪ್ರತಿಕಾಲಕ್ಷಣಂ ವಕ್ಷ್ಯೇ ಸರ್ವಕರ್ಮೋಪಯೋಗಿತಂ ।**
**ಸ್ವರ್ಣೇನ ರಾಜತೇನಾಥ ತಾಮ್ರೇಣಾಥ ಪ್ರಕಲ್ಪಿತಂ ॥ ೩೯ ॥**

---

ಸೂರ್ಯನು, ಸೂರ್ಯನಿಗೆ ಈಶ್ವರನು. ಈರೀತಿ ಕೆಲವರು ಆರು ಆವರಣಗಳನ್ನು ಹೇಳುತ್ತಾರೆ.

೩೬. ಇದರಲ್ಲಿಯೇ ಬ್ರಹ್ಮನನ್ನು ಬಿಟ್ಟರೆ ಪಂಚಾವರಣವಾಗುತ್ತದೆ. ಚಂದ್ರ ವಿಷ್ಣು ಉಮೆಯರನ್ನು ಬಿಟ್ಟರೆ ತ್ರ್ಯಾವರಣವಾಯಿತು.

೩೭. ಅಂಬಿಕೆಯೊಬ್ಬಳನ್ನೇ ಇಟ್ಟುಕೊಂಡು ಏಕಾವರಣವನ್ನು ಕೆಲವರು ಹೇಳುತ್ತಾರೆ. ಅಥವಾ ಲೋಕಪಾಲಕರನ್ನು ಆವರಣವನ್ನಾಗಿಟ್ಟುಕೊಂಡು ಏಕಾವರಣ ವೆಂದೂ ಹೇಳುತ್ತಾರೆ

೩೮. ಆವರಣವಿಲ್ಲದೆ ಶಿವನಿಗೆ ಪೂಜೆಯನ್ನು ಮಾಡಬಹುದು. ಅಷ್ಟದಳ ಗಳುಳ್ಳ ಆ ಪಾತ್ರೆಯಲ್ಲಿರುವ ಪದಾರ್ಥಗಳಿಂದಲೇ ಶಿವನನ್ನು ಪೂಜಿಸಬೇಕು.

೩೯. ಪತ್ರಿಕೆಯ ಲಕ್ಷಣವನ್ನು ಹೇಳುತ್ತೇನೆ. ಅದು ಎಲ್ಲಾ ಕೆಲಸಕ್ಕೂ ಉಪಯೋಗವಾಗುತ್ತದೆ. ಅದನ್ನು ಚಿನ್ನ, ಬೆಳ್ಳಿ, ತಾಮ್ರ ಇವುಗಳಲ್ಲಿ ಯಾವುದರಿಂದ ಲಾದರೂ ಮಾಡಬಹುದು.

ಮುಕ್ತಾಶುಕ್ತಿನಿಭಂ ಕುರ್ಯಾತ್ಪತ್ರಿಕಾಷ್ಟದಳಂ ಶುಭಂ ।
ಪದ್ಮಪತ್ರಸಮಾನೇನ ಪತ್ರಾಕಾರಂ ಪ್ರಕಲ್ಪಯೇತ್ ॥ ೪೦ ॥

ಪಲಮಾತ್ರಂ ತತಶ್ಶಸ್ತಂ ನಿರ್ವೃತಂ ವಿಸ್ತೃತಂ ಪದಂ ।
ಅಸ್ಥೂಲಮಧ್ಯಮುಪರಿ ಪದ್ಮಾಕೃತಿದಳಾಷ್ಟಕಂ ॥ ೪೧ ॥

ಅಥವಾ ಶಕ್ತಿಮಾರ್ಗೇಣ ಪಂಚಪತ್ರಂ ಪ್ರಕಲ್ಪಯೇತ್ ।
ತ್ರಿಪತ್ರಮಥವಾ ಕುರ್ಯಾಚ್ಛಕ್ತಿಭಾವೇನ ತೇನ ಚ ॥ ೪೨ ॥

ಯಥಾ ಸ್ಯಾಚ್ಛೋಭನಂ ಪತ್ರಂ ತಥಾ ಕುರ್ಯಾದ್ವಿಚಕ್ಷಣಃ ।
ಶಕ್ತ್ಯಾ ಸ್ತರಿತರುದ್ರಾಕ್ಷೈಃ ಕಲ್ಪಿತಾಷ್ಟಶತೈಶ್ಶುಭಾ ॥ ೪೩ ॥

ಮಾಲೋಪವೀತಂ ತ್ರಿಂಶತ್ಯಾ ತ್ವಷ್ಟಕೇನ ಪ್ರಕಲ್ಪಿತಾ ।
ಪ್ರಗಂಡಯೋರರ್ಥೈಕೈಕಂ ಬಧ್ವಾ ತು ದ್ವೇ ಪ್ರಕೋಷ್ಠಯೋಃ ॥ ೪೪ ॥

---

೪೦. ಮುತ್ತಿನಂತೆ ದುಂಡಗಾಗಲಿ, ಕಪ್ಪೆಚಿಪ್ಪಿನಂತೆ ಎಲೆಯ ಆಕಾರವಾಗಿಯಾಗಲಿ ಎಂಟು ದಳಗಳನ್ನು ಮಾಡಬೇಕು. ಆ ತಟ್ಟೆಯು ಒಂದೇ ಆಗಿರಬೇಕು. ಅದು ಪದ್ಮದ ಎಲೆಯಂತೆ ಇರಬೇಕು.

೪೧. ಆ ಪಾತ್ರೆಗಳು ಒಂದೊಂದು ಪಲದಷ್ಟಿದ್ದರೆ ಪ್ರಶಸ್ತವು. ಅಗಲವಾಗಿಯೂ, ಆಳವಾಗಿಯೂ ಇರಬೇಕು. ಅದರ ಮಧ್ಯಭಾಗವು ದಪ್ಪವಾಗದಂತೆ ಉಬ್ಬಿರಬೇಕು. ಪದ್ಮದ ಆಕಾರಕ್ಕೆ ಎಂಟು ದಳಗಳಿರಬೇಕು.

೪೨-೪೩. ಅದಿಲ್ಲದಿದ್ದರೆ ಶಕ್ತಿಪೂಜೆಗೆ ಹೇಳಿರುವ ರೀತಿಯಲ್ಲಿ ಐದು ಎಲೆಗಳನ್ನು ಮಾಡಬೇಕು. ಅಥವಾ ಮೂರು ಎಲೆಗಳನ್ನು ಮಾಡಬೇಕು. ಎಲೆಯು ಚೆನ್ನಾಗಿರುವ ರೀತಿಯಲ್ಲಿ ಮಾಡಬೇಕು. ಬೆಳ್ಳಿಯಿಂದಾಗಲಿ, ಚಿನ್ನದಿಂದಾಗಲಿ, ರುದ್ರಾಕ್ಷೆಯನ್ನು ಕೊನೆಗಳಲ್ಲಿ ಮುಚ್ಚಿ, ಆ ಮುಚ್ಚಳಕ್ಕೆ ಅಷ್ಟದಳಗಳು ಬಂದಿರುವಂತೆ ಮಾಡಿರಬೇಕು.

೪೪. ಮೂವತ್ತೆಂಟು ರುದ್ರಾಕ್ಷಿಯಿರುವ ಒಂದು ಸರವನ್ನು ಉಪವೀತವಾಗಿ ಧರಿಸಬೇಕು. ತೋಳು ಮೊಳಕೈಗಳಿಗೆ ಎರಡೆರಡು ಕಡೆಗೂ ಒಂದೊಂದು ರುದ್ರಾಕ್ಷಿಯನ್ನು ಕಟ್ಟಿಕೊಳ್ಳಬೇಕು.

**ಶಿರಸ್ಯೇಕಾಷ್ಟತಾ ತೇನ ಕಂಠೇ ಚ ಪರಮರ್ಷಿಣಾ ।**
**ರುದ್ರಾಕ್ಷೈಸ್ಸ್ಫಟಿಕೈ ರತ್ನೈಃ ಕಲ್ಪಿತಾ ಹ್ಯಕ್ಷಮಾಲಿಕಾ ॥ ೪೫ ॥**

**ವ್ಯಾಘ್ರಚರ್ಮಾಸನಂ ಕೃತ್ವಾ ಪದ್ಮಾಸನಗತೋ ಮುನಿಃ ।**
**ಆವಾಹಂ ಚಾಸನಂ ಚಾರ್ಘ್ಯಂ ಪಾದ್ಯಂ ಚಾಚಮನೀಯಕಂ ॥ ೪೬ ॥**

**ನಿವೃತ್ಯ ಗಂಗಾಸಲಿಲೈಃ ಸ್ನಾಪಯಾಮಾಸ ಶಂಕರಂ ।**
**ಅಷ್ಟಗಂಧಕಸಂಯುಕ್ತೈರ್ಯುಕ್ತೈರ್ವಕುಲಪಾಟಲೈಃ ॥ ೪೭ ॥**

**ಸ್ವರ್ಣಭಾಂಡಸ್ಥಿತೈರ್ವಸ್ತ್ರಶೋಭಿತೈರ್ವಾಸಿತೈರ್ದೃಢಂ ।**
**ದ್ವಾರೇ ತಾಮ್ರಕಟಾಹಶ್ಚ ಪ್ರಬಂಧದ್ರೋಣಿನಾ ಶುಭಂ ॥ ೪೮ ॥**

**ಗೋಶೃಂಗೇಣ ವಿಷಾಣೇನ ಗವಯಸ್ಯ ತಥಾ ಕ್ವಚಿತ್ ।**
**ದಕ್ಷಿಣಾವರ್ತಶಂಖೇನ ರತ್ನಪಾತ್ರೈರಥಾಪಿ ವಾ ॥ ೪೯ ॥**

---

೪೫. ತಲೆಯಲ್ಲಿ ಒಂದು ರುದ್ರಾಕ್ಷಿಯನ್ನು ಕಟ್ಟಿಕೊಳ್ಳಬೇಕು. ಕತ್ತಿಗೆ ಎಂಟು ರುದ್ರಾಕ್ಷಿಯನ್ನು ಕಟ್ಟಿಕೊಳ್ಳಬೇಕು. ರುದ್ರಾಕ್ಷಿ, ಸ್ಫಟಿಕ, ರತ್ನಗಳಿಂದ ಜಪ ಸರವನ್ನು ಮಾಡಿಕೊಳ್ಳಬೇಕು.

೪೬. ಆ ಜಾಗದಲ್ಲಿ ಆ ಗೌತಮಋಷಿಯು ವ್ಯಾಘ್ರಚರ್ಮವನ್ನು ಹಾಕಿ ಕೊಂಡು ಅದರ ಮೇಲೆ ಪದ್ಮಾಸನವನ್ನು ಹಾಕಿಕೊಂಡಿದ್ದನು. ಶಂಕರನಿಗೆ ಆವಾಹನೆ, ಆಸನ, ಅರ್ಘ್ಯ, ಪಾದ್ಯ, ಆಚಮನಗಳನ್ನು ಗಂಗೋದಕದಿಂದ ಕೊಟ್ಟು ಅಭಿಷೇಕ ಮಾಡಿದನು.

೪೭-೪೮. ಅಷ್ಟಗಂಧಗಳನ್ನು ಹಾಕಿ ಪಗಡೆ, ಪಾದರಿ, ಹೂಗಳನ್ನು ಹಾಕಿ ವಾಸನೆ ಬರುವಂತೆ ಮಾಡಿ ಚಿನ್ನದ ಹಂಡೆಗಳಲ್ಲಿ ಬಟ್ಟೆಯಿಂದ ಶೋಧಿಸಿ ಆ ಸುವಾಸನೆ ಯುಳ್ಳ ನೀರನ್ನು ತುಂಬಿದ್ದರು. ಇದು ಸ್ನಾನಮಾಡಿಸುವ ಅಗ್ರೋದಕ. ಈ ಸ್ನಾನ ಮಾಡಿದ ಅಗ್ರೋದಕವು ಹೀಗೆ ನಿಲ್ಲಲು, ಬಾಗಿಲಿನಲ್ಲಿ ಒಂದು ತಾಮ್ರದ ಹಂಡೆಯ ನ್ನಿಟ್ಟು, ಅದರ ಬಾಯಿಗೆ ಆ ಸ್ನಾನಮಾಡಿಸಿದ ತೀರ್ಥವು ಹೋಗಿ ಬೀಳುವಂತೆ ಒಂದು ದೋಣಿಯನ್ನು ಜೋಡಿಸಿದ್ದರು.

೪೯-೫೦. ಗೋಶೃಂಗ, ಗವಯದಕೊಂಬು, ದಕ್ಷಿಣಾವರ್ತಶಂಖ, (ಬಲಮುರಿ ಶಂಖ) ರತ್ನದ ಪಾತ್ರೆಗಳು, ಚಿನ್ನದ ಪಾತ್ರೆಗಳು, ಬೆಳ್ಳಿಯ ಪಾತ್ರೆಗಳು, ತಾಮ್ರ

ಸ್ವರ್ಣೈರ್ವಾ ರಾಜತೈರ್ವಾಪಿ ತಾಮ್ರೈಃ ಕಾಂಸ್ಯೈರಥಾಪಿ ವಾ ।
ಸ್ವರ್ಣೈಶ್ಚ ಸೂಕ್ಷ್ಮಕಲಶೈಃ ಸ್ನಾಪಯಾಮಾಸ ಚೇಚ್ಛಯಾ ॥ ೫೦ ॥

ಅಥವಾ ಮೃಣ್ಮಯೈಃ ಕುರ್ಯಾತ್ಪದ್ಮಪತ್ರೈರಥಾಪಿ ವಾ ।
ಪಲಾಶೈಶ್ಚೂತಜಂಬ್ವಾದ್ಯೈಃ ಪಾತ್ರೈಸ್ಸಂಸ್ನಾಪಯೇದ್ವಿಭುಂ ॥ ೫೧ ॥

ಸ್ನಾನಾನಾಮಥ ಸರ್ವೇಷಾಂ ಧಾರಾಸ್ನಾನಂ ವಿಶಿಷ್ಯತೇ ।
ನಮಸ್ತೇತ್ಯಾದಿ ಮಂತ್ರೇಣ ಶತರುದ್ರೀಯಸಂಜ್ಞಿನಾ ॥ ೫೨ ॥

ಶಂ ಚೇತ್ಯಾದ್ಯನುವಾಕೇನ ಶಾಂತಿರೂಪೇಣ ಚೇಶ್ವರಂ ।
ಆವೃತ್ಯ ಚ ಯಥಾಶಕ್ತಿ ಪಶ್ಚಾದ್ಗಂಧಾದಿ ವಿನ್ಯಸೇತ್ ॥ ೫೩ ॥

ತತಶ್ಚ ಶೋಭನೈಃಪುಷ್ಪೈಃ ಪತ್ರೈರ್ಬಿಲ್ವೈಸ್ಸಮರ್ಚಯೇತ್ ।
ತುಳಸೀಮಾರುವವಳ್ಳೈಃ ಕಲ್ಹಾರೈಶ್ಚ ಮಹೋತ್ಪಲೈ ॥ ೫೪ ॥

---

ಕಂಚಿನ ಪಾತ್ರೆಗಳು, ಚಿನ್ನದ ಸಣ್ಣಪಾತ್ರೆಗಳು ಈ ಕಲಶಗಳಿಂದ ಮನಸ್ಸಿಗೆ ತೃಪ್ತಿಯಾಗುವಂತೆ ಶಂಕರನನ್ನು ಸ್ನಾನಮಾಡಿಸಿದನು.

೫೧. ಹಿಂದೆ ಹೇಳಿದವುಗಳಿಂದಲಾದರೂ ಅಭಿಷೇಕಮಾಡಬಹುದು. ಅದಿಲ್ಲದಿದ್ದರೆ ಮಣ್ಣಿನ ಮಡಕೆಗಳಾದರೂ ಆಗಬಹುದು. ಅದೂ ಅಲ್ಲದಿದ್ದರೆ ಪದ್ಮದ ಎಲೆ, ಮುತ್ತುಗದ ಎಲೆ, ಮಾವಿನೆಲೆ, ನೇರಳೆ ಎಲೆ, ಈ ಪಾತ್ರೆಗಳನ್ನೂ ಸೌಕರ್ಯಾನುಗುಣವಾಗಿ ಮಾಡಿಕೊಂಡು ಶಂಕರನಿಗೆ ಅಭಿಷೇಷಕಮಾಡಬೇಕು. ಸ್ನಾನಗಳಿಗೆಲ್ಲಾ ಧಾರೆಯಾಗಿ ಪಾತ್ರೆಯಿಂದ ಸ್ನಾನಮಾಡಿಸುವುದು ಉತ್ತಮವು.

೫೨-೫೩. ನಮಸ್ತೇ ರುದ್ರ ಎಂಬ ಶತರುದ್ರೀಯದಿಂದಲೂ, ಶಂಚಮೆ ಎಂಬ ಅನುವಾಕದಿಂದಲೂ, ಶಾಂತಿಮಂತ್ರಗಳಿಂದಲೂ, ಕೈಲಾದಷ್ಟು ಬಾರಿ ಅದನ್ನು ಆವೃತ್ತಿ ಮಾಡಿಕೊಂಡು ಅಭಿಷೇಕಮಾಡಿ ಅನಂತರ ಗಂಧವನ್ನು ಹಚ್ಚಬೇಕು.

೫೪. ಅನಂತರ ಉತ್ತಮವಾದ ಹೂಗಳಿಂದಲೂ, ಪತ್ರಗಳಿಂದಲೂ, ಬಿಲ್ವಪತ್ರೆಯಿಂದಲೂ, ತುಳಸಿಯ ದಳ, ಮರುಗ, ಕಲ್ಹಾರ, ಉತ್ಪಲಗಳಿಂದಲೂ, ಪೂಜಿಸಬೇಕು.

ನೀಲೋತ್ಪಲೈರುತ್ಪಲೈಶ್ಚ ಶೇಷೈಶ್ಚ ಕರವೀರಕೈಃ ।
ಕರ್ಣಿಕಾರೈಸ್ಸಿತಾಂಭೋಜೈರಪರಾಜಿತಯಾ ತಥಾ ॥ ೫೫ ॥

ತಿಲಾಕ್ಷತೈರಕ್ಷತೈಶ್ಚ ಶ್ರೀಪತ್ರೈಸ್ತಿಲಮಿಶ್ರಕೈಃ ।
ಏವಂ ಮಹೇಶಮೀಶಾನಂ ಪೂಜಯಾಮಾಸ ಗೌತಮಃ ॥ ೫೬ ॥

ಕರ್ಪೂರಾಗರುಕಸ್ತೂರೀಸರ್ಜಾಗರುಕಚಂದನೈಃ ।
ಅನ್ಯೈಶ್ಚ ಧೂಪಯಾಮಾಸ ಷೋಡಶಾಥ ಪ್ರದೀಪಿಕಾಃ ॥ ೫೭ ॥

ಕರ್ಪೂರವರ್ತಿಸಂಯುಕ್ತಾ ದೀಪಯಂತ್ರೋಪರಿ ಸ್ಥಿತಾಃ ।
ನಿವೇದಿತಂ ಮಹೇಶಾಯ ಹ್ಯಥ ನೈವೇದ್ಯಮುತ್ತಮಂ ॥ ೫೮ ॥

ಸುಪಕ್ವಶಾಲಿಪಿಷ್ಟಾನ್ನಂ ಭಕ್ಷ್ಯಂ ಲೇಹ್ಯಂ ಚ ಚೋಷಕಂ ।
ಮಧುರಾದಿಸಮೋಪೇತಂ ಪಂಚಭಕ್ಷ್ಯಸಮನ್ವಿತಂ ॥ ೫೯ ॥

ಅನೇಕಪಕ್ವಶಾಖಾಢ್ಯಮನೇಕಪಕ್ವಮಿಶ್ರಿತಂ ।
ಪಾನಂ ವಿಂಶತಿಸಂಯುಕ್ತಂ ದ್ರಾಕ್ಷಾರಂಭಾಫಲಾನ್ವಿತಂ ॥ ೬೦ ॥

---

೫೫-೫೬. ನಿಲೋತ್ಪಲ, ಉತ್ಪಲ, ಕಣಿಗಲೆ, ಕರ್ಣಿಕಾರ, ಬಿಳಿಯಕಮಲ, ವಿಷ್ಣುಕ್ರಾಂತಿ, ತಿಲಾಕ್ಷತೆ, ಅಕ್ಷತೆ, ಬಿಲ್ವಪತ್ರೆ, ಅದಕ್ಕೆ ತಿಲಮಿಶ್ರವಾಗಿರಬೇಕು. ಈರೀತಿ ಮಹೇಶ್ವರನಾದ ಈಶ್ವರನನ್ನು ಗೌತಮನು ಪೂಜಿಸುತ್ತಿದ್ದನು.

೫೭. ಕರ್ಪೂರ, ಅಗರು, ಕಸ್ತೂರಿ, ಸರ್ಜದಧೂಪ, ಚಂದನ ಇವೇ ಮೊದಲಾದುವುಗಳಿಂದ ಧೂಪವೆತ್ತಿದನು. ಅಲ್ಲದೆ ಹದಿನಾರು ದೀಪಗಳನ್ನು ಎತ್ತಿದನು.

೫೮—೬೦. ಕರ್ಪೂರ ಬತ್ತಿಗಳನ್ನು ಮಂಗಳಾರತಿಯ ದೀವಿಗೆ ಮುಂತಾದುವುಗಳ ಮೇಲಿಟ್ಟುಕೊಂಡು ಎತ್ತಿದ್ದನು. ಅನಂತರ ಉತ್ತಮವಾದ ಶಾಲ್ಯನ್ನ, ಮೃಷ್ಟಾನ್ನ, ಭಕ್ಷ್ಯಲೇಹ್ಯ (ಚಟ್ಣಿ ಮುಂತಾದುವು), ಚೋಷ್ಯ (ಗೊಜ್ಜು ಮುಂತಾದುವು), ಪಾಯಸ, ಪಂಚಭಕ್ಷ್ಯಗಳು ಮತ್ತು ಬೇಯಿಸಿರುವ ಕಾಯಿಪಲ್ಯಗಳು, ಇಪ್ಪತ್ತು ಬಗೆಯ ಕುಡಿಯುವ ಪದಾರ್ಥಗಳು, ದ್ರಾಕ್ಷಿ, ಬಾಳೆಯ ಹಣ್ಣುಗಳನ್ನೂ ನಿವೇದನಮಾಡಿದನು.

ಪಡಕಾರಫಲೈಶ್ಚಾನ್ಯೈರ್ನಾಗರಂಗಫಲಾಕ್ಷತೈಃ ।
ಶರ್ಕರಾಗುಡಸಂಯುಕ್ತೈರಾಜ್ಯಪಾತ್ರಸಮನ್ವಿತಂ ॥ ೬೧ ॥

ಸೂಪಾಷ್ಟಕಾದಿಸಂಯುಕ್ತಂ ಯುಕ್ತಂ ಮೂಲಫಲಾದಿನಾ ।
ಯಥಾಸಂಭವಸಂಯುಕ್ತೈರನ್ಯೈರಪ್ಯುಪಕಲ್ಪಿತಂ ॥ ೬೨ ॥

ಅಗ್ರಪುಷ್ಪಸಮೋಪೇತಂ ನೈವೇದ್ಯಂ ಪ್ರದದೌ ಮುನಿಃ ।
ಸೌವರ್ಣಪಾತ್ರಿಕಾನ್ಯಸ್ತನೀರಾಜನಸಹಸ್ರಕಂ ॥ ೬೩ ॥

ಸೋಪಹಾರಾಯ ದೇವಾಯ ದತ್ವಾ ಚೈವ ನಮಸ್ಯ ಚ ।
ಪೂಗಖಂಡಾನಥೋ ಘೃಷ್ಟಾನ್ಪತ್ರಾಣಿ ಕ್ಷಾಳಿತಾನಿ ಚ ॥ ೬೪ ॥

ಅಪೃಷ್ಟಾಗ್ರಾಣಿ ಸುಶ್ವೇತಚ್ಛದಪ್ರಾವೃತ್ತಿಕಾನಿ ಚ ।
ಘನಸಾರಕಚೂರ್ಣಂ ಚ ನ್ಯಸ್ತಪತ್ರತ್ರಯಂ ಶುಭಂ ॥ ೬೫ ॥

ಸೌವರ್ಣಪಾತ್ರವಿನ್ಯಸ್ತಮಿದಂ ತಾಂಬೂಲಮೀಶ್ವರೇ ।
ಅಥ ಪ್ರದಕ್ಷಿಣಂ ಕೃತ್ವಾ ನಮಸ್ಕಾರಾನನಂತರಂ ॥ ೬೬ ॥

---

೬೧-೬೨. ಮಾವಿನಹಣ್ಣು, ಕಿತ್ತಲೆಹಣ್ಣು, ಸಕ್ಕರೆ, ಬೆಲ್ಲ, ತುಪ್ಪ, ಎಂಟು ವಿಧವಾದ ತೊವ್ವೆ, ಗೆಡ್ಡೆ, ಗೆಣಸುಗಳು, ಸಾಧಾರಣವಾಗಿ ಸಿಕ್ಕುವ ಪದಾರ್ಥಗಳು. ಇವೇ ಮೊದಲಾದುವುಗಳಿಂದ ಮಾಡಿದ ಪದಾರ್ಥಗಳನ್ನು, ಹೂವನ್ನು ಹಿಡಿದುಕೊಂಡು ಆ ಗೌತಮನು ನಿವೇದನಮಾಡಿದನು.

೬೩. ಚಿನ್ನದ ಪಾತ್ರೆಯಲ್ಲಿ ಇವೆಲ್ಲವನ್ನೂ ಇಟ್ಟು ದೇವರಿಗೆ ನಿವೇದನ ಮಾಡಿದನು. ಅನಂತರ ಮಂಗಳಾರತಿಗಳನೇಕವನ್ನು ದೇವರಿಗೆ ಬೆಳಗಿ ಉಪಹಾರವನ್ನೂ ಕೊಟ್ಟು ನಮಸ್ಕರಿಸಿದನು.

೬೪—೬೬. ಅರೆದು ಪುಡಿಮಾಡಿರುವ ಅಡಕೆಯನ್ನು, ತೊಳದಿರುವ ವಿಳ್ಳೆಯದೆಲೆಯ ತೊಟ್ಟು ಬುಡಗಳನ್ನೂ ನಾರನ್ನೂ ತೆಗೆದು ಅದನ್ನೂ, ಪಚ್ಚಕರ್ಪೂರದ ಚೂರ್ಣವನ್ನೂ, ಮೂರು ವೀಳೆಯದೆಲೆಯನ್ನೂ, ಇಟ್ಟು ಅದನ್ನು ಚಿನ್ನದ ಪಾತ್ರೆಯಲ್ಲಿಟ್ಟು ಈ ತಾಂಬೂಲವನ್ನು ಈಶ್ವರನಿಗೆ ಸಮರ್ಪಿಸಿದನು. ನಿವೇದನಮಾಡಿದ ಮೇಲೆ ಪ್ರದಕ್ಷಿಣೆ ನಮಸ್ಕಾರಗಳನ್ನೂ ಮಾಡಿದನು.

ಅಷ್ಟ ಯೋಷಾಸ್ತತಃ ಪ್ರಾಪ್ತಾಸ್ತಂತ್ರೀವೇಣ್ವಾದಿಧಾರಿತಾಃ ॥
ವಿಚಿತ್ರವಾದ್ಯವಾದಿನ್ಯಃ ಸಂಪ್ರಾಪ್ತಾ ಮುನಿಸಂನಿಧಿಂ ॥ ೬೭ ॥

ಕ್ಷುದ್ರತಾಳಯುಗಂ ಗೃಹ್ಯ ಸ್ವಯಂ ಗಾತುಂ ಪ್ರಚಕ್ರಮೇ ।
ಗೌತಮೇ ಗಾತುಮುದ್ಯುಕ್ತೇ ತಾನಂ ಕುರ್ಯುರಥಾಂಗನಾಃ ॥ ೬೮ ॥

ಮಂದಂ ಮಂದಂ ಚ ವಾದ್ಯಾನಿ ವಾದಯಂತಿ ತಥಾ ಪರಾಃ ।
ಮಧುರಂ ಗಾಯತಿ ಮುನೌ ಸ್ವರಾ ಮೂರ್ತಿಭೃತಸ್ತಥಾ ॥ ೬೯ ॥

ಪ್ರನೃತ್ಯಂತಂ ಮಹೇಶಾಗ್ರೇ ತದದ್ಭುತಮಿವಾಭವತ್ ।
ಏತಸ್ಮಿನ್ನಂತರೇ ಪ್ರಾಪ್ತೋ ಭಗವಾನ್ನಾರದೋ ಮುನಿಃ ॥ ೭೦ ॥

ತಮಾಗತಂ ಗೌತಮೋಽಪಿ ಸಂಪೂಜ್ಯ ಪ್ರಣಿಪತ್ಯ ಚ ।
ಆಹ ಚೈನಂ ಕೃತಾರ್ಥೋಽಸ್ಮಿ ನ ಚ ಕಶ್ಚಿನ್ಮಯಾ ಸಮಃ ।
ತವಾಗಮನಕೃತ್ಯಂ ಕಿಂ ಕುತಆಗಮನಂ ತಥಾ । ॥ ೭೧ ॥

---

೬೭. ಅನಂತರ ಎಂಟುಜನ ಹೆಂಗಸರು ತಂಬೂರಿ, ಕೊಳಲು, ವೀಣೆ, ಮುಂತಾದ ವಿಚಿತ್ರ ವಾದ್ಯಗಳನ್ನು ಹಿಡಿದುಕೊಂಡು ಆ ಋಷಿಯಿರುವ ಜಾಗಕ್ಕೆ ಬಂದರು.

೬೮. ಸಣ್ಣದಾಗಿರುವ ಎರಡು ತಾಳಗಳನ್ನು ಗೌತಮನು ಹಿಡಿದುಕೊಂಡು ಗಾನಮಾಡಲು, ಆ ಹೆಂಗಸರು ಶ್ರುತಿಯನ್ನು ಸರಿಮಾಡಿಕೊಂಡರು.

೬೯. ಅವರು ನಿಧಾನವಾಗಿ ವಾದ್ಯಗಳನ್ನು ವಾದಿಸಲು ಮೊದಲಿಟ್ಟರು. ಆಗ ಆ ಗೌತಮನು ಮಧುರವಾಗಿ ಹಾಡುತ್ತಿದ್ದರೆ ಸಪ್ತಸ್ವರಗಳೂ, ಮೂರ್ತೀಭವಿಸಿ ಬಂದಂತಿದ್ದುವು.

೭೦. ಆ ಋಷಿಯು ಗಾನಮಾಡುತ್ತ ಈಶ್ವರನ ಎದುರಿಗೆ ಕುಣಿಯಲು ಮೊದಲು ಮಾಡಿದನು. ಅದು ಅದ್ಭುತವಾಗಿದ್ದಿತು.

೭೧. ಇಷ್ಟರೊಳಗೆ ನಾರದಋಷಿಯು ಬಂದನು. ಅವನು ಬಂದುದನ್ನು ನೋಡಿ ಗೌತಮನು ಅರ್ಘ್ಯಾದಿಗಳನ್ನು ಕೊಟ್ಟು ನಮಸ್ಕರಿಸಿ, ನಾನು ಕೃತಾರ್ಥನಾದೆನು. ನನಗೆ ಸಮವಾದವರು ಯಾರೂ ಇಲ್ಲ. ತಾವು ಬಂದ ಕೆಲಸವೇನು? ಎಲ್ಲಿಂದ ಬಂದಿರಿ? ಎಂದನು.

॥ ನಾರದ ಉವಾಚ ॥

ಪಾತಾಲಾದಾಗತೋऽಸ್ಮೀಹ ಭುಕ್ತ್ವಾ ವೈ ಬಾಣಮಂದಿರೇ ।
ಆಯಾಸ್ಯಂತಿ ಮಹಾತ್ಮನೋ ಬಾಣಶುಕ್ರಾದಯೋ ಗೃಹಂ ॥ ೭೨ ॥

ಅಥ ಕ್ಷಣಾದಭ್ಯಗಮದ್ಬಾಣಃ ಪರಪುರಂಜಯಃ ।
ವಿಂಶತ್ಯಕ್ಷೌಹಿಣೀಯುಕ್ತೋ ಗಜಮಾರುಹ್ಯ ಸೋऽಸುರಃ ॥ ೭೩ ॥

ಅಪರಂ ಹಿ ಗಜಂ ಶುಕ್ರಃ ಪ್ರಹ್ಲಾದೋ ರಥಮುತ್ತಮಂ ।
ವೃಷಪರ್ವಾ ರಥವರಂ ಬಲಿಸ್ತುರಗಮುತ್ತಮಂ ॥ ೭೪ ॥

ಆಗತಾನಥ ತಾನ್ಸರ್ವಾನಾಜ್ಞಾಯ ಸ ತು ಗೌತಮಃ ।
ಸಶಿಷ್ಯೋ ನಿರ್ಜಗಾಮಥ ಹ್ಯಾದಾಯಾರ್ಘ್ಯಾದಿಕಂ ತಥಾ ॥ ೭೫ ॥

ಗೌತಮಂ ಚಾಪಿ ತೇ ವೀಕ್ಷ್ಯ ಹ್ಯವರುಹ್ಯ ಗಜಾದಿಕಾತ್ ।
ನಮಶ್ಚಕ್ರುರಥೋ ದೈತ್ಯಾಸ್ತಂ ನಮಸ್ಕೃತ್ಯ ಭಾರ್ಗವಂ ॥ ೭೬ ॥

---

೭೨. ನಾರದನು ಹೇಳಿದನು:—ಪಾತಾಳಲೋಕದಿಂದ ಬಂದೆನು. ಬಾಣನ ಮನೆಯಲ್ಲಿ ಊಟಮಾಡಿ ಇಲ್ಲಿಗೆ ಬಂದೆನು. ಮಹಾತ್ಮರಾದ ಬಾಣ, ಶುಕ್ರ ಮುಂತಾದವರು ಈಗ ನಿನ್ನ ಮನೆಗೆ ಬರುತ್ತಾರೆ.

೭೩-೭೪. ಅನಂತರ ಬಾಣನು ಇಪ್ಪತ್ತು ಅಕ್ಷೌಹಿಣೀ ಸೈನ್ಯದೊಡನೆ ಆನೆಯ ಮೇಲೆ ಕುಳಿತು ಬಂದನು. ಶುಕ್ರನು ಒಂದು ಆನೆಯ ಮೇಲೂ, ಪ್ರಹ್ಲಾದನು ರಥದ ಮೇಲೂ, ವೃಷಪರ್ವನು ರಥವನ್ನೂ ಹತ್ತಿಯೂ, ಬಲಿಯು ಕುದುರೆಯನ್ನು ಹತ್ತಿಕೊಂಡೂ ಬಂದರು.

೭೫. ಗೌತಮನು ಅವರು ಬಂದುದನ್ನು ತಿಳಿದು, ಶಿಷ್ಯರೊಡನೆ ಅರ್ಘ್ಯ ಪಾದ್ಯಾದಿಗಳನ್ನು ತೆಗೆದುಕೊಂಡು ಹೊರಟನು.

೭೬-೭೭. ಆ ಬಾಣಾದಿಗಳೂ ಗೌತಮನನ್ನು ನೋಡಿದೊಡನೆಯೇ ತಮ್ಮ ತಮ್ಮ ವಾಹನಗಳಿಂದಿಳಿದು ಆ ಗೌತಮನಿಗೆ ನಮಸ್ಕರಿಸಿದರು. ಗೌತಮನು ಆ ಶುಕ್ರ

ಆಲಿಂಗ್ಯ ರಾಕ್ಷಸಾನ್ಸರ್ವಾನ್ಪೂಜಯಿತ್ವಾ ಯಥಾವಿಧಿ ।
ಸೇನಾಯಾಸ್ಸಂನಿವೇಶಂ ಚ ಚಕಾರ ಮುನಿಪುಂಗವಃ　　　　॥ ೭೭ ॥

ಪಾದೌ ಪ್ರಕ್ಷಾಳ್ಯ ಶುಕ್ರಸ್ಯ ತೋಯಂ ಮೂರ್ಧ್ನಿ ಧೃತಂ ಯಥಾ ।
ವಿಚಿತ್ರಫಲಸಂಯುಕ್ತಂ ದತ್ತವಾನರ್ಹಣಂ ಮುನಿಃ　　　　॥ ೭೮ ॥

ವಾಪೀತಟಾಕಸರಸಿ ಸ್ನಾನಪೂರ್ವಕೃತಕ್ರಿಯಾಃ ।
ಸಂಗಮೇ ವರ್ತಮಾನೇ ತು ಗೌತಮಸ್ಯಾಶ್ರಮೇ ಶುಭೇ　　　　॥ ೭೯ ॥

ತದ್ಗೇಹಂ ತು ಪ್ರವಿಶ್ಯಾಥ ರಾಕ್ಷಸಾಃ ಸಪುರೋಹಿತಾಃ ।
ದೇವಪೂಜಾಪ್ರಯತ್ನಂ ಚ ಚಕ್ರುಸ್ಸರ್ವೇ ದ್ವಿಜಾಲಯೇ　　　　॥ ೮೦ ॥

ಸದ್ಯಃ ಪ್ರಕಲ್ಪಿತಾಯಾಂ ಚ ವೇದ್ಯಾಂ ಶುಕ್ರೋಽಯಜಚ್ಛಿವಂ ।
ತಸ್ಯೈವ ವಾಮಭಾಗೇ ತು ಪ್ರಹ್ಲಾದೋಽಯಜದಚ್ಯುತಂ　　　　॥ ೮೧ ॥

ಸೋಮಂ ಚ ಬಲಿರಪ್ಯೇವಮನ್ಯೇ ಚಾಸುರಪುಂಗವಾಃ ।
ಅಥ ಬಾಣೋಽಯಜದ್ದೇವಮೇಕಮೇವ ತ್ರಿಯಂಬಕಂ　　　　॥ ೮೨ ॥

---

ನಿಗೆ ನಮಸ್ಕರಿಸಿ ಉಳಿದ ಬಾಣಾದಿಗಳನ್ನು ಯಥಾಯೋಗ್ಯವಾಗಿ ಆಲಿಂಗನಾದಿಗಳಿಂದ ಗೌರವಿಸಿ ಅವರಿಗೂ ಅವರ ಸೇನೆಗೂ ಸ್ಥಳವನ್ನು ಕಲ್ಪಿಸಿದನು.

೭೮. ಆ ಶುಕ್ರನ ಪಾದಗಳನ್ನು ತೊಳೆದು ಆ ನೀರನ್ನು ತಲೆಯ ಮೇಲೆ ಹಾಕಿಕೊಂಡು ನಾನಾಬಗೆಯಾದ ಫಲಗಳನ್ನು ಸಮರ್ಪಿಸಿದನು.

೭೯-೮೦. ಸಂಗಮಪ್ರದೇಶದಲ್ಲಿರುವ ಆ ಗೌತಮನ ಆಶ್ರಮದಲ್ಲಿರುವ ಬಾವಿ, ಕೆರೆ, ಕೊಳ, ನದಿಗಳಲ್ಲಿ ಆ ರಾಕ್ಷಸರೆಲ್ಲರೂ ಸ್ನಾನಮಾಡಿ ಆ ಗೌತಮನ ಮನೆಗೆ ಹೋಗಿ ಶಿವಪೂಜೆಗೆ ಪ್ರಯತ್ನಮಾಡಿದರು.

೮೧. ಆಗತಾನೆ ಮಾಡಿಕೊಂಡ ವೇದಿಕೆಯ ಮೇಲೆ ಶುಕ್ರನು ಶಿವಪೂಜೆಯನ್ನು ಮಾಡಿದನು. ಅದರ ಬಲಭಾಗದಲ್ಲಿ ಪ್ರಹ್ಲಾದನು ವಿಷ್ಣುವನ್ನು ಪೂಜಿಸಿದನು. ಬಲಿಯೇ ಮುಂತಾದ ರಾಕ್ಷಸರು ಶಿವನನ್ನು ಯಥಾಯೋಗ್ಯವಾಗಿ ಪೂಜಿಸಿದರು.

೮೨-೮೩. ಬಾಣನೂ, ಶುಕ್ರನೂ, ಆ ಸ್ವಾಮಿಯಾದ ಉಮಾನಾಥನನ್ನು

ಶುಕ್ರೋಽಭಗವಂಪಿಂ ತ ತಮುಮಾನಾಥಮುಪೂಜಯುತ್ ।
ಗೌತಮೋಽಪ್ಯಥ ಮಧ್ಯಾಹ್ನೇ ಪೂಜಯಾಮಾಸ ಶಂಕರಂ ॥ ೮೩ ॥

ಸರ್ವೇ ಶುಕ್ಲಾಂಬರಧರಾ ಭಸ್ಮೋದ್ಧೂಳಿತವಿಗ್ರಹಾಃ ।
ಸಿತೇನ ಭಸ್ಮನಾ ಕೃತ್ವಾ ಸರ್ವಸ್ಥಾನೇ ತ್ರಿಪುಂಡ್ರಕಂ ॥ ೮೪ ॥

ನತ್ವಾ ತು ಭಾರ್ಗವಂ ಸರ್ವೇ ಭೂತಶುದ್ಧಿಂ ಪ್ರಚಕ್ರಮುಃ ।
ಹೃತ್ಪದ್ಮಮಧ್ಯೇ ಸುಷಿರಂ ತತ್ರೈವ ಭೂತಪಂಚಕಂ ॥ ೮೫ ॥

ತೇಷಾಂ ಮಧ್ಯೇ ಮಹಾಕಾಶಮಾಕಾಶೇ ನಿರ್ಮಲಾಸನಂ ।
ತನ್ಮಧ್ಯೇ ಚ ಮಹೇಶಾನಂ ಧ್ಯಾಯೇದ್ದೀಪ್ತಿಮಯಂ ಶುಭಂ ॥ ೮೬ ॥

ಅಜ್ಞಾನಸಂಯುತಂ ಭೂತಂ ಶಮಲಂ ಸರ್ವಸಂಗತಂ ।
ತದ್ದೇಹಮಾಕಾಶದೀಪೇ ಪ್ರದಹೇಜ್ಞಾನವಹ್ನಿನಾ ॥ ೮೭ ॥

---

ಪೂಜಿಸಿದರು. ಗೌತಮನೂ ಕೂಡ ಮಧ್ಯಾಹ್ನಕಾಲದ ಶಿವಪೂಜೆಯನ್ನು ಮಾಡಿದನು.

೮೪. ಎಲ್ಲರೂ ಸ್ನಾನಮಾಡಿ ಬಿಳಿಯ ಬಟ್ಟೆಯನ್ನುಟ್ಟು, ಮೈಗೆಲ್ಲವೂ ತ್ರಿಪುಂಡ್ರವಾಗಿ ವಿಭೂತಿಯನ್ನು ಹಚ್ಚಿಕೊಂಡು, ಗುರುವಾದ ಶುಕ್ರನಿಗೆ ನಮಸ್ಕರಿಸಿ ಮೊದಲು ಭೂತಶುದ್ಧಿಯನ್ನು ಮಾಡಿಕೊಂಡರು.

೮೫-೮೬. ಮೊದಲು ಹೃದಯಪದ್ಮದ ಗುಹೆಯಲ್ಲಿ ಪಂಚಭೂತಗಳನ್ನು ಕಲ್ಪಿಸಿಕೊಂಡು ಅದರ ಮಧ್ಯದಲ್ಲಿ ಮಹಾಕಾಶದಲ್ಲಿ ಒಂದು ನಿರ್ಮಲಾಸನವನ್ನು ಕಲ್ಪಿಸಿಕೊಂಡು, ಅದರ ಮಧ್ಯದಲ್ಲಿ ತ್ರಿಯಂಬಕನಾದ ಶಿವನನ್ನು ಧ್ಯಾನಿಸಬೇಕು.

೮೭. ಅಜ್ಞಾನದಿಂದಲೂ, ಕಶ್ಮಲದಿಂದಲೂ ಕೂಡಿ, ಎಲ್ಲಾ ಕಡೆಯನ್ನೂ ಆವರಿಸಿಕೊಂಡಿರುವ ಆ ದೇಹಗಳನ್ನು ಜ್ಞಾನವಹ್ನಿಯಿಂದ ಸುಡಬೇಕು ಎಂದರೆ ಜ್ಞಾನವೆಂಬ ಜ್ಯೋತಿಸ್ಸು ಎಲ್ಲರಲ್ಲೂ ಪ್ರಕಾಶಿಸುವಂತೆ ಮಾಡಿಕೊಳ್ಳಬೇಕು.

ಆಕಾಶಸ್ಯಾವೃತಿಂ ಚಾಹಂ ದಗ್ಧ್ವಾಕಾಶಮಥೋ ದಹೇತ್ ।
ದಗ್ಧ್ವಾಕಾಶಮಥೋ ವಾಯುಮಗ್ನಿಭೂತಂ ತಥಾ ದಹೇತ್ ॥ ೮೮ ॥

ಅಬ್ಭೂತಂ ಚ ತತೋ ದಗ್ಧ್ವಾ ಪೃಥಿವೀಭೂತಮೇವ ಚ ।
ತದಾಶ್ರಿತಾನ್ಗುಣಾನ್ದಗ್ಧ್ವಾ ತತೋ ದೇಹಂ ಪ್ರದಾಹಯೇತ್ ॥ ೮೯ ॥

ಏವಂ ದಹಿತ್ವಾ ಭೂತಾದಿಂ ದೇಹೇ ಜ್ಞಾನವಹ್ನಿನಾ ।
ಶಿಖಾಮಧ್ಯಸ್ಥಿತಂ ವಿಷ್ಣುಮಾನಂದರಸನಿರ್ಭರಂ ॥ ೯೦ ॥

ನಿಷ್ಪನ್ನಚಂದ್ರಕಿರಣಸಂಕಾಶಕಿರಣಂ ಶಿವಂ ।
ಶಿವಾಂಗೋತ್ಪನ್ನಕಿರಣೈರಮೃತದ್ರವಸಂಯುತೈಃ ॥ ೯೧ ॥

ಸುಶೀತಲಾ ತತೋ ಜ್ವಾಲಾ ಪ್ರಶಾಂತಾ ಚಂದ್ರರಶ್ಮಿವತ್ ।
ಪ್ರಸಾರಿತಸುಧಾ ರುಗ್ಭಿಃ ಸಾಂದ್ರೀಭೂತಶ್ಚ ಸಂಪ್ಲವಃ ॥ ೯೨ ॥

---

೮೮. ಮೊದಲು ಸುತ್ತಲೂ ಸುತ್ತುಗಟ್ಟಿರುವ ಆಕಾಶಭೂತದ ಪೊರೆಯನ್ನು ಸುಟ್ಟು, ಅನಂತರ ಆಕಾಶಭೂತವನ್ನು ಸುಡಬೇಕು. ಅನಂತರ ವಾಯು, ಆಮೇಲ ಅಗ್ನಿಭೂತಗಳನ್ನು ಸುಡಬೇಕು.

೮೯. ಅನಂತರ ಅಬ್ಭೂತವನ್ನು, ಆಮೇಲೆ ಪೃಥ್ವೀಭೂತವನ್ನು ಸುಟ್ಟು ಅನಂತರ ಪೃಥಿವಿಯನ್ನು ಆಶ್ರಯಿಸಿರುವ ಗುಣಗಳನ್ನೆಲ್ಲಾ ಸುಟ್ಟು, ಕೊನೆಗೆ ಕಲ್ಪಿತ ನಾದ ಆ ದೇವನನ್ನೂ ಸುಡಬೇಕು.

೯೦—೯೨. ಜ್ಞಾನವೆಂಬ ಬೆಂಕಿಯಿಂದ ಈ ರೀತಿಯಾಗಿ ಭೂತಗಳನ್ನೂ, ಅವುಗಳ ಗುಣಗಳನ್ನೂ ಸುಟ್ಟು, ಆಮೇಲೆ ಆ ಬೆಂಕಿಯ ಜ್ವಾಲೆಯ ಮಧ್ಯದಲ್ಲಿ ಆನಂದರೂಪನಾದ ಆನಂದರಸದಿಂದ ತುಂಬಿದ ವಿಷ್ಣುವೂ, ಚಂದ್ರನ ಕಿರಣಗಳಂತೆ ಕಿರಣಗಳುಳ್ಳ ಶಿವನೂ, ಇರುವುದನ್ನು ನೋಡಬೇಕು. ಆಗ ಆ ಶಿವನ ಕಿರಣಗಳು ಅಮೃತದ ದ್ರವದಿಂದ ಕೂಡಿರುವುದನ್ನು ತಿಳಿಯಬಹುದು. ಆ ದ್ರವದಿಂದ ಆ ಬೆಂಕಿಯನ್ನು ಆರಿಸಬೇಕು. ಆ ಜ್ವಾಲೆಯು ಆರಿದ ಮೇಲೆ ಚಂದ್ರರಶ್ಮಿಯಿಂದ ಆ ಶಿವನ ರಶ್ಮಿಯೊಂದಿಗೆ ಹರಡಿಕೊಂಡಿರುವುದು. ಅನಂತರ ಆ ಅಮೃತ ದ್ರವದಿಂದ ನೆನೆದ ಭೂತಗಳನ್ನು ಮತ್ತೆ ಧ್ಯಾನಿಸಬೇಕು.

ಕ್ರಮೇಣ ಪ್ಲಾವಿತಂ ಭೂತಗ್ರಾಮಂ ಸಂಚಿಂತಯೇತ್ಪರಂ ।
ಇತ್ಥಂ ಕೃತ್ವಾ ಭೂತಶುದ್ಧಿಂ ಕ್ರಿಯಾರ್ಹೋ
ಮರ್ತ್ಯಶ್ಶುದ್ಧೋ ಜಾಯತೇ ಏವ ಶುದ್ಧಃ ।
ಪೂಜಾಂ ಕರ್ತುಂ ಜಾಪ್ಯಕರ್ಮಾಪಿ ಪಶ್ಚಾ-
ದ್ದೇವೇ ಧ್ಯಾನಂ ಬ್ರಹ್ಮಹತ್ಯಾದಿಹಾನಿಃ ॥ ೯೩ ॥

ಏವಂ ಧ್ಯಾತ್ವಾ ಚಂದ್ರದೀಪ್ತಿಪ್ರಕಾಶಂ
ಧ್ಯಾನೇನಾರೋಪ್ಯಾಶು ಲಿಂಗೇ ಶಿವಸ್ಯ ।
ಸದಾಶಿವಂ ದೀಪಮಧ್ಯೇ ವಿಚಿಂತ್ಯ
ಪಂಚಾಕ್ಷರೇಣಾರ್ಚನಮವ್ಯಯಂ ತು ॥ ೯೪ ॥

ಆವಾಹನಾದೀನುಪಚಾರಾಂಸ್ತಥಾಪಿ
ಕೃತ್ವಾ ಸ್ನಾನಂ ಪೂರ್ವವಚ್ಛಂಕರಸ್ಯ ।
ಉದುಂಬರಂ ರಾಜತಂ ಸ್ವರ್ಣಪೀಠಂ
ವಸ್ತ್ರಾದಿಚ್ಛನ್ನಂ ಸರ್ವಮೇವೇಹ ಪೀಠಮ್ ॥ ೯೫ ॥

ಅಂತೇ ಕೃತ್ವಾ ಬುದ್ಬುದಾನಾಂ ಚ ವೃಷ್ಟಿಂ
ಪೀಠೇ ಪಿಠೇ ನಾಗಮೇಕಂ ಪುರಸ್ತಾತ್ ।

---

೯೩. ಈರೀತಿ ಭೂತಶುದ್ಧಿಯನ್ನು ಮಾಡಿಕೊಂಡನಂತರ ಮನುಷ್ಯನು ಪೂಜೆಯ ಕೆಲಸಕ್ಕೆ ಶುದ್ಧನಾಗುತ್ತಾನೆ. ಪೂಜೆ ಮಾಡುವುದಕ್ಕೂ, ಜಪ ಮಾಡುವುದಕ್ಕೂ ಯೋಗ್ಯನಾಗುವುದಲ್ಲದೆ ಬ್ರಹ್ಮಹತ್ಯೆಯನ್ನೂ ನಾಶಮಾಡಿಕೊಳ್ಳುತ್ತಾನೆ.

೯೪. ಈರೀತಿ ಚಂದ್ರನ ಕಿರಣದಂತೆ ಇರುವ ಕಿರಣವನ್ನು ಧ್ಯಾನಿಸಿ ಅದನ್ನು ಶಿವಲಿಂಗದಲ್ಲಿ ಆರೋಪಿಸಬೇಕು. ಆ ಕಿರಣವುಳ್ಳ ಸದಾಶಿವನನ್ನು ಆ ಜ್ವಾಲೆಯ ಮಧ್ಯದಲ್ಲಿ ಧ್ಯಾನಿಸಿ ಅವನನ್ನು ಪಂಚಾಕ್ಷರದಿಂದ ಪೂಜಿಸಬೇಕು (ಧ್ಯಾನಿಸಬೇಕು).

೯೫. ಆವಾಹನಾದಿ ಉಪಚಾರಗಳನ್ನು ಮಾಡಿ, ಸ್ನಾನಾದಿಗಳನ್ನು ಮಾಡಿಸಿ ಅತ್ತಿ, ಬೆಳ್ಳಿ, ಚಿನ್ನ, ಇವುಗಳ ಪೀಠವನ್ನು ಒಂದರ ಮೇಲೆ ಒಂದಿಟ್ಟು, ಅದಕ್ಕೆ ವಸ್ತ್ರಾದಿಗಳಿಂದ ಹೊದ್ದಿಸಿರುವಂತೆ ಧ್ಯಾನಿಸಬೇಕು.

೯೬. ಆ ಬಟ್ಟೆಗಳ ಅಂಚಿನಲ್ಲಿ ಗಂಟುಗಳನ್ನು ಕಟ್ಟಿ ಕರೆ ಕಟ್ಟಿರಬೇಕು.

ಕುರ್ಯಾತ್ಪೀಠೇ ಚೋರ್ಧ್ವಗೇ ನಾಗಯುಗ್ಮಂ
ದೇವಾಭ್ಯಾಶೇ ದಕ್ಷಿಣೇ ವಾಮತಶ್ಚ ॥ ೯೬ ॥

ಜಪಾಪುಷ್ಪಂ ನಾಗಮಧ್ಯೇ ನಿಧಾಯ
ಮಧ್ಯೇ ವಸ್ತ್ರಂ ದ್ವಾದಶಪ್ರಾತಿಗುಣ್ಯೇ ।
ಸುಶ್ವೇತೇನ ತಸ್ಯ ಮಧ್ಯೇ ಮಹೇಶಂ
ಲಿಂಗಾಕಾರಂ ಪೀಠಯುಕ್ತಂ ಪ್ರಪೂಜ್ಯಂ ॥ ೯೭ ॥

ಏವಂ ಕೃತ್ವಾ ಬಾಣಮುಖ್ಯಾ ದಿತೀಶಾ
ದತ್ವಾ ದತ್ವಾ ಪಂಚಗಂಧಾಷ್ಟಗಂಧಂ ।
ಪುಷ್ಪೈಃ ಪತ್ರೈಃ ಶ್ರೀತಿಲೈರಕ್ಷತೈಶ್ಚ
ತಿಲೋನ್ಮಿಶ್ರೈಃ ಕೇವಲೈಶ್ಚ ಪ್ರಪೂಜ್ಯ ॥ ೯೮ ॥

ಧೂಪಂ ದತ್ವಾ ವಿಧಿವತ್ಸಂಪ್ರಯುಕ್ತಂ
ದೀಪಂ ದತ್ವಾ ಚೋಕ್ತಮೇವೋಪಹಾರಂ ।
ಪೂಜಾಶೇಷಂ ತೇ ಸಮಾಪ್ಯಾಥ ಸರ್ವೇ
ಗೀತಂ ನೃತ್ಯಂ ತತ್ರ ತತ್ರಾಪಿ ಚಕ್ರುಃ

---

ಒಂದೊಂದು ಪೀಠದಲ್ಲಿ ಮುಂದೆಯೂ ಒಂದೊಂದು ಸರ್ಪವನ್ನಿಟ್ಟಿರಬೇಕು. ಮೇಲಿನ ಸ್ವರ್ಣಪೀಠದಲ್ಲಿ ದೇವನ ಎಡಬಲಕ್ಕೆ ಒಂದೊಂದು ಸರ್ಪದಂತೆ ಎರಡನ್ನಿಡಬೇಕು.

೯೭. ಆ ಸರ್ಪಗಳ ಮಧ್ಯದಲ್ಲಿ ದಾಸವಾಳದ ಹೂವನ್ನಿಡಬೇಕು. ಅವರ ಮಧ್ಯೇ ಹನ್ನೆರಡು ಮಡಿಕೆ ಮಡಿಸಿದ ಬಿಳಿಯ ಬಟ್ಟೆಯನ್ನಿಡಬೇಕು. ಅವರ ಮಧ್ಯದಲ್ಲಿ ಪಾಣಿಬಟ್ಟಲಿನಿಂದ ಕೂಡಿದ ಲಿಂಗಾಕಾರನಾದ ಶಿವನನ್ನು ಧ್ಯಾನಿಸಬೇಕು. ಪೂಜಿಸಬೇಕು.

೯೮. ಬಾಣನೇ ಮುಂತಾದ ರಾಕ್ಷಸರು ಹೀಗೆ ಮಾಡಿ, ಪಂಚಗಂಧ, ಅಷ್ಟ ಗಂಧಗಳನ್ನು ಮಾಡಿ ಪೂಜಿಸಿ ಹೂ, ಪತ್ರೆ, ಅಕ್ಷತೆ, ತಿಲಾಕ್ಷತೆಗಳಿಂದ ಬೇರೆಬೇರೆಯಾಗಿ ಪೂಜಿಸಿದರು.

೯೯. ಧೂಪದೀಪಗಳನ್ನು ಸಮರ್ಪಿಸಿ, ಹಿಂದೆ ಹೇಳಿದಂತೆ ನಿವೇದನವನ್ನು

ಅಥಾಸ್ಮಿನ್ನಂತರೇ ಗೌತಮಸ್ಯ
ಪ್ರಾಪ್ತಃ ಶಿಷ್ಯಃ ಶಂಕರಾತ್ಮೇತಿ ನಾಮ್ನಾ ॥ ೯೯ ॥

ಉನ್ಮತ್ತವೇಷೋ ದಿಗ್ವಾಸಾ ಅನೇಕಾಂ ವೃತ್ತಿಮಾಶ್ರಿತಃ ।
ಕ್ವಚಿದ್ದ್ವಿಜಾತಿಪ್ರವರಃ ಕ್ವ ಚಿಚ್ಚಂಡಾಲಸಂನಿಭಃ ॥ ೧೦೦ ॥

ಕ್ವಚಿಚ್ಛೂದ್ರಸಮೋ ಯೋಗೀ ತಾಪಸಃ ಕ್ವ ಚಿದಪ್ಯುತ ।
ಗರ್ಜತ್ಯುತ್ಪತತೇ ಚೈವ ನೃತ್ಯತಿ ಸ್ತೌತಿ ಗಾಯತಿ ॥ ೧೦೧ ॥

ರೋದಿತಿ ಶೃಣುತೇ ವ್ಯಕ್ತಂ ಪತತ್ಯುತ್ತಿಷ್ಠತಿ ಕ್ವಚಿತ್ ।
ಶಿವಜ್ಞಾನೈಕಸಂಪನ್ನಃ ಪರಮಾನಂದನಿರ್ಭರಃ ॥ ೧೦೨ ॥

ಸಂಪ್ರಾಪ್ತೋ ಭೋಜ್ಯವೇಳಾಯಾಂ ಗೌತಮಸ್ಯಾಂತಿಕಂ ಯಯೌ ।
ಬುಭುಜೇ ಗುರುಣಾ ಸಾಕಂ ಕ್ವಚಿದುಚ್ಛಿಷ್ಟಮೇವ ಚ ॥ ೧೦೩ ॥

---

ಮಾಡಿ, ಉತ್ತರ ಪೂಜೆಯನ್ನು ಮಾಡಿ, ಆ ಶಿವನ ಎದುರಿಗೆ ನೃತ್ಯಗೀತಗಳನ್ನು ಮಾಡಿದರು. ಇಷ್ಟರೊಳಗೆ ಶಂಕರನೆಂಬ ಗೌತಮನ ಶಿಷ್ಯನೊಬ್ಬನು ಬಂದನು.

೧೦೦—೧೦೨. ಆ ಶಿಷ್ಯನಾದ ಶಂಕರಾತ್ಮನು ಹುಚ್ಚನಂತೆ ಬೆತ್ತಲೆ ಇರುತ್ತಾ ಬಗೆಬಗೆಯಾದ ವೇಷಗಳನ್ನು ಧರಿಸಿ, ಒಂದೆಡೆ ಬ್ರಾಹ್ಮಣ ಶ್ರೇಷ್ಠನಂತೆಯೂ, ಮತ್ತೊಂದೆಡೆ ಚಂಡಾಲನಂತೆಯೂ, ಒಂದೆಡೆ ಶೂದ್ರನಂತೆಯೂ, ಒಂದೆಡೆ ಯೋಗಿಯಂತೆಯೂ, ಒಂದೆಡೆ ತಾಪಸನಂತೆಯೂ, ಇರುತ್ತಿದ್ದು ಕೂಗುವನು, ನೆಗೆಯುವನು, ಕುಣಿಯುವನು, ಸ್ತೋತ್ರಮಾಡುವನು, ಹಾಡುವನು, ಅಳುವನು, ಹೇಳುವುದನ್ನು ಕೇಳುವನು, ಏಳುವನು, ಈರೀತಿ ಮಾಡುತ್ತ ಶಿವಜ್ಞಾನದಿಂದ ತುಂಬಿದವನಾಗಿ, ಆನಂದದಿಂದ ಭರಿತನಾಗಿ ಊಟದ ವೇಳೆಗೆ ಸರಿಯಾಗಿ ಬಂದು ಗೌತಮನ ಬಳಿಗೆ ಹೋದನು.

೧೦೩-೧೦೪. ಆ ಶಿಷ್ಯನು ಗುರುವಿನೊಡನೆ ಊಟಮಾಡಿದನು. ಮತ್ತೊಂದು ಸ್ಥಳಕ್ಕೆ ಹೋಗಿ ಎಂಜಲನ್ನು ತಿಂದನು. ಒಂದೊಂದು ಜಾಗದಲ್ಲಿ ಎಂಜಲೆಲೆಯನ್ನು

ಕ್ವಚಿಲ್ಲೇಹತಿ ತತ್ಪಾತ್ರಂ ತೂಷ್ಣೀಮೇವಾಭ್ಯಗಾತ್ಕ್ವಚಿತ್ ।
ಹಸ್ತಂ ಗೃಹೀತ್ವೈವ ಗುರೋಃ ಸ್ವಯಮೇವಾಭುನಕ್ಕ್ವಚಿತ್ ॥ ೧೦೪ ॥

ಕ್ವಚಿದ್ಗೃಹಾಂತರೇ ಮೂತ್ರಂ ಕ್ವಚಿತ್ಕರ್ದಮಲೇಪನಂ ।
ಸರ್ವದಾ ತಂ ಗುರುರ್ದೃಷ್ಟ್ವಾ ಕರಮಾಲಂಬ್ಯ ಮಂದಿರಂ ॥ ೧೦೫ ॥

ಪ್ರವಿಶ್ಯ ಸ್ವೀಯಪೀಠೇ ತಮುಪವೇಶ್ಯಾಭ್ಯಭೋಜಯತ್ ।
ಸ್ವಯಂ ತದಸ್ಯ ಪಾತ್ರೇಣ ಬುಭುಜೇ ಗೌತಮೋ ಮುನಿಃ ॥ ೧೦೬ ॥

ತಸ್ಯ ಚಿತ್ತಂ ಪರಿಜ್ಞಾತುಂ ಕದಾಚಿದಥ ಸುಂದರೀ ।
ಅಹಲ್ಯಾ ಶಿಷ್ಯಮಾಹೂಯ ಭುಂಕ್ಷ್ವೇತ್ಯುಕ್ತ್ವಾಥ ಸಾ ಶುಭಾ ॥ ೧೦೭ ॥

ಸೌವರ್ಣೇ ಭಾಜನೇ ಚಾನ್ನಂ ನಿಧಾಯ ಚಷಕಾಂತರೇ ।
ಪಾನಾದಿಕಮಥೋ ದತ್ವಾ ಏಕಸ್ಮಿನ್ಯಾವಕಂ ಪುನಃ ॥ ೧೦೮ ॥

ನಿಧಾಯಾಂಗಾರನಿಚಯಂ ಕಂಟಕಾನಾಂ ಚಯಂ ಪರೇ ।
ನಿಧಾಯ ಭುಂಕ್ಷ್ವ ಭುಂಕ್ಷ್ವೇತಿ ಸ ಚಾಪಿ ಬುಭುಜೇ ಮುನಿಃ ॥ ೧೦೯ ॥

---

ನೆಕ್ಕುವನು. ಒಂದೊಂದು ಜಾಗದಲ್ಲಿ ಗುರುವಿನ ಕೈಹಿಡಿದುಕೊಂಡು ಸುಮ್ಮನೆ ಹೋಗುವನು. ಮತ್ತೊಂದು ಜಾಗದಲ್ಲಿ ತಾನಾಗಿಯೇ ಕುಳಿತು ಊಟಮಾಡಿದನು.

೧೦೫-೧೦೬. ಒಂದು ಜಾಗದಲ್ಲಿ ಮನೆಯೊಳಗೆ ಉಚ್ಚೆಯನ್ನು ಹುಯ್ಯುವನು. ಒಂದು ಜಾಗದಲ್ಲಿ ಕೆಸರನ್ನು ಬಳಿದುಕೊಂಡನು. ಎಲ್ಲಾ ವೇಳೆಯಲ್ಲಿಯೂ ಗುರುವು ಅವನನ್ನು ನೋಡುತ್ತ, ಕೈಯನ್ನು ಹಿಡಿದು ಮನೆಗೆ ಕರೆತಂದು ತನ್ನ ಜಾಗದಲ್ಲಿ ಕುಳ್ಳಿರಿಸಿ ಅವನಿಗೆ ಊಟಮಾಡಿಸಿದನು. ಗೌತಮನೂ ಕೂಡ ಆ ಶಿಷ್ಯನ ಪಾತ್ರೆಯಲ್ಲಿಯೇ ಊಟಮಾಡಿದನು.

೧೦೭. ಅವನ ಮನಸ್ಸನ್ನು ತಿಳಿಯಲು ಸುಂದರಿಯಾದ ಅಹಲ್ಯೆಯು ಶಿಷ್ಯನನ್ನು ಕರೆದು ಊಟಮಾಡೆಂದಳು.

೧೦೮-೧೦೯. ಚಿನ್ನದ ಪಾತ್ರೆಯಲ್ಲಿ ಅನ್ನವನ್ನೂ ಮತ್ತೊಂದು ಪಾತ್ರೆಯಲ್ಲಿ ಪಾನವನ್ನೂ ಬಡಿಸಿದಳು. ಅನಂತರ ಒಂದು ಪಾತ್ರೆಯಲ್ಲಿ ಬೆಂಕಿಯ ಕೆಂಡವನ್ನೂ ಇಟ್ಟು ಮತ್ತೊಂದು ಕೈಯಲ್ಲಿ ಮುಳ್ಳುಗಳ ಗಂಟನ್ನು ತಂದುಹಾಕಿ ಊಟಮಾಡು, ಊಟಮಾಡು, ಎನ್ನಲು ಆ ಶಿಷ್ಯನು ಅವನ್ನು ತಿಂದನು.

ಯಥಾ ಪಪೌ ಹಿ ಪಾನೀಯಂ ತಥಾ ವಹ್ನಿಮಪಿ ದ್ವಿಜಃ ।
ಕಂಟಕಾನ್ನಂ ತು ತದ್ಭುಕ್ತ್ವಾ ಯಥಾಪೂರ್ವಮತಿಷ್ಠತ ॥ ೧೧೦ ॥

ಪುರಾ ಹಿ ಮುನಿಕನ್ಯಾಭಿರಾಹೂತೋ ಭೋಜನಾಯ ಚ ।
ದಿನೇ ದಿನೇ ತತ್ಪ್ರದತ್ತಂ ಲೋಷ್ಟಮಂಬು ಚ ಗೋಮಯಂ ॥ ೧೧೧ ॥

ಕರ್ದಮಂ ಕಾಷ್ಠದಂಡಂ ಚ ಭುಕ್ತ್ವಾ ಪ್ರೀತ್ಯಾಥ ಹರ್ಷಿತಃ ।
ಏತಾದೃಶೋ ಮುನಿರಸೌ ಚಂಡಾಲಸದೃಶಾಕೃತಿಃ ॥ ೧೧೨ ॥

ಸುಜೀರ್ಣೋಪಾನಹೌ ಹಸ್ತೇ ಗೃಹೀತ್ವಾ ತು ತಥಾ ಕರೇ ।
ಅಂತ್ಯಜೋಚಿತಭಾಷಾಭಿರ್ವೃಷಪರ್ವಾಣಮಭ್ಯಗಾತ್ ॥ ೧೧೩ ॥

ವೃಷಪರ್ವೇಶಯೋರ್ಮಧ್ಯೇ ದಿಗ್ವಾಸಾಸ್ಸಮತಿಷ್ಠತ ।
ವೃಷಪರ್ವಾ ತಮಜ್ಞಾತ್ವಾ ಪೀಡಯಿತ್ವಾ ಶಿರೋಽಚ್ಛಿನತ್ ॥ ೧೧೪ ॥

ಹತೇ ತಸ್ಮಿನ್ದ್ವಿಜಶ್ರೇಷ್ಠೇ ಜಗದೇತಚ್ಚರಾಚರಂ ।
ಅತೀವ ಕಲುಷಮಭವತ್ತತ್ರಸ್ಥಾ ಮುನಯಸ್ತಥಾ ॥ ೧೧೫ ॥

---

೧೧೦. ನೀರನ್ನು ಕುಡಿದಂತೆಯೇ ಆ ಶಿಷ್ಯನು ಬೆಂಕಿಯನ್ನೂ ನುಂಗಿದನು. ಮುಳ್ಳಿನಿಂದ ಕೂಡಿದ ಅನ್ನವನ್ನೂ ಊಟಮಾಡಿ ಮೊದಲಿನಂತೆಯೇ ಸುಖವಾಗಿದ್ದನು.

೧೧೧. ಹಿಂದೆ ಮುನಿಗಳ ಹೆಣ್ಣುಮಕ್ಕಳು ಈತನನ್ನು ಊಟಕ್ಕೆ ಕರೆದು, ಪ್ರತಿದಿನವೂ ಮಣ್ಣುಹೆಂಟೆ, ನೀರು, ಸಗಣಿ, ಕೊಚ್ಚೆ, ಸೌದೆಗಳನ್ನು ಕೊಡಲು ಪ್ರೀತಿಯಿಂದ ತಿಂದು ಸಂತೋಷಿಸುತ್ತಿದ್ದನು.

೧೧೨-೧೧೩. ಈರೀತಿಯಾದ ಋಷಿಯು ಚಂಡಾಲನಿಗೆ ಸಮವಾದ ವೇಷವನ್ನು ಹೊಂದಿ, ಹಳೆಯ ಜೋಡುಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊಲೆಯನಿಗೆ ಯೋಗ್ಯವಾದ ಮಾತುಗಳನ್ನು ಆಡುತ್ತ ವೃಷಪರ್ವನ ಸಮೀಪಕ್ಕೆ ಹೋದನು.

೧೧೪. ವೃಷಪರ್ವ ಈಶ್ವರರ ಮಧ್ಯದಲ್ಲಿ ಈ ಹುಚ್ಚು ಶಿಷ್ಯನು ಬೆತ್ತಲೆ ನಿಂತುಕೊಂಡನು. ವೃಷಪರ್ವನು ಆತನ ಸ್ವರೂಪವನ್ನು ತಿಳಿಯದೆ ಅವನನ್ನು ತೊಂದರೆ ಪಡಿಸಿ ಕತ್ತನ್ನು ಕತ್ತರಿಸಿದನು.

೧೧೫-೧೧೬. ಆ ಶಿಷ್ಯನನ್ನು ಕೊಲ್ಲಲು ಈ ಚರಾಚರವಾದ ಪ್ರಪಂಚವು

**ಗೌತಮಸ್ಯ ಮಹಾಶೋಕಃ ಸಂಜಾತಸ್ಸುಮಹಾತ್ಮನಃ ।**
**ನಿರ್ಯಯೌ ಚಕ್ಷುಷೋ ವಾರಿ ಶೋಕಂ ಸಂದರ್ಶಯನ್ನಿವ　　॥ ೧೧೬ ॥**

**ಗೌತಮಸ್ಸರ್ವದೈತ್ಯಾನಾಂ ಸನ್ನಿಧೌ ವಾಕ್ಯಮಬ್ರವೀತ್ ।**
**ಕಿಮನೇನ ಕೃತಂ ಪಾಪಂ ಯೇನ ಚ್ಛಿನ್ನಮಿದಂ ಶಿರಃ　　॥ ೧೧೭ ॥**

**ಮಮ ಪ್ರಾಣಾಧಿಕಸ್ಯೇಹ ಸರ್ವದಾ ಶಿವಯೋಗಿನಃ ।**
**ಮಮಾಪಿ ಮರಣಂ ಸತ್ಯಂ ಶಿಷ್ಯಚ್ಛಿದ್ಮಾ ಯತೋ ಗುರುಃ　　॥ ೧೧೮ ॥**

**ಶೈವಾನಾಂ ಧರ್ಮಯುಕ್ತಾನಾಂ ಸರ್ವದಾ ಶಿವವರ್ತಿನಾಂ ।**
**ಮರಣಂ ಯತ್ರ ದೃಷ್ಟಂ ಸ್ಯಾತ್ತತ್ರ ಸೋ ಮರಣಂ ಧ್ರುವಂ　　॥ ೧೧೯ ॥**

**॥ ಶುಕ್ರ ಉವಾಚ ॥**

**ಏನಂ ಸಂಜೀವಯಿಷ್ಯಾಮಿ ಮಮ ಗೋತ್ರಂ ಶಿವಪ್ರಿಯಂ ।**
**ಕಿಮರ್ಥಂ ಮ್ರಿಯತೇ ಬ್ರಹ್ಮನ್ಪಶ್ಯ ಮೇ ತಪಸೋ ಬಲಂ　　॥ ೧೨೦ ॥**

---

ಕಂಗೆಟ್ಟಿತು. ಅಲ್ಲಿದ್ದ ಋಷಿಗಳೂ, ಕಾಂತಿಹೀನರಾದರು. ಗೌತಮನಿಗೆ ಶೋಕ ಪ್ರಾಪ್ತವಾಯಿತು. ಕಣ್ಣಿನಿಂದ ನೀರೂ ಬಂದಿತು.

೧೧೭-೧೧೮. ಆಗ ಗೌತಮನು ಎಲ್ಲರ ಎದುರಿಗೂ ಇಂತೆಂದನು. ಇವನು ಮಾಡಿದ ತಪ್ಪಾದರೂ ಏನು? ಏತಕ್ಕೋಸ್ಕರ ಇವನ ತಲೆಯನ್ನು ಕತ್ತರಿಸಿದರಿ? ಇವನು ನನ್ನ ಪ್ರಾಣಗಳಿಗಿಂತಲೂ ಹೆಚ್ಚಿನವನು. ಶಿವಯೋಗಿಯು. ಗುರುವು ಶಿಷ್ಯನ ಆಕಾರವಾದುದರಿಂದ ನನ್ನ ಶಿಷ್ಯನು ಸತ್ತುದರಿಂದ ನನಗೂ ಮರಣವು ಖಂಡಿತವು.

೧೧೯. ಧರ್ಮದಿಂದ ಕೂಡಿದ, ಯಾವಾಗಲೂ ಶಿವನ ಯೋಗವನ್ನೇ ಹೊಂದಿರುವ ಶಿವನ ಭಕ್ತರ ಮರಣವು ಎಲ್ಲಿ ಉಂಟಾಗುತ್ತದೋ ಅಲ್ಲಿ ನನಗೆ ಮರಣವು ಖಂಡಿತವು.

೧೨೦. ಶುಕ್ರನು ಹೇಳಿದನು :—ಎಲೈ ಬ್ರಾಹ್ಮಣನೇ, ಇವನನ್ನು ಬದುಕಿಸುತ್ತೇನೆ. ನನ್ನ ಗೋತ್ರವೇ ಶಿವಪ್ರಿಯವಾದುದು. ನೀನೇತಕ್ಕೆ ಸಾಯಬೇಕು? ನನ್ನ ತಪಸ್ಸಿನ ಬಲವನ್ನು ನೋಡು.

ಇತಿ ವಾದಿನಿ ವಿಪ್ರೇಂದ್ರೇ ಗೌತಮೋಽಪಿ ಮಮಾರ ಹ ।
ತಸ್ಮಿನ್ಮೃತೇಽಥ ಶುಕ್ರೋಽಪಿ ಪ್ರಾಣಾಂಸ್ತತ್ಯಾಜ ಯೋಗತಃ ॥ ೧೨೧ ॥

ತಸ್ಯಾಪಿ ಪತನಮಾಜ್ಞಾಯ ಪ್ರಹ್ಲಾದಾದ್ಯಾ ದಿತೀಶ್ವರಾಃ ।
ಸರ್ವೇ ಮೃತಾಃ ಕ್ಷಣೇನೈವ ತದದ್ಭುತಮಿವಾಭವತ್ ॥ ೧೨೨ ॥

ಮೃತಮಾಸೀದಥ ಬಲಂ ತಸ್ಯ ಬಾಣಸ್ಯ ಧೀಮತಃ ।
ಅಹಲ್ಯಾ ಶೋಕಸಂತಪ್ತಾ ರುರೋದೋಚ್ಚೈಃ ಪುನಃ ಪುನಃ ॥ ೧೨೩ ॥

ಗೌತಮೇನ ಮಹೇಶಸ್ಯ ಪೂಜಯಾ ಪೂಜಿತೋ ವಿಭುಃ ।
ವೀರಭದ್ರೋ ಮಹಾಯೋಗೀ ಸರ್ವಂ ದೃಷ್ಟ್ವಾ ಚಕೋಪ ಹ ॥ ೧೨೪ ॥

ಅಹೋ ಕಷ್ಟಮಹೋ ಕಷ್ಟಂ ಮಾಹೇಶಾ ಬಹವೋ ಮೃತಾಃ ।
ಶಿವಂ ವಿಜ್ಞಾಪಯಿಷ್ಯಾಮಿ ತೇನೋಕ್ತಂ ಕರವಾಣ್ಯಹಂ ॥ ೧೨೫ ॥

ಇತಿ ನಿಶ್ಚಿತ್ಯ ಗತವಾನ್ಮಂದರಾಚಲಮವ್ಯಯಂ ।
ನಮಸ್ಕೃತ್ವಾ ವಿರೂಪಾಕ್ಷಮಿದಂ ಸರ್ವಮಥೋಕ್ತವಾನ್ ॥ ೧೨೬ ॥

---

೧೨೧. ಶುಕ್ರನು ಹೀಗೆ ಹೇಳುತ್ತಿರುವಾಗಲೇ ಗೌತಮನು ಮೃತಪಟ್ಟನು. ಆ ಗೌತಮನು ಸಾಯಲು, ಯೋಗದಿಂದ ಶುಕ್ರನೂ ಪ್ರಾಣಗಳನ್ನು ಬಿಟ್ಟುಬಿಟ್ಟನು.

೧೨೨. ಅವರು ಸತ್ತುದನ್ನು ಕೇಳಿ ಪ್ರಹ್ಲಾದನೇ ಮೊದಲಾದ ದೈತ್ಯೇಂದ್ರರು ಕ್ಷಣಕಾಲದಲ್ಲಿಯೇ ಪ್ರಾಣಗಳನ್ನು ಬಿಟ್ಟರು. ಇದು ಆಶ್ಚರ್ಯವಾಗಿದ್ದಿತು.

೧೨೩. ಅನಂತರ ಆ ಬಾಣನ ಸೈನ್ಯವೆಲ್ಲವೂ ಸತ್ತಿತು. ಇದನ್ನು ನೋಡಿ ಅಹಲ್ಯೆಯು ವ್ಯಥೆಗೊಂಡು ಬಾರಿಬಾರಿಗೂ ಗಟ್ಟಿಯಾಗಿ ಅಳುತ್ತಿದ್ದಳು.

೧೨೪. ಈ ಗೌತಮನು ಶಿವಪೂಜೆ ಮಾಡಿದುದಕ್ಕೆ ಸಂತೋಷಪಟ್ಟ ಮಹಾಯೋಗಿಯಾದ ವೀರಭದ್ರನು ಇದೆಲ್ಲವನ್ನೂ ನೋಡಿ ಕೋಪಗೊಂಡನು.

೧೨೫-೧೨೬. ಅಯ್ಯೋ! ಕಷ್ಟವು. ಅಯ್ಯೋ! ಬಹು ಕಷ್ಟವು. ಶಿವಭಕ್ತರು ಬಹುಜನರು ಮೃತರಾದರು. ಏನುಮಾಡಲಿ? ಶಿವನ ಬಳಿಗೆ ಹೋಗಿ ವಿಜ್ಞಾಪಿಸಿಕೊಂಡು ಅವನು ಹೇಳಿದಂತೆ ಮಾಡುತ್ತೇನೆ ಎಂದು ನಿಶ್ಚಯಿಸಿಕೊಂಡು ಮಂದರಾಚಲಕ್ಕೆ ಹೋಗಿ ಶಿವನಿಗೆ ನಮಸ್ಕರಿಸಿ ಇವೆಲ್ಲವನ್ನೂ ವಿಜ್ಞಾಪಿಸಿದನು.

ಬ್ರಹ್ಮಾ ಹರಿಃ ಸ್ಥಿತೌ ತತ್ರ ದೃಷ್ಟ್ವಾ ಪ್ರಾಹ ಶಿವೋ ವಚಃ ।
ಮದ್ಭಕ್ತೈಸ್ಸಾಹಸಂ ಕರ್ಮ ಕೃತಂ ದೃಷ್ಟ್ವಾ ವರಪ್ರದಃ ॥ ೧೨೭ ॥

ಗತ್ವಾ ಪಶ್ಯಾಮಹೇ ವಿಷ್ಣೋ ಯುವಾಮಪ್ಯಾಗಮಿಷ್ಯಥ ।
ಅಥೇಶೋ ವೃಷಮಾರುಹ್ಯ ವಾಯುನಾ ಧೂತಚಾಮರಃ ॥ ೧೨೮ ॥

ನಂದಿಕೇನ ಸುವೇಷೇಣ ಧೃತೇ ಛತ್ರೇ ತಿಶೋಭನೇ ।
ಸುಶ್ವೇತೇ ಹೇಮದಂಡೇ ಚ ನಾನ್ಯಯೋಗ್ಯೇ ಧೃತೇ ವಿಭೋಃ ॥ ೧೨೯ ॥

ಮಹೇಶಾನುಮತಿಂ ಲಬ್ಧ್ವಾ ಹರಿರ್ನಾಗಾಂತಕೇ ಸ್ಥಿತಃ ।
ಆರಕ್ತನೀಲಚ್ಛತ್ರಾಭ್ಯಾಂ ಶುಶುಭೇ ಲಕ್ಷ್ಮಕೌಸ್ತುಭಃ ॥ ೧೩೦ ॥

ಶಿವಾನುಮತ್ಯಾ ಬ್ರಹ್ಮಾಪಿ ಹಂಸಾರೂಢೋಽಭವತ್ತದಾ ।
ಇಂದ್ರಗೋಪಪ್ರಭಾಕಾರಚ್ಛತ್ರಾಭ್ಯಾಂ ಶುಶುಭೇ ವಿಧಿಃ ॥ ೧೩೧ ॥

---

೧೨೭. ಅಲ್ಲಿ ಬ್ರಹ್ಮನೂ ವಿಷ್ಣುವೂ ಇದ್ದರು. ಅವರನ್ನು ನೋಡಿ ಶಿವನು ನನ್ನ ಭಕ್ತರು ಸಾಹಸದ ಕೆಲಸವನ್ನು ಮಾಡಿದ್ದಾರೆ. ಅದನ್ನು ನೋಡಿ ವರವನ್ನು ಕೊಡಲಿಚ್ಛೆಯುಳ್ಳವನಾಗಿದ್ದೇನೆ. ಆದ್ದರಿಂದ ಅಲ್ಲಿಗೆ ಹೋಗಿ ನೋಡುತ್ತೇನೆ. ನೀವಿಬ್ಬರೂ ಬನ್ನಿ ಎಂದನು.

೧೨೮-೧೨೯. ಅನಂತರ ಶಿವನು ಎತ್ತಿನ ಮೇಲೆ ಕುಳಿತು ಹೊರಟನು. ವಾಯುವು ಚಾಮರವನ್ನು ಬೀಸುತ್ತಿದ್ದನು. ನಂದಿಯು ಒಳ್ಳೆಯ ವೇಷವನ್ನು ಹಾಕಿಕೊಂಡು ಒಳ್ಳೆಯ ಶ್ವೇತಚ್ಛತ್ರವನ್ನು ಹಿಡಿದನು. ಎರಡು ಪಕ್ಕದಲ್ಲಿಯೂ ಚಿನ್ನದ ಕಟ್ಟಿಗೆಗಳನ್ನು ಹಿಡಿದರು.

೧೩೦. ಶಿವನ ಒಪ್ಪಿಗೆಯಂತೆ ಹರಿಯು ಗರುಡನ ಮೇಲೆ ಕುಳಿತುಕೊಂಡು ಸ್ವಲ್ಪ ಕೆಂಪಾದ ನೀಲಿಯ ಛತ್ರಿಯನ್ನು ಅವನಿಗೆ ಹಿಡಿದನು.

೧೩೧. ಶಿವನ ಅನುಮತಿಯಿಂದ ಬ್ರಹ್ಮನು ಹಂಸವನ್ನೇರಿದನು. ಇಂದ್ರಗೋಪವೆಂಬ ಹೂವಿನ ಬಣ್ಣವುಳ್ಳ, ಕೊಂಚ ಹಳದಿಯಾದ ಬಿಳುವು ಹೆಚ್ಚಾಗಿರುವ ಛತ್ರಿಯನ್ನು ಆತನಿಗೆ ಹಿಡಿದನು.

ಇಂದ್ರಾದಿಸರ್ವದೇವಾಶ್ಚ ಸ್ವಸ್ವವಾಹನಸಂಯುತಾಃ ।
ಅಥ ತೇ ನಿರ್ಯಯುಃ ಸರ್ವೇ ನಾನಾವಾದ್ಯಾನುವೋದಿತಾಃ ॥ ೧೩೨ ॥

ಕೋಟಿಕೋಟಿಗಣಾಕೀರ್ಣಾ ಗೌತಮಸ್ಯಾಶ್ರಮಂ ಗತಾಃ ।
ಬ್ರಹ್ಮವಿಷ್ಣುಮಹೇಶಾನಾ ದೃಷ್ಟ್ವಾ ತತ್ಪರಮಾದ್ಭುತಂ ॥ ೧೩೩ ॥

ಸ್ವಭಕ್ತಂ ಜೀವಯಾಮಾಸ ವಾಮಕೋಣನಿರೀಕ್ಷಣಾತ್ ।
ಶಂಕರೋ ಗೌತಮಂ ಪ್ರಾಹ ತುಷ್ಟೋಽಹಂ ತೇ ವರಂ ವೃಣು ॥ ೧೩೪ ॥

॥ ಗೌತಮ ಉವಾಚ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ತ್ವಲ್ಲಿಂಗಾರ್ಚನಸಾಮರ್ಥ್ಯಂ ನಿತ್ಯಮಸ್ತು ಮಹೇಶ್ವರ ॥ ೧೩೫ ॥

ವೃತಮೇತನ್ಮಯಾ ದೇವ ಶೃಣುಷ್ವೈತತ್ತ್ರಿಲೋಚನ ।
ಮಮ ಶಿಷ್ಯೋ ಮಹಾಭಾಗೋ ಹೇಯಾಹೇಯಾದಿವರ್ಜಿತಃ ॥ ೧೩೬ ॥

---

೧೩೨. ಇಂದ್ರಾದಿ ದೇವತೆಗಳು ಅವರವರ ವಾಹನಗಳಲ್ಲಿ ಕುಳಿತುಕೊಂಡರು. ಎಲ್ಲರೂ ನಾನಾಬಗೆಯ ವಾದ್ಯಗಳನ್ನು ಮಾಡಿಸಿಕೊಂಡು ಹೊರಟರು.

೧೩೩-೧೩೪. ಅನೇಕ ಕೋಟಿ ಗಣಗಳೊಡನೆ ಇವರೆಲ್ಲರೂ ಗೌತಮನ ಆಶ್ರಮಕ್ಕೆ ಹೋದರು. ಬ್ರಹ್ಮವಿಷ್ಣುಮಹೇಶ್ವರರು ಈ ವಿಚಿತ್ರವನ್ನು ನೋಡಿದರು. ಶಿವನು ಎಡದ ಕಡೆಗಣ್ಣಿನ ನೋಟದಿಂದ ಸ್ವಭಕ್ತನಾದ ಗೌತಮನನ್ನು ಬದುಕಿಸಿದನು. ಆಗ ಶಂಕರನು ಗೌತಮನನ್ನು ಕುರಿತು ನಿನ್ನ ವಿಷಯದಲ್ಲಿ ಸಂತೋಷಪಟ್ಟಿದ್ದೇನೆ. ಬೇಕಾದ ವರವನ್ನು ಕೇಳು ಎಂದನು.

೧೩೫. ಗೌತಮನು ಹೇಳಿದನು :—ದೇವೇಶನೆ, ನೀನು ಪ್ರಸನ್ನನಾಗಿದ್ದರೆ, ವರವನ್ನು ಕೊಡುವ ಅಪೇಕ್ಷೆಯು ನಿನಗಿದ್ದರೆ, ನಿನ್ನ ಲಿಂಗವನ್ನು ಪೂಜಿಸುವ ಸಾಮರ್ಥ್ಯವನ್ನು ನನಗೆ ಕೊಡು.

೧೩೬—೧೩೯. ಎಲೈ ತ್ರಿಲೋಚನನೇ, ಮಹಾನುಭಾವನಾದ ನನ್ನ ಶಿಷ್ಯನೊಬ್ಬನಿದ್ದನು. ಅವನ ಹೆಸರು ಶಂಕರಾತ್ಮನೆಂದು. ಸಹ್ಯಾಸಹ್ಯಗಳನ್ನು ಬಿಟ್ಟವನು.

ಪ್ರೇಕ್ಷಣೀಯಂ ಮಮತ್ವೇನ ನ ಚ ಪಶ್ಯತಿ ಚಕ್ಷುಷಾ ।
ನ ಘ್ರಾಣೇನ ಚ ಘ್ರಾತವ್ಯಂ ನ ದಾತವ್ಯಂ ನ ಚೇತರತ್ ॥ ೧೩೭ ॥

ಇತಿ ಬುದ್ಧ್ವಾ ತಥಾ ಕುರ್ವನ್ಸ ಹಿ ಯೋಗೀ ಮಹಾಶಯಃ ।
ಉನ್ಮತ್ತವಿಕೃತಾಕಾರಃ ಶಂಕರಾತ್ಮೇತಿ ಕೀರ್ತಿತಃ ॥ ೧೩೮ ॥

ನ ಕಶ್ಚಿತ್ತಂ ಪ್ರತಿ ದ್ವಿಷ್ಯಾನ್ನ ಚ ತಂ ಹಿಂಸಯೇದಿತಿ ।
ಏತನ್ಮೇ ದೀಯತಾಂ ದೇವ ಏತೇಷಾಮನುವೃತ್ತಿಸ್ತಥಾ ॥ ೧೩೯ ॥

॥ ಶ್ರೀ ಭಗವಾನುವಾಚ ॥

ಆಕಲ್ಪಮೇತೇ ಜೀವಂತು ತತೋ ಮುಕ್ತಿಂ ಭಜಂತು ಚ ।
ತ್ವಯಾ ಕೃತಮಿದಂ ವೇಶ್ಮ ವಿಸ್ತೃತಂ ವಿಕೃತಂ ಶುಭಂ ।
ತಿಷ್ಠಾಮಃ ಕ್ಷಣಮಾತ್ರಂ ತು ತತೋ ಯಾಸ್ಯಾಮಿ ಮಂದಿರಂ ॥ ೧೪೦ ॥

---

ತನ್ನಂತೆಯೇ ಎಲ್ಲರನ್ನೂ ನೋಡುತ್ತಿದ್ದನು. ಕಣ್ಣಿನಿಂದ ಯಾರನ್ನೂ ನೋಡಬಾರದು, ಯಾವುದರ ಗಂಧವನ್ನೂ ವಾಸನೆ ನೋಡಬಾರದು, ಕೊಡಬಾರದು, ತೆಗೆದುಕೊಳ್ಳ ಬಾರದು, ಎಂದು ತಿಳಿದುಕೊಂಡು ಆ ಉದಾರಬುದ್ಧಿಯುಳ್ಳ ಯೋಗಿ ಹಾಗೆ ಮಾಡುತ್ತಿದ್ದನು. ಅವನು ಹುಚ್ಚರಂತೆ ವಿಕಾರವಾದ ವೇಷವನ್ನು ಧರಿಸಿದ್ದನು. ಅವನನ್ನು ಯಾರೂ ದ್ವೇಷಿಸಬಾರದು ಮತ್ತು ಹಿಂಸಿಸಲೂ ಬಾರದು. ಈ ವರವನ್ನು ನನಗೆ ಕೊಡು. ಅಲ್ಲದೆ ಈಗ ಸತ್ತಿರುವವರೆಲ್ಲರೂ ಬದುಕಲೂ ಬೇಕು ಎಂದನು.

೧೪೦. ಭಗವಂತನು ಹೇಳಿದನು :—ಇವರೆಲ್ಲರೂ ಕಲ್ಪವಿರುವವರೆಗೂ ಬದುಕಿರಲಿ. ಆಮೇಲೆ ಅವರೆಲ್ಲರೂ ಮುಕ್ತಿಯನ್ನು ಹೊಂದಲಿ. ನೀನು ನಿರ್ಮಿಸಿರುವ ಈ ಮನೆಯು ವಿಸ್ತಾರವಾಗಿಯೂ, ಕ್ರಮಪಟ್ಟು ವಿಹಿತವಾಗಿ ಕಟ್ಟಿದುದಾಗಿಯೂ, ಮಂಗಳಕರವಾಗಿಯೂ ಇರುವುದು. ಇದರಲ್ಲಿ ಕ್ಷಣಕಾಲವಿದ್ದು ಆಮೇಲೆ ನಮ್ಮ ಮನೆಗೆ ಹೋಗುತ್ತೇವೆ.

॥ ಗೌತಮ ಉವಾಚ ॥

ಅಯೋಗ್ಯಂ ಪ್ರಾರ್ಥಯಾಮೀಶ ಹ್ಯರ್ಥೀ ದೋಷಂ ನ ಪಶ್ಯತಿ ।
ಬ್ರಹ್ಮಾದ್ಯಲಭ್ಯಂ ದೇವೇಶ ದೀಯತಾಂ ಯದಿ ರೋಚತೇ ॥ ೧೪೧ ॥

ಅಥೇಶೋ ವಿಷ್ಣುಮಾಲೋಕ್ಯ ಗೃಹೀತ್ವಾ ತು ಕರಂ ಹರೇಃ ।
ಪ್ರಹಸನ್ನಂಬುಜಾಭಾಕ್ಷಮಿತ್ಯುವಾಚ ಸದಾಶಿವಃ ॥ ೧೪೨ ॥

॥ ಶ್ರೀ ಶಿವ ಉವಾಚ ॥

ಮ್ಲಾನೋದರೋಽಸಿ ಗೋವಿಂದ ದೇಯಂ ತೇ ಭೋಜನಂ ಕಿಮು।
ಸ್ವಯಂ ಪ್ರವಿಶ್ಯ ಯದಿ ವಾ ಸ್ವಯಂ ಭುಂಕ್ಷ್ವ ಸ್ವಗೇಹವತ್ ॥ ೧೪೩ ॥

ಗಚ್ಛ ವಾ ಪಾರ್ವತೀಗೇಹಂ ಯಾ ಕುಕ್ಷಿಂ ಪೂರಯಿಷ್ಯತಿ ।
ಇತ್ಯುಕ್ತ್ವಾ ತತ್ಕರಾಲಂಬೀ ಏಕಾನ್ತಮಗಮದ್ವಿಭುಃ ॥ ೧೪೪ ॥

ಆದಿಶ್ಯ ನಂದಿನಂ ದೇವೋ ದ್ವಾರಾಧ್ಯಕ್ಷಂ ಯಥೋಕ್ತವತ್ ।
ಗೌತಮಂ ಚ ಉವಾಚಾಥ ಉತ್ತರಂ ವಿಷ್ಣುಭಾಷಣಂ ॥ ೧೪೫ ॥

---

೧೪೧. ಗೌತಮನು ಹೇಳಿದನು:—ಎಲೈ ಶಿವನೇ, ಅಯೋಗ್ಯವಾದು ದೊಂದನ್ನು ಕೇಳಿದೆನು. ಯಾಚಿಸುವವನು ಅದರಲ್ಲಿ ದೋಷವನ್ನು ನೋಡುವುದಿಲ್ಲ. ಅದು ಬ್ರಹ್ಮಾದಿಗಳಿಗೂ ಅಲಭ್ಯವಾದುದು. ನಿನಗೆ ಇಷ್ಟಬಂದರೆ ಕೊಡು.

೧೪೨. ಅನಂತರ ಶಿವನು ವಿಷ್ಣುವನ್ನು ನೋಡಿ ಅವನ ಕೈಯನ್ನು ಹಿಡಿದು ಕೊಂಡು ನಗುತ್ತ ಇಂತೆಂದನು.

೧೪೩. ಶಿವನು ಹೇಳಿದನು:—ಎಲೈ ಗೋವಿಂದನೆ, ಹೊಟ್ಟೆಯು ಬತ್ತಿ ಹೋಗಿದೆ. ನಿನಗೆ ಊಟಬೇಕೇನು ? ನೀನೇ ಒಳಗೆ ಹೋಗಿ ನಿನ್ನ ಮನೆಯಲ್ಲಿರುವ ಸ್ವತಂತ್ರದಂತೆಯೇ ಸ್ವತಂತ್ರ ವಹಿಸಿ, ಯಥೇಚ್ಛವಾಗಿ ಊಟಮಾಡಬಹುದು.

೧೪೪. ಅದಿಲ್ಲದಿದ್ದರೆ ಪಾರ್ವತಿಯ ಮನೆಗೆ ಹೋಗು. ಆಕೆಯು ಹೊಟ್ಟೆ ತುಂಬ ಅನ್ನವನ್ನು ಹಾಕುವಳು. ಎಂದು ಹೇಳಿ ಅವನ ಕೈಯನ್ನು ಹಿಡಿದುಕೊಂಡು ಏಕಾಂತಕ್ಕೆ ಹೋದನು.

೧೪೫. ನಂದಿಯನ್ನು ಕುರಿತು ಬಾಗಿಲು ಕಾಯುವಂತೆ ನಿಯಮಿಸಿ, ಗೌತಮ ನಿಗೆ ಉತ್ತರವನ್ನು ವಿಷ್ಣುವು ಹೇಳುವನು ಎಂದನು.

॥ ಶ್ರೀ ಶಿವ ಉವಾಚ ॥

**ಸಂಪಾದಯಾನ್ನಂ ಸರ್ವೇಷಾಂ ಭೋಕ್ತುಕಾಮಾ ವಯಂ ಮುನೇ ॥**
**ಇತ್ಯುಕ್ತ್ವೈಕಾನ್ತಮಗಮದ್ವಾಸುದೇವೇನ ಶಂಕರಃ** ॥ ೧೪೬ ॥

**ಮೃದುಶಯ್ಯಾಂ ಸಮಾರುಹ್ಯ ಶಯಿತೌ ದೇವಕೋತ್ತಮೌ ।**
**ಕರಾಂಬುಪಾತಮನ್ಯೋನ್ಯಂ ಪೃಥಕ್ಕೃತ್ವೋಭಯತ್ರ ಚ** ॥ ೧೪೭ ॥

**ಅನ್ಯೋನ್ಯಂ ಭಾಷಣಂ ಕೃತ್ವಾ ಪ್ರೋತ್ತಸ್ಥತುರುಭಾವಪಿ ।**
**ಗತ್ವಾ ತಟಾಕಂ ಗಂಭೀರಂ ಸ್ನಾಸ್ಯನ್ತೌ ದೇವಸತ್ತಮೌ** ॥ ೧೪೮ ॥

**ಮುನಯೋ ರಾಕ್ಷಸಾಶ್ಚೈವ ಜಲಕ್ರೀಡಾಂ ಪ್ರಚಕ್ರಿರೇ ।**
**ಅಥ ವಿಷ್ಣುರ್ಮಹೇಶಶ್ಚ ಜಲಪಾತಾನಿ ಶೀಘ್ರತಃ** ॥ ೧೪೯ ॥

**ಚಕ್ರತುಶ್ಶಂಕರಃ ಪದ್ಮಕಿಂಜಲ್ಕಾಂಜಲಿನಾ ಹರೇಃ ।**
**ಅವಾಕಿರನ್ಮುಖೇ ತಸ್ಯ ಪದ್ಮೋತ್ಫುಲ್ಲವಿಲೋಚನೇ** ॥ ೧೫೦ ॥

---

೧೪೬. ಶಿವನು ಹೇಳಿದನು :—ಎಲೈ ಗೌತಮಋಷಿಯೇ, ನಾವೆಲ್ಲರೂ ಊಟ ಮಾಡಬೇಕು. ನಮಗೆ ಅಡಿಗೆಮಾಡಿಸು ಎಂದು ಹೇಳಿ ವಿಷ್ಣುವಿನೊಡನೆ ಏಕಾಂತ ಸ್ಥಳಕ್ಕೆ ಶಂಕರನು ಹೋದನು.

೧೪೭-೧೪೮. ಅವರಿಬ್ಬರೂ ಮೃದುವಾದ ಹಾಸಿಗೆಯ ಮೇಲೆ ಮಲಗಿ ಮಾತನಾಡುತ್ತಿದ್ದು ಇಬ್ಬರೂ ಎದ್ದರು. ಅವರಿಬ್ಬರೂ ಒಂದು ಆಳವಾದ ಕೆರೆಗೆ ಹೋಗಿ ಸ್ನಾನಮಾಡುತ್ತ ಒಬ್ಬರಿಗೊಬ್ಬರು ನೀರೆರಚಿಸಿಕೊಳ್ಳುತ್ತಾ ತಮತಮಗೂ ಎರಚಿಕೊಂಡರು. ಮುನಿಗಳೂ, ರಾಕ್ಷಸರೂ ಬೇಕಾದಂತೆ ಜಲಕ್ರೀಡೆಯಾಡಿದರು.

೧೪೯—೧೫೧. ಅನಂತರ ಶಂಕರನೂ ವಿಷ್ಣುವೂ ವೇಗವಾಗಿ ನೀರೆರಚಿಕೊಳ್ಳುತ್ತಿದ್ದರು. ಇಷ್ಟರಲ್ಲಿ ಶಿವನು ತಾವರೆಯ ಧೂಳು ಕುಸುಮಗಳನ್ನು ಬೊಗಸೆಯಲ್ಲಿ ತುಂಬಿಕೊಂಡು ವಿಷ್ಣುವಿನ ಮುಖಕ್ಕೆ ಎರಚಲು ಆ ಧೂಳು ಕಣ್ಣಿಗೆ ಬಿದ್ದುದರಿಂದ

ನೇತ್ರೇ ಕೇಸರಸಂಪಾತಾನ್ನ್ಯಮೀಲಯತ ಕೇಶವಃ ।
ಅತ್ರಾಂತರೇ ಪರೇಸ್ಸ್ಕಂಧಮಾರುರೋಹ ಮಹೇಶ್ವರಃ ॥ ೧೫೧ ॥

ಪರ್ಯ್ಯತ್ತಮಾಂಗಂ ಬಾಹುಭ್ಯಾಂ ಗೃಹೀತ್ವಾ ಸ ನ್ಯಮಜ್ಜಯತ್ ।
ಉನ್ಮಜ್ಜಯಿತ್ವಾ ಚ ಪುನಃ ಪುನಶ್ಚಾಪಿ ಪುನಃ ಪುನಃ ॥ ೧೫೨ ॥

ಪೀಡಿತಸ್ಸ ಹರಿಸ್ಸೂಕ್ಷ್ಮಂ ಪಾತಯಾಮಾಸ ಶಂಕರಂ ।
ಅಥ ಪಾದೌ ಗೃಹೀತ್ವಾ ತಮಾಚಕರ್ಷ ಚಾಭ್ರಾಮಯತ್ ।
ಅತಾಡಯದ್ಧರೇರ್ವಕ್ಷಃ ಪಾತಯಾಮಾಸ ಚಾಚ್ಯುತಂ ॥ ೧೫೩ ॥

ಅಥೋತ್ಥಿತೋ ಹರಿಸ್ತೋಯಮಾದಾಯಾಂಜಲಿನಾ ತತಃ ।
ಅವಾಕಿರದಥೋ ಶಂಭುರಥ ವಿಷ್ಣುರಥೋ ಹರಃ ॥ ೧೫೪ ॥

---

ವಿಷ್ಣುವು ಕಣ್ಣನ್ನು ಮುಚ್ಚಿಕೊಂಡನು. ಅವನು ಹಾಗೆ ಕಣ್ಣನ್ನು ಮುಚ್ಚಿಕೊಂಡಾಗ ಶಿವನು ಆ ವಿಷ್ಣುವಿನ ಹೆಗಲ ಮೇಲೆ ಕುಳಿತುಕೊಂಡನು.

೧೫೨. ಹಾಗೆ ಶಿವನು ವಿಷ್ಣುವಿನ ಹೆಗಲ ಮೇಲೆ ಕುಳಿತುಕೊಂಡು ಅವನ ತಲೆಯನ್ನು ಕೈಯಿಂದ ಹಿಡಿದುಕೊಂಡು ಅಮುಕಿ ಮುಳುಗಿಸಿದನು. ವಿಷ್ಣುವು ಬಲಾತ್ಕಾರದಿಂದ ಮೇಲಕ್ಕೆ ತಲೆಯನ್ನು ಎತ್ತಿದನು. ಮತ್ತೆ ಶಿವನು ಅಮುಕಿ ಮುಳುಗಿಸಿದನು. ಮತ್ತೆ ಹರಿಯು ತಲೆಯನ್ನು ಮೇಲಕ್ಕೆತ್ತುವನು ಹೀಗೆ ಅನೇಕ ಬಾರಿ ಮಾಡಿದರು.

೧೫೩. ಹೀಗೆ ಶಂಕರನು ಹರಿಯನ್ನು ತೊಂದರೆಪಡಿಸಲು, ಆ ಹರಿಯು ಶಂಕರನನ್ನು ಕೆಡವಿದನು. ಅನಂತರ ಆ ಶಿವನ ಕಾಲುಗಳನ್ನು ಹಿಡಿದು ಎಳೆದನು. ಮತ್ತು ತಿರುಗಿಸಿದನು. ಆಗ ಶಿವನು ಸಡಗರದಿಂದ ಬಿಡಿಸಿಕೊಂಡು ಹರಿಯ ಎದೆಗೆ ಬಲವಾಗಿ ಹೊಡೆದು ಅವನನ್ನು ಕೆಡವಿದನು.

೧೫೪. ಆಮೇಲೆ ಹರಿಯು ಮೇಲಕ್ಕೆದ್ದು ಬೊಗ್ಗಸೆಯಲ್ಲಿ ನೀರನ್ನೆತ್ತಿಕೊಂಡು ಶಂಭುವಿಗೆ ಎರಚಿದನು. ಅನಂತರ ಶಂಭುವು ಎರಚಿಸಿದನು. ಮತ್ತೆ ಹರಿಯು ಎರಚಿಸಿದನು ಹೀಗೆ ಒಬ್ಬರಿಗೊಬ್ಬರು ಎರಚಿಕೊಳ್ಳುತ್ತಿದ್ದರು.

**ಜಲಕ್ರೀಡೈವಮಭವದಥ ಚರ್ಷಿಗಣಾಂತರೇ ।**
**ಜಲಕ್ರೀಡಾಸಂಭ್ರಮೇಣ ವಿಸ್ರಸ್ತಜಟಬಂಧನಾಃ ॥ ೧೫೫ ॥**

**ಅಥ ಸಂಭ್ರಮತಸ್ತೇಷಾಮನ್ಯೋನ್ಯಂ ಜಟಬಂಧನಂ ।**
**ಇತರೇತರಬದ್ಧಾಸು ಜಟಾಸು ಚ ಮುನೀಶ್ವರಾಃ ॥ ೧೫೬ ॥**

**ಶಕ್ತಿಮಂತೋಽಶಕ್ತಿಮತಃ ಆಕರ್ಷಂತಿ ಚ ಸರ್ವಥಂ ।**
**ಪಾತಯಂತೋಽನ್ಯತಶ್ಚಾಪಿ ಕ್ರೋಶಂತೋ ರುದತಸ್ತಥಾ ॥ ೧೫೭ ॥**

**ಏವಂ ಪ್ರವೃತ್ತೇ ತುಮುಲೇ ಸಂಭೂತೇ ತೋಯಕರ್ಮಣಿ ।**
**ಆಕಾಶೇ ನಾರದೋ ಹೃಷ್ಟೋ ನನರ್ತ ಚ ನನಾದ ಚ ॥ ೧೫೮ ॥**

**ವಿಪಂಚೀಂನಾದಯನ್ವಾದ್ಯಂ ಲಲಿತಾಂ ಗೀತಿಮುಜ್ಜಗೌ ।**
**ಸುಗೀತ್ಯಾ ಲಲಿತಾಯಾಸ್ತು ಹ್ಯಗಾಯತ ವಿಧಾ ದಶ ॥ ೧೫೯ ॥**

**ಶುಶ್ರಾವ ಗೀತಿಂ ಮಧುರಾಂ ಶಂಕರೋ ಲೋಕಭಾವನಃ ।**
**ಸ್ವಯಂ ಗಾತುಂ ಹಿ ಲಲಿತಂ ಮಂದಂ ಮಂದಂ ಪ್ರಚಕ್ರಮೇ ॥ ೧೬೦ ॥**

---

೧೫೫. ಋಷಿಗಳ ಮಧ್ಯದಲ್ಲಿ ಶಿವಶಂಭುಗಳಿಬ್ಬರೂ ಈರೀತಿ ಜಲಕ್ರೀಡೆಯನ್ನಾಡುತ್ತಿದ್ದರು. ಈ ಸಂಭ್ರಮದಲ್ಲಿ ಜುಟ್ಟುಗಳು ಬಿಚ್ಚಿಹೋದುವು.

೧೫೬-೧೫೭. ಆಗ ಅವಸರದಿಂದ ಒಬ್ಬರ ಜುಟ್ಟನ್ನು ಮತ್ತೊಬ್ಬರೂ, ಹೀಗೆ ಇಬ್ಬರೂ ಗಂಟುಹಾಕಿಸಿಕೊಂಡರು. ಇದನ್ನು ನೋಡಿ ಋಷಿಗಳು ಶಕ್ತರಾದವರು ಅಶಕ್ತರನ್ನು ಹಿಡಿದೆಳೆದು ಕೆಡುವುತ್ತಿದ್ದರು. ಅವರು ಕೋಪಮಾಡುತ್ತಲೂ ಅಳುತ್ತಲೂ ಇದ್ದರು.

೧೫೮. ಹೀಗೆ ನೀರಿನಲ್ಲಿ ಕೋಲಾಹಲವು ನಡೆಯುತ್ತಿರಲು, ಆಕಾಶದಲ್ಲಿ ನಾರದನು ಇದನ್ನು ನೋಡಿ ಸಂತೋಷಪಟ್ಟು ಕುಣಿದನು ಮತ್ತು ಕೂಗಿದನು.

೧೫೯. ವೀಣೆಯನ್ನು ವಾದಿಸುತ್ತಾ ಚೆನ್ನಾಗಿ ಹಾಡನ್ನು ಹಾಡಿದನು. ಈ ಗೀತವು ಲಲಿತವಾಗಿ ಕೇಳಿ ಬರುತ್ತಿರಲು ಹತ್ತು ಬಗೆಯಿಂದಲೂ ಹಾಡಿದನು

೧೬೦. ಲೋಕಾತ್ಮನಾದ ಶಂಕರನು ಆ ಗೀತವನ್ನು ಕೇಳಿ ತಾನೂ ಚೆನ್ನಾಗಿ ಮೆಲ್ಲಮೆಲ್ಲಗೆ ಹಾಡಲು ಮೊದಲು ಮಾಡಿದನು.

ಸ್ವಯಂ ಗಾಯತಿ ದೇವೇಶೇ ಮಿಶ್ರಾ ಮಂಗಳಕೈಶಿಕೀ ।
ನಾರದೇ ನೃತ್ಯಮಾನೇ ತು ಗಾಯತಿ ಸ್ವರಭೇದಿನಿ ॥ ೧೬೧ ॥

ಸ್ವರಂ ಧ್ರುವಂ ಸಮಾದಾಯ ಸರ್ವಲಕ್ಷಣಸಂಯುತಂ ।
ಸ್ವಧಾರಾಮೃತಸಂಯುಕ್ತಂ ಗಾನೇನೈವಮಯೋಜಯತ್ ॥ ೧೬೨ ॥

ವಾಸುದೇವೋ ಮರ್ದಲಂ ಚ ಕರಾಭ್ಯಾಮ್ಯತಮಾಹನತ್ ।
ಆವಗಾಹಂಶ್ಚ ತುವಕ್ತ್ರಸ್ತುಂಬರುರ್ಮುಖರೋ ಬಭೌ ॥ ೧೬೩ ॥

ತಾನಕಾ ಗೌತಮಾದ್ಯಾಸ್ತು ತೂಷ್ಣೀಂ ಗಾತುಂ ಚ ವಾಯುಜಃ ।
ಗಾಯಕೇ ಮಧುರಂ ಗೀತಂ ಹನೂಮತಿ ಕಪೀಶ್ವರೇ ॥ ೧೬೪ ॥

ಮ್ಲಾನಮಮ್ಲಾನಮಭವತ್ಕೃಶಾಃ ಪುಷ್ಟಾಸ್ತದಾಽಭವನ್ ।
ಸ್ವಾಂ ಸ್ವಾಂ ಗೀತಿಮತಸ್ಸರ್ವೇ ತಿರಸ್ಕೃತ್ಯೈವ ಮೂರ್ಛಿತಾಃ ॥ ೧೬೫ ॥

---

೧೬೧-೧೬೨. ಶಿವನು ತಾನು ಗಾನಮಾಡಲಾಗಿ ಮಂಗಳಕೈಶಿಕಿ ಎಂಬ ರಾಗವು ಮಿಶ್ರವಾಗಿತ್ತು. ಸರ್ವಭೇದದಿಂದ ಶಂಕರನು ಸರ್ವಲಕ್ಷಣದಿಂದ ಕೂಡಿದ ಧ್ರುವಸ್ವರವನ್ನು ತೆಗೆದು ಅದರೊಡನೆ ಅಮೃತಧಾರೆಯನ್ನೂ ಸೇರಿಸಿದನು.

೧೬೩. ವಾಸುದೇವನು ಮದ್ದಳೆಯನ್ನು ತೆಗೆದುಕೊಂಡು ಕೈಯಿಂದ ಚೆನ್ನಾಗಿರುವಂತೆ ಬಡಿದನು. ಇದನ್ನು ಕೇಳಿದ ಚತುರ್ಮುಖನಾದ ತುಂಬುರುವು ತಾನೂ ಅವರೊಡನೆ ಸೇರುತ್ತ ಹಾಡಲು ಮೊದಲಿಟ್ಟನು.

೧೬೪-೧೬೫. ಗೌತಮನೇ ಮುಂತಾದವರು ತಾಳಹಾಕಲು ಮೊದಲು ಮಾಡಿದರು. ಆಗ ಹನುಮಂತನು ಅಂಗವಿಕಾರವಿಲ್ಲದೆ ಗಾನಮಾಡಲು ಮೊದಲು ಮಾಡಿದನು. ಕಪೀಶ್ವರನಾದ ಹನುಮಂತನು ಮಧುರವಾಗಿ ಗಾನಮಾಡಲು ಬಾಡಿದ್ದವೆಲ್ಲವೂ ರಸದಿಂದ ಕೂಡಿದ್ದುವು. ಕೃಶವಾಗಿದ್ದುವು ತುಂಬಿಕೊಂಡು ದಪ್ಪವಾದುವು. ಹಾಡುತ್ತಿದ್ದವರೆಲ್ಲರೂ ತಮ್ಮ ತಮ್ಮ ಹಾಡನ್ನು ನಿಲ್ಲಿಸಿ, ಈ ಹನುಮನ ಹಾಡನ್ನು ಕೇಳುತ್ತ ಮೂರ್ಛೆಹೊಂದಿದರು.

ತೂಷ್ಣೀಂ ಭೂತಂ ಸಮಭವದ್ದೇವರ್ಷಿಗಣದಾನವಂ ।
ಏಕಸ್ಸ ಹನುಮಾನ್ಗಾತಾ ಶ್ರೋತಾರಸ್ಸರ್ವ ಏವ ತೇ ॥ ೧೬೬ ॥

ಮಧ್ಯಾಹ್ನಕಾಲೇ ವಿತತೇ ಭೋಜನಾವಸರೇ ಸತಿ ।
ದುಕೂಲಯುಗ್ಮಮಾಧತ್ತ ಶೃಣ್ವನ್ಗೀತಿಂ ಮಹೇಶ್ವರಃ ॥ ೧೬೭ ॥

ಪೀತವಸ್ತ್ರದ್ವಯಂ ವಿಷ್ಣುರಾರಕ್ತಂ ಚತುರಾನನಃ ।
ಸ್ವಸ್ವಾರ್ಹಾಣ್ಯಥ ಸರ್ವೇಽಪಿ ಕೃತ್ಯಂ ಕೃತ್ವಾ ಪಿ ಕಾಲಿಕಂ ॥ ೧೬೮ ॥

ಸ್ವಂ ಸ್ವಂ ವಾಹನಮಾರುಹ್ಯ ನಿರ್ಗತಾಸ್ಸರ್ವದೇವತಾಃ ।
ಗಾನಪ್ರಿಯೋ ಮಹೇಶಸ್ತು ಜಗಾದ ಪ್ಲವಗೇಶ್ವರಂ ॥ ೧೬೯ ॥

॥ ಶ್ರೀ ಶಿವ ಉವಾಚ ॥

ಪ್ಲವಗ ತ್ವಂ ಮಯಾಜ್ಞಪ್ತೋ ನಿಶ್ಶಂಕಂ ವೃಷಮಾರುಹ ।
ಮಮ ಚಾಭಿಮುಖೋ ಭೂತ್ವಾ ಗಾಯಸ್ವಾಶೇಷಗಾಯಸಂ ॥ ೧೭೦ ॥

---

೧೬೬. ಆಗ ದೇವತೆಗಳೂ, ಋಷಿಗಳೂ, ದಾನವರೂ, ಎಲ್ಲರೂ ಸುಮ್ಮನಾದರು. ಹನುಮಂತನೊಬ್ಬನೇ ಗಾನಮಾಡುವನಾದನು. ಮಿಕ್ಕವರೆಲ್ಲರೂ ಕೇಳತಕ್ಕವರಾದರು.

೧೬೭. ಮಧ್ಯಾಹ್ನಕಾಲವು ಬಂದು, ಊಟಕ್ಕೆ ಹೊತ್ತು ಪ್ರಾಪ್ತವಾಗಲು, ಮಹೇಶ್ವರನು ಸಂಗೀತವನ್ನು ಕೇಳುತ್ತ ಒಂದು ಮಕುಟವನ್ನುಟ್ಟುಕೊಂಡು ಮತ್ತೊಂದು ಮಕುಟವನ್ನು ಹೊದ್ದುಕೊಂಡನು.

೧೬೮–೧೬೯. ವಿಷ್ಣುವು ಹಳದಿಯ ಎರಡು ಮಡಿಬಟ್ಟೆಗಳನ್ನು ತೆಗೆದುಕೊಂಡು ಧರಿಸಿದನು. ಬ್ರಹ್ಮನೂ ಕೂಡ ಸ್ವಲ್ಪ ಕೆಂಪಾದ ಮಡಿಬಟ್ಟೆಗಳನ್ನು ಧರಿಸಿದನು. ಮಿಕ್ಕವರೂ ಕೂಡ ತಮತಮಗೆ ಯೋಗ್ಯವಾದ ಬಟ್ಟೆಗಳನ್ನುಟ್ಟು ಮಾಧ್ಯಾಹ್ನಿಕ ಕ್ರಿಯೆಯನ್ನು ಮಾಡಿಕೊಂಡು ತಮ್ಮ ತಮ್ಮ ವಾಹನಗಳನ್ನು ಹತ್ತಿಕೊಂಡು ಎಲ್ಲರೂ ಕೂಡಿ ಊಟಕ್ಕೆ ಹೊರಟರು. ಆಗ ಗಾನಪ್ರಿಯನಾದ ಮಹೇಶನು ಕಪೀಶ್ವರನಾದ ಹನುಮಂತನನ್ನು ಕುರಿತು ಇಂತೆಂದನು.

೧೭೦. ಶಿವನು ಹೇಳಿದನು:—ಎಲೈ ವಾನರನೇ, ನೀನು ನನ್ನ ಅಪ್ಪಣೆಯ ಮೇರೆ ಸಂಕೋಚವನ್ನು ಬಿಟ್ಟು ನನ್ನ ವಾಹನವಾದ ವೃಷಭನ ಮೇಲೆ ಹತ್ತು. ನನ್ನ ಎದುರಿಗೆ ಕುಳಿತುಕೊಂಡು ನಿನಗೆ ತಿಳಿದ ಸಂಗೀತವನ್ನೆಲ್ಲಾ ಹಾಡು.

ಅಥಾಹ ಕಪಿಶಾರ್ದೂಲೋ ಭಗವಂತಂ ಮಹೇಶ್ವರಂ ।
ವೃಷಭಾರೋಹಸಾಮರ್ಥ್ಯಂ ತವ ನಾನ್ಯಸ್ಯ ವಿದ್ಯತೇ ॥ ೧೭೧ ॥

ತವ ವಾಹನಮಾರುಹ್ಯ ಪಾತಕೀ ಸ್ಯಾಮಹಂ ಪ್ರಭೋ ।
ಮಾಮೇವಾರುಹ ದೇವೇಶ ವಿಹಂಗಃ ಶಿವಧಾರಣಃ ॥ ೧೭೨ ॥

ತವ ಚಾಭಿಮುಖಂ ಗಾನಂ ಕರಿಷ್ಯಾಮಿ ವಿಲೋಕಯ ।
ಅಥೇಶ್ವರೋ ಹನೂಮಂತಮಾರುರೋಹ ವೃಷಂ ಯಥಾ ॥ ೧೭೩ ॥

ಆರೂಢೇ ಶಂಕರೇ ದೇವೇ ಹನೂಮಾನ್ಕಂಧರಾಶಿರಃ ।
ಛಿತ್ವಾ ತ್ವಚಂ ಪರಾವೃತ್ಯ ಮುಖಂ ಗಾಯತಿ ಪೂರ್ವವತ್ ॥ ೧೭೪ ॥

ಶೃಣ್ವನ್ಗೀತಿಸುಧಾಂ ಶಂಭುರ್ಗೌತಮಸ್ಯ ಗೃಹಂ ಗತಃ ।
ಸರ್ವೇ ಚಾಪ್ಯಾಗತಾಸ್ತತ್ರ ದೇವರ್ಷಿಗಣದಾನವಾಃ ॥ ೧೭೫ ॥

---

೧೭೧-೧೭೨. ಅದನ್ನು ಕೇಳಿದ ಕಪೀಶ್ವರನು ಶ್ರೀ ಶಿವನನ್ನು, ಕುರಿತು ನಿನ್ನ ವಾಹನವಾದ ಬಸವನ ಮೇಲೆ ಹತ್ತುವ ಸಾಮರ್ಥ್ಯವು ನಿನಗೆ ಹೊರತು ಮತ್ತಾರಿಗೂ ಇಲ್ಲ. ನಿನ್ನ ವಾಹನವನ್ನು ನಾನು ಹತ್ತಿದರೆ ಪಾಪಿಯಾಗುತ್ತೇನೆ ಸಂಶಯವಿಲ್ಲ. ಆದ್ದರಿಂದ ನನ್ನ ಮೇಲೆಯೇ ಹತ್ತಿ ಕುಳಿತುಕೋ. ಕಪಿಯು ಶಿವನನ್ನು ಧರಿಸಲು ಯೋಗ್ಯವಾದುದು. ಹಾಗೆ ನೀನು ಕುಳಿತರೆ ನಿನ್ನ ಎದುರಿಗೆ ಹಾಡುತ್ತೇನೆ. ಕೇಳು ಎಂದನು.

೧೭೩. ಅನಂತರ ಶಿವನು ಎತ್ತಿನ ಮೇಲೆ ಹತ್ತಿ ಕುಳಿತುಕೊಳ್ಳುವಂತೆ ಹನುಮಂತನ ಮೇಲೆ ಕುಳಿತುಕೊಂಡನು.

೧೭೪. ಶಂಕರನು ಮೇಲೆ ಹತ್ತಿ ಕುಳಿತುಕೊಳ್ಳಲು, ಹನುಮಂತನು ಆ ಶಂಕರನ ನಡತೆಗೆ ತಲೆ ತಿರುಗಿಸಲು ಅಡ್ಡಿಯಾಗಿರುವ ಕತ್ತಿನ ಚರ್ಮವನ್ನು ಕತ್ತರಿಸಿ ಶಿವನ ಕಡೆಗೆ ತಿರುಗಿ ಮುಖಮಾಡಿಕೊಂಡು ಮೊದಲಿನಂತೆಯೇ ಹಾಡುತ್ತಿದ್ದನು.

೧೭೫. ಶಂಭುವು ಗಾನವನ್ನು ಕೇಳುತ್ತ ಗೌತಮನ ಮನೆಗೆ ಬಂದನು. ಉಳಿದ ದೇವತೆ, ಋಷಿ, ರಾಕ್ಷಸರೂ ಕೂಡ ಬಂದರು.

**ಪೂಜಿತಾ ಗೌತಮೇನಾಥ ಭೋಜನಾವಸರೇ ಸತಿ ।**
**ಯಚ್ಛುಷ್ಕದಾರುಸಂಭೂತಂ ಗೃಹೋಪಸ್ಕರಣಾದಿಕಂ ॥ ೧೭೬ ॥**

**ಪ್ರರೂಢಮಭವತ್ಸರ್ವಂ ಗಾಯಮಾನೇ ಹನೂಮತಿ ।**
**ತಸ್ಮಿನ್ಗಾನೇ ಸಮಸ್ತಾನಾಂ ಚಿತ್ರದೃಷ್ಟಿರತಿಷ್ಠತ ॥ ೧೭೭ ॥**

**ದ್ವಿಬಾಹುರೀಶಸ್ಯ ಪದಾಭಿವಂದನಃ**
**ಸಮಸ್ತಗಾತ್ರಾಭರಣೋಪಪನ್ನಃ ।**
**ಪ್ರಸನ್ನಮೂರ್ತಿಸ್ತರುಣಃ ಸುಮಧ್ಯೇ**
**ವಿನ್ಯಸ್ತಮೂರ್ಧಾಂಜಲಿಭಿಃ ಸುರೇಭಿಃ ॥ ೧೭೮ ॥**

**ಶಿವಃ ಕರಾಭ್ಯಾಂ ಪರಿಗೃಹ್ಯ ಶಂಕರೋ**
**ಹನೂಮತಃ ಪೂರ್ವಮುಖಂ ಚಕಾರ ।**
**ಪದ್ಮಾಸನಾಸೀನಹನೂಮತೋಂಜಲೌ**
**ನಿಧಾಯ ಪಾದಂ ತ್ವಪರಂ ಮುಖೇ ಚ ॥ ೧೭೯ ॥**

---

೧೭೬-೧೭೭. ಊಟದ ಸಮಯದಲ್ಲಿ ಗೌತಮನು ಎಲ್ಲರನ್ನೂ ಗೌರವಿಸಿದನು. ಆಗ ಹನುಮಂತನು ಗಾನಮಾಡುತ್ತಿರಲು, ಮನೆಗೆ ಹಾಕಿದ್ದ ಮತ್ತು ಮನೆಯಲ್ಲಿದ್ದ ಒಣಗಿದ ಮರದ ಸಾಮಾನುಗಳೆಲ್ಲವೂ ಚಿಗುರಲು ಮೊದಲಿಟ್ಟುವು. ಆ ಗಾನದಲ್ಲಿಯೇ ಎಲ್ಲರ ಮನಸ್ಸೂ ಚಿತ್ರದಲ್ಲಿ ಬರೆದಂತೆ ನಿಂತಿತು.

೧೭೮. ಈಶ್ವರನ ಪಾದಗಳಿಗೆ ಸೇವೆಮಾಡುತ್ತಿದ್ದ ಹನುಮನ ಎರಡು ಕೈಗಳು ದೇಹಕ್ಕೆಲ್ಲಾ ಆಭರಣಪ್ರಾಯವಾದುವು. ದೇವತೆಗಳು ತಲೆಯ ಮೇಲೆ ಕೈಮುಗಿದುಕೊಂಡು ಇರುತ್ತಿರಲು, ಹನುಮನ ದೇಹದ ಮಧ್ಯದಲ್ಲಿ ಶ್ರೀ ಶಿವನು ಪ್ರಸನ್ನಮೂರ್ತಿಯಾಗಿ ಯುವಕನಾಗಿ ಒಪ್ಪುತ್ತಿದ್ದನು.

೧೭೯-೧೮೦. ಶಂಕರನು ಎರಡು ಕೈಗಳಿಂದಲೂ ಹನುಮಂತನ ತಲೆಯನ್ನು ಹಿಡಿದುಕೊಂಡು ಮೊದಲಿನಂತೆ ಮುಖವನ್ನು ತಿರುಗಿಸಿದನು. **ಪದ್ಮಾಸನವನ್ನು** ಹಾಕಿಕೊಂಡು ಕುಳಿತಿರುವ ಹನುಮಂತನ ಬೊಗಸೆಯಲ್ಲಿ ಶಿವನು ಒಂದು ಪಾದವನ್ನಿಟ್ಟು ಮತ್ತೊಂದನ್ನು ಮುಖದ ಮೇಲಿಟ್ಟನು. ಮತ್ತು ಮುಖದ ಮೇಲಿಟ್ಟಿರುವ ಕಾಲಿನ ಬೆರಳಿನಿಂದ ಮೂಗನ್ನು ಮೆಲ್ಲಮೆಲ್ಲಗೆ ಅಮುಕಿದನು. ಭುಜಗಳ ಮೇಲೂ, ಮುಖದ ಮೇಲೂ, ಹೆಗಲುಗಳ ಮೇಲೂ, ಕತ್ತಿನ ಮೇಲೂ, ವಕ್ಷಸ್ಥಳದ

ಪಾದಾಂಗುಲೀಭ್ಯಾಮಥ ನಾಸಿಕಾಂ ವಿಭುಃ
ಸ್ನೇಹೇನ ಜಗ್ರಾಹ ಚ ಮಂದಮಂದಂ ।
ಸ್ಕಂಧೇ ಮುಖೇ ತ್ವಂಸತಲೇ ಚ ಕಂಠೇ
ವಕ್ಷಃಸ್ಥಳೇ ಚ ಸ್ತನಮಧ್ಯಮೇ ಹೃದಿ ॥ ೧೮೦ ॥

ಶಿರೋ ಗೃಹೀತ್ವಾವನಮಯ್ಯ ಶಂಕರಃ
ಪಸ್ಪರ್ಶ ಪೃಷ್ಠಂ ಚುಬುಕೇನ ಸಧ್ವನಿಃ ।
ತತಶ್ಚ ಕುಕ್ಷಾವಥ ನಾಭಿಮಂಡಲೇ
ತತೋ ದ್ವಿತೀಯಂ ನ್ಯದಧಾತ್ತು ಚಾಂಜಲೌ
ಹಾರಂ ಚ ಮುಕ್ತಾಪರಿಕಲ್ಪಿತಂ ಶಿವೋ
ಹನೂಮತಃ ಕಂಠಗತಂ ಚಕಾರ ॥ ೧೮೧ ॥

ಅಥ ವಿಷ್ಣುರ್ಮಹೇಶಾನಮಿದಂ ವಚನಮುಕ್ತವಾನ್ ।
ಹನೂಮತಾ ಸಮೋ ನಾಸ್ತಿ ಕೃತ್ಸ್ನಬ್ರಹಾಂಡಮಂಡಲೇ ॥ ೧೮೨ ॥

ಶ್ರುತಿದೇವಾದ್ಯಗಮ್ಯಂ ಹಿ ಪದಂ ತವ ಕಪಿಸ್ಥಿತಂ ।
ಸರ್ವೋಪನಿಷದವ್ಯಕ್ತಂ ತ್ವತ್ಪದಂ ಕಪಿಸರ್ವಯುಕ್ ॥ ೧೮೩ ॥

---

ಮೇಲೂ, ಸ್ತನಮಧ್ಯದಲ್ಲಿಯೂ, ಹೃದಯದ ಮೇಲೂ, ಹೊಟ್ಟೆಯ ಮೇಲೂ, ಹೊಕ್ಕಳಿನ ಮೇಲೂ ಆ ಎರಡನೆಯ ಕಾಲನ್ನು ಇಡುತ್ತ, ಕೊನೆಗೆ ಅದನ್ನೂ ಕೈಯಲ್ಲಿಟ್ಟನು.

೧೮೧. ಅನಂತರ ಆ ಹನುಮನ ತಲೆಯನ್ನು ಶಂಕರನು ಬಗ್ಗಿಸಿ ತುಟಿಗಳಿರ ಡನ್ನೂ ಸೇರಿಸಿ ಶಬ್ದಮಾಡುತ್ತ ಬೆನ್ನನ್ನು ಚಪ್ಪರಿಸಿದನು. ಮತ್ತು ಒಂದು ಮುಂದಿನ ಹಾರವನ್ನು ಕತ್ತಿಗೆ ಹಾಕಿದನು.

೧೮೨. ಅನಂತರ ವಿಷ್ಣುವು ಈಶ್ವರನನ್ನು ಕುರಿತು ಬ್ರಹ್ಮಾಂಡ ಮಂಡಲ ದಲ್ಲಿಯೇ ಹನುಮಂತನಿಗೆ ಸಮಾನನಾದವನು ಇಲ್ಲವೆಂದನು.

೧೮೩. ಶ್ರುತಿಗಳಿಗೂ, ದೇವಾದಿಗಳಿಗೂ, ಸಿಕ್ಕದಿರುವ ನಿನ್ನ ಪಾದವು ಕಪಿಯ ಮೇಲೆ ಇರುವುದಿಲ್ಲ. ಸಮಸ್ತವಾದ ಉಪನಿಷತ್ತುಗಳಿಗೂ ತಿಳಿಯದ ನಿನ್ನ ಪಾದವು ಕಪಿಯ ಮೈಯನೆಲ್ಲಾ ಸ್ಪರ್ಶಮಾಡುತ್ತಿದೆಯಲ್ಲ.

**ಯಮಾದಿಸಾಧನೈರ್ಯೋಗೈರ್ನ ಕ್ಷಣಂ ತೇ ಪದಂ ಸ್ಥಿತಂ ।**
**ಮಹಾಯೋಗಿಹೃದಂಭೋಜೇ ಬಲಂ ಸ್ವಚ್ಛಂ ಹನೂಮತಿ ॥ ೧೪೪ ॥**

**ವರ್ಷಕೋಟಿಸಹಸ್ರೇಷು ತಪಃ ಕೃತ್ವಾ ಸು ದುಷ್ಕರಂ ।**
**ತ್ವದ್ರೂಪಂ ನಾಭಿಜಾನಂತಿ ಕುತಃ ಪಾದಂ ಮುನೀಶ್ವರಾಃ ॥ ೧೪೫ ॥**

**ಅಹೋ ಭಾಗ್ಯಂ ವಿಚಿತ್ರಂ ಹಿ ಚಪಲೋ ವಾನರೋ ಮೃಗಃ ।**
**ಧತ್ತೇ ಪಾದಯುಗಂ ಚಾಂಗೇ ಯೋಗಿಹೃದ್ಯಪಿ ನ ಕ್ಷಮಂ ॥ ೧೪೬ ॥**

**ಮಯಾ ವರ್ಷಸಹಸ್ರಂ ತು ಸಹಸ್ರಾಬ್ಜೈಸ್ತಥಾsನ್ವಹಂ ।**
**ಭಕ್ತ್ಯಾ ಸಂಪೂಜಿತೋsಪೀಶ ಪಾದೋ ನೋ ದರ್ಶಿತಸ್ತ್ವಯಾ ॥ ೧೪೭ ॥**

**ಲೋಕೇ ವಾದೋ ಹಿ ಸುಮಹಾನ್ ಶಂಭುರ್ನಾರಾಯಣಪ್ರಿಯಃ ।**
**ಹರಿಃ ಪ್ರಿಯಸ್ತಥಾ ಶಂಭೋರ್ನ ತಾದೃಗ್ಭಾಗ್ಯಮಸ್ತಿ ಮೇ ॥ ೧೪೮ ॥**

---

೧೪೪. ಯಮನಿಯಮಾದಿಸಾಧನಗಳನ್ನು ಸಾಧಿಸಿದ ಯೋಗಿಗಳಿಂದಲೂ, ನಿನ್ನ ಪಾದವು ಯೋಗಿಗಳ ಹೃತ್ಕಮಲದಲ್ಲಿ ಒಂದುಕ್ಷಣವೂ ನಿಲ್ಲಲಿಲ್ಲ. ಅಂತಹ ಪಾದವು ಹನುಮಂತನಲ್ಲಿ ನಿಂತಿರುವುದರಿಂದ ಅವನ ಬಲವು ಸ್ಪಷ್ಟವಾಗಿದೆ.

೧೪೫. ಸಹಸ್ರಕೋಟಿ ವರ್ಷಗಳವರೆಗೂ, ದುಷ್ಕರವಾದ ತಪಸ್ಸನ್ನು ಮಾಡಿದರೂ ಮುನಿಗಳು ನಿನ್ನ ರೂಪವನ್ನು ತಿಳಿಯಲಾರರು. ನಿನ್ನ ಪಾದವನ್ನು ತಿಳಿಯಲು ಶಕ್ತಿ ಎಲ್ಲಿಂದ ಬಂದೀತು ?

೧೪೬. ಯೋಗಿಗಳ ಮನಸ್ಸಿನಲ್ಲಿಯೂ ನಿಲ್ಲಲಸಾಧ್ಯವಾದ ನಿನ್ನ ಪಾದಯುಗ್ಮವನ್ನು ಈ ಚಪಲವಾದ ಕಪಿಯು ತನ್ನ ಕೈಯಲ್ಲಿ ಧರಿಸಿರುವುದಲ್ಲ. ಇವನ ಭಾಗ್ಯವು ವಿಚಿತ್ರವಾದುದಲ್ಲವೆ ?

೧೪೭. ನಾನು ಸಾವಿರ ವರ್ಷಗಳವರೆಗೂ ಪ್ರತಿದಿನವೂ ಸಾವಿರ ಕಮಲಗಳಿಂತ ಭಕ್ತಿಯಿಂದ ನಿನ್ನನ್ನು ಪೂಜೆಮಾಡಿದರೂ ಕೂಡ ಆ ಪಾದಗಳ ದರ್ಶನವೇ ಆಗಲಿಲ್ಲ.

೧೪೮. ಶಂಭುವು ನಾರಾಯಣನಿಗೆ ಪ್ರಿಯನು. ನಾರಾಯಣನು ಶಂಭುವಿಗೆ ಪ್ರಿಯನು. ಎಂದು ಲೋಕದಲ್ಲಿ ಜನಗಳು ಹೇಳುತ್ತಾರೆ. ಆದರೆ ಆ ಭಾಗ್ಯವು ನನಗಿಲ್ಲ.

॥ ಸದಾಶಿವ ಉವಾಚ ॥

ನ ತ್ವಯಾ ಸದೃಶೋ ಮಹ್ಯಂ ಪ್ರಿಯೋಽಸ್ತಿ ಭಗವನ್ ಹರೇ ।
ಪಾರ್ವತೀ ವಾ ತ್ವಯಾ ತುಲ್ಯಾ ನ ಚಾನ್ಯೋ ವಿದ್ಯತೇ ಮಮ ॥ ೧೮೯ ॥

ಅಥ ದೇವಾಯ ಮಹತೇ ಗೌತಮಃ ಪ್ರಣಿಪತ್ಯ ಚ ।
ವ್ಯಜ್ಞಾಪಯದಮೇಯಾತ್ಮನ್ದೇವೇ ಹಿ ಕರುಣಾನಿಧೇ ॥ ೧೯೦ ॥

ಮಧ್ಯಾನ್ಹೋಽಯಂ ವ್ಯತಿಕ್ರಾನ್ತೋ ಭುಕ್ತಿವೇಲಾಖಿಲಸ್ಯ ಚ ।
ಅಥಾಚಮ್ಯ ಮಹಾದೇವೋ ವಿಷ್ಣುನಾ ಸಹಿತೋ ವಿಭುಃ ।
ಪ್ರವಿಶ್ಯ ಗೌತಮಗೃಹಂ ಭೋಜನಾಯೋಪಚಕ್ರಮೇ ॥ ೧೯೧ ॥

ರತ್ನಾಂಗುಳೀಯೈರಥ ನೂಪುರಾಭ್ಯಾಂ
ದುಕೂಲಬಂಧೇನ ತಟಿತ್ಸುಕಾಂಚ್ಯಾ ।
ಹಾರೈರನೇಕೈರಥ ಕಂಠನಿಷ್ಕ-
ಯಜ್ಞೋಪವೀತೋತ್ತರವಾಸಸೀ ಚ ॥ ೧೯೨ ॥

---

೧೮೯. ಸದಾಶಿವನು ಹೇಳಿದನು :—ಎಲೈ ಹರಿಯೇ, ನಿನ್ನಷ್ಟು ಪ್ರೀತಿ ಪಾತ್ರನು ನನಗೆ ಯಾವನೂ ಇಲ್ಲವೇ ಇಲ್ಲ. ಅಥವಾ ಪಾರ್ವತಿಯು ನಿನ್ನಷ್ಟು ಪ್ರಿಯಳೆಂದು ಹೇಳಿದರೂ ಹೇಳಬಹುದು. ಮತ್ತಾರೂ ಇಲ್ಲವೇ ಇಲ್ಲ.

೧೯೦. ಅನಂತರ ಮಹಾದೇವನಿಗೆ ಗೌತಮನು ನಮಸ್ಕರಿಸಿ, ಸ್ವಾಮಿ ದಯ ಮಾಡಿಸಬೇಕು. ಮಧ್ಯಾಹ್ನವು ಮೀರುತ್ತ ಬಂದಿತು. ಎಲ್ಲರಿಗೂ ಊಟದ ಹೊತ್ತು ಎಂದು ವಿಜ್ಞಾಪಿಸಿದನು.

೧೯೧. ಅನಂತರ ಮಹಾದೇವನು ಆಚಮನಮಾಡಿ, ವಿಷ್ಣುವಿನೊಡನೆ ಗೌತ ಮನ ಮನೆಗೆ ಹೋಗಿ ಊಟಕ್ಕೆ ಪ್ರಾರಂಭಿಸಿದನು.

೧೯೨-೧೯೩. ರತ್ನದ ಉಂಗುರಗಳಿಂದಲೂ, ಕಾಲುಬಳೆಗಳಿಂದಲೂ, ರೇಷ್ಮೆಯ ಉಡಿದಾರದಿಂದಲೂ, ಅಲಂಕೃತನಾಗಿ ಹಾರಗಳನ್ನು ಹಾಕಿಕೊಂಡನು. ಚಿನ್ನದ ಯಜ್ಞೋಪವೀತವನ್ನು ಹಾಕಿಕೊಂಡನು. ಪಟ್ಟೆಯ ಮಡಿಯನ್ನುಟ್ಟು ಒಂದು ಬಟ್ಟೆ ಯನ್ನು ಹೊದೆದುಕೊಂಡನು. ಜೋಲಾಡುತ್ತಿರುವಂತಹ ಮಣಿಗಳುಳ್ಳ ಕರ್ಣಾ

ವಿಲಂಬಿಚಂಚನ್ಮಣಿಕುಂಡಲೇನ
ಸುಪುಷ್ಪಧಮ್ಮಿಲ್ಲವರೇಣ ದೇವಃ ।
ಪಂಚಾಂಗಗಂಧಸ್ಯ ವಿಲೇಪನೇನ
ಬಾಹ್ವಂಗದೈಃ ಕಂಕಣಕಾಂಗುಳೀಯೈಃ ॥ ೧೯೬ ॥

ಇತ್ಥಂ ವಿಭೂಷಿತಶ್ಶಿವೋ ನಿವಿಷ್ಟ ಉತ್ತಮಾಸನೇ
ಸ್ವಯಂಭುವಂ ಹರಿಂ ತಥಾ ನ್ಯವೇಶಯದ್ವರಾಸನೆ ।
ಅನ್ಯೋನ್ಯಸಮ್ಮುಖಸ್ಥಿತೌ ಪರೀಶೌ ದೇವಸತ್ತಮೌ
ಸುವರ್ಣಭಾಜನಾನ್ಯಥೋ ದದೌ ಸ ಚಾಪಿ ಗೌತಮಃ ॥ ೧೯೭ ॥

ತ್ರಿಂಶತ್ಪ್ರಭೇದಭಕ್ಷ್ಯಕಾನ್ ಸುಪಾಯಸಂ ಚತುರ್ವಿಧಂ
ಸುಪಕ್ವಪಾಕಜಾತಕಂ ಶತದ್ವಯಂ ಪ್ರಕಲ್ಪಿತಂ ।
ಅಪಕ್ವಮಿಶ್ರಕಂ ತಥಾ ಶತತ್ರಯಂ ಪ್ರಕಲ್ಪಿತಂ
ಶತಂ ಶತಂ ತಥಾ ಸುಕಂದಶಾಕಕಂ ತಥಾ ಮುನಿಃ ॥ ೧೯೮ ॥

---

ಭರಣವನ್ನು ಹಾಕಿಕೊಂಡನು. ಜುಟ್ಟನ್ನು ಗಂಟುಹಾಕಿಕ್ಕೊಂಡನು. ಹೂವನ್ನು ಮುಡಿದುಕ್ಕೊಂಡನು. ಪಂಚಾಂಗಗಳಿಂದ ಕೂಡಿದ ಗಂಧವನ್ನು ಹಚ್ಚಿಕೊಂಡನು. ತೋಳಿಗೆ ಭುಜಕೀರ್ತಿಗಳನ್ನು ಹಾಕಿಕೊಂಡನು. ಕೈಗೆ ಬಳೆಗಳನ್ನೂ, ಉಂಗುರಗಳನ್ನೂ ಹಾಕಿಕೊಂಡನು.

೧೯೭. ಈರೀತಿ ಅಲಂಕಾರಮಾಡಿಕ್ಕೊಂಡ ಶಿವನು ಎತ್ತರವಾದ ಪೀಠದಲ್ಲಿ ಕುಳಿತನು. ಬ್ರಹ್ಮನನ್ನೂ ವಿಷ್ಣುವನ್ನೂ ಉತ್ತಮವಾದ ಪೀಠದಲ್ಲಿ ತನ್ನ ಎದುರಿಗೆ ಕೂರಿಸಿಕ್ಕೊಂಡನು. ಶಿವನೂ, ಶಿವನ ಎದುರಿಗೆ ಬ್ರಹ್ಮವಿಷ್ಣುಗಳೂ ಕುಳಿತಿರಲಾಗಿ ಅವರಿಗೆ ಗೌತಮನು ಚಿನ್ನದ ಹರಿವಾಣಗಳನ್ನು ಊಟಕ್ಕೆ ಕೊಟ್ಟನು.

೧೯೮. ಮೂವತ್ತು ಬಗೆ ಭಕ್ಷ್ಯಗಳನ್ನೂ, ನಾಲ್ಕು ಬಗೆಯ ಪಾಯಸಗಳನ್ನೂ, ಇನ್ನೂರು ಬಗೆಯ ಬೇಯಿಸಿದ ಅನ್ನಗಳನ್ನೂ, ಮುನ್ನೂರು ಬಗೆಯ ಬೇಯಿಸದೆ ಮಿಶ್ರವಾದ ಪದಾರ್ಥಗಳನ್ನೂ, ನೂರು ಬಗೆಯ ಗೆಡ್ಡೆಯ ಪದಾರ್ಥಗಳನ್ನೂ, ನೂರು ಬಗೆಯ ಕಾಯಿಯ ಪಲ್ಯಗಳನ್ನೂ ಬಡಿಸಿದನು.

ಶಾಕಾದಿ ಸರ್ಷಪಾನ್ವಿತಂ ದಪೌ ಚ ಪಂಚವಿಂಶತಿಂ
ಸುಶರ್ಕರಾವಿಕಂ ತಥಾ ಸುಚೂತದಾಡಿಮಾದಿಕಂ ।
ಮೋಚಾಫಲಂ ತು ಗೋಸ್ತನೀಂ ಸುಖರ್ಜುನಾಗರಂಗಕಂ
ಜಂಬೂಫಲಂ ಪ್ರಿಯಾಲುಕಂ ವಿಕಂಕತಂ ಫಲಂ ತಥಾ ॥ ೧೯೬ ॥

ಏವಮಾದೀನಿ ಚಾನ್ಯಾನಿ ದ್ರವ್ಯಾಣ್ಯರ್ಪ್ಯ ಯಥಾವಿಧಿ ।
ದತ್ವಾ ಚಾಪೋಶನಂ ವಿಪ್ರೇ ಭುಂಜಧ್ವಮಿತಿ ಚಾಬ್ರವೀತ್ ॥ ೧೯೭ ॥

ಭುಂಜಾನೇಷು ಚ ಸರ್ವೇಷು ವ್ಯಜನಂ ಸೂಕ್ಷ್ಮವಿಸ್ತೃತಂ ।
ಗೌತಮಸ್ಸ್ವಯಮಾದಾಯ ಶಿವವಿಷ್ಣೂ ಹ್ಯವೀಜಯತ್ ॥ ೧೯೮ ॥

ಪರಿಹಾಸಮುಖೋ ಕರ್ತುಮಿಯೇಷ ಪರಮೇಶ್ವರಃ ।
ಪಶ್ಯ ವಿಷ್ಣೋ ಹನೂಮಂತಂ ಕಥಂ ಭುಂಕ್ತೇ ಸ ವಾನರಃ ॥ ೧೯೯ ॥

ವಾನರಂ ಪಶ್ಯತಿ ಹರೌ ಮುಂಡಕಂ ವಿಷ್ಣುಭಾಜನೇ ।
ಚಿಕ್ಷೇಪ ಮುನಿಸಂಘೇಷು ಪಶ್ಯತ್ಸ್ವಪಿ ಮಹೇಶ್ವರಃ ॥ ೨೦೦ ॥

---

೧೯೬. ಸಾಸುವೆಯಿಂದ ಕೂಡಿದ ಇಪ್ಪತ್ತೈದು ಬಗೆಯ ಕಾಯಿಯ ಗೊಜ್ಜನ್ನೂ, ಒಳ್ಳೆಯ ಸಕ್ಕರೆಯನ್ನೂ, ಒಳ್ಳೆಯ ಮಾವಿನಹಣ್ಣು, ದಾಳಿಂಬದಹಣ್ಣು, ಬಾಳೆಯ ಹಣ್ಣುಗಳನ್ನೂ, ದ್ರಾಕ್ಷೆ, ಖರ್ಜೂರ, ಕಿತ್ತಳೇ ಹಣ್ಣುಗಳನ್ನೂ, ನೇರಲೆ ಮುಂತಾದ ಹಣ್ಣುಗಳನ್ನೂ ಬಡಿಸಿದನು.

೧೯೭. ಇವೇ ಮುಂತಾದ ಪದಾರ್ಥಗಳನ್ನೂ ಬಡಿಸಿ, ವಿಧಿಪೂರ್ವಕವಾಗಿ ಆಪೋಶನವನ್ನು ಹಾಕಿ ಊಟಮಾಡಿರಿ ಎಂದು ಹೇಳಿದನು.

೧೯೮. ಎಲ್ಲರೂ ಊಟಮಾಡುತ್ತಿರಲು ಗೌತಮನು ಸೂಕ್ಷ್ಮವಾದ ಬೀಸಣಿಗೆಯನ್ನು ತೆಗೆದುಕೊಂಡು ಶಿವವಿಷ್ಣುಗಳನ್ನು ಮೆಲ್ಲಗೆ ಬೀಸುತ್ತಿದ್ದನು.

೧೯೯. ಆಗ ಪರಮೇಶ್ವರನು ಹಾಸ್ಯಮಾಡಲು ಇಚ್ಛೆಯುಳ್ಳವನಾಗಿ ಎಲೈ ವಿಷ್ಣುವೇ, ಆ ಕಪಿಯಾದ ಹನುಮಂತನು ಹೇಗೆ ಊಟಮಾಡುತ್ತಾನೆ. ನೋಡು ಎಂದನು.

೨೦೦. ಆ ವಿಷ್ಣುವು ಕಪಿಯನ್ನು ನೋಡುವುದಕ್ಕೆ ತಿರುಗಲು ಮುನಿಗಳು ಕಾಣುವಂತೆ ಆ ವಿಷ್ಣುವಿನ ತಟ್ಟೆಗೆ ಒಂದು ಎಂಜಲು ಮಂಡಿಗೆಯನ್ನು ಹಾಕಿದನು. ಅದೇ ರೀತಿ ಹನುಮಂತನಿಗೂ ತನ್ನ ಎಂಜಲು ಪಾಯಸ ಮುಂತಾದುವನ್ನು ಕೊಟ್ಟನು.

**ಹನೂಮತೇ ದತ್ತವಾಂಶ್ಚ ಸ್ವೋಚ್ಛಿಷ್ಟಂ ಪಾಯಸಾದಿಕಂ ।**
**ತ್ವದುಚ್ಛಿಷ್ಟಮಭೋಜ್ಯಂ ತು ತವೈವ ವಚನಾದ್ವಿಭೋ ॥ ೨೦೧ ॥**

**ಅನರ್ಹಂ ಮಮ ನೈವೇದ್ಯಂ ಪತ್ರಂ ಪುಷ್ಪಂ ಫಲಂ ತಥಾ ।**
**ಮಹ್ಯಂ ನಿವೇದ್ಯ ಸಕಲಂ ಕೂಪ ಏವ ವಿನಿಕ್ಷಿಪೇತ್**
**ಅಭುಕ್ತೇ ತ್ವದ್ವಚೋ ನೂನಂ ಭುಕ್ತೇ ಚಾಪಿ ಕೃಪಾ ತವ ॥ ೨೦೨ ॥**

**॥ ಸದಾಶಿವ ಉವಾಚ ॥**

**ಬಾಣಲಿಂಗೇ ಸ್ವಯಂಭೂತೇ ಚಂದ್ರಕಾಂತೇ ಹೃದಿ ಸ್ಥಿತೇ ।**
**ಚಾಂದ್ರಾಯಣಸಮಂ ಜ್ಞೇಯಂ ಶಂಭೋರ್ನೈವೇದ್ಯಭಕ್ಷಣಂ ॥ ೨೦೩ ॥**

**ಭುಕ್ತಿವೇಲೇಯಮಧುನಾ ತದ್ವೈರಸ್ಯಂ ಕಥಾಂತರಾತ್ ।**
**ಭುಕ್ತ್ವಾ ತು ಕಥಯಿಷ್ಯಾಮಿ ನಿರ್ವಿಶಂಕಂ ವಿಭುಂಕ್ಷ್ವ ತತ್ ।**
**ಅಥಾಸೌ ಜಲಸಂಸ್ಕಾರಂ ಕೃತವಾನ್ಗೌತಮೋ ಮುನಿಃ ॥ ೨೦೪ ॥**

---

೨೦೧-೨೦೨. ಸ್ವಾಮಿ ! ನೀನು, ನನಗೆ ನಿವೇದನಮಾಡಿದ ಪತ್ರೆ, ಹೂ, ಫಲ ಮುಂತಾದುವನ್ನು ತಿನ್ನಬಾರದು. ನನಗೆ ನಿವೇದನಮಾಡಿದ ಮೇಲೆ ಅವೆಲ್ಲವನ್ನೂ ಭಾವಿಯಲ್ಲಿ ಹಾಕಬೇಕೆಂದು ಹೇಳಿದ್ದೀಯೆ. ಆ ನಿನ್ನ ಮಾತಿನಂತೆ ನಿನ್ನ ಎಂಜಲನ್ನು ತಿನ್ನಕೂಡದು. ನೀನು ಕೊಟ್ಟ ಎಂಜಲನ್ನು ತಿನ್ನದಿದ್ದರೆ ನಿನ್ನ ಮಾತು ನಿಶ್ಚಯ ವಾಗುತ್ತದೆ. ತಿಂದರೆ ನಿನ್ನ ಕೃಪೆ ದೊರೆಯುತ್ತದೆ. ಏನುಮಾಡಲಿ ? ಎಂದನು.

೨೦೩. ಸದಾಶಿವನು ಹೇಳಿದನು :—ಬಾಣಲಿಂಗಕ್ಕೆ ನಿವೇದನಮಾಡಿದು ದನ್ನೂ, ಸ್ವತಃ ಉದ್ಭವಿಸಿರುವ ಲಿಂಗಕ್ಕೆ ನಿವೇದನಮಾಡಿದುದನ್ನೂ, ಎದೆಯಲ್ಲಿ ಕಟ್ಟಿ ನೇತುಹಾಕಿಕೊಂಡಿರುವ ಲಿಂಗಕ್ಕೆ ನಿವೇದನಮಾಡಿದುದನ್ನೂ ತಿಂದರೆ, ಆ ನೈವೇದ್ಯ ಭಕ್ಷಣವು ಚಾಂದ್ರಾಯಣ ವ್ರತಕ್ಕೆ ಸಮವು.

೨೦೪. ಇದು ಊಟದ ವೇಳೆಯು. ಬೇರೆ ವಿಷಯವನ್ನು ತೆಗೆದುಕೊಂಡರೆ ಊಟದಲ್ಲಿ ವೈರಸ್ಯವುಂಟಾದೀತು. ಊಟಮಾಡಿದ ಮೇಲೆ ಎಲ್ಲವನ್ನೂ ಹೇಳುತ್ತೇನೆ. ಸಂದೇಹಪಡದೆ ಎಂಜಲನ್ನು ತಿನ್ನು. ಅನಂತರ ಕುಡಿಯುವ ನೀರನ್ನು ಗೌತಮನು ಸಂಸ್ಕರಿಸಿ ಸರಿಪಡಿಸಿದನು.

ಆರಕ್ತಸುಸ್ನಿಗ್ಧಸುಸೂಕ್ಷ್ಮಗಾತ್ರಾ-
ನನೇಕಧಾ ಧೌತಸುಶೋಷಿತಾಂಗಾನ್ ।
ತಟಾಗತೋಯೈಃ ಕತಬೀಜಘರ್ಷಿತೈ-
ರ್ವಿಶೋಧಿತೈಸ್ತೈಃ ಕರಕಾನಪೂರಯತ್ ॥ ೨೦೫ ॥

ನದ್ಯಾಸ್ಸೈಕತವೇದಿಕಾಂ ಸವತರಾಂ ಸಂಭಾದ್ಯ ಸೂಕ್ಷ್ಮಾಂಬರೈಃ
ಶುದ್ಧೈಶ್ಶ್ವೇತತರೈರಥೋಪರಿ ಘಟಾಂಸ್ತೋಯೇನ ಪೂರ್ಣಾನ್ನ್ಯಸೇತ್ ।
ಕ್ಷಿಪ್ತ್ವಾ ನಾಲಕಜಾತಿಮಾಸ್ತಪುಟಕಂ ತಕ್ಕೋಲಕಸ್ತೂರಿಕಾ ।
ಚೂರ್ಣಂ ಚಂದನಚಂದ್ರರಶ್ಮಿವಿಶದಾಂ ಮಾಲಾಂ ಪುಟಾನ್ತಾಂ ಕ್ಷಿಪೇತ್
॥ ೨೦೬ ॥
ಯಾಮಸ್ಯಾಪಿ ಪುನಶ್ಚ ವಾರಿ ವಸನೇನಾಶೋಧ್ಯ ಕುಂಭೇ ಕ್ಷಿಪೇತ್ ।
ಚಂದ್ರಗ್ರಂಥಿಮಥೋ ನಿಧಾಯ ವಕುಳಂ ಕ್ಷಿಪ್ತ್ವಾ ತಥಾ ಪಾಟಲಂ ॥ ೨೦೭ ॥

---

೨೦೫. ಕೆರೆಯ ನೀರನ್ನು ತಂದು ಅದಕ್ಕೆ ಚಿಲ್ಲದ ಬೀಜವನ್ನು ಹಾಕಿ ಶುದ್ಧಿ ಮಾಡಿ ಆ ನೀರನ್ನು ಒಂದು ಪಾತ್ರೆಗೆ ತುಂಬಿಟ್ಟು, ಅದಕ್ಕೆ ಸ್ವಲ್ಪ ಕೆಂಪಾದ ಸಣ್ಣಸಣ್ಣ ಹಳಿಗಳಾಗಿರುವ ಮಂಜುಗೆಡ್ಡೆಗಳನ್ನು ಚೆನ್ನಾಗಿ ತೊಳೆದು ಹಾಕಿದನು.

೨೦೬. ನದಿಯಿಂದ ಶುದ್ಧವಾದ ಸಣ್ಣ ಬಿಳಿಯ ಮರಳನ್ನು ತಂದು ಒಂದು ಜಾಗದಲ್ಲಿ ಜಗುಲಿಯನ್ನು ಮಾಡಬೇಕು. ಅದರ ಮೇಲೆ ಸೂಕ್ಷ್ಮವಾಗಿಯೂ, ಕೊಳೆಯಿಲ್ಲದೆಯೂ, ಬೆಳ್ಳಗೂ ಇರುವ ಬಟ್ಟೆಯನ್ನು ಮುಚ್ಚಬೇಕು. ಅದರ ಮೇಲೆ ಮಡಕೆಯನ್ನಿಟ್ಟು ಅದಕ್ಕೆ ನೀರನ್ನು ತುಂಬಬೇಕು. ಅದರೊಳಗೆ ಲಾಮಂಚವನ್ನು ಗಂಟುಕಟ್ಟಿ ಹಾಕಬೇಕು. ತಕ್ಕೋಲ (ಏಲಕ್ಕಿ) ಕಸ್ತೂರಿಗಳನ್ನು ಪುಡಿಮಾಡಿ ಆ ಪುಡಿಯನ್ನು ಅದರೊಳಕ್ಕೆ ಹಾಕಬೇಕು. ಬೆಳ್ಳಗಿರುವ ಹೂಮಾಲೆಗಳನ್ನು ಬಟ್ಟೆಯಲ್ಲಿ ಗಂಟುಕಟ್ಟಿ ಅದರೊಳಗೆ ಹಾಕಬೇಕು.

೨೦೭. ಒಂದುಯಾಮ ಎಂದರೆ ಮೂರು ಗಂಟೆಗಳಾದ ಮೇಲೆ ಆ ನೀರನ್ನು ಶೋಧಿಸಿ ಮತ್ತೊಂದು ಮಡಕೆಗೆ ಹಾಕಬೇಕು. ಅದರಲ್ಲಿ ಪಚ್ಚಕರ್ಪೂರವನ್ನೂ ಪಗಡೆ ಪಾದರಿಗಳ ಹೂವನ್ನೂ ಹಾಕಬೇಕು.

ಶೇಫಾಲಿಕಾಸ್ತಬಕಮುಥೋ ಜಲಂ ಚ ತತ್ರ
ವಿನ್ಯಸ್ಯ ಪ್ರಥಮತ ಏವ ತೋಯಶುದ್ಧಿಂ ।
ಕೃತ್ವಾಥೋ ಮೃದುತರಸೂಕ್ಷ್ಮವಸ್ತ್ರಖಂಡೇ-
ನಾವೇಷ್ಟ್ಯೇತ್ಸೃಣಿಕಮುಖಂ ಚ ಸೂಕ್ಷ್ಮಚಂದ್ರಂ ॥ ೨೦೮ ॥

ಅನಾತಪಪ್ರದೇಶೇ ತು ನಿಧಾಯ ಕರಕಾನಥ ।
ಮಂದವಾತಸಮೋಪೇತೇ ಸೂಕ್ಷ್ಮವ್ಯಜನವೀಜಿತೇ ॥ ೨೦೯ ॥

ಅಥ ಉರ್ವೀಶಸಲಿಲೈಸ್ಸಿಂಚಯೇತ್ಸೃಣಿಕಾಮಪಿ ।
ಸಂಸ್ಕೃತಾಃ ಸ್ವಾಯತಾಸ್ತತ್ರ ನರಾ ನಾರ್ಯೋಽಥವಾ ನೃಪ ॥ ೨೧೦ ॥

ತತ್ಕನ್ಯಾ ವಾ ಕ್ಷಾಳಿತಾಂಗಾ ಧೌತಮುಂಡಾಶ್ಚ ವಾಸಸಃ ।
ಮಧುಪಿಂಗಮನಿರ್ಯಾಸಮಸಾಂದ್ರಮಗರುದ್ರವಂ ॥ ೨೧೧ ॥

ಬಾಹುಮೂಲೇ ಚ ಕಂಠೇ ಚ ವಿಲಿಪ್ಯ ಸಾಂದ್ರಮೇವ ಚ ।
ಮಸ್ತಕೇ ಜಾಪಕಂ ನ್ಯಸ್ಯ ಪಂಚಗಂಧವಿಲೇಪನಂ ॥ ೨೧೨ ॥

---

೨೦೮. ಕಾಡುಮಲ್ಲಿಗೆ ಗೊಂಚಲನ್ನೂ ನೀರನ್ನೂ ಹಾಕಿ ಮೊದಲೇ ಆ ಘಾಂಪ ವನ್ನು ಶುದ್ಧಿಮಾಡಿರಬೇಕು. ಆಮೇಲೆ ಆ ಮಡಕೆಗೆ ಆ ನೀರನ್ನು ಸುರಿದು ತೆಳು ವಾದ ಬಟ್ಟೆಯಿಂದ ಬಾಯಿಮುಚ್ಚಿ ಕಟ್ಟಬೇಕು. ಮತ್ತು ಶೋಧಿಸುವಾಗ ಸಣ್ಣ ಕಣ್ಣುಗಳುಳ್ಳ ಜರಡಿಯನ್ನು ಹಾಕಿರಬೇಕು. ಅದಕ್ಕೂ ಬಟ್ಟೆಯನ್ನು ಕಟ್ಟಿರಬೇಕು.

೨೦೯. ಅನಂತರ ಬಿಸಿಲಿಲ್ಲದ ಪ್ರದೇಶದಲ್ಲಿ ಮೃದುವಾಗಿ ಗಾಳಿ ಬೀಸುತ್ತಿರು ವುದನ್ನು ನೋಡಿ, ಅಲ್ಲಿ ಅದನ್ನೂ ಮಂಜುಗಡ್ಡೆಯನ್ನೂ ಇಟ್ಟಿರಬೇಕು. ಎಲ್ಲೈ ದೊರೆಯೇ, ಅನಂತರ ಈ ನೀರನ್ನು ಅವರು ಕುಡಿಯುವ ಪಾತ್ರೆಗಳಿಗೆ ಬಿಡುತ್ತಿರಬೇಕು.

೨೧೦—೨೧೨. ಕೈಕಾಲುಗಳನ್ನು ತೊಳೆದುಕೊಂಡು ಶುದ್ಧರೂ ಮತ್ತು ಸ್ಥಿರ ಮನಸ್ಸುಳ್ಳವರೂ ಆದ ಗಂಡಸರು, ಹೆಂಗಸರು ಅಥವಾ ಹುಡುಗಿಯರುಗಳಲ್ಲಿ ಯಾರಾ ದರೂ ಕೊಳಕರಲ್ಲದವರು ದಪ್ಪವಾದ ಬಟ್ಟೆಯನ್ನು ನೆನಸಿ ಹಿಂಡಿಕೊಂಡು ಆ ಬಟ್ಟೆ ಯನ್ನು ಉಟ್ಟುಕೊಂಡು ನೋಡಲು ಮನೋಹರವಾಗಿ ನುಣ್ಣಗೂ ಹಳದಿಯಾಗಿಯೂ ಇರುವ ಅಗುರುವಿನ ಗಂಧವನ್ನು, ಕೆಳಕ್ಕೆ ಸೋರದಂತೆ ತೆಳ್ಳಗೆ ಕಂಕುಳು ಕತ್ತುಗಳಿ ಗೆಲ್ಲಾ ಪೂಸಿಕೊಂಡು, ತಲೆಯ ಮೇಲೆ ಜಪಸರವನ್ನು ಸುತ್ತಿಕೊಂಡು ಪಂಚಗಂಧ ವನ್ನು ಪೂಸಿಕೊಂಡಿರಬೇಕು.

ಪುಷ್ಪನದ್ಧಸುಕೇಶಾಸ್ತು ತಾಶ್ಚ್ಯಭಾಸ್ಸ್ವಸ್ಸುನಿರ್ಮಲಾಃ ।
ಏವಮೇವಾರ್ಚಿತಾ ಸಾರ್ಯ ಆತ್ತಕುಂಕುಮವಿಗ್ರಹಾಃ ॥ ೨೧೩ ॥

ಯುವತ್ಯಶ್ಚಾರುಸರ್ವಾಂಗ್ಯೋ ನಿತರಾಂ ಭೂಷಣೈರಪಿ ।
ಏತಾಪೃಗ್ವನಿತಾಭಿರ್ವಾ ನರೈರ್ವಾ ದಾಪಯೇಜ್ಜಲಂ ॥ ೨೧೪ ॥

ತೇಽಪಿ ಪ್ರದಾನಸಮಯೇ ಸೂಕ್ಷ್ಮವಸ್ತ್ರಾಲ್ಪವೇಷ್ಟನಂ ।
ಅಥ ವಾಮಕರೇ ನ್ಯಸ್ಯ ಕರಕಂ ಪಶ್ಯ ತತ್ರ ಹಿ ॥ ೨೧೫ ॥

ದಾರಿಕಾನ್ಯಸ್ತಮುನ್ಮುಚ್ಯ ತತಸ್ತೋಯಂ ಪ್ರದಾಪಯೇತ್ ।
ಏವಂ ಸತ್ಕಾರಯಾಮಾಸ ಗೌತಮೋ ಭಗವಾನ್ಮುನಿಃ ॥ ೨೧೬ ॥

ಮಹೇಶಾದಿಷು ಸರ್ವೇಷು ಭುಕ್ತವತ್ಸು ಮಹಾತ್ಮಸು ।
ಪ್ರಕ್ಷಾಳಿತಾಂಘ್ರಿಹಸ್ತೇಷು ಗಂಧೋದ್ವರ್ತಿತಪಾಣಿಷು ॥ ೨೧೭ ॥

---

೨೧೩. ಜುಟ್ಟಿಗೆ ಹೂವನ್ನು ಮುಡಿದುಕೊಂಡಿರಬೇಕು. ಇಂತಹವರು ಯೋಗ್ಯರಾಗಿರುತ್ತಾರೆ. ಹೆಂಗಸರಾದರೆ ಅವರೂ ಈರೀತಿ ಗಂಧಾದಿಗಳಿಂದಲಂಕೃತರಾಗಿ ಕುಂಕುಮವನ್ನು ಹಚ್ಚಿಕೊಂಡಿರಬೇಕು.

೨೧೪. ಆ ಹೆಂಗಸರು ಸರ್ವಾಂಗ ಸುಂದರರಾಗಿರಬೇಕು. ಒಡವೆಗಳನ್ನು ತೊಟ್ಟಿರಬೇಕು. ಈರೀತಿಯಾದ ಹೆಂಗಸರಾಗಲಿ ಗಂಡಸರಾಗಲಿ ಗಂಧೋದಕವನ್ನು ಬಡಿಸಬೇಕು.

೨೧೫-೨೧೬. ಅವರು ನೀರನ್ನು ಬಡಿಸುವಾಗ ನವಿರಾದ ಬಟ್ಟೆಗಳನ್ನಿಟ್ಟಿರಬೇಕು. ಅದು ಚಿಕ್ಕದಾಗಿರಬೇಕು. ಎಡದಕ್ಕೈಯಲ್ಲಿ ಆ ಮಂಜುಗಡ್ಡೆಯನ್ನು ಇಟ್ಟುಕೊಂಡಿರಬೇಕು. ಅದನ್ನು ಬಡಿಸುವಾಗ ಒಂದು ಸಣ್ಣ ಪಾತ್ರೆಗೆ ಹಾಕಿಕೊಂಡು ನೀರನ್ನು ಬಡಿಸಬೇಕು. ಈರೀತಿ ಪೂಜ್ಯನಾದ ಗೌತಮನು ಎಲ್ಲರನ್ನೂ ಸತ್ಕರಿಸಿದನು.

೨೧೭-೨೧೮. ಮಹಾತ್ಮರಾದ ಮಹೇಶನೇ ಮುಂತಾದವರು ಊಟಮಾಡಿ ಕೈಕಾಲುಗಳನ್ನು ತೊಳೆದುಕೊಂಡು ಕೈಗೆ ಗಂಧವನ್ನು ಪೂಸಿಕೊಂಡರು. ಮಹೇಶನು

**ಅಥಾಸನಸಮಾಸೀನೇ ದೇವದೇವೇ ಮಹೇಶ್ವರೇ ।**
**ಅಥ ನೀಚಸಮಾಸೀನಾ ದೇವಾಸ್ಸರ್ಷಿಗಣಾಸ್ತಥಾ ॥ ೨೧೮ ॥**

**ಮಣಿಪಾತ್ರೇಷು ಸಂವೇಷ್ಟ್ಯ ಪೂಗಖಂಡಾನ್ಸುಧೂಪಿತಾನ್ ।**
**ಅಕೋಣವರ್ತುಲಾನ್ಸ್ಥೂಲಾನಸೂಕ್ಷ್ಮಾನ್ಕೃಶಾನಪಿ ॥ ೨೧೯ ॥**

**ಶ್ವೇತಪಾತ್ರಾಣಿ ಸಂಶೋಧ್ಯ ಕ್ಷಿಪ್ತ್ವಾ ಕರ್ಪೂರಖಂಡಕಂ ।**
**ಚೂರ್ಣಂ ಚ ಶಂಕರಾಯಾಥ ನಿವೇದಯತಿ ಗೌತಮೋ ॥ ೨೨೦ ॥**

**ಗೃಹಾಣ ದೇವ ತಾಂಬೂಲಮಿತ್ಯುಕ್ತವಚನೇ ಮುನೌ ।**
**ಕಪೇ ಗೃಹಾಣ ತಾಂಬೂಲಂ ಪ್ರಯಚ್ಛ ಮಮ ಖಂಡಕಾನ್ ॥ ೨೨೧ ॥**

**ಉವಾಚ ವಾನರೋ ನಾಸ್ತಿ ಮಮ ಶುದ್ಧಿರ್ಮಹೇಶ್ವರ ।**
**ಅನೇಕಫಲಭುಕ್ತತ್ವಾದ್ವಾನರಸ್ತು ಶುಚಿಃ ಕಥಂ ॥ ೨೨೨ ॥**

---

ಎತ್ತರವಾದ ಪೀಠದ ಮೇಲೆ ಕುಳಿತನು. ಉಳಿದ ದೇವಋಷಿ ರಾಕ್ಷಸಾದಿಗಳು ತಗ್ಗಾದ ಆಸನದಲ್ಲಿ ಕುಳಿತರು.

೨೧೯-೨೨೦. ಮೂಲೆಯಿಲ್ಲದಂತೆ ದುಂಡಗಿರುವ, ತೆಳ್ಳಗೂ, ದಪ್ಪಗೂ ಆಗದಿರುವಂತೆ ಕತ್ತರಿಸಿರುವ ಅಡಕೆಗೆ ವಾಸನೆಕಟ್ಟಿ ಅದನ್ನು ಮಣಿಯ ಪಾತ್ರೆಯಲ್ಲಿ ಕಟ್ಟಿಟ್ಟು, ಬಿಳಿಯದಾದ (ಬೆಳ್ಳಿಯ) ಪಾತ್ರೆಗಳನ್ನು ತೊಳೆದು ಅದರಲ್ಲಿ ಪಚ್ಚಕರ್ಪೂರದ ಪುಡಿಯನ್ನು ಹಾಕಿ ಇವೆರಡನ್ನೂ ಶಂಕರನಿಗೆ ಗೌತಮನು ಅರ್ಪಿಸಿದನು.

೨೨೧. ಗೌತಮನು ಎಲೈ ಮಹಾದೇವನೇ, ತಾಂಬೂಲವನ್ನು ತೆಗೆದುಕೋ ಎಂದು ಹೇಳಲು ಹನುಮಂತನನ್ನು ಕುರಿತು ಎಲೈ ಕಪಿಯೇ, ನೀನು ತಾಂಬೂಲವನ್ನು ತೆಗೆದುಕೊಂಡು ಅದನ್ನು ಸರಿಮಾಡಿ ನನಗೆ ಚೂರುಮಾಡಿ ಕೊಡು ಎಂದನು.

೨೨೨. ಎಲೈ ಮಹೇಶ್ವರನೇ, ಕಪಿಗಳು ಅನೇಕಬಗೆಯ ಫಲಗಳನ್ನು ತಿನ್ನುವುದರಿಂದ ಶುದ್ಧವಾಗಿರುವುದಿಲ್ಲ. ಆದ್ದರಿಂದ ನಾನು ಶುದ್ಧನಲ್ಲ. ನಾನು ಕೊಡಲಾರೆ ಎಂದನು.

॥ ಸದಾಶಿವ ಉವಾಚ ॥

ಮದ್ವಾಕ್ಯಾದಖಿಲಂ ಶುದ್ಧ್ಯೇನ್ಮದ್ವಾಕ್ಯಾದಮೃತಂ ವಿಷಂ ।
ಮದ್ವಾಕ್ಯಾದಖಿಲಾವೇದಾ ಮದ್ವಾಕ್ಯಾದ್ದೇವತಾದಯಃ ॥ ೨೨೩ ॥

ಮದ್ವಾಕ್ಯಾದ್ಧರ್ಮವಿಜ್ಞಾನಂ ಮದ್ವಾಕ್ಯಾನ್ಮೋಕ್ಷ ಉಚ್ಯತೇ ।
ಪುರಾಣಾನ್ಯಾಗಮಾಶ್ಚೈವ ಸ್ಮೃತಯೋ ಮಮ ವಾಕ್ಯತಃ ॥ ೨೨೪ ॥

ಅತೋ ಗೃಹಾಣ ತಾಂಬೂಲಂ ಮಮ ದದ್ಯಾಃ ಸುಖಂಡಕಾನ್ ।
ಹರಿರ್ವಾಮಕರೇಣಾದಾತ್ತಾಂಬೂಲಂ ಪೂಗಖಂಡಕಂ ॥ ೨೨೫ ॥

ತತಃ ಪತ್ರಾಣಿ ಸಂಗೃಹ್ಯ ತತಃ ಖಂಡಾನ್ಸಮಾರ್ಪಯತ್ ।
ಕರ್ಪೂರಮಗ್ರತೋ ದತ್ತಂ ಗೃಹೀತ್ವಾಭಕ್ಷಯಚ್ಛಿವಃ ॥ ೨೨೬ ॥

ದೇವೇ ತು ಕೃತತಾಂಬೂಲೇ ಪಾರ್ವತೀ ಮಂದರಾಚಲಾತ್ ।
ಜಯಾವಿಜಯಯೋರ್ಹಸ್ತಂ ಗೃಹೀತ್ವಾಯಾನ್ಮುನೇರ್ಗೃಹಂ ॥ ೨೨೭ ॥

---

೨೨೩-೨೨೪. ಸದಾಶಿವನು ಹೇಳಿದನು :— ನನ್ನ ಮಾತಿನಿಂದ ಎಲ್ಲವೂ ಶುದ್ಧವಾಗುತ್ತವೆ, ನನ್ನ ಮಾತಿನಿಂದ ಅಮೃತವೂ ವಿಷವಾಗುತ್ತದೆ, ನನ್ನ ಮಾತಿನಂತೆಯೇ ವೇದಗಳೂ ಇವೆ, ನನ್ನ ಮಾತಿನಂತೆಯೇ ದೇವತೆಗಳೂ ಇದ್ದಾರೆ, ನನ್ನ ಮಾತಿನಿಂದಲೇ ಧರ್ಮವು ನಿರ್ಧರಿಸಲ್ಪಡುತ್ತದೆ, ನನ್ನ ಮಾತಿನಿಂದಲೇ ಮೋಕ್ಷವು ಸಿಕ್ಕುತ್ತದೆ. ಪುರಾಣಗಳೂ, ಆಗಮಗಳೂ, ಸ್ಮೃತಿಗಳೂ ಎಲ್ಲವೂ ನನ್ನ ಮಾತಿನ ಆಧಾರದಿಂದಲೇ ಇರುವುವು.

೨೨೫. ಆದ್ದರಿಂದ ತಾಂಬೂಲವನ್ನು ತೆಗೆದುಕೋ. ನನಗೆ ಅಡಕೆಯನ್ನು ಕೊಡು ಎನ್ನಲು ಕಪಿಯು ಎಡಗೈಯ್ಯಿಂದ ತಾಂಬೂಲವನ್ನೂ ಅಡಕೆಯನ್ನೂ ತೆಗೆದುಕೊಂಡನು.

೨೨೬. ಆಗ ಕಪಿಯು ವೀಳೆಯದೆಲೆಗೆ ಸಂಸ್ಕಾರಗಳನ್ನು ಮಾಡಿ ಮಡಿಸಿ, ಅದರೊಳಕ್ಕೆ ಅಡಕೆಯನ್ನು ಹಾಕಿ, ತುದಿಯಲ್ಲಿ ಪಚ್ಚಕರ್ಪೂರವನ್ನಿಟ್ಟು ಶಿವನಿಗೆ ಕೊಡಲು ಶಿವನು ಅದನ್ನು ತೆಗೆದುಕೊಂಡು ತಿಂದನು.

೨೨೭. ಸ್ವಾಮಿಯು ತಾಂಬೂಲವನ್ನು ಸವಿಯುತ್ತಿರಲು, ಮಂದರಪರ್ವತದಿಂದ ಪಾರ್ವತಿಯು ಹೊರಟು ಜಯವಿಜಯೆಯರು ಹಸ್ತಲಾಘವನ್ನು ಕೊಡುತ್ತಿರಲು, ಆ ಗೌತಮನ ಮನೆಗೆ ಬಂದಳು.

**ದೇವಪಾದೌ ತತೋ ನತ್ವಾ ವಿನಮ್ರವದನಾಭವತ್ ।**
**ಉನ್ನಮಯ್ಯ ಮುಖಂ ತಸ್ಯಾ ಇದ ಮಾಹ ತ್ರಿಲೋಚನಃ** ॥ ೨೨೮ ॥

**ತ್ವದರ್ಥಂ ದೇವದೇವೇಶಿ ಹ್ಯಪರಾಧಃ ಕೃತೋ ಮಯಾ ।**
**ಯತ್ತ್ವಾಂ ವಿಹಾಯ ಭುಕ್ತಂ ಹಿ ತಥಾನ್ಯಚ್ಛೃಣು ಸುಂದರಿ** ॥ ೨೨೯ ॥

**ಅಥ ಸ್ವಮಂದಿರೇ ಸ್ಥಾಪ್ಯ ದೇವದೇವವಿವರ್ಜಿತೇ ।**
**ಸರ್ವಬನ್ಧವಿಮುಕ್ತೇ ಚ ಮಹದೇನೋ ಮಯಾ ಕೃತಂ** ॥ ೨೩೦ ॥

**ಕ್ಷನ್ತುಮರ್ಹಸಿ ದೇವೇಶಿ ತ್ಯಕ್ತಕೋಪಾ ವಿಲೋಕಯ ।**
**ನ ಬಭಾಷೈವಮುಕ್ತಾ ಸಾ ಅರುಂಧತ್ಯಾ ಹಿ ನಿರ್ಯಯೌ** ॥ ೨೩೧ ॥

**ನಿರ್ಗಚ್ಛನ್ತೀಂ ಮುನಿರ್ಜ್ಞಾತ್ವಾ ದಂಡವತ್ಪ್ರಣನಾಮ ಚ ।**
**ತದಾರಭ್ಯ ಮಹೇಶಾಯ ದಂಡಪ್ರಣತಿಸಂಸ್ತುತಿಂ ।**
**ಕುರ್ವನ್ನುವಾಚ ಚ ಶಿವಾ ಗೌತಮ ತ್ವಂ ಕಿಮಿಚ್ಛಸಿ** ॥ ೨೩೨ ॥

---

೨೨೮. ಬಂದವಳು ಈಶ್ವರನ ಪಾದಗಳಿಗೆ ನಮಸ್ಕರಿಸಿ ತಲೆಯನ್ನು ತಗ್ಗಿಸಿಕೊಂಡು ನಿಂತುಕೊಳ್ಳಲು ಆಕೆಯ ಮುಖವನ್ನು ಸ್ವಾಮಿಯು ಮೇಲಕ್ಕೆತ್ತಿ ಇಂತೆಂದನು.

೨೨೯. ಎಲೈ ಪಾರ್ವತಿಯೇ, ನಿನ್ನನ್ನು ಬಿಟ್ಟು ಭೋಜನಮಾಡಿದ ಒಂದು ದೊಡ್ಡ ತಪ್ಪನ್ನು ನಿನ್ನ ವಿಷಯದಲ್ಲಿ ಮಾಡಿದೆನು. ಹೇಳುತ್ತೇನೆ.

೨೩೦. ನಾನೂ, ದೇವಾದಿದೇವತೆಗಳೂ, ಬಂಧುಗಳೂ, ಇಲ್ಲದಿರುವ ನನ್ನ ಮನೆಯಲ್ಲಿ ನಿನ್ನೊಬ್ಬಳನ್ನೇ ಬಿಟ್ಟು ಬಂದುದು ಬಹು ಪಾಪ ಕೆಲಸವಲ್ಲವೇ.

೨೩೧. ಎಲೈ ದೇವೇಶಿಯೇ, ಅದನ್ನು ನೀನು ಕ್ಷಮಿಸಿ ಕೋಪವನ್ನು ಬಿಟ್ಟು ನನ್ನನ್ನು ನೋಡು ಎನ್ನಲು, ಆಕೆಯು ಏನನ್ನೂ ಹೇಳದೆ ಅರುಂಧತಿಯೊಡನೆ ಹೊರಟುಹೋದಳು.

೨೩೨. ಪಾರ್ವತಿಯು ಹೊರಟು ಹೋಗುತ್ತಿರುವುದನ್ನು ಗೌತಮನು ತಿಳಿದು ಆಕೆಗೆ ದಂಡಪ್ರಣಾಮವನ್ನು ಮಾಡಿದನು. ಈಶ್ವರನಿಗೂ ದಂಡನಮಸ್ಕಾರವನ್ನು ಮಾಡಿದನು. ಅದೇ ಈಶ್ವರನಿಗೂ ಪ್ರಿಯವಾಯಿತು. ಆಗ ಪಾರ್ವತಿಯು ಗೌತಮ ನಿನಗೇನು ಬೇಕು ಎಂದು ಕೇಳಿದಳು.

॥ ಗೌತಮ ಉವಾಚ ॥

ಕೃತಕೃತ್ಯೋಽಸ್ಮಿ ದೇವೇಶಿ ಯದಿ ದೇಯೋ ವರೋ ಮಮ ।
ಮನ್ಮಂದಿರೇ ಮಹಾಭಾಗೇ ಭೋಕ್ತುಮರ್ಹಸಿ ಸಾಂಪ್ರತಂ ॥ ೨೩೩ ॥

॥ ದೇವ್ಯುವಾಚ ॥

ಭೋಕ್ಷ್ಯಾಮಿ ತವ ಗೇಹೇಽಹಂ ಶಂಕರಾನುಮತಾ ಮುನೇ ।
ಗತ್ವೇಶಂ ಗೌತಮೋ ವಿಪ್ರೋ ಲಬ್ಧಾನುಜ್ಞಃ ಪುನರ್ಗತಿಃ ॥ ೨೩೪ ॥

ಭೋಜಯಾಮಾಸ ಗಿರಿಜಾಂ ದೇವೀಂ ಚಾರುಂಧತೀಂ ತಥಾ ।
ಭುಕ್ತ್ವಾಥ ಪಾರ್ವತೀ ಸರ್ವಂ ಗಂಧಪುಷ್ಪಸುಭೂಷಣಾ ॥ ೨೩೫ ॥

ಸಹಾನುಚರಕನ್ಯಾಭಿಃ ಸಹಸ್ರಾಭಿರ್ಹರಂ ಯಯೌ ।
ಅಥಾಹ ಶಂಕರೋ ದೇವೀಂ ಗಚ್ಛ ಗೌತಮಮಂದಿರಂ ॥ ೨೩೬ ॥

---

೨೩೩. ಗೌತಮನು ಹೇಳಿದನು:—ಎಲೈ ದೇವೇಶಿಯೇ, ನಾನು ಧನ್ಯನಾದೆನು. ನೀನು ವರವನ್ನು ಕೊಡುವುದಾದರೆ ಈಗ ನನ್ನ ಮನೆಯಲ್ಲಿ ಭೋಜನ ಮಾಡು.

೨೩೪. ದೇವಿಯು ಹೇಳಿದಳು:—ಎಲೈ ಋಷಿಯೇ, ಶಂಕರನು ಒಪ್ಪಿದರೆ ನಿನ್ನ ಮನೆಯಲ್ಲಿ ಊಟಮಾಡುತ್ತೇನೆ ಎಂದೆನ್ನಲು, ಗೌತಮನು ಶಂಕರನ ಬಳಿಗೆ ಹೋಗಿ ಅಲ್ಲಿ ಅನುಜ್ಞೆಯನ್ನು ಪಡೆದು ಬಂದು, ಆಕೆಯನ್ನೂ ಅರುಂಧತಿಯನ್ನೂ ಭೋಜನಮಾಡಿಸಿದನು.

೨೩೫. ಊಟಮಾಡಿದ ಮೇಲೆ ಪಾರ್ವತಿಯು ಗಂಧಪುಷ್ಪಗಳನ್ನು ತೆಗೆದು ಕೊಂಡು ಭೂಷಿತಳಾಗಿ, ಜೊತೆಯವರಾದ ಸಾವಿರಾರು ಮಂದಿ ಕನ್ಯೆಯರೊಡನೆ ಶಿವನ ಬಳಿಗೆ ಹೋದಳು.

೨೩೬. ಆಗ ಶಂಕರನು ಎಲೈ ಪಾರ್ವತಿಯೇ, ನೀನು ಗೌತಮನ ಮನೆಗೆ ಹೋಗು. ನಾನು ಸಂಧ್ಯಾವಂದನೆಯನ್ನು ಮಾಡಿಕೊಂಡು ಮತ್ತೆ ಮನೆಗೆ ಬರುತ್ತೇನೆ ಎಂದನು.

ಸಂಧ್ಯೋಪಾಸ್ತಿಮಹಂ ಕೃತ್ವಾ ಹ್ಯಾಗಚ್ಛಾಮಿ ಪುನರ್ಗೃಹಂ ।
ಇತ್ಯುಕ್ತ್ವಾ ಪ್ರಯಯೌ ದೇವೀ ಗೌತಮಸ್ಯೈವ ಮಂದಿರಂ ॥ ೨೩೭ ॥

ಸಂಧ್ಯಾವಂದನಕಾಮಾಶ್ಚ ಸರ್ವ ಏವ ವಿನಿರ್ಗತಾಃ ।
ಕೃತಸಂಧ್ಯಾಸ್ತಟಾಕೇ ತು ಮಹೇಶಾದ್ಯಾಸ್ತು ಕೃತ್ಸ್ನಶಃ ॥ ೨೩೮ ॥

ಅಥೋತ್ತರಮುಖಶ್ಶಂಭುರ್ನ್ಯಾಸಂ ಕೃತ್ವಾ ಜಜಾಪ ಹ ।
ಅಥ ವಿಷ್ಣುರ್ಮಹಾತೇಜಾ ಮಹೇಶಮಿದಮಬ್ರವೀತ್ ॥ ೨೩೯ ॥

॥ ವಿಷ್ಣುರುವಾಚ ॥

ಸರ್ವೈರ್ನಮಸ್ಯತೇ ಯಸ್ತು ಸರ್ವೈರೇವ ಸಮರ್ಚ್ಯತೇ ।
ಹೂಯತೇ ಸರ್ವಯಜ್ಞೇಷು ಸ ಭವಾನ್ಕಿಂ ಜಪಿಷ್ಯತಿ ॥ ೨೪೦ ॥

ರಚಿತಾಂಜಲಯಸ್ಸರ್ವೇ ತ್ವಾಮೇವೈಕಮುಪಾಸತೇ ।
ಸ ಭವಾನ್ದೇವದೇವೇಶ ಕಸ್ಮೈ ವಾ ರಚಿತಾಂಜಲಿಃ ॥ ೨೪೧ ॥

---

೨೩೭. ಶಿವನು ಹೀಗೆನ್ನಲು ದೇವಿಯು ಮತ್ತೆ ಗೌತಮನ ಮನೆಗೆ ಹೋದಳು. ಸಂಧ್ಯಾವಂದನೆಗೋಸ್ಕರ ಎಲ್ಲರೂ ಹೊರಟರು.

೨೩೮. ಮಹೇಶನೇ ಮೊದಲಾಗಿ ಅವರೆಲ್ಲರೂ ಸಂಧ್ಯಾವಂದನೆಯನ್ನು ಅಲ್ಲಿನ ಕೆರೆಯಲ್ಲಿ ಮಾಡಿದರು.

೨೩೯. ಅನಂತರ ಶಿವನು ಉತ್ತರಮುಖವಾಗಿ ಕುರಿತು ನ್ಯಾಸವನ್ನು ಮಾಡಿಕೊಂಡು ಜಪಮಾಡಿದನು. ಆಗ ವಿಷ್ಣುವು ಮಹಾತ್ಮನಾದ ಶಿವನನ್ನು ಕುರಿತು ಇಂತೆಂದನು.

೨೪೦. ವಿಷ್ಣುವು ಹೇಳಿದನು :— ಯಾವನನ್ನು ಎಲ್ಲರೂ ನಮಸ್ಕರಿಸುವರೋ, ಪೂಜಿಸುವರೋ, ಯಾವನಿಗೆ ಯಜ್ಞದಲ್ಲಿ ಎಲ್ಲರೂ ಹೋಮಮಾಡುತ್ತಾರೆಯೋ ಅಂತಹ ನೀನು ಏನನ್ನು ಜಪಿಸುತ್ತಿದ್ದೀಯೆ ?

೨೪೧. ಎಲ್ಲರೂ ಕೈಮುಗಿದುಕೊಂಡು ನಿನ್ನನ್ನೇ ಉಪಾಸನಮಾಡುತ್ತಿರುವಾಗ ಆ ದೇವದೇವೇಶನಾದ ನೀನು ಯಾರಿಗೆ ಕೈಮುಗಿಯುತ್ತಿದ್ದೀಯೆ ?

ನಮುಸ್ಕಾರಾದಿಪುಣ್ಯಾನಾಂ ಫಲದಸ್ತ್ವಂ ಮಹೇಶ್ವರಃ ।
ತವ ಕಃ ಫಲದೋ ವಂದ್ಯಃ ಕೋಽವಾ ತ್ವತ್ತೋ ಧಿಕೋ ವದ ॥ ೨೪೨ ॥

॥ ಶಂಕರ ಉವಾಚ ॥

ಧ್ಯಾಯೇ ನ ಕಿಂಚಿದ್ಗೋವಿಂದ ನ ನಮಸ್ಯೇ ಹ ಕಿಂಚನ ।
ನೋಪಾಸ್ಯೇ ಕಂ ಚ ನ ಹರೇ ನ ಜಪಿಷ್ಯೇ ಹ ಕಿಂಚನ ॥ ೨೪೩ ॥

ಕಿಂ ತು ನಾಸ್ತಿಕಜಂತೂನಾಂ ಪ್ರವೃತ್ತ್ಯರ್ಥಮಿದಂ ಮಯಾ ।
ದರ್ಶನೀಯಂ ಹರೇ ತೇಸ್ಯುರನ್ಯಥಾ ಪಾಪಕಾರಿಣಃ ॥ ೨೪೪ ॥

ತಸ್ಮಾಲ್ಲೋಕೋಪಕಾರಾರ್ಥಮಿದಂ ಸರ್ವಂ ಕೃತಂ ಮಯಾ ।
ಓಮಿತ್ಯುಕ್ತ್ವಾ ಹರಿರಥ ತಂ ನತ್ವಾ ಸಮುತಿಷ್ಠತ ॥ ೨೪೫ ॥

ಅಥ ತೇ ಗೌತಮಗೃಹಂ ಪ್ರಾಪ್ಯ ದೇವಗಣರ್ಷಯಃ ।
ಸರ್ವೇ ಪೂಜಾ ಮಥೋ ಚಕ್ರುರ್ದೇವಾಯ ಶೂಲಿನೇ ಸದಾ ॥ ೨೪೬ ॥

---

೨೪೨. ನಮಸ್ಕಾರವೇ ಮುಂತಾದ ಪುಣ್ಯಗಳಿಗೆ ನೀನು ಫಲವನ್ನು ಕೊಡ ತಕ್ಕವನು. ಅಂತಹ ನಿನಗೆ ಫಲವನ್ನು ಕೊಡುವವನು ಯಾರು? ಯಾರಿಗೆ ಕೈ ಮುಗಿಯುತ್ತಿದ್ದೀಯೆ?

೨೪೩-೨೪೪. ಶಂಕರನು ಹೇಳಿದನು:—ಎಲೈ ಗೋವಿಂದನೇ, ಏನನ್ನೂ ಧ್ಯಾನಿಸುವುದಿಲ್ಲ, ಯಾವುದಕ್ಕೂ ನಮಸ್ಕರಿಸುವುದಿಲ್ಲ, ಯಾವುದನ್ನೂ ಉಪಾಸನೆ ಮಾಡುವುದದಿಲ್ಲ, ಯಾವುದನ್ನು ಜಪಿಸುವುದೂ ಇಲ್ಲ. ಆದರೆ ನಾಸ್ತಿಕರಿಗೋಸ್ಕರ ಇದನ್ನು ನಾನು ಮಾಡಿ ತೋರಿಸಬೇಕು. ಇಲ್ಲದಿದ್ದರೆ ಅವರು ಇದೊಂದನ್ನೂ ಮಾಡದೆ ಪಾಪಿಗಳಾಗುತ್ತಾರೆ.

೨೪೫. ಆದ್ದರಿಂದ ಲೋಕೋಪಕಾರಕ್ಕೋಸ್ಕರ ಇದೆಲ್ಲವನ್ನೂ ನಾನು ಮಾಡುತ್ತೇನೆ. ಎನ್ನಲು, ಹರಿಯು ಸರಿ ಎಂದು ಹೇಳಿ ಆತನಿಗೆ ನಮಸ್ಕರಿಸಿ ಕುಳಿತು ಕೊಂಡನು.

೨೪೬. ಅನಂತರ ಆ ದೇವತೆಗಳೂ, ಋಷಿಗಳೂ ಎಲ್ಲರೂ ಗೌತಮನ ಮನೆಗೆ ಬಂದರು. ಅನಂತರ ಎಲ್ಲರೂ ಶಿವನಿಗೆ ಪೂಜೆಯನ್ನು ಮಾಡಿದರು.

ದೇವೋ ಹನೂಮತಾ ಸಾರ್ಧಂ ಗಾಯನ್ನಾಸ್ತೇ ರಘೂತ್ತಮ ।
ಪಂಚಾಕ್ಷರೀಂ ಮಹಾವಿದ್ಯಾಂ ಸರ್ವ ಏವ ತದಾಜಪನ್ ॥ ೨೪೭ ॥

ಹನೂಮತ್ಕರಮಾಲಂಬ್ಯ ದೇವ್ಯಭ್ಯಾಶಂ ಗತೋ ಹರಃ ।
ಏಕಶಯ್ಯಾಸಮಾಸೀನೌ ತಾವುಭೌ ದೇವದಂಪತೀ ॥ ೨೪೮ ॥

ಗಾಯನ್ನಾಸ್ತೇ ಸ ಹನುಮಾಂಸ್ತುಂಬುರುರ್ನಾರದಸ್ತಥಾ ।
ನಾನಾವಿಧವಿಲಾಸಾಂಶ್ಚ ಚಕಾರ ಪರಮೇಶ್ವರಃ ।
ಆಹೂಯ ಪಾರ್ವತೀಮೀಶ ಇದಂ ವಾಕ್ಯಮುವಾಚ ಹ ॥ ೨೪೯ ॥

॥ ಶ್ರೀಶಿವ ಉವಾಚ ॥

ರಚಯಿಷ್ಯಾಮಿ ಧಮ್ಮಿಲ್ಲಮೇಹಿ ಮತ್ಪುರತಃ ಶುಭೇ ॥ ೨೫೦ ॥

ದೇವ್ಯಾಹ ನ ಚ ಯುಕ್ತಂ ತದ್ಭರ್ತ್ರಾ ಶುಶ್ರೂಷಣಂ ಸ್ತ್ರಿಯಾಃ ।
ಕೇಶಪ್ರಸಾಧನಕೃತಾವನರ್ಥಾಂತರಮಾಪತೇತ್ ॥ ೨೫೧ ॥

---

೨೪೭. ಮಹಾದೇವನು ಹನುಮಂತನೊಡನೆ ಹಾಡುತ್ತ ಕುಳಿತಿದ್ದನು. ಆಗ ಎಲ್ಲರೂ ಮಹಾವಿದ್ಯೆಯಾದ ಪಂಚಾಕ್ಷರಿಯನ್ನು ಜಪಿಸುತ್ತಿದ್ದರು.

೨೪೮. ಆಗ ಮಹೇಶನು ಹನುಮಂತನ ಕೈಯನ್ನು ಹಿಡಿದುಕೊಂಡು ಪಾರ್ವತಿಯ ಬಳಿಗೆ ಹೋದನು. ಆ ದೇವದಂಪತಿಗಳಿಬ್ಬರೂ ಒಂದೇ ಆಸನದಲ್ಲಿ ಕುಳಿತರು.

೨೪೯. ಅವರೆದುರಿಗೆ ಹನುಮಂತನೂ, ತುಂಬರು ನಾರದರೂ ಹಾಡುತ್ತಿದ್ದರು. ಪರಮೇಶ್ವರನು ಪಾರ್ವತಿಯೊಡನೆ ನಾನಾವಿಧ ವಿಲಾಸಗಳನ್ನು ಮಾಡುತ್ತಿದ್ದನು. ಆಗ ಪಾರ್ವತಿಯನ್ನು ಕುರಿತು ಪರಮೇಶ್ವರನು ಈ ಮಾತನ್ನು ಹೇಳಿದನು.

೨೫೦. ಶಿವನು ಹೇಳಿದನು :—ಎಲೈ ಪಾರ್ವತಿಯೇ, ನಿನಗೆ ತಲೆಬಾಚಿ ಜಡೆ ಹಾಕುತ್ತೇನೆ, ಎದುರಿಗೆ ಬಾ ಎಂದನು.

೨೫೧. ಆಗ ಪಾರ್ವತಿಯು, ಗಂಡನಿಂದ ಹೆಂಡತಿಯು ಶುಶ್ರೂಷೆಯನ್ನು ಮಾಡಿಸಿಕೊಳ್ಳುವುದು ಯುಕ್ತವಲ್ಲ. ಅಲ್ಲದೆ ಗಂಡನು ತಲೆಬಾಚಲು ಮೊದಲು ಮಾಡಿದರೆ, ಅದರ ಅಂಗಗಳಾದ ಕೆಲಸಗಳನ್ನೂ ಮಾಡಬೇಕಾಗುತ್ತದೆ. ಅದು ಯುಕ್ತವಲ್ಲ.

ಕೇಶಪ್ರಸಾಧನೇ ದೇವ ತತ್ತ್ವಂ ಸರ್ವಂ ನ ಚೇಪ್ಸಿತಂ ।
ಅಥ ಬಂಧೇ ಕೃತೇ ಪಶ್ಚಾದಂಸಪ್ರಾಂತಪ್ರಮಾರ್ಜನಂ ॥ ೨೫೨ ॥

ತನೋಶ್ಚರಮಸಂಲಗ್ನಂ ಕೇಶಪುಷ್ಪಾದಿಮಾರ್ಜನಂ ।
ಏತಸ್ಮಿನ್ವರ್ತಮಾನೇ ತು ಮಹಾತ್ಮಾನೋ ಯಥಾಗಮನ್ ॥ ೨೫೩ ॥

ತದಾ ಕಿಮುತ್ತರಂ ವಾಚ್ಯಂ ತವ ದೇವಾದಿವಂದಿನಃ ।
ನಾಯಾಂತಿ ಚೇದಥ ವಿಭೋ ಭೀತಿರ್ನಾಶಮುಪೈಷ್ಯತಿ ॥ ೨೫೪ ॥

ಏವಂ ಹಿ ಭಾಷಮಾಣಾಂ ತಾಂ ಕರೇಣಾಕೃಷ್ಯ ಶಂಕರಃ ।
ಸ್ವೋರ್ವೋಸ್ತಾಂ ಸ್ಥಾಪಯಿತ್ವೈವ ವಿಸ್ರಸ್ಯ ಕಚಬಂಧನಂ ॥ ೨೫೫ ॥

ವಿಭಜ್ಯ ಚ ಕರಾಭ್ಯಾಂ ಸ ಪ್ರಸಸಾರ ನಖೈರಪಿ ।
ವಿಷ್ಣುದತ್ತಾಂ ಪಾರಿಜಾತಸ್ರಜಂ ಕಚಗತಾಮಪಿ ॥ ೨೫೬ ॥

---

೨೫೨. ತಲೆಯನ್ನು ಬಾಚಿದರೆ ಬೇಕಾದುದೆಲ್ಲವನ್ನೂ ಸಾಧಿಸಿದಂತಾಗುವುದಿಲ್ಲ. ಜಡೆಹಾಕಿದ ಮೇಲೆ ಭುಜ ಶಿರಸ್ಸುಗಳು ಕತ್ತುಗಳನ್ನು ತೊಳೆಯಬೇಕು. ಮುಖವನ್ನು ತೊಳೆಯಬೇಕು. ಮೈಯಲ್ಲಿ ಕೊನೆಯಭಾಗವಾದ ಕೈಕಾಲುಗಳನ್ನು ತೊಳೆಯಬೇಕು. ಅನಂತರ ತಲೆಯ ಹೂ ಮುಂತಾದುವನ್ನೂ ತೊಳೆಯಬೇಕು.

೨೫೩-೨೫೪. ಇಷ್ಟರೊಳಗೆ ಮಹಾತ್ಮರಾದವರು ನಿನ್ನನ್ನು ನೋಡಲು ಬಂದರೆ ದೇವತೆಗಳಿಂದ ವಂದ್ಯನಾದ ನೀನು ಯಾವ ಉತ್ತರವನ್ನು ಕೊಡುತ್ತೀಯೆ? ಒಂದು ವೇಳೆ ಬಾರದಿದ್ದರೆ ಬಂದಾರೆಂಬ ಭೀತಿಯು ಸಂತೋಷಕ್ಕೆ ನಾಶಕವಲ್ಲವೆ?

೨೫೫. ಹೀಗೆ ಪಾರ್ವತಿಯು ಹೇಳುತ್ತಿರಲು, ಶಂಕರನು ಕೈಹಿಡಿದೆಳೆದುಕೊಂಡು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಜಡೆಯನ್ನು ಬಿಚ್ಚಿ ಕೈಗಳಿಂದೊದರಿ ಉಗುರುಗಳಿಂದ ಬಿಡಿಸಿ ಹರಡಿದನು.

೨೫೬-೨೫೭. ವಿಷ್ಣುವು ಕೊಟ್ಟಿದ್ದ ಪಾರಿಜಾತ ಮಾಲೆಯನ್ನು ಜಡೆಗೆ ಸೇರಿಸಿ

ಕೃತ್ವಾ ಧಮ್ಮಿಲ್ಲಮುಕರೋದಥ ಮಾಲಾಂ ಕರಾಗತಾಂ ।
ಮಲ್ಲಿಕಾಸ್ರಜಮಾದಾಯ ಬಬಂಧ ಕಚಬಂಧನೇ ॥ ೨೫೭ ॥

ಕಲ್ಪಪ್ರಸೂನಮಾಲಾಂ ಚ ಬ್ರಹ್ಮದತ್ತಾಂ ಮಹೇಶ್ವರಃ ।
ಪಾರ್ವತೀವಸನೇ ಗೂಢಗಂಧಾಢ್ಯೇ ಚ ಸಮಾದಧಾತ್ ॥ ೨೫೮ ॥

ಅಥಾಂಸಸ್ಪೃಷ್ಟಸಂಲಗ್ನಮಾರ್ಜನಂ ಕೃತವಾನ್ವಿಭುಃ ।
ಶ್ಲಥನೀವೇರಧೋ ದೇವ್ಯಾ ವಸ್ತ್ರವೇಷ್ಟೇರಧೋಗತಃ ॥ ೨೫೯ ॥

ದೇವಃ ಕಿಮಿದಮಿತ್ಯುಕ್ತ್ವಾ ನೀವೀಬಂಧಂ ಚಕಾರ ಹ ।
ನಾಸಾಭೂಷಣಮೇತತ್ತೇ ಪಶ್ಯಾಮಿ ಸ ಮುದಾ ತತಃ ॥ ೨೬೦ ॥

ಇತ್ಯುಕ್ತ್ವಾ ಸ್ವಯಮಾದಾಯ ವಿಚ್ಛಾಯಂ ಮೌಕ್ತಿಕಂ ಸತಿ ।
ಹರಿದ್ರಾಯಾಸ್ಸಮಾಯೋಗೇ ಮುಕ್ತಾಫಲಮದೀಪ್ತಿಮತ್ ॥ ೨೬೧ ॥

---

ಜಡೆ ಹಾಕಿದನು. ಅನಂತರ ಮಲ್ಲಿಗೆಯ ಮಾಲೆಯನ್ನು ತೆಗೆದುಕೊಂಡು ಆ ಜಡೆಯ ತಲೆಯಲ್ಲಿ ಶೃಂಗರಿಸಿದನು.

೨೫೮. ಅನಂತರ ಶಿವನು, ಬ್ರಹ್ಮನು ಕೊಟ್ಟ ಕಲ್ಪವೃಕ್ಷದ ಹೂವಿನ ಮಾಲೆಯನ್ನು ಪಾರ್ವತಿಯ ಜಡೆಯಲ್ಲಿ ವಾಸನೆ ಬರುವಂತೆ ಗಂಟು ಕಟ್ಟಿದನು.

೨೫೯. ಅನಂತರ ಈಶನು ಹೆಗಲಿನ ಮೇಲುಭಾಗವನ್ನು ತೊಳೆದನು. ಸೊಂಟದಲ್ಲಿ ಬಟ್ಟೆಯು ನಿಲ್ಲುವಂತೆ ಕಟ್ಟಿಕೊಂಡಿದ್ದ ಬಟ್ಟೆಯ ಗಂಟುಹೋಗಿ ಬಟ್ಟೆಯು ಕೆಳಕ್ಕೆ ಹೋಗಿದ್ದಿತು. ಆಗ ಸ್ವಾಮಿಯು ಇದೇನೆಂದು ಕೇಳುತ್ತಾ ಆ ಗಂಟನ್ನು ಕಟ್ಟಿದನು.

೨೬೦-೨೬೧. ಮೂಗಿಗೆ ಹಾಕಿಕೊಳ್ಳುವ ಈ ಬುಲಾಕು ಏಕೆ ಹೀಗಿರುವುದು ನೋಡೋಣ ಎಂದು ಅದನ್ನು ತೆಗೆದುಕೊಂಡು ಆ ಮುತ್ತು ಕೊಳೆಯಿಂದ ಹೊಳಪಿಲ್ಲದಿರಲು, ಈ ಮುತ್ತು ಅರಿಶಿನವು ಅಂಟಿಕೊಂಡಿರುವುದರಿಂದ ಹೊಳಪು ಕಡಿಮೆಯಾಗಿದೆ ಇದನ್ನಿಟ್ಟುಕೊಳ್ಳಬೇಡ. ಅದು ನಿನಗೂ ನನಗೂ ಇಬ್ಬರಿಗೂ ಬೇಕಾದುದೇ.

ಇದಂ ನ ಧ್ರಿಯತಾಂ ಮುಕ್ತಾಫಲಂ ಮಮ ತವ ಪ್ರಿಯಂ ।

॥ ಪಾರ್ವತ್ಯುವಾಚ ॥

ಅಹೋ ತ್ವನ್ಮಂದಿರೇ ಶಂಭೋ ಸರ್ವವಸ್ತುಸಮೃದ್ಧಿಮತ್ ।
ಪೂರ್ವಮೇವ ಮಯಾ ಸರ್ವಂ ವಸ್ತು ಜ್ಞಾತಂ ವಿಭೂಷಣೈಃ ॥ ೨೬೨ ॥

ಅಹೋ ದ್ರವಿಣಸಂಪತ್ತಿರ್ಭೂಷಣೈರವಗಮ್ಯತೇ ।
ಶಿರೋ ವಿಭೂಷಿತಂ ದೇವ ಬ್ರಹ್ಮಶೀರ್ಷಸ್ಯ ಮಾಲಯಾ ॥ ೨೬೩ ॥

ನರಕಸ್ಯ ತಥಾ ಮಾಲಾ ವಕ್ಷಃಸ್ಥಳವಿಭೂಷಣಂ ।
ಶೇಷಶ್ಚ ವಾಸುಕಿಶ್ಚೈವ ಸವಿಷೌ ತವ ಕಂಕಣೇ ॥ ೨೬೪ ॥

ದಿಶೋಂಬರೇ ಜಟಾ ಕೇಶಾ ಭಸಿತಂ ಚಾಂಗರಾಗಕಂ ।
ಮಹೋಕ್ಷೋ ವಾಹನಂ ಗೋತ್ರಂ ಕುಲಂ ಚಾಜ್ಞಾತಮೇವ ಚ ॥ ೨೬೫ ॥

---

೨೬೨. ಪಾರ್ವತಿಯು ಹೇಳಿದಳು :—ಎಲೈ ಶಂಭುವೇ, ನಿನ್ನ ಮನೆಯಲ್ಲಿ ಎಲ್ಲಾ ಪದಾರ್ಥಗಳೂ ತುಂಬಿವೆ. ನೀನು ಹಾಕಿಕೊಂಡಿರುವ ಒಡವೆಗಳಿಂದಲೇ ನಿನ್ನ ಮನೆಯಲ್ಲಿರುವ ಪದಾರ್ಥಗಳ ಸಮೃದ್ಧಿಯನ್ನು ನಾನು ಮೊದಲೇ ತಿಳಿದುಕೊಂಡೆನು.

೨೬೩. ಆಶ್ಚರ್ಯ! ನಿನ್ನ ಧನಿಕತನವು ನಿನ್ನ ಒಡವೆಗಳಿಂದಲೇ ತಿಳಿಯುತ್ತದೆ. ನಿನ್ನ ತಲೆಯೆಲ್ಲವೂ ಬ್ರಹ್ಮನ ಶಿರಸ್ಸಿನ ಮಾಲೆಯಿಂದಲೇ ಅಲಂಕೃತವಾಗಿದೆ.

೨೬೪. ಎದೆಯೆಲ್ಲವನ್ನೂ ನರ ತಲೆಬುರುಡೆಗಳನ್ನು ಧರಿಸಿ ಅಲಂಕರಿಸಿಕೊಂಡಿದ್ದೀಯೆ. ವಿಷಭರಿತವಾದ ಶೇಷನೂ ವಾಸುಕಿಯೂ ನಿನ್ನ ಕೈಬಳೆಗಳು.

೨೬೫. ಬಟ್ಟೆಯನ್ನು ನೋಡಿದರೆ ದಿಗಂಬರನಾಗಿದ್ದೀಯೆ. ತಲೆಗೂದಲನ್ನು ನೋಡಿದರೆ ಅವೆಲ್ಲವೂ ಜಟೆಗಳು. ಮೈಗೆ ಪೂಸಿಕೊಳ್ಳುವ ಅಂಗರಾಗವು ಬೂದಿಯು. ನಿನ್ನ ವಾಹನವು ಬಸವನು. ಗೋತ್ರಕುಲಗಳಂತೂ ಗೊತ್ತೇಯಿಲ್ಲ. ನಿನ್ನ ತಾಯಿ ತಂದೆಗಳಾರೋ ಗೊತ್ತೇಯಿಲ್ಲ. ದೇಹವನ್ನು ನೋಡಿದರೆ ಮುಕ್ಕಣ್ಣನು.

ಜ್ಞಾಯೇತೇ ಪಿತರೌ ನೈವ ವಿರೂಪಾಕ್ಷಂ ತಥಾ ವಪುಃ ।
ಏವಂ ವದಂತೀಂ ಗಿರಿಜಾಂ ವಿಷ್ಣುಃ ಪ್ರಾಹಾತಿಕೋಪನಃ ॥ ೨೬೬ ॥

॥ ವಿಷ್ಣುರುವಾಚ ॥

ಕಿಮರ್ಥಂ ನಿಂದಸೇ ದೇವಿ ದೇವದೇವಂ ಜಗತ್ಪತಿಂ ।
ದುಷ್ಪ್ರಾಣಾ ನ ಪ್ರಿಯಾ ಭದ್ರೇ ತವ ನೂನಮಸಂಯಮಂ ॥ ೨೬೭ ॥

ಯತ್ರೇಶನಿಂದನಂ ಭದ್ರೇ ತತ್ರ ನೋ ಮರಣಂ ವ್ರತಂ ।
ಇತ್ಯುಕ್ತ್ವಾಥ ನಖಾಭ್ಯಾಂ ಹಿ ಹರಿಶ್ಛೇತ್ತುಂ ಶಿರೋ ಗತಃ ॥ ೨೬೮ ॥

ಮಹೇಶಸ್ತತ್ಕರಂ ಗೃಹ್ಯ ಪ್ರಾಹ ಮಾ ಸಾಹಸಂ ಕೃಥಾಃ ।
ಪಾರ್ವತೀವಚನಂ ಸರ್ವಂ ಪ್ರಿಯಂ ಮಮ ನ ಚಾಪ್ರಿಯಂ ॥ ೨೬೯ ॥

ಮಮಾಪ್ರಿಯಂ ಹೃಷೀಕೇಶ ಕರ್ತುಂ ಯತ್ಕಿಂಚಿದಿಷ್ಯತೇ ।
ಓಮಿತ್ಯುಕ್ತ್ವಾಥ ಭಗವಾಂಸ್ತೂಷ್ಣೀಂಭೂತೋಽಭವದ್ಧರಿಃ ॥ ೨೭೦ ॥

---

೨೬೬. ಹೀಗೆ ಹೇಳುತ್ತಿರುವ ಗಿರಿಜೆಯನ್ನು ನೋಡಿ ಕೋಪಗೊಂಡು ವಿಷ್ಣುವು ಇಂತೆಂದನು.

೨೬೭. ವಿಷ್ಣುವು ಹೇಳಿದನು :—ಅಮ್ಮಾ ದೇವದೇವನಾದ ಜಗತ್ಪತಿಯನ್ನು ಏಕೆ ನಿಂದಿಸುತ್ತೀಯೆ ? ನಿನ್ನ ಜೀವವು ಬಹು ಕೆಟ್ಟದು, ಪ್ರೀತಿಗೆ ಯೋಗ್ಯವಾದುದಲ್ಲ, ಖಂಡಿತ, ಸಂಶಯವಿಲ್ಲ.

೨೬೮. ಎಲೈ ಪಾರ್ವತಿಯೇ, ಎಲ್ಲಿ ಈಶನನ್ನು ನಿಂದಿಸುವರೋ ಅದು ಅಲ್ಲಿ ನಮ್ಮ ಕಿವಿಗೆ ಬಿದ್ದೊಡನೆಯೇ ಅಲ್ಲಿ ನಾವು ಪ್ರಾಣವನ್ನು ತ್ಯಜಿಸಬೇಕು. ಇದೇ ನಮ್ಮ ವ್ರತವು. ಹೀಗೆಂದು ಹೇಳಿ ವಿಷ್ಣುವು ಉಗುರಿನಿಂದ ಕತ್ತನ್ನು ಕೊಯ್ದುಕೊಳ್ಳಲು ಪ್ರಾರಂಭಿಸಿದನು.

೨೬೯-೨೭೦. ಆಗ ಈಶನು ಆ ವಿಷ್ಣುವಿನ ಕೈಗಳನ್ನು ಹಿಡಿದುಕೊಂಡು, ಮಿತಿಮೀರಿದ ಕೆಲಸವನ್ನು ಮಾಡಬೇಡ. ಪಾರ್ವತಿಯ ಮಾತೆಲ್ಲವೂ ನನಗೆ ಪ್ರಿಯವೇ ಹೊರತು ಅಪ್ರಿಯವಾದುದಲ್ಲ. ನೀನು ನನಗೆ ಅಪ್ರಿಯವಾದುದನ್ನು ಏನನ್ನೂ ಮಾಡಲು ಪ್ರಯತ್ನಿಸಿರುವೆಯಲ್ಲ. ಎನ್ನಲು, ಹಾಗೆ ಆಗಲೆಂದು ಹೇಳಿ ಹರಿಯು ಸುಮ್ಮನಾದನು.

**ಪನೂಮಾನಥ ದೇವಾಯ ವ್ಯಜ್ಞಾಪಯದಿದಂ ವಚಃ ।**
**ಅರ್ಥಯಾಮಿ ವಿನಿಷ್ಕಾಮಂ ಮಮ ಪೂಜಾವ್ರತಂ ತಥಾ ॥ ೨೭೧ ॥**

**ಪೂಜಾರ್ಥಮಪ್ಯಪಂ ಗಚ್ಛೇ ಮಮಾನುಜ್ಞಾತುಮರ್ಹಸಿ ॥ ೨೭೨ ॥**

**॥ ಶಂಕರ ಉವಾಚ ॥**

**ಕಸ್ಯ ಪೂಜಾ ಕ್ವ ವಾ ಪೂಚಾ ಕಿಂ ಪುಷ್ಪಂ ಕಿಂ ದಳಂ ವದ ।**
**ಕೋ ಗುರುಃ ಕಶ್ಚ ಮಂತ್ರಸ್ತೇ ಕೀದೃಶಂ ಪೂಜನಂ ತಥಾ ॥ ೨೭೩ ॥**

**ಏವಂ ವದತಿ ದೇವೇಶೇ ಹನೂಮಾನ್ಭೀತಿಕಂಪಿತಃ ।**
**ವೇಪಮಾನಸಮಸ್ತಾಂಗಃ ಸ್ತೋತುಮೇವ ಪ್ರಚಕ್ರಮೇ ॥ ೨೭೪ ॥**

**॥ ಹನೂಮಾನುವಾಚ ॥**

**ನಮೋ ದೇವಾಯ ಮಹತೇ ಶಂಕರಾಯಾಮಿತಾತ್ಮನೇ ।**
**ಯೋಗೀನೇ ಯೋಗಧಾತ್ರೇ ಚ ಯೋಗಿನಾಂ ಗುರುವೇ ನಮಃ ॥ ೨೭೫ ॥**

---

೨೭೧-೨೭೨. ಅನಂತರ ಹನುಮಂತನು ಸ್ವಾಮಿ, ನಾನು ನಿಷ್ಕಾಮವುಳ್ಳ ನಿನ್ನ ಪೂಜೆಯ ವ್ರತವನ್ನು ಕೇಳಿಕೊಳ್ಳುತ್ತೇನೆ. ಪೂಜೆಗೋಸ್ಕರ ನಾನು ಹೋಗುತ್ತೇನೆ. ನನಗೆ ಅಪ್ಪಣೆಯನ್ನು ಕೊಡು ಎಂದು ವಿಜ್ಞಾಪಿಸಿಕೊಂಡನು.

೨೭೩. ಶಂಕರನು ಹೇಳಿದನು :—ಯಾರ ಪೂಜೆ? ಎಲ್ಲಿ ಪೂಜೆ? ಯಾವ ಹೂ? ಯಾವ ಪತ್ರೆ? ಗುರುವು ಯಾರು? ಮಂತ್ರವು ಯಾವುದು? ಪೂಜೆಯು ಯಾವ ರೀತಿಯಾದುದು?

೨೭೪. ಸ್ವಾಮಿಯು ಹೀಗೆನ್ನಲು, ಹನುಮಂತನು ಹೆದರಿಕೆಯಿಂದ ನಡುಗುತ್ತ ಈರೀತಿ ಸ್ತೋತ್ರಮಾಡಿದನು.

೨೭೫. ಹನುಮಂತನು ಹೇಳಿದನು :—ಮಹಾದೇವನಾದ ನಿನಗೆ ನಮಸ್ಕಾರವು, ಮಹಾನುಭಾವನಾದ ಶಂಕರನಿಗೆ ನಮಸ್ಕಾರವು, ಯೋಗಿಯೂ, ಯೋಗಧಾರಿಯೂ ಆದ ಸ್ವಾಮಿಗೆ ನಮಸ್ಕಾರವು, ಯೋಗಿಗಳಿಗೂ ಗುರುವಾದ ನಿನಗೆ ನಮಸ್ಕಾರವು.

ಯೋಗಿಗಮ್ಯಾಯ ದೇವಾಯ ಜ್ಞಾನಿನಾಂ ಪತಯೇ ನಮಃ ।
ವೇದಾನಾಂ ಪತಯೇ ತುಭ್ಯಂ ದೇವಾನಾಂ ಪತಯೇ ನಮಃ ॥ ೨೭೬ ॥

ಧ್ಯಾನಾಯ ಧ್ಯಾನಗಮ್ಯಾಯ ಧ್ಯಾತೄಣಾಂ ಗುರುವೇ ನಮಃ ।
ಶಿಷ್ಟಾಯ ಶಿಷ್ಟಗಮ್ಯಾಯ ಭೂಮ್ಯಾದಿಪತಯೇ ನಮಃ ॥ ೨೭೭ ॥

ಅಂಭಸ್ಯೇತ್ಯಾದೀನಾಂ ವೇದವಾಕ್ಯಾನಾಂ ಪತಯೇ ನಮಃ ।
ಆತನುಷ್ವೇತಿ ವಾಕ್ಯೈಶ್ಚ ಪ್ರತಿಪಾದ್ಯಾಯ ತೇ ನಮಃ ॥ ೨೭೮ ॥

ಅಷ್ಟಮೂರ್ತೇ ನಮಸ್ತುಭ್ಯಂ ಪಶೂನಾಂ ಪತಯೇ ನಮಃ ।
ತ್ರ್ಯಂಬಕಾಯ ತ್ರಿನೇತ್ರಾಯ ಸೋಮಸೂರ್ಯಾಗ್ನಿಲೋಚನ ॥ ೨೭೯ ॥

ಸುಭೃಂಗರಾಜದತ್ತೂರದ್ರೋಣಪುಷ್ಪಪ್ರಿಯಸ್ಯ ತೇ ।
ಬೃಹತೀ ಪೂಗಪುನ್ನಾಗಚಂಪಕಾದಿಪ್ರಿಯಾಯ ತೇ ॥ ೨೮೦ ॥

---

೨೭೬. ಯೋಗಿಗಳಿಗೆ ಸಿಕ್ಕುವ ನಿನಗೆ ನಮಸ್ಕಾರವು, ಜ್ಞಾನಿಗಳ ಒಡೆಯುನಾದ ನಿನಗೆ ನಮಸ್ಕಾರವು, ವೇದಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರವು, ದೇವತೆಗಳಿಗೆ ಒಡೆಯನಾದ ನಿನಗೆ ನಮಸ್ಕಾರವು.

೨೭೭. ಧ್ಯಾನರೂಪನಾದ, ಧ್ಯಾನದಿಂದ ಸಿಕ್ಕುವ, ಧ್ಯಾನಮಾಡುವವರಿಗೆ ಗುರುವಾದ ನಿನಗೆ ನಮಸ್ಕಾರವು, ನಿಷ್ಟನಾದ, ಶಿಷ್ಟರಿಗೆ ಕಾಣಿಸಿಕೊಳ್ಳುವ, ಭೂಮ್ಯಾದಿಗಳಿಗೆ ಒಡೆಯನಾದ ನಿನಗೆ ನಮಸ್ಕಾರವು.

೨೭೮. ಅಂಭಸ್ಯಪಾರೆ, ಮುಂತಾದ ವೇದವಾಕ್ಯಗಳಿಗೆ ಒಡೆಯನಾದ ನಿನಗೆ ನಮಸ್ಕಾರವು, ಆತನುಷ್ವ ಪ್ರತನುಷ್ವ ಎಂಬ ವಾಕ್ಯದಲ್ಲಿ ವರ್ಣಿತನಾದ ನಿನಗೆ ನಮಸ್ಕಾರವು.

೨೭೯. ಅಷ್ಟಮೂರ್ತಿಯಾದ ನಿನಗೆ ನಮಸ್ಕಾರವು, ಸೂರ್ಯಾಗ್ನಿಚಂದ್ರರೇ ಕಣ್ಣುಗಳಾಗಿ ಉಳ್ಳ ನಿನಗೆ ನಮಸ್ಕಾರವು, ಮೂರು ಕಣ್ಣುಗಳುಳ್ಳ ನಿನಗೆ ನಮಸ್ಕಾರವು. ಪಶುಗಳಿಗೆ ಪತಿಯಾದ ನಿನಗೆ ನಮಸ್ಕಾರವು.

೨೮೦. ಗರುಗ, ಉಮ್ಮತ್ತ, ತುಂಬೆ ಹೂಗಳಲ್ಲಿ ಪ್ರೀತಿಯುಳ್ಳ ನಿನಗೆ ನಮಸ್ಕಾರವು. ಗುಳ್ಳ, ಅಡಕೆ, ಸುರಹೊನ್ನೆ, ಸಂಪಿಗೆ ಹೂಗಳಲ್ಲಿ ಪ್ರೀತಿಯುಳ್ಳ ನಿನಗೆ ನಮಸ್ಕಾರವು.

ನಮಸ್ತೇಽಸ್ತು ನಮಸ್ತೇಽಸ್ತು ಭೂಯ ಏವ ನಮೋ ನಮಃ ।
ಶಿವೋ ಹರಿಮಥ ಪ್ರಾಹ ಮಾ ಭೈಷೀರ್ವದ ಮೇಽಖಿಲಂ ॥ ೨೮೧ ॥

॥ ಹನೂಮಾನುವಾಚ ॥

ಶಿವಲಿಂಗಾರ್ಚನಂ ಕಾರ್ಯಂ ಭಸ್ಮೋದ್ಧೂಳಿತದೇಹಿನಾ ।
ದಿವಾಸಂಪಾದಿತೈಸ್ತೋಯೈಃ ಪುಷ್ಪಾದ್ಯೈರಪಿ ತಾದೃಶೈಃ ॥ ೨೮೨ ॥

ದೇವ ವಿಜ್ಞಾಪಯಿಷ್ಯಾಮಿ ಶಿವಪೂಜಾವಿಧಿಂ ಶುಭಂ ।
ಸಾಯಂಕಾಲೇ ತು ಸಂಪ್ರಾಪ್ತೇ ಹ್ಯಶಿರಸ್ಕ್ನಾನಮಾಚರೇತ್ ॥ ೨೮೩ ॥

ಕ್ಷಾಳಿತಂ ವಸನಂ ಶುಷ್ಕಂ ಧೃತ್ವಾಚಮ್ಯ ದ್ವಿರಗ್ರಧೀಃ ।
ಅಥ ಭಸ್ಮ ಸಮಾದಾಯ ತ್ವಾಗ್ನೇಯಂ ಸ್ನಾನಮಾಚರೇತ್ ॥ ೨೮೪ ॥

ಪ್ರಣವೇನ ಸಮಾಮಂತ್ರ್ಯಾಷ್ಟವಾರಮಥಾಪಿ ವಾ ।
ಪಂಚಾಕ್ಷರೇಣ ಮಂತ್ರೇಣ ನಾಮ್ನಾ ವಾ ಯೇನ ಕೇನಚಿತ್ ॥ ೨೮೫ ॥

---

೨೮೧. ನಿನಗೆ ನಮಸ್ಕಾರ, ನಿನಗೆ ನಮಸ್ಕಾರ, ಮತ್ತೂ ನಿನಗೆ ನಮಸ್ಕಾರವು. ಆಗ ಶಿವನು ಕಪಿಯನ್ನು ಕುರಿತು ಹೆದರಬೇಡ ನನಗೆ ಎಲ್ಲವನ್ನೂ ಹೇಳು ಎಂದನು.

೨೮೨. ಹನುಮಂತನು ಹೇಳಿದನು :—ಮೈಗೆ ವಿಭೂತಿಯನ್ನಿಟ್ಟುಕೊಂಡು ಹಗಲು ತಂದ ಹೂವು, ನೀರು ಮುಂತಾದುವುಗಳಿಂದ ರಾತ್ರಿ ಶಿವನ ಪೂಜೆಯನ್ನು ಮಾಡಬೇಕು.

೨೮೩. ಎಲೈ ಸ್ವಾಮಿಯೇ, ಶಿವಪೂಜೆಯ ವಿಧಿಯನ್ನು ವಿಜ್ಞಾಪಿಸಿಕೊಳ್ಳುತ್ತೇನೆ. ಸಾಯಂಕಾಲವಾಗಲು ಕಂಠದವರೆಗೂ ಸ್ನಾನಮಾಡಬೇಕು.

೨೮೪. ಒಗೆದು ಒಣಗಿಸಿದ ಬಟ್ಟೆಯನ್ನು ಉಟ್ಟುಕೊಂಡು ಎರಡುಬಾರಿ ಆಚಮನಮಾಡಬೇಕು. ಅನಂತರ ಭಸ್ಮವನ್ನು ಮೈಗೆ ಬಳಿದುಕೊಳ್ಳಬೇಕು. ಅದೇ ಆಗ್ನೇಯ ಸ್ನಾನವೆನ್ನಿಸಿಕೊಳ್ಳುತ್ತದೆ.

೨೮೫. ಓಂ ಎಂಬ ಪ್ರಣವದಿಂದ ಆ ಭಸ್ಮವನ್ನು ಮಂತ್ರಿಸಬೇಕು. ಅದಿಲ್ಲದಿದ್ದರೆ ಅಷ್ಟಾಕ್ಷರಿಯಿಂದ ಮಂತ್ರಿಸಬೇಕು. ಅದೂ ಇಲ್ಲದಿದ್ದರೆ ಪಂಚಾಕ್ಷರಿಯಿಂದ

**ಸಪ್ತಾಭಿಮಂತ್ರಿತಂ ಭಸ್ಮ ದರ್ಭಪಾಣಿಸ್ಸಮಾಹರೇತ್ ।**
**ಈಶಾನಸ್ಸರ್ವವಿದ್ಯಾನಾಮುಕ್ತ್ವಾ ಶಿರಸಿ ಪಾತಯೇತ್ ॥ ೨೮೬ ॥**

**ತತ್ಪುರುಷಾಯ ವಿದ್ಮಹೇ ಮುಖೇ ಭಸ್ಮ ಪ್ರಸೇಚಯೇತ್ ।**
**ಅಘೋರೇಭ್ಯೋಥಘೋರೇಭ್ಯೋ ಭಸ್ಮ ವಕ್ಷಸಿ ನಿಕ್ಷಿಪೇತ್ ॥ ೨೮೭ ॥**

**ವಾಮದೇವಾಯ ನಮ ಇತಿ ಗುಹ್ಯಸ್ಥಾನೇ ವಿನಿಕ್ಷಿಪೇತ್ ।**
**ಸದ್ಯೋಜಾತಂ ಪ್ರಪದ್ಯಾಮಿ ನಿಕ್ಷಿಪೇದಥ ಪಾದಯೋಃ ॥ ೨೮೮ ॥**

**ಉದ್ಧೂಲಯೇತ್ಸಮಸ್ತಾಂಗಂ ಪ್ರಣವೇನ ವಿಚಕ್ಷಣಃ ।**
**ತ್ರೈವರ್ಣಿಕಾನಾಮುದಿತಃ ಸ್ನಾನಾದಿರ್ವಿಧಿರುತ್ತಮಃ ॥ ೨೮೯ ॥**

---

ಮಂತ್ರಿಸಬೇಕು. ಅದೂ ಆಗದಿದ್ದರೆ ಶಿವನ ಯಾವುದಾದರೂ ಒಂದು ನಾಮವನ್ನು ಹೇಳಿ ಮಂತ್ರಿಸಬೇಕು.

೨೮೬. ಹೀಗೆ ಏಳುಸಾರಿ ಆ ಭಸ್ಮವನ್ನು ಮಂತ್ರಿಸಿ, ಪವಿತ್ರವನ್ನಿಟ್ಟುಕೊಂಡು ಆ ಭಸ್ಮವನ್ನು ತೆಗೆದುಕೊಳ್ಳಬೇಕು. ಈಶಾನಸ್ಸರ್ವವಿದ್ಯಾನಾಂ ಎಂಬ ಮಂತ್ರವನ್ನು ಹೇಳಿ ತಲೆಗೆ ಇಟ್ಟುಕೊಳ್ಳಬೇಕು.

೨೮೭. ತತ್ಪುರುಷಾಯ ವಿದ್ಮಹೆ ಎಂಬ ಮಂತ್ರವನ್ನು ಹೇಳಿ ಹಣೆಗೆ ಭಸ್ಮವನ್ನು ಹಚ್ಚಿಕೊಳ್ಳಬೇಕು. ಅಘೋರೇಭ್ಯೋಥಘೋರೇಭ್ಯೋ ಎಂಬ ಮಂತ್ರದಿಂದ ಎದೆಗೆ ಭಸ್ಮವನ್ನು ಹಚ್ಚಿಕೊಳ್ಳಬೇಕು.

೨೮೮. ವಾಮದೇವಾಯನಮಃ ಎಂಬ ಮಂತ್ರದಿಂದ ಗುಹ್ಯಸ್ಥಾನಕ್ಕೆ ಭಸ್ಮವನ್ನು ಹಚ್ಚಿಕೊಳ್ಳಬೇಕು. ಸದ್ಯೋಜಾತಂ ಪ್ರಪದ್ಯಾಮಿ ಎಂಬುವದರಿಂದ ಪಾದಗಳಿಗೆ ಹಚ್ಚಿಕೊಳ್ಳಬೇಕು.

೨೮೯. ಅನಂತರ ಪ್ರಣವದಿಂದ ಮೈಗೆಲ್ಲಾ ಭಸ್ಮವನ್ನು ಬಳಿದುಕೊಳ್ಳಬೇಕು. ಈ ಸ್ನಾನಾದಿವಿಧಿಯು ತ್ರಿವರ್ಣದ ದ್ವಿಜರಿಗೆ ಹೇಳಲ್ಪಟ್ಟಿದೆ.

ಶೂದ್ರಾದೀನಾಂ ಪ್ರವಕ್ಷ್ಯಾಮಿ ಯದುಕ್ತಂ ಗುರುಣಾ ತಥಾ ।
ಶಿವೇತಿ ಪದಮುಚ್ಚಾರ್ಯ ಭಸ್ಮ ಸಂಮಂತ್ರಯೇತ್ಸುಧೀಃ ॥ ೨೯೦ ॥

ಸಪ್ತವಾರಮಥಾದಾಯ ಶಿವಾಯೇತಿ ಶಿರಃ ಕ್ಷಿಪೇತ್ ।
ಶಂಕರಾಯ ಮುಖೇ ಪ್ರೋಕ್ತಂ ಸರ್ವಜ್ಞಾಯ ಹೃದಿ ಕ್ಷಿಪೇತ್ ॥ ೨೯೧ ॥

ಸ್ಥಾಣವೇ ನಮ ಇತ್ಯುಕ್ತ್ವಾ ಗುಹ್ಯೇ ಚಾಪಿ ಸ್ವಯಂಭುವೇ ।
ಉಚ್ಚಾರ್ಯ ಪಾದಯೋಃ ಕ್ಷಿಪ್ತ್ವಾ ಭಸ್ಮ ಶುಷ್ಟಮತಃ ಪರಂ ॥ ೨೯೨ ॥

ನಮಃ ಶಿವಾಯೇತ್ಯುಚ್ಚಾರ್ಯ ಸರ್ವಾಂಗೋದ್ಧೂಳನಂ ಸ್ಮೃತಂ ।
ಪ್ರಕ್ಷಾಳ್ಯ ಹಸ್ತಾವಾಚಮ್ಯ ದರ್ಭಪಾಣಿಸ್ಸಮಾಹಿತಃ ॥ ೨೯೩ ॥

ದರ್ಭಾಭಾವೇ ಸುವರ್ಣಂ ಸ್ಯಾತ್ತದಭಾವೇ ಗವಾಲಕಃ ।
ತದಭಾವೇ ತು ದೂರ್ವಾಸ್ಸ್ಯುಸ್ತದಭಾವೇ ತು ರಾಜತಂ ॥ ೨೯೪ ॥

---

೨೯೦. ಶೂದ್ರರಿಗಿರುವ ವಿಧಿಯನ್ನು ಗುರುವು ಹೇಳಿದ ರೀತಿಯಿಂದ ಹೇಳುತ್ತೇನೆ. ಶಿವ ಎಂಬ ಪದವನ್ನು ಉಚ್ಚರಿಸಿ ಶೂದ್ರನು ಭಸ್ಮವನ್ನು ಮಂತ್ರಿಸಬೇಕು.

೨೯೧. ಅನಂತರ ಏಳುಬಾರಿ ತೆಗೆದುಕೊಳ್ಳಬೇಕು. ಶಂಕರಾಯ ನಮಃ ಎಂದು ಮುಖಕ್ಕೂ ಸರ್ವಜ್ಞಾಯ ನಮಃ ಎಂದು ಎದೆಗೂ ಹಚ್ಚಿಕೊಳ್ಳಬೇಕು.

೨೯೨. ಸ್ಥಾಣವೇ ನಮಃ ಎಂದು ಗುಹ್ಯಕ್ಕೂ, ಸ್ವಯಂಭುವೆ ನಮಃ ಎಂದು ಪಾದಗಳಿಗೂ, ಹಚ್ಚಿಕೊಳ್ಳಬೇಕು. ಅನಂತರ ಉಳಿದ ಭಸ್ಮವನ್ನು ನಮಶ್ಶಿವಾಯ ಎಂದು ಹೇಳುತ್ತಾ ಮೈಗೆಲ್ಲಾ ಪೂಸಿಕೊಳ್ಳಬೇಕು.

೨೯೩. ಅನಂತರ ಕೈಗಳನ್ನು ತೊಳೆದುಕೊಂಡು ನಿಯಮದಿಂದ ಪವಿತ್ರವನ್ನು ಧರಿಸಿಕೊಳ್ಳಬೇಕು.

೨೯೪. ದರ್ಭೆಯ ಪವಿತ್ರವಿಲ್ಲದಿದ್ದರೆ ಚಿನ್ನದ ಪವಿತ್ರದ ಉಂಗುರವನ್ನು ಇಟ್ಟುಕೊಳ್ಳಬೇಕು. ಅದೂ ಇಲ್ಲದಿದ್ದರೆ ಪಂಚಲೋಹದ ಪವಿತ್ರದುಂಗುರವಾಗಬಹುದು. ಅಥವಾ ಗರಿಕೆಯಾದರೂ ಆಗಬಹುದು. ಅದೂ ಸಿಕ್ಕದಿದ್ದರೆ ಬೆಳ್ಳಿಯ ಪವಿತ್ರದುಂಗುರವಾಗಬಹುದು.

**ಸಂಧ್ಯೋಪಾಸ್ತಿಂ ಜಪಂ ದೇವ್ಯಾಃ ಕೃತ್ವಾ ದೇವಗೃಹಂ ವ್ರಜೇತ್ ।**
**ದೇವವೇದಿಮಥೋ ವಾಪಿ ಕಲ್ಪಿತಂ ಸ್ಥಂಡಿಲಂ ತು ವಾ ॥ ೨೯೫ ॥**

**ಮೃಣ್ಮಯಂ ಕಲಿತಂ ಶುದ್ಧಂ ಪದ್ಮಾದಿರಚನಾಯುತಂ ।**
**ಚಾತುರ್ವರ್ಣಕರಂಗೈಶ್ಚ ಶ್ವೇತೇನೈಕೇನ ವಾ ಪುನಃ ॥ ೨೯೬ ॥**

**ವಿಚಿತ್ರಾಣಿ ಚ ಪದ್ಮಾನಿ ಸ್ವಸ್ತಿಕಾದಿ ತಥೈವ ಚ ।**
**ಉತ್ಪಲಾದಿಗದಾಶಂಖತ್ರಿಶೂಲಡಮರುಂ ತಥಾ ॥ ೨೯೭ ॥**

**ಸರಕ್ತಪಂಚಪ್ರಾಸಾದಂ ಶಿವಲಿಂಗಮಥೈವ ಚ ।**
**ಸರ್ವಕಾಮಫಲಂ ವೃಕ್ಷಂ ಕುಲಕಂ ಕೋಲಕಂ ತಥಾ ॥ ೨೯೮ ॥**

**ಷಟ್ಕೋಣಂ ಚಿತ್ರಕೋಣಂ ಚ ನವಕೋಣಮಥಾಪಿ ವಾ ।**
**ಕೋಣದ್ವಾದಶಕಾಂದೋಳಾಂ ಪಾದುಕಾವ್ಯಜನಾನಿ ಚ ॥ ೨೯೯ ॥**

---

೨೯೫. ಸಂಧ್ಯಾವಂದನೆಯನ್ನೂ, ದೇವಿಯ ಜಪವನ್ನೂ ಮಾಡಿಕೊಂಡು ದೇವರ ಮನೆಗೆ ಹೋಗಬೇಕು. ಅಲ್ಲಿರುವ ದೇವರ ಜಗುಲಿಯನ್ನಲಂಕರಿಸಬೇಕು. ಅದಿಲ್ಲದಿದ್ದರೆ ಜಗುಲಿಯಂತೆ ಸ್ಥಂಡಿಲವನ್ನು ಮಾಡಿಕೊಳ್ಳಬೇಕು.

೨೯೬. ಆ ಜಗುಲಿಯನ್ನು ಕಲಸಿದ ಮಣ್ಣಿನಿಂದ ಮಾಡಿರಬೇಕು. ಶುದ್ಧವಾಗಿರಬೇಕು. ಅದರಲ್ಲಿ ಪದ್ಮಾದಿಗಳನ್ನು ಪಂಚವರ್ಣಗಳಿಂದ ಚಿತ್ರಿಸಿರಬೇಕು. ಅದಿಲ್ಲದಿದ್ದರೆ ಬಿಳಿಯದು ಒಂದರಿಂದಲೇ ಆಗಿರಬಹುದು.

೨೯೭--೩೦೦. ನಾನಾಬಗೆಯ ಪದ್ಮಗಳು, ಸ್ವಸ್ತಿಕಾದಿ ಬಂಧಗಳು, ಪದ್ಮ, ಗದೆ, ಶಂಖ, ತ್ರಿಶೂಲ, ಡಮರು, ಇವನ್ನು ಚೆನ್ನಾಗಿರುವಂತೆ ಐದು ಮನೆಗಳಿರುವಂತೆ ಮಂಟಪವನ್ನು ಬರೆದು ಅದರಲ್ಲಿ ಶಿವಲಿಂಗವನ್ನು ಬರೆಯಬೇಕು ಅದರ ಮೇಲೆ ಹಣ್ಣಿನಿಂದ ಕೂಡಿರುವಂತೆ ಕಲ್ಪವೃಕ್ಷವನ್ನು ಬರೆಯಬೇಕು. ತಿಲಕ, ತೆಂಗು, ವೃಕ್ಷಗಳನ್ನು ರಚಿಸಿರಬೇಕು. ಆರು ಮೂಲೆಗಳೂ, ಒಂಭತ್ತು ಮೂಲೆಗಳೂ, ಇರುವ ಕೋಣವನ್ನೂ ಬರೆಯಬೇಕು. ಚಿತ್ರಕೋಣಗಳನ್ನು ಬರೆಯಬೇಕು. ಹನ್ನೆರಡು ಮೂಲೆಗಳಿರುವಂತೆಯೂ, ಕೋಣವನ್ನು ಬರೆಯಬೇಕು. ಉಯ್ಯಾಲೆಯನ್ನೂ, ಪಾದುಕೆಯನ್ನೂ, ಬೀಸಣಿಗೆಯನ್ನೂ, ಚಾಮರವನ್ನೂ, ಛತ್ರಗಳನ್ನೂ, ಬರೆಯಬೇಕು.

ಚಾಮರಚ್ಛತ್ರಯುಗಳಂ ವಿಷ್ಣುಬ್ರಹ್ಮಾದಿಕಂ ತಥಾ ।
ಚೂರ್ಣೈರ್ವಿರಚಯೇದ್ವೇದ್ಯಾಂ ಧೀಮಾನ್ದೇವಾಲಯೇಽಪಿ ವಾ ॥ ೩೦೦ ॥

ಯತ್ರಾಪಿ ದೇವಪೂಜಾ ಸ್ಯಾತ್ತತ್ರೈವಂ ಕಲ್ಪಯೇದ್ಬುಧಃ ।
ಸ್ವಹಸ್ತರಚಿತಂ ಮುಖ್ಯಂ ಕ್ರೀತಂ ಚೈವ ತು ಮಧ್ಯಮಂ ॥ ೩೦೧ ॥

ಯಾಚಿತಂ ತು ಕನಿಷ್ಠಂ ಸ್ಯಾದ್ಬಲಾತ್ಕಾರಪುಥಾಧಮಂ ।
ಅರ್ಹೇಷು ಯತ್ತ್ವನರ್ಹೇಷು ಬಲಾತ್ಕಾರಾತ್ತು ನಿಷ್ಫಲಂ ॥ ೩೦೨ ॥

ರಕ್ತಶಾಲಿಜಪಾಸ್ಥಾಣುಕಲಮಾಸಿತರಕ್ತಕೈಃ ।
ತಂಡುಲೈರ್ವ್ರೀಹಿಮಾತ್ರೋತ್ಥೈಃ ಕಣೈಶ್ಚೈವ ಯಥಾಕ್ರಮಂ ॥ ೩೦೩ ॥

ಉತ್ತಮೈರ್ಮಧ್ಯಮೈಶ್ಚೈವ ಕಥಿತೈರಧಮೈಸ್ತಥಾ ।
ಪದ್ಮಾದಿಸ್ಥಾಪನೈರೇವ ತತ್ಸಮ್ಯಗ್ಯಾಗಮಾಚರೇತ್ ॥ ೩೦೪ ॥

---

ವಿಷ್ಣು ಬ್ರಹ್ಮರ ಪ್ರತಿಮೆಯನ್ನೂ ಬರೆಯಬೇಕು. ಇವೆಲ್ಲವನ್ನೂ ರಂಗವಲ್ಲಿಯಿಂದಾಗಲಿ, ಹಿಟ್ಟಿನಿಂದಾಗಲಿ ಆ ವೇದಿಕೆಯಲ್ಲಿ ಬರೆದಿರಬೇಕು. ದೇವಾಲಯದಲ್ಲಾದರೂ ಇವೆಲ್ಲವನ್ನೂ ಬರೆಯಬೇಕು.

೩೦೧-೩೦೨. ದೇವತಾರ್ಚನೆಯನ್ನು ಮಾಡುವ ಸ್ಥಳಗಳಲ್ಲೆಲ್ಲಾ ಈರೀತಿ ಮಾಡಬೇಕು. ತನ್ನ ಕೈಯ್ಯಿಂದಲೇ ಇದೆಲ್ಲವನ್ನೂ ಮಾಡಿದರೆ ಉತ್ತಮವು. ಕೊಂಡುಕೊಂಡರೆ ಅಥವಾ ಕೂಲಿಕೊಟ್ಟು ಮಾಡಿಸಿದರೆ ಮಧ್ಯಮವು. ಯಾಚಿಸಿದರೆ ಕನಿಷ್ಠವು. ಅರ್ಹರಾದವರಲ್ಲಿ ಬಲಾತ್ಕಾರದಿಂದ ತೆಗೆದುಕೊಂಡರೆ ಅಥವಾ ಮಾಡಿಸಿದರೆ ಅಧಮವು. ಅಯೋಗ್ಯರಾದವರಲ್ಲಿ ಬಲಾತ್ಕಾರದಿಂದ ತೆಗೆದುಕೊಂಡರೆ ಅಥವಾ ಅವರಿಂದ ಮಾಡಿಸಿದರೆ ನಿಷ್ಫಲವು.

೩೦೩-೩೦೪. ಕೆಂಪು ಅಕ್ಕಿ, ದಾಸವಾಳದ ಹೂವಿನ ಪರಾಗ, ಬಿಳುಪು ಕೆಂಪುಗಳಿಂದ ಕೂಡಿದ ಸಾಧಾರಣವಾದ ಭತ್ತದ ಅಕ್ಕಿ, ಇವುಗಳಲ್ಲಿ ಮೊದಲನೆಯದು ಉತ್ತಮ. ಎರಡನೆಯದು ಮಧ್ಯಮ. ಮೂರನೆಯದು ಅಧಮ. ಈ ಅಕ್ಕಿಗಳಿಂದ ಬಂದ ಹಿಟ್ಟಾದರೂ ಆಗಬಹುದು. ಈ ಹಿಟ್ಟುಗಳಿಂದ ಪದ್ಮ ಶಂಖ ಮೊದಲಾದುವನ್ನು ಬರೆದು ಅಲ್ಲಿ ಪೂಜೆಮಾಡಬೇಕು. ಈ ಪೂಜೆಮಾಡುವ ಮಂಟಪ ಅಥವಾ ದೇವಸ್ಥಾನವು ಉತ್ತರಮುಖ ಅಥವಾ ಪೂರ್ವಮುಖವಾಗಿರಬೇಕು.

ಪ್ರಾಗುತ್ತರಮುಖೋ ವಾಪಿ ಯದಿ ವಾ ಪ್ರಾಙ್ಮುಖೋ ಭವೇತ್ ।
ಆಸನಂ ಚ ಪ್ರವಕ್ಷ್ಯಾಮಿ ಯಥಾದೃಷ್ಟಂ ಯಥಾಶ್ರುತಂ ॥ ೩೦೫ ॥

ಕಾಶಂ ಚಾರ್ಮಂ ಚೈಲತಲ್ಪೇ ದಾರವಂ ತಾಳಪತ್ರಕಂ ।
ಕಾಂಬಳಂ ಕಾಂಚನಂ ಚೈವ ರಾಜತಂ ತಾಮ್ರಮೇವ ಚ ॥ ೩೦೬ ॥

ಗೋಕರೀಷಾರ್ಕಜೈರ್ವಾಪಿ ತ್ವಾಸನಂ ಪರಿಕಲ್ಪಯೇತ್ ।
ವೈಯಾಘ್ರಂ ರೌರವಂ ಚೈವ ಹಾರಿಣಂ ಮಾರ್ಗಮೇವ ಚ ॥ ೩೦೭ ॥

ಚಾರ್ಮಂ ಚತುರ್ವಿಧಂ ಜ್ಞೇಯಮಥ ಬಂಧುಕಮೇವ ಚ ।
ಯಥಾಸಂಭವಮೇತೇಷು ಹ್ಯಾಸನಂ ಪರಿಕಲ್ಪಯೇತ್ ॥ ೩೦೮ ॥

ಕೃತಪದ್ಮಾಸನೋ ವಾಪಿ ಸ್ವಸ್ತಿಕಾಸನ ಏವ ಚ ।
ದರ್ಭಭಸ್ಮಸಮಾಸೀನಃ ಪ್ರಾಣಾನಾಯಮ್ಯ ವಾಗ್ಯತಃ ॥ ೩೦೯ ॥

---

೩೦೫. ನೋಡಿರುವಂತೆಯೂ, ಕೇಳಿರುವಂತೆಯೂ, ಯುಕ್ತವಾದ ಆಸನಗಳನ್ನು ಹೇಳುತ್ತೇನೆ.

೩೦೬. ರೇಷ್ಮೆಯಬಟ್ಟೆ, ಚರ್ಮ, ಬಟ್ಟೆಯ ಮಡಿಕೆಗಳು, ಮರ, ತಾಳೆಗರಿ, ಕಂಬಳಿ, ಚಿನ್ನ, ಬೆಳ್ಳಿ, ತಾಮ್ರ, ಹಸುವಿನ ಒಣಗಿದ ಸಗಣಿ, ಎಕ್ಕದಮರ ಇವುಗಳಲ್ಲಿ ಯಾವುದರಲ್ಲಾದರೂ ಮಣೆಯನ್ನು ಮಾಡಿಸಿಕೊಳ್ಳಬಹುದು.

೩೦೭-೩೦೮. ಹುಲಿಯಚರ್ಮ, ಚುಕ್ಕಿಯುಳ್ಳ ಜಿಂಕೆಯಚರ್ಮ, ಚುಕ್ಕಿಯಿಲ್ಲದ ಜಿಂಕೆಯಚರ್ಮ, ಚಮರಿ ಇವುಗಳ ಚರ್ಮ, ಇವು ನಾಲ್ಕು ಬಗೆಯಾದುದು ಶ್ರೇಷ್ಠವೆಂದು ತಿಳಿಯಬೇಕು. ಹಿಪ್ಪೆಯ ಮಣೆಯಾದರೂ ಆಗಬಹುದು. ಇವುಗಳಲ್ಲಿ ಸಿಕ್ಕತಕ್ಕುದನ್ನು ತೆಗೆದುಕೊಂಡು ಆಸನವನ್ನು ಮಾಡಿಕೊಳ್ಳಬೇಕು.

೩೦೯. ಪದ್ಮಾಸನ, ಸ್ವಸ್ತಿಕಾಸನಗಳಲ್ಲಿ ಮಂಡಿಗಳನ್ನು ಹಾಕಿಕೊಳ್ಳಬೇಕು. ಆಸನಗಳ ಕೆಳಗೆ ದರ್ಭೆಯನ್ನೂ ಭಸ್ಮವನ್ನೂ ಹಾಕಿಕೊಳ್ಳಬೇಕು. ಅದರಲ್ಲಿ ಕುಳಿತು, ಮಾತನಾಡದೆ ಪ್ರಾಣಾಯಾಮಮಾಡಬೇಕು. ತಾನು ಪೂಜೆಮಾಡುವ ದೇವತೆಯನ್ನು ಮನಸ್ಸಿನಲ್ಲಿ ಧ್ಯಾನಮಾಡಬೇಕು.

ತಾವತ್ಸದೇವತಾರೂಪೋ ಧ್ಯಾನಂ ಚಾಸ್ತ್ರಸ್ಸಮಾಚರೇತ್ ।
ಶಿಖಾನ್ತೇ ದ್ವಾದಶಾಂಗುಲ್ಯೇ ಸ್ಥಿತಂ ಸೂಕ್ಷ್ಮತನೂಂ ಶಿವಂ ॥ ೩೧೦ ॥

ಅನ್ತಶ್ಚರಂತಂ ಭೂತೇಷು ಗುಹಾಯಾಂ ವಿಶ್ವಮೂರ್ತಿಷು ।
ಸರ್ವಾಭರಣಸಂಯುಕ್ತಮಣಿಮಾದಿಗುಣಾನ್ವಿತಂ ॥ ೩೧೧ ॥

ಧ್ಯಾತ್ವಾ ತಂ ಧಾರಯೇಚ್ಚಿತ್ತೇ ತದ್ವ್ಯಾಪ್ತ್ಯಾ ಪೂರಯೇತ್ತನುಂ ।
ತಯಾ ದೀಪ್ತ್ಯಾ ಶರೀರಸ್ಥಂ ಪಾಪಂ ನಾಶಮುಪಾಗತಂ ॥ ೩೧೨ ॥

ಸ್ವರ್ಣಪಾರದಸಂಪರ್ಕಾದ್ರಕ್ತಂ ಶ್ವೇತಂ ಯಥಾ ಭವೇತ್ ।
ತದ್ವಾದಶದಳಾವೃತ್ತಮಷ್ಟ ಪಂಚ ತ್ರಿರೇವ ವಾ ॥ ೩೧೩ ॥

ಪರಿಕಲ್ಪ್ಯಾಸನಂ ಶುದ್ಧಂ ತತ್ರ ಲಿಂಗಂ ನಿಧಾಯ ಚ ।
ಗುಹಾಸ್ಥಿತಂ ಮಹೇಶಾನಂ ಲಿಂಗೇ ಸಂಚಿಂತಯೇತ್ತದಾ ॥ ೩೧೪ ॥

---

೩೧೦-೩೧೧. ಹನ್ನೆರಡು ಅಂಗುಲವಿರುವ ಜ್ವಾಲೆಯ ಮಧ್ಯದಲ್ಲಿ ಇದ್ದು, ಸೂಕ್ಷ್ಮಶರೀರವನ್ನು ಹೊಂದಿರುವ, ಎಲ್ಲಾ ಪ್ರಾಣಿಗಳಲ್ಲಿಯೂ ದೇಹದಲ್ಲಿ ಸಂಚರಿಸುತ್ತಿರುವ, ಪ್ರಪಂಚದ ಹೃದಯವನ್ನೇ ಆವರಿಸಿರುವ, ಸರ್ವಾಭರಣಗಳನ್ನು ತೊಟ್ಟಿರುವ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವವೆಂಬ ಎಂಟು ಗುಣಗಳಿಂದ ಕೂಡಿದ ಆ ಶಿವನನ್ನು ಧ್ಯಾನಿಸಬೇಕು.

೩೧೨. ಧ್ಯಾನಮಾಡುತ್ತ ಆ ಶಿವನನ್ನು ಚಿತ್ತದಲ್ಲಿಟ್ಟುಕೊಳ್ಳಬೇಕು. ಆ ಶಿವನ ಆವರಿಸುವಿಕೆಯಿಂದ ದೇಹದಲ್ಲೆಲ್ಲಾ ಅವನೇ ಇರುವಂತೆ ಮಾಡಿಕೊಳ್ಳಬೇಕು. ಆ ಶಿವನ ಕಾಂತಿಯಿಂದ ಶರೀರದ ಪಾಪವೆಲ್ಲವೂ ನಾಶವಾಗುತ್ತದೆ.

೩೧೩-೩೧೪. ಚಿನ್ನ ಪಾದರಸಗಳನ್ನು ಸೇರಿಸಿ, ಕೆಂಪು ಅಥವಾ ಬೆಳ್ಳಗಿರುವ ಹನ್ನೆರಡು, ಎಂಟು, ಐದು ಅಥವಾ ಮೂರು ದಳಗಳಿಂದ ಕೂಡಿದ ಶುದ್ಧವಾದ ಪಾಣಿಬಟ್ಟಲನ್ನು ಮಾಡಿ ಅದರಲ್ಲಿ ಲಿಂಗವನ್ನಿಡಬೇಕು. ನಮ್ಮ ಹೃದಯದಲ್ಲಿ ಚಿಂತಿಸಿರುವ ಆ ಶಿವನನ್ನು ಆ ಲಿಂಗದಲ್ಲಿ ಬಂದಂತೆ ಧ್ಯಾನಿಸಬೇಕು.

ಶೋಧಿತೇ ಕಲಶೇ ತೋಯಂ ಶೋಧಿತಂ ಗಂಧವಾಸಿತಂ ।
ಸುಗಂಧಪುಷ್ಪಂ ನಿಕ್ಷಿಪ್ಯ ಪ್ರಣವೇನಾಭಿಮಂತ್ರಿತಂ ॥ ೩೧೫ ॥

ಪ್ರಾಣಾಯಾಮಶ್ಚ ಪ್ರಣವಃ ಶೂದ್ರೇಷು ನ ವಿಧೀಯತೇ ।
ಪ್ರಾಣಾಯಾಮಪದೇ ಧ್ಯಾನಂ ಶಿವೇತ್ಯೋಂಕಾರಮಂತ್ರಣಂ ॥ ೩೧೬ ॥

ಗಂಧಪುಷ್ಪಾಕ್ಷತಾದೀನಿ ಪೂಜಾದ್ರವ್ಯಾಣಿ ಯಾನಿ ಚ ।
ತಾನಿ ಸ್ಥಾಪ್ಯ ಸಮೀಪೇ ತು ತತಸ್ಸಂಕಲ್ಪ ಇಷ್ಯತೇ ॥ ೩೧೭ ॥

ಶಿವಪೂಜಾಂ ಕರಿಷ್ಯಾಮಿ ಶಿವತುಷ್ಟ್ಯರ್ಥಮೇವ ಚ ।
ಇತಿ ಸಂಕಲ್ಪಯಿತ್ವಾ ತು ತತ ಆವಾಹನಾದಿಕಂ ॥ ೩೧೮ ॥

ಕೃತ್ವಾ ತು ಸ್ನಾನಪರ್ಯಂತಂ ತತಸ್ಸ್ನಾನಂ ಪ್ರಕಲ್ಪಯೇತ್ ।
ನಮಸ್ತೇತ್ಯಾದಿಮಂತ್ರೇಣ ಶತರುದ್ರವಿಧಾನತಃ ॥ ೩೧೯ ॥

---

೩೧೫. ಮೊದಲು ನೀರು ತುಂಬುವ ಕಲಶವನ್ನು ಶೋಧಿಸಬೇಕು. ಆಮೇಲೆ ಆ ಕಲಶಕ್ಕೆ ಗಂಧದ ವಾಸನೆ ಕೊಟ್ಟಿರಬೇಕು. ಅನಂತರ ಅದಕ್ಕೆ ಶೋಧಿಸಿದ ವಾಸನೆ ಕಟ್ಟಿರುವ ನೀರನ್ನು ಹಾಕಬೇಕು. ಅದರ ಮೇಲೆ ಒಳ್ಳೆಯ ವಾಸನೆಯುಳ್ಳ ಹೂವನ್ನು ಹಾಕಿ ಪ್ರಣವದಿಂದ ಮಂತ್ರಿಸಬೇಕು.

೩೧೬. ಪ್ರಾಣಾಯಾಮವೂ ಪ್ರಣವವೂ, ಶೂದ್ರರಿಗಿರುವುದಿಲ್ಲ. ಅವರಿಗೆ ಪ್ರಾಣಾಯಾಮದ ಸ್ಥಳದಲ್ಲಿ ಶಿವಾಯ ಓಂ ಎಂಬ ಧ್ಯಾನವು ಹೇಳಲ್ಪಟ್ಟಿದೆ.

೩೧೭. ಗಂಧ, ಪುಷ್ಪ, ಅಕ್ಷತೆ ಮುಂತಾದ ಪೂಜಾಸಾಮಗ್ರಿಗಳನ್ನು ಹತ್ತಿರದಲ್ಲಿಟ್ಟುಕೊಂಡು ಅನಂತರ ಸಂಕಲ್ಪಮಾಡಬೇಕು.

೩೧೮. ಶಿವನ ಪ್ರೀತಿಗೋಸ್ಕರ ಶಿವಪೂಜೆಯನ್ನು ಮಾಡುತ್ತೇನೆ. ಎಂದು ಸಂಕಲ್ಪಮಾಡಿ ಅನಂತರ ಆವಾಹನಾದಿಗಳನ್ನು ಮಾಡಬೇಕು.

೩೧೯. ಸ್ನಾನದವರೆಗೂ ಪೂಜೆಮಾಡಿ ನಮಸ್ತೇರುದ್ರ ಎಂಬ ಮಂತ್ರದಿಂದಲೂ ಶತರುದ್ರೀಯ ವಿಧಾನದಿಂದಲೂ ಅಭಿಷೇಕ ಮಾಡಬೇಕು.

ಅವಿಚ್ಛಿನ್ನಾ ತು ಯಾ ಧಾರಾ ಮುಕ್ತಿಧಾರೇತಿ ಕೀರ್ತಿತಾ ।
ತಯಾ ಯಃ ಸ್ನಾಪಯೇನ್ಮಾಸಂ ಜಪನ್ರುದ್ರಮುಪಾಂಶು ವಾ ॥ ೩೨೦ ॥

ಏಕವಾರಂ ತ್ರಿವಾರಂ ಚ ಪಂಚ ಸಪ್ತ ನವಾಪಿ ವಾ ।
ಏಕಾದಶಮಥೋ ವಾರಮಥೈಕಾದಶ ಚಾನ್ವಿತಂ ॥ ೩೨೧ ॥

ಮುಕ್ತಿಸ್ನಾನಮಿದಂ ಜ್ಞೇಯಂ ಮಾಸಂ ಮೋಕ್ಷಪ್ರದಾಯಕಂ ।
ಶೈವಯಾ ವಿದ್ಯಯಾ ಸ್ನಾನಂ ಕೇವಲಪ್ರಣವೇನ ವಾ ॥ ೩೨೨ ॥

ಮೃಣ್ಮಯೈರ್ನಾರಿಕೇರಸ್ಯ ಶಕಲೈಶ್ಚೋಮಿರ್ಭಿಸ್ತಥಾ ।
ಕಾಂಸ್ಯೇನ ಮುಕ್ತಾಶುಕ್ತ್ಯಾ ಚ ಪುಷ್ಪಾದಿಕಸರೇಣ ವಾ ॥ ೩೨೩ ॥

ಸ್ನಾಪಯೇದ್ದೇವದೇವೇಶಂ ಯಥಾಸಂಭವಮೀರಿತೈಃ ।
ಶೃಂಗಸ್ಯ ಚ ವಿಧಿಂ ವಕ್ಷ್ಯೇ ಸ್ನಾನಯೋಗ್ಯಂ ಯಥಾ ಭವೇತ್ ॥ ೩೨೪ ॥

---

೩೨೦-೩೨೧. ಈಶ್ವರನ ಮೇಲೆ ತಡೆಯಿಲ್ಲದೆ ಒಂದೇ ಸಮನಾಗಿ ಬೀಳುತ್ತಿರುವ ಧಾರೆಗೆ ಮುಕ್ತಿಧಾರೆಯೆಂದು ಹೆಸರು. ಆ ಮುಕ್ತಿಧಾರೆಯಿಂದ ರುದ್ರವನ್ನು ಅಥವಾ ಉಪನಿಷತ್ತುಗಳನ್ನು ಹೇಳುತ್ತ ಒಂದು ತಿಂಗಳಕಾಲ ಸ್ನಾನಮಾಡಿಸಬೇಕು. ಈರೀತಿ ದಿನಒಂದಕ್ಕೆ ಒಂದುಬಾರಿ ಹೇಳಿದರೆ ಏಕವಾರವೆಂದು ಹೆಸರು. ಹೀಗೆ ಒಂದುಸಾರಿ. ಮೂರುಸಾರಿ, ಐದುಸಾರಿ, ಏಳುಸಾರಿ, ಒಂಭತ್ತುಸಾರಿ, ಹನ್ನೊಂದುಸಾರಿ, ನೂರ ಹನ್ನೊಂದುಬಾರಿ ಹೀಗೆ ಶಕ್ತಿ ಸೌಕರ್ಯಗಳಿದ್ದಂತೆ ಅಭಿಷೇಕಮಾಡಬೇಕು. ಇದಕ್ಕೆ ಮುಕ್ತಿಸ್ನಾನವೆಂದು ಹೆಸರು. ಒಂದು ತಿಂಗಳಕಾಲ ಹೀಗೆ ಮಾಡಿದರೆ ಮುಕ್ತಿಯು ಲಭಿಸುತ್ತದೆ.

೩೨೨. ಶಿವಕಲ್ಪೋಕ್ತವಾದ ಮಹನ್ಯಾಸಾದಿಗಳಿಂದ ಸ್ನಾನಮಾಡಿಸಬೇಕು. ಅದಿಲ್ಲದಿದ್ದರೆ ಪ್ರಣವದಿಂದಲಾದರೂ ಮಾಡಿಸಬೇಕು.

೩೨೩. ಮಣ್ಣಿನಪಾತ್ರೆ, ತೆಂಗಿನಕಾಯಿನಕರಟ, ಅದನ್ನೇ ಕಮಂಡಲುವಿನಂತೆ ಮಾಡಿರುವುದು, ಕಂಚಿನಪಾತ್ರೆ, ಮುತ್ತಿನಚಿಪ್ಪು ಅಥವಾ ಹೂವಿನ ಕೊಳವೆ ಇವುಗಳಲ್ಲಿ ಯಾವುದರಿಂದಾದರೂ ನೀರನ್ನು ಧಾರಾಕಾರವಾಗಿ ಬಿಟ್ಟು ಅಭಿಷೇಕಮಾಡಬೇಕು.

೩೨೪. ಶೃಂಗವೆಂದರೆ ಕೊಂಬು, ಅದರಿಂದ ಸ್ನಾನಮಾಡಿಸುವ ವಿಧಿಯನ್ನು ಹೇಳುತ್ತೇನೆ.

**ಪೂರ್ವಮನ್ತಸ್ತು ಸಂಶೋಧ್ಯ ಬಹಿರನ್ತಸ್ತು ಶೋಧಯೇತ್ ।**
**ಸುಸ್ನಿಗ್ಧಂ ಲಘು ಕೃತ್ವಾಥ ನಾಗಂ ಛಿಂದ್ಯಾತ್ಕಥಂಚನ ॥ ೩೨೫ ॥**

**ನೀಚೈಕದೇಶವಿನ್ಯಸ್ತದ್ವಾರದ್ರೋಣ್ಯಾ ಸುವೃತ್ತಯಾ ।**
**ಕುಶಾನುಯುತಯಾ ಸ್ನಾನಂ ದೇವಾಯ ಪರಿಕಲ್ಪಯೇತ್ ॥ ೩೨೬ ॥**

**ಏವಂ ಗವಯಶೃಂಗಸ್ಯ ಜಲಪೂರ್ತಿರಥೋಚ್ಯತೇ ।**
**ದ್ವಾರೇ ನಿಷಿದ್ಧಲೋಹಾರ್ಧಂ ಸಂಧಿದ್ವಾರಸಮನ್ವಿತೆ ॥ ೩೨೭ ॥**

**ಯೋಗವಕ್ತ್ರಂ ನಾಗದಂಡಂ ನಾಗಾಕಾರಂ ಪ್ರಕಲ್ಪಯೇತ್ ।**
**ಫಲಸ್ಥಾನೇ ತು ಚಷಕಂ ದಂಡೇನ ಸಮರಂಧ್ರಕಂ ॥ ೩೨೮ ॥**

---

೩೨೫-೩೨೬. ಆ ಕೊಂಬನ್ನು ಒಳಗಡೆ ಶೋಧಿಸಿ ಮೊದಲು ಸರಿಮಾಡಿ ಕೊಳ್ಳಬೇಕು. ಅನಂತರ ಹೊರಗೆ ಅನಂತರ ಒಳಗೆ ಶೋಧಿಸಿಕೊಂಡು ಅನುಕೂಲ ವಾಗುವ ರೀತಿಯಲ್ಲಿ ಮಾಡಿಕೊಳ್ಳಬೇಕು. ನುಣುಪಾಗಿರುವಂತೆಯೂ ಹಗುರವಾಗಿ ರುವಂತೆಯೂ ಮಾಡಿಕೊಳ್ಳಬೇಕು. ಅನಂತರ ಸೂಕ್ಷ್ಮವಾಗಿ ತುದಿಯ ಕಡೆಯಲ್ಲಿ ರಂಧ್ರವನ್ನು ಮಾಡಬೇಕು. ಆ ರಂಧ್ರವು ತಳಗಡೆಗೆ ಬರುವಂತೆ ಮಾಡಿ ಅದರಲ್ಲಿ ದರ್ಭೆಯನ್ನು ಸಿಕ್ಕಿಸಿರಬೇಕು. ಅದರಿಂದ ಶ್ರೀ ಶಿವನಿಗೆ ಸ್ನಾನ ಮಾಡಿಸಬೇಕು.

೩೨೭. ಗೋಸದೃಶವಾದುದು ಗವಯವೆಂಬ ಮೃಗ. ಅದರ ಕೊಂಬನ್ನು ತಂದು ಈರೀತಿ ಮಾಡಿ ನೀರನ್ನು ತುಂಬಿ ಅಭಿಷೇಕಮಾಡಬೇಕು. ಆ ಕೊಂಬಿನ ಮುಂದುಗಡೆಗೆ ಅರ್ಧದವರೆಗೂ ಲೋಹದಿಂದ ಮುಚ್ಚಿರಬೇಕು ಅದಕ್ಕೊ ರಂಧ್ರ ವನ್ನು ಮಾಡಿರಬೇಕು.

೩೨೮. ಯೋಗದಂಡದ ಮುಖದಂತೆ ಮುಖವನ್ನು ಮಾಡಿ ಒಂದು ಕಾಲು ಮಣೆಯನ್ನು ಮಾಡಬೇಕು. ಅದರಮೇಲೆ ನೀರಿನ ಪಾತ್ರೆಯನ್ನಿಡಬೇಕು. ಆ ಪಾತ್ರೆಯನ್ನು ಕಾಲುಮಣೆಯಮೇಲಿಟ್ಟು, ಅದರ ತಳಕ್ಕೆ ಒಂದು ರಂಧ್ರವನ್ನುಮಾಡಿ, ಆ ರಂಧ್ರಕ್ಕೆ ಒಂದು ಬಿದುರಿನ ಅಥವಾ ಮರದ ರಂಧ್ರವುಳ್ಳ ಕೋಲನ್ನು ಸಿಕ್ಕಿಸ ಬೇಕು. ಆ ಕೋಲಿನ ತುದಿಗೆ ಒಂದು ಸಣ್ಣಪಾತ್ರೆಯನ್ನು ಸೇರಿಸಿ ಅದಕ್ಕೆ ಮೇಲಿನ ಪಾತ್ರೆಯ ನೀರು ಬೀಳುವಂತೆ ಮಾಡಬೇಕು.

ತತ್ರೈವ ಪಾತಯೇತ್ತೋಯಂ ಮೂರ್ಧಯಂತ್ರಪುಟಸ್ಥಿತಂ ।
ಪಾತಯೇದಥ ಚಾನ್ಯೇನ ವಾಮೇನೈವ ಕರೇಣ ವಾ ॥ ೩೨೯ ॥

ಮುಕ್ತಿಧಾರಾ ಕೃತಾ ಯೇನ ಪವಿತ್ರಂ ಪಾಪನಾಶನಂ ।
ಏವಂ ಸಂಸ್ಥಾಪ್ಯ ದೇವೇಶಂ ಪಂಚಗವ್ಯೈಸ್ತಥೈವ ಚ ॥ ೩೩೦ ॥

ಪಂಚಾಮೃತೈರಥ ಸ್ನಾಪ್ಯ ಮಧುರತ್ರಿತಯೇನ ಚ ।
ವಿಭೂಷ್ಯ ಭೂಷಣೈರ್ದೇವಂ ಪುನಃ ಸ್ನಾಪ್ಯ ಮಹೇಶ್ವರಂ ॥ ೩೩೧ ॥

ಶೀತೋಪಚಾರಂ ಕೃತ್ವಾಥ ತತ ಆಚಮನಾದಿಕಂ ।
ವಸ್ತ್ರಂ ತಥೋಪವೀತಂ ಚ ಪಂಚಗಂಧಕಮೇವ ಚ ॥ ೩೩೨ ॥

ಕರ್ಪೂರಮರುವಂ ಚಾಪಿ ಪಟೀರಮಥವಾ ಭವೇತ್ ।
ಉಭಯಂ ಮಿಶ್ರಿತಂ ವಾಪಿ ಶಿವಲಿಂಗಂ ಪ್ರಪೂಜಯೇತ್ ॥ ೩೩೩ ॥

---

೩೨೯. ಆ ಮೇಲಿನ ಪಾತ್ರೆಯಲ್ಲಿರುವ ನೀರು ಆ ಶೃಂಗಕ್ಕೆ ಬೀಳುವಂತೆ ಮಾಡಿ ಅಭಿಷೇಕಮಾಡಬೇಕು. ಅದಿಲ್ಲದಿದ್ದರೆ ಬೇರೆ ರೀತಿಯಲ್ಲಿ ನೀರುಬರುವಂತೆ ಮಾಡಿಕೊಂಡರೂ ಆಗಬಹುದು. ಅದೂ ಆಗದಿದ್ದಲ್ಲಿ ಎಡಗೈಯಿಂದಲೇ ಆ ಶೃಂಗಕ್ಕೆ ನೀರನ್ನು ಹಾಕಿಕೊಳ್ಳುತ್ತಾ ಬಲಗೈಯಲ್ಲಿ ಶೃಂಗವನ್ನು ಹಿಡಿದುಕೊಂಡು ಅಭಿಷೇಕ ಮಾಡಬೇಕು.

೩೩೦-೩೩೨. ಈ ಮುಕ್ತಿಧಾರೆಯು ಪವಿತ್ರವಾದುದು. ಪಾಪನಾಶಕವಾದುದು. ಈರೀತಿಯಾಗಿ ದೇವರನ್ನು ಸ್ಥಾಪನೆಮಾಡಿಕೊಂಡು ಪಂಚಗವ್ಯದಿಂದಲೂ, ಪಂಚಾಮೃತದಿಂದಲೂ, ಅದಿಲ್ಲದಿದ್ದರೆ ಮಧುರತ್ರಿತಯವೆಂಬ ಸಕ್ಕರೆ ತುಪ್ಪ ಜೇನಿನಿಂದಲಾದರೂ ಅಭಿಷೇಕಮಾಡಿ, ಭೂಷಣಾದಿಗಳನ್ನೂ ತೊಡಿಸಿ, ಅದನ್ನು ತೆಗೆದು ಸ್ನಾನ ಮಾಡಿಸಬೇಕು. ಶೀತಕ್ಕೆ ಬೇಕಾದ ಉಪಚಾರಗಳನ್ನು ಮಾಡಿ, ಆಚಮನಮಾಡಿ ವಸ್ತ್ರಉಪವೀತ ಪಂಚಗಂಧಕಗಳನ್ನು ಅನಂತರ ಅರ್ಪಿಸಬೇಕು.

೩೩೩. ಪಚ್ಚಕರ್ಪೂರ, ಮರುಗ, ಪಟೀರಗಳನ್ನಾಗಲಿ, ಅಥವಾ ಪಚ್ಚಕರ್ಪೂರ, ಪಟೀರಗಳನ್ನು ಸೇರಿಸಿಯಾಗಲಿ ಅರ್ಪಿಸಬೇಕು. ಈರೀತಿ ಶಿವಲಿಂಗಕ್ಕೆ ಪೂಜೆಮಾಡಬೇಕು.

ಕೃತ್ಸ್ನಂ ಪೀಠಂ ಗಂಧಪೂರ್ಣಂ ಯದ್ವಾ ವಿಭವಸಾರತಃ ।
ತೂಷ್ಣೀಮುಪೋಪಚಾರಂ ವಾ ಕಾಲೀಯಂ ಪುಷ್ಪಮರ್ಚಯೇತ್ ॥ ೩೩೪ ॥

ಶ್ರೀಪತ್ರಂ ಮರುಚಿತ್ಯಾಜಂ ಯಥಾಶಕ್ತ್ಯಾಖಿಲಂ ಯಥಾ ।
ಅನೇಕಧೂಪದ್ರವ್ಯಂ ಚ ಗುಗ್ಗುಲಂ ಕೇವಲಂ ತಥಾ ॥ ೩೩೫ ॥

ಕಪಿಲಾಘೃತಸಂಯುಕ್ತಂ ಶರ್ವಧೂಪಾಯ ಶಸ್ಯತೇ ।
ಧೂಪಂ ದತ್ವಾ ಯಥಾಶಕ್ತಿ ಕಪಿಲಾಘೃತದೀಪಿಕಾಂ ॥ ೩೩೬ ॥

ಅಥವಾ ಆಜ್ಯಮಾತ್ರೇಣ ದೀಪಾಂ ದತ್ವೋಪಹಾರಕಂ ।
ಯಥಾಶಕ್ತ್ಯುಪಪನ್ನಂ ಚ ದತ್ವಾ ಪುಷ್ಪಸಮನ್ವಿತಂ ॥ ೩೩೭ ॥

ಮುಖಶುದ್ಧಿಂ ತತೋ ಗತ್ವಾ ದತ್ವಾ ತಾಂಬೂಲಮಾದರಾತ್ ।
ಪ್ರದಕ್ಷಿಣನಮಸ್ಕಾರೌ ಪೂಜ್ಯೈವಂ ಹಿ ಸಮಾಪ್ಯತೇ ॥ ೩೩೮ ॥

---

೩೩೪. ಪೀಠವೆಲ್ಲವನ್ನೂ ಸುಗಂಧದ್ರವ್ಯದಿಂದ ತುಂಬಬೇಕು. ಅಥವಾ ಅವರ ಅನುಕೂಲಕ್ಕೆ ತಕ್ಕಂತೆ ಪೂಜಿಸಬಹುದು. ಅನಂತರ ಉಪಚಾರಗಳನ್ನು ಮಾಡಬೇಕು. ಅನಂತರ ಆ ಕಾಲದಲ್ಲಿ ಬಿಟ್ಟಿರುವ ಹೂಗಳನ್ನು ಪೂಜಿಸಬೇಕು.

೩೩೫. ಬಿಲ್ವಪತ್ರೆ, ಮರುಗ, ಮಾಚಿಪತ್ರೆ ಮುಂತಾದುವನ್ನು ಶಕ್ತ್ಯಾನುಸಾರ ಸಂಪಾದಿಸಿ ತರಬೇಕು. ಬಗೆಬಗೆಯಾದ ಧೂಪಗಳನ್ನೂ ಸಂಪಾದಿಸಬೇಕು. ಅದಿಲ್ಲದಿದ್ದರೆ ಗುಗ್ಗುಲವೊಂದಾದರೂ ಇರಬೇಕು.

೩೩೬-೩೩೭. ಕಪಿಲೆಯ ಹಸುವಿನ ತುಪ್ಪದಿಂದ ಕೂಡಿದ ಧೂಪವು ಶಿವನಿಗೆ ಉತ್ತಮವಾದುದು. ಈರೀತಿಯಾಗಿ ಧೂಪವನ್ನು ಹಾಕಿ ಕಪಿಲೆಯ ಹಸುವಿನ ತುಪ್ಪದ ದೀಪವನ್ನು ಎತ್ತಬೇಕು. ಅದಿಲ್ಲದಿದ್ದರೆ ದೀಪಕ್ಕೆ ಯಾವುದಾದರೂ ತುಪ್ಪವಾಗಬಹುದು. ಅನಂತರ ಶಕ್ತಿಗನುಸಾರವಾಗಿ ನಿವೇದನವನ್ನು ಮಾಡಬೇಕು. ಅನಂತರ ಪುಷ್ಪವನ್ನು ಪೂಜಿಸಬೇಕು.

೩೩೮. ಮುಖಶುದ್ಧಿಗೋಸ್ಕರ ಆಚಮನಮಾಡಿಸಿ, ಅನಂತರ ತಾಂಬೂಲವನ್ನು ನಿವೇದಿಸಬೇಕು. ಅನಂತರ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಬೇಕು. ಈರೀತಿ ಮಾಡಿ ಪೂಜೆಯನ್ನು ಪೂರ್ತಿಗೊಳಿಸಬೇಕು.

ಗೀತ್ಯಂಗಪಂಚಕಂ ಪಶ್ಚಾತ್ತಾನಿ ವಿಜ್ಞಾಪಯಾಮಿ ತೇ ।
ಗೀತಿರ್ವಾದ್ಯಂ ಪುರಾಣಂ ಚ ನೃತ್ಯಂ ಹಾಸ್ಯೋಕ್ತಿರೇವ ಚ ॥ ೩೩೯ ॥

ನೀರಾಜನಂ ಚ ಪುಷ್ಪಾಣಾಮಂಜಲಿಶ್ಚಾಖಿಲಾರ್ಪಣಂ ।
ಕ್ಷಮಾ ಚೋದ್ವಾಸನಂ ಚೈವ ಕೀರ್ತಿಪಂಚೋಪಚಾರಕಂ ॥ ೩೪೦ ॥

ಭೂಷಣಂ ಚ ತಥಾ ಛತ್ರಂ ಚಾಮರಂ ವ್ಯಜನಂ ತಥಾ ।
ಶಿವೋಪವೀತಂ ಕೈಂಕರ್ಯಂ ಷಡೀಶಾನೋಪಚಾರಕಂ ॥ ೩೪೧ ॥

ದ್ವಾತ್ರಿಂಶದುಪಚಾರೈಸ್ತು ಯಸ್ಸಮಾರಾಧಯೇಚ್ಛಿವಂ ।
ಏಕೇನಾಹ್ನಾ ಸಮಸ್ತಾನಾಂ ಪಾಪಾನಾಂ ನಾಶನಂ ಧ್ರುವಂ ।
ದ್ವಾತ್ರಿಂಶದುಪಚಾರಂ ಸ್ಯಾತ್ಪೂಜನಂ ತೂತ್ತಮೋತ್ತಮಂ ॥ ೩೪೨ ॥

॥ ಸದಾಶಿವ ಉವಾಚ ॥

ಏವಮೇತತ್ಕಪಿಶ್ರೇಷ್ಠ ತವ ಪೂಜಾಂ ವದಾಮ್ಯಹಂ ।
ಮತ್ಪಾದಯುಗಳಂ ಪೂಜ್ಯ ಸರ್ವಪೂಜಾಕರೋ ಭವ ॥ ೩೪೩ ॥

---

೩೩೯-೩೪೦. ಗೀತದ ಅಂಗವಾದ ಐದು ಭಾಗಗಳನ್ನೂ ಆಮೇಲೆ ವಿಜ್ಞಾಪಿಸಬೇಕು. ಗೀತ, ವಾದ್ಯ, ಪುರಾಣ, ನೃತ್ಯ, ಹಾಸ್ಯೋಕ್ತಿಗಳು ಗೀತ್ಯಂಗಗಳು, ಮಂಗಳಾರತಿ, ಪುಷ್ಪಾಂಜಲಿ ಅಖಿಲಾರ್ಪಣೆ (ಪೂರ್ಣಫಲಾರ್ಪಣೆ) ಕ್ಷಮಾಪ್ರಾರ್ಥನೆ ಉದ್ವಾಸನೆ ಇವೈದೂ ಕೀರ್ತಿಪಂಚೋಪಚಾರಗಳು ಎನ್ನಿಸಿಕೊಳ್ಳುತ್ತವೆ.

೩೪೧. ಭೂಷಣ, ಛತ್ರ, ಚಾಮರ, ವ್ಯಜನ, ಉಪವೀತ, ಕೈಂಕರ್ಯ ಇವು ಆರೂ ಈಶಾನನಿಗೆ ಷಡುಪಚಾರಗಳು ಎನ್ನಿಸಿಕೊಳ್ಳುತ್ತವೆ.

೩೪೨. ಮೂವತ್ತೆರಡು ಉಪಚಾರಗಳಿಂದ ಶಿವನನ್ನು ಪೂಜಿಸಿದವನು ಒಂದು ಹಗಲಿನಿಂದಲೇ ತನ್ನ ಪಾಪಗಳನ್ನು ನಾಶಮಾಡಿಕೊಳ್ಳುತ್ತಾನೆ. ಈ ಮೂವತ್ತೆರಡು ಉಪಚಾರಗಳಿಂದ ಕೂಡಿದ ಪೂಜೆಯು ಈಶನಿಗೆ ಉತ್ತಮೋತ್ತಮವು.

೩೪೩-೩೪೪. ಸದಾಶಿವನು ಹೇಳಿದನು:—ಎಲೈ ಕಪಿಯೇ, ನೀನು ಹೇಳಿದುದು ಸರಿ. ನೀನು ಪೂಜೆಮಾಡುವ ರೀತಿಯನ್ನು ಹೇಳುತ್ತೇನೆ. ಮೊದಲು ನನ್ನ

ಆರಾಧ್ಯೇತ್ಥಂ ಯಥಾ ಲಿಂಗೇ ತನ್ಮಮಾರಾಧನಂ ಕುರು ॥ ೩೪೪ ॥

॥ ಹನೂಮಾನುವಾಚ ॥

ಗುರುಣಾ ಲಿಂಗಪೂಜೈವ ನಿಯತಾ ಪರಿಕಲ್ಪಿತಾ ।
ತಾಂ ಕರೋಮಿ ಪುರಾ ದೇವ ಪಶ್ಚಾತ್ತ್ವತ್ಪಾದಪೂಜನಂ ॥ ೩೪೫ ॥

ಇತ್ಯುಕ್ತ್ವೈವ ನಮಸ್ಯೇಶಂ ಶಿವಲಿಂಗಾರ್ಚನೇಽಭವತ್ ।
ಸರಸ್ತೀರಮಥೋ ಗತ್ವಾ ಕೃತ್ವಾ ಸೈಕತವೇದಿಕಾಂ ॥ ೩೪೬ ॥

ತಾಳಪತ್ರೈರ್ವಿರಚಿತಮಾಸನಂ ಪರ್ಯಕಲ್ಪಯತ್ ।
ಪ್ರಕ್ಷಾಳ್ಯ ಪಾದಹಸ್ತೌ ತು ಸಮಾಚಮ್ಯ ಸಮಾಹಿತಃ ॥ ೩೪೭ ॥

ಭಸ್ಮಸ್ನಾನಮಥೋ ಚಕ್ರೇ ಪುನರಾಚಮ್ಯ ವಾಗ್ಯತಃ ।
ದೇವವೇದ್ಯಾಮಥೋ ಚಕ್ರೇ ಪದ್ಮಾನಿ ಸುಮನೋಹರಂ ॥ ೩೪೮ ॥

---

ಪಾದಪೂಜೆಯನ್ನು ಮಾಡಿ ಅನಂತರ ಮಿಕ್ಕ ಎಲ್ಲಾ ಪೂಜೆಗಳನ್ನೂ ಮಾಡು. ಲಿಂಗವನ್ನು ಈರೀತಿ ಪೂಜಿಸುತ್ತ ನನ್ನ ಪೂಜೆಯನ್ನು ಆಚರಿಸು.

೩೪೫. ಹನುಮಂತನು ಹೇಳಿದನು:—ಎಲೈ ದೇವನೇ, ನನ್ನ ಗುರುವು ಒಂದು ಬಗೆಯ ಲಿಂಗಪೂಜೆಯನ್ನು ಉಪದೇಶಿಸಿದ್ದಾರೆ. ಮೊದಲು ಅದನ್ನು ಮಾಡುತ್ತೇನೆ. ಅನಂತರ ನಿನ್ನ ಪಾದಪೂಜೆಯನ್ನು ಮಾಡುತ್ತೇನೆ.

೩೪೬. ಈರೀತಿಯಾಗಿ ಈಶ್ವರನಿಗೆ ಹೇಳಿ ಅವನಿಗೆ ನಮಸ್ಕರಿಸಿ, ಅವನಿಂದ ಅನುಜ್ಞೆಯನ್ನು ಹೊಂದಿ ಶಿವಪೂಜೆಗೆ ಹೊರಟನು. ಸರೋವರದ ದಡಕ್ಕೆ ಬಂದು ಮರಳಿನಲ್ಲಿ ಒಂದು ಜಗುಲಿಯನ್ನು ಮಾಡಿ ತಾಳೆಯ ಗರಿಯಿಂದ ಆಸನವನ್ನು ಮಾಡಿಕೊಂಡನು.

೩೪೭-೩೪೮. ಕೈಕಾಲುಗಳನ್ನು ತೊಳೆದುಕೊಂಡು ನಿಯಮದಿಂದ ಭಸ್ಮಸ್ನಾನವನ್ನು ಮಾಡಿ ಮತ್ತೆ ಆಚಮನಮಾಡಿ ನಿಯಮದಿಂದ ಆ ಮರಳಿನ ವೇದಿಕೆಯಲ್ಲಿ ಮನೋಹರವಾದ ಶಂಖ, ಚಕ್ರ, ಪದ್ಮ ಮುಂತಾದುವನ್ನು ಬರೆದನು.

ಅನಂತರಂ ತಾಳಪತ್ರಂ ಪದ್ಮಾಸನಗತಃ ಕಪಿಃ ।
ಪ್ರಾಣಾಯಾಮಮ್ಯ ಸನ್ಯಾಸಂ ಶುಕ್ಲಧ್ಯಾನಸಮನ್ವಿತಃ ॥ ೩೪೯ ॥

ಪ್ರಣಮ್ಯ ಗುರುಮೀಶಾನಂ ಜಪನ್ನಾಸೀಪತಃ ಪರಂ ।
ಅಥ ದೇವಾರ್ಚನಂ ಕರ್ತುಂ ಯತ್ನವಾಸ್ಥಿತವಾನಪಿ ॥ ೩೫೦ ॥

ಪಲಾಶಪತ್ರಪುಟಿಕದ್ವಯಾನೀತಜಲಂ ಶುಚಿ ।
ಶಿರಃಕಮಂಡಲುಗತಂ ನಿಧಾಯಾಗ್ನಿತ್ರಿಮಂತ್ರಿತಂ ॥ ೩೫೧ ॥

ಆವಾಹನಾದಿ ಕೃತ್ವಾಽಥ ಸ್ನಾನಪರ್ಯಂತಮೇವ ಚ ।
ಅಥ ಸ್ನಾಪಯಿತುಂ ದೇವಮಾದಾಯ ಕರಸಂಪುಟೇ ॥ ೩೫೨ ॥

ಕೃತ್ವಾ ನಿರೀಕ್ಷಣಂ ದೇವಂ ಪೀಠಂ ನೋ ದೃಷ್ಟವಾನ್ಕಪಿಃ ।
ಲಿಂಗಮಾತ್ರಂ ಕರಗತಂ ದೃಷ್ಟ್ವಾ ಭೀತಿಸಮನ್ವಿತಃ ॥ ೩೫೩ ॥

---

೩೪೯. ಆಮೇಲೆ ತಾಳಪತ್ರದ ಆಸನದ ಮೇಲೆ ಪದ್ಮಾಸನದ ಮಂಡಿಯನ್ನು ಹಾಕಿ ಕುಳಿತುಕೊಂಡು, ಆ ಹನುಮಂತನು ಪ್ರಾಣಾಯಾಮಮಾಡಿ, ಸಂಕಲ್ಪ ಪೂರ್ವಕವಾಗಿ ನ್ಯಾಸವನ್ನು ಮಾಡಿಕೊಂಡು, ಶುಕ್ಲಧ್ಯಾನಮಾಡಿ, ಶಿವನಿಗೆ ನಮಸ್ಕರಿಸಿ ಅನಂತರ ಜಪಮಾಡಿದನು.

೩೫೦-೩೫೧. ಅನಂತರ ದೇವತಾರ್ಚನೆಯನ್ನು ಮಾಡಲು ಆ ಆಂಜನೇಯನು ಪ್ರಯತ್ನಪಟ್ಟು ಮುತ್ತುಕದೆಲೆಯಲ್ಲಿ ಕಟ್ಟಿರುವ ದೊನ್ನೆಯಲ್ಲಿ ಶುಚಿಯಾಗಿ ಅಗ್ರೋದಕವನ್ನು ತಂದಿಟ್ಟುಕೊಂಡು ಶಿರಸ್ಸಿನ ಕಪಾಲದ ಅಗ್ನಿಯನ್ನು ಎಂದರೆ ಜ್ಞಾನಾಗ್ನಿಯನ್ನು ಮೂರುಬಾರಿ ಅಭಿಮಂತ್ರಿಸಿ ಪ್ರತಿಷ್ಠೆಮಾಡಿಕೊಂಡನು.

೩೫೨. ಅನಂತರ ಲಿಂಗಕ್ಕೆ ಆವಾಹನಾದಿ ಷೋಡಶೋಪಚಾರಗಳನ್ನು ಮಾಡುತ್ತ ಸ್ನಾನದವರೆಗೂ ಮಾಡಿ ಅಭಿಷೇಕಮಾಡುವುದಕ್ಕೋಸ್ಕರ ಬೊಗಸೆಗೆ ಆ ದೇವರನ್ನು ತೆಗೆದುಕೊಂಡು ನೋಡಲು ಪೀಠವನ್ನು ಕಾಣಲಿಲ್ಲ.

೩೫೩-೩೫೪. ಲಿಂಗ ಒಂದೇ ಕೈಲಿದ್ದುದನ್ನು ನೋಡಿ ಹೆದರಿದವನಾಗಿ ಪೀಠ

ಇದಮಾಹ ಮಹಾಯೋಗೀ ಕಿಂ ವಾ ಪಾಪಂ ಮಯಾ ಕೃತಂ ।
ಯದೇತತ್ಪೀಠರಹಿತಂ ಶಿವಲಿಂಗಂ ಕರಸ್ಥಿತಂ ॥ ೩೫೪ ॥

ಮಮಾದ್ಯ ಮರಣಂ ಸಿದ್ಧಂ ನ ಪೀಠಂ ಚಾಗಮಿಷ್ಯತಿ ।
ಅಥ ರುದ್ರಂ ಜಪಿಷ್ಯಾಮಿ ತದಾಯಾತಿ ಮಹೇಶ್ವರಃ ॥ ೩೫೫ ॥

ಇತಿ ನಿಶ್ಚಿತ್ಯ ಮನಸಾ ಜಜಾಪ ಶತರುದ್ರಿಯಂ ।
ಅಥಾಪಿ ನ ಸಮಾಯಾತೋ ಮಹೇಶೋಽಥ ಕಪೀಶ್ವರಃ ॥ ೩೫೬ ॥

ರುದ್ರಂ ನ್ಯಪಾತಯದ್ಭೂಮ್ಯಾಂ ವೀರಭದ್ರಸ್ಸಮಾಗತಃ ।
ಕಿಮರ್ಥಂ ರುದ್ಯತೇ ಭಕ್ತ ರುದಿಹೇತುಂ ವದಸ್ವ ಮೇ ।
ಪೀಠಹೀನಮಿದಂ ಲಿಂಗಂ ಪಶ್ಯ ಮೇ ಪಾಪಸಂಚಯಂ ॥ ೩೫೭ ॥

॥ ವೀರಭದ್ರ ಉವಾಚ ॥

ಯದಿ ನಾಯಾತಿ ಪೀಠಂ ತೇ ಲಿಂಗಂ ಮಾ ಸಾಹಸಂ ಕೃಥಾಃ ।
ದಾಹಯಿಷ್ಯಾಮ್ಯಹಂ ಲೋಕಂ ಯದಿ ನಾಯಾತಿ ಪೀಠಕಂ ॥ ೩೫೮ ॥

---

ವಿಲ್ಲದ ಶಿವಲಿಂಗವು ಕೈಯ್ಯಲ್ಲಿರುವುದಲ್ಲ. ನಾನೇನು ಕೆಟ್ಟಕೆಲಸವನ್ನು ಮಾಡಿದೆನು ಎಂದುಕೊಂಡನು.

೩೫೫. ಈಗ ಪೀಠವು ಬಾರದಿದ್ದರೆ ನನ್ನ ಪ್ರಾಣಗಳು ಖಂಡಿತ ಹೋಗುವುವು. ಆದ್ದರಿಂದ ರುದ್ರಜಪವನ್ನು ಮಾಡಿದರೆ ಖಂಡಿತವಾಗಿಯೂ ರುದ್ರನು ಬರುವನು.

೩೫೬. ಈರೀತಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಶತರುದ್ರೀಯವನ್ನು ಜಪಿಸಿದನು. ಆದರೂ ಕೂಡ ಮಹೇಶನು ಬಾರದಿರಲು ಆ ಕಪಿಯು ಕೈಲಿದ್ದ ಲಿಂಗವನ್ನು ಕೆಳಗೆ ಕೆಡವಿದನು. ಆಗ ವೀರಭದ್ರನು ಬಂದನು.

೩೫೭. ಆ ವೀರಭದ್ರನು ಎಲೈ ಭಕ್ತನೇ, ನೀನೇತಕ್ಕೆ ಅಳುತ್ತೀಯೆ? ಅದರ ಕಾರಣವನ್ನು ಹೇಳೆನ್ನಲು, ಕಪಿಯು ಈ ಲಿಂಗವು ಪೀಠವಿಲ್ಲದಿದೆ. ನನ್ನ ಪಾಪವನ್ನು ಎಷ್ಟೆಂದು ಹೇಳಲಿ ಎಂದನು.

೩೫೮. ವೀರಭದ್ರನು ಹೇಳಿದನು:—ನೀನು ಪೂಜಿಸುವ ಲಿಂಗಕ್ಕೆ ಪೀಠವು ಬಾರದಿದ್ದಲ್ಲಿ ಮಿತಿಮೀರಿದ ಕೆಲಸಕ್ಕೆ ಕೈಹಾಕಬೇಡ (ಲಿಂಗವನ್ನು ಹಾಳುಮಾಡಬೇಡ) ಎಂದು ಹೇಳಿ, ಪೀಠವು ಬಾರದಿದ್ದಲ್ಲಿ ನಾನು ಲೋಕಗಳನ್ನು ಸುಡುತ್ತೇನೆಂದನು.

**ಪಶ್ಯ ದರ್ಶಯ ಮೇ ಲಿಂಗಂ ಪೀಠಂ ಯದ್ಯಾಗತಂ ನ ವಾ ।**
**ಅಥ ದೃಷ್ಟ್ವಾ ವೀರಭದ್ರೋ ಲಿಂಗಂ ಪೀಠಮನಾಗತಂ ॥ ೩೫೯ ॥**

**ದಗ್ಧುಕಾಮೋಽಖಿಲಾನ್ಲೋಕಾನ್ವೀರಭದ್ರಃ ಪ್ರತಾಪವಾನ್ ।**
**ಅನಲಂ ಭುವಿ ಚಿಕ್ಷೇಪ ಕ್ಷಣಾದ್ದಗ್ಧಾ ಮಹೀ ತದಾ ॥ ೩೬೦ ॥**

**ಅಥ ಸಪ್ತತಲಾನ್ದಗ್ಧ್ವಾ ಪುನರೂರ್ಧ್ವಮವರ್ತತ ।**
**ಪಂಚೋರ್ಧ್ವಲೋಕಾನದಹಜ್ಜನಲೋಕನಿವಾಸಿನಃ ॥ ೩೬೧ ॥**

**ಲಲಾಟನೇತ್ರಸಂಭೂತಂ ನಖೇನಾದಾಯ ಚಾನಲಂ ।**
**ಜಂಬೀರಫಲಸಂಕಾಶಂ ಕೃತ್ವಾ ಕರತಲೇ ವಿಭುಃ ॥ ೩೬೨ ॥**

**ಯದಿ ನಾಯಾತಿ ಪೀಠಂ ತೇ ದಗ್ಧಾ ಲೋಕಾ ನ ಸಂಶಯಃ ।**
**ಅನಾಯಾತಮಥೋ ದೃಷ್ಟ್ವಾ ವೀರಭದ್ರಃ ಪ್ರತಾಪವಾನ್ ॥ ೩೬೩ ॥**

---

೩೫೯. ಲಿಂಗವನ್ನು ನೋಡು. ನನಗೂ ತೋರಿಸು. ಪೀಠವು ಬಂದಿತೇ ಇಲ್ಲವೇ? ಎಂದನು. ಅನಂತರ ಇಬ್ಬರೂ ನೋಡಲು ಆ ಲಿಂಗಕ್ಕೆ ಪೀಠವು ಬಂದಿರಲಿಲ್ಲ.

೩೬೦. ಪ್ರತಾಪಿಯಾದ ವೀರಭದ್ರನು ಲೋಕಗಳನ್ನೆಲ್ಲಾ ಸುಡಲು ಭೂಮಿಯಲ್ಲಿ ಬೆಂಕಿಯನ್ನೆಸೆದನು. ಕ್ಷಣಕಾಲದಲ್ಲಿಯೇ ಭೂಲೋಕವು ಸುಟ್ಟುಹೋಯಿತು.

೩೬೧-೩೬೨. ಕೆಳಗೆಯಿರುವ ಏಳು ಲೋಕಗಳನ್ನು ಸುಟ್ಟು, ಮೇಲಿನ ಲೋಕಗಳಿಗೆ ಆ ಬೆಂಕಿಯು ಹತ್ತಿ ಮೇಲುಗಡೆ ಐದು ಲೋಕಗಳನ್ನೂ ಸುಟ್ಟಿತು. ಅಲ್ಲದೆ ಜನೋಲೋಕದಲ್ಲಿರುವವರನ್ನೂ ಸುಡಲು ಮೊದಲಿಟ್ಟಿತು. ಆಗ ಮತ್ತೆ ವೀರಭದ್ರನು ಕಣ್ಣಿನಿಂದ ಅಗ್ನಿಯನ್ನು ತೆಗೆದುಕೊಂಡು ಅದನ್ನು ನಿಂಬೆಯ ಹಣ್ಣಿನಷ್ಟು ದಪ್ಪ ಮಾಡಿ ಕೈಯಲ್ಲಿಟ್ಟುಕೊಂಡನು.

೩೬೩, ಆಗ ಆ ವೀರಭದ್ರನು ನೀನು ಪೂಜೆಮಾಡುವ ಲಿಂಗಕ್ಕೆ ಪೀಠವು ಬಾರದಿದ್ದರೆ ಲೋಕಗಳೆಲ್ಲವನ್ನೂ ಖಂಡಿತವಾಗಿ ಸುಡುತ್ತೇನೆಂದನು. ಆದರೂ ಕೂಡ ಪೀಠವು ಬಾರದಿದ್ದುದು ವೀರಭದ್ರನಿಗೆ ಗೊತ್ತಾಯಿತು.

**ಸನಕಾದಯೋ ಮಹಾತ್ಮಾನೋ ಜ್ಞಾತ್ವಾ ಯೋಗೇನ ಚಾಗತಮ್ ।**
**ಗೌತಮಸ್ಯಾಶ್ರಮವರಂ ಸಮಾಗಮ್ಯ ಮಹೇಶ್ವರಂ** ॥ ೩೬೪ ॥

**ನ ದೃಷ್ಟವಂತೋ ದೇವಾದಿಸೇವ್ಯಮಾನಮಪಿ ದಿಜಾಃ ।**
**ಅಸ್ತುವನ್ನಥ ಚ ಸ್ತೋತ್ರೈಃ ಸರ್ವವೇದಸಮುದ್ಭವೈಃ** ॥ ೩೬೫ ॥

**ಓಂ ನಮೋ ದೇವದೇವಾಯ ತಸ್ಮೈ**
**ಶುದ್ಧಪ್ರಭಾಚಿಂತ್ಯರೂಪಾಯ ತಸ್ಮೈ ।**
**ನಮಸ್ಸುರಾಣಾಮಧೀಶಾಯ ತಸ್ಮೈ**
**ನಮೋ ನಮೋ ವೇದಗುಹ್ಯಾಯ ತಸ್ಮೈ** ॥ ೩೬೬ ॥

**ನಮಶ್ಶಿವಾಯಾದಿದೇವಾಯ ತಸ್ಮೈ**
**ನಮೋ ವ್ಯಾಳಯಜ್ಞೋಪವೀತಾಯ ತಸ್ಮೈ ।**
**ನಮಸ್ಸುರಾಬಿಂದುಸಂದೋಹವರ್ಷ-**
**ತ್ರಯೀಬಿಂದುವಿಶ್ವಂಭರಾಯ ತಸ್ಮೈ** ॥ ೩೬೭ ॥

---

೩೬೪-೩೬೫. ಆಗ ಸನಕಾದಿ ಮಹಾತ್ಮರು ಯೋಗಾಭ್ಯಾಸದಿಂದ ಪರಮೇಶ್ವರನು ಗೌತಮನ ಆಶ್ರಮಕ್ಕೆ ಬಂದಿರುವುದನ್ನು ತಿಳಿದು, ಅಲ್ಲಿಗೆ ಬಂದು, ಅಲ್ಲಿ ಶಿವನು ದೇವಾದಿಗಳಿಂದ ಸೇವೆ ತೆಗೆದುಕೊಳ್ಳುತ್ತಿದ್ದರೂ ಅವನನ್ನು ಕಾಣಲಿಲ್ಲ. ಆಗ ಅವರು ವೇದೋಕ್ತವಾದ ಸ್ತೋತ್ರಗಳಿಂದ ಸ್ತುತಿಸಿದರು.

೩೬೬. ದೇವತೆಗಳಿಗೂ ದೇವನಾದ ಸ್ವಾಮಿಗೆ ನಮಸ್ಕಾರವು. ಶುದ್ಧವಾದ ಕಾಂತಿಯಿಂದ ಕೂಡಿದ, ಯೋಚಿಸಲೂ ಅಸಾಧ್ಯವಾದ ರೂಪವುಳ್ಳ ಸ್ವಾಮಿಗೆ ನಮಸ್ಕಾರವು. ದೇವತೆಗಳಿಗೆ ಒಡೆಯನಾದ ಸ್ವಾಮಿಗೆ ನಮಸ್ಕಾರವು. ವೇದದಲ್ಲಿ ವೇದ್ಯನಾಗತಕ್ಕ ಆ ಸ್ವಾಮಿಗೆ ನಮಸ್ಕಾರವು.

೩೬೭. ಆದಿದೇವನಾದ ಶಿವನಿಗೆ ನಮಸ್ಕಾರವು. ಸರ್ಪಯಜ್ಞೋಪವೀತ ಸ್ವಾಮಿಗೆ ನಮಸ್ಕಾರವು. ಮದ್ಯದ ತುಂತುರುಗಳಂತೆ ಮೂರು ವೇದಗಳ ತುಂತುರುಗಳಿಂದ ಪ್ರಪಂಚವನ್ನು ತುಂಬಿರುವ ಆ ಶಿವನಿಗೆ ನಮಸ್ಕಾರವು.

ಪೃಥಿವ್ಯಥೋ ವಾಯುರಾಕಾಶತೋಯಂ
ಪುನಃ ಶಶೀ ವಹ್ನಿಸೂರ್ಯೌ ತಥಾತ್ಮಾ ।
ಯಸ್ಯಾಷ್ಟೈತಾ ಮೂರ್ತಯಶ್ಯಂಕರಸ್ಯ
ತಸ್ಮೈ ನಮೋ ಜ್ಞಾನಗಮ್ಯಾಯ ಶಶ್ವತ್ ॥ ೩೬೮ ॥

ಏತಾಂ ಸ್ತುತಿಮಥಾಕರ್ಣ್ಯ ಭಗನೇತ್ರಪ್ರದಃ ಶಿವಃ ।
ವಿಷ್ಣುಮಾಹ ಚ ಗಚ್ಛ ತ್ವಂ ಸಮಾನಯ ಚ ತಾನ್ದ್ವಿಜಾನ್ ॥ ೩೬೯ ॥

ಆನೀತಾಸ್ತೇನ ಹರಿಣಾ ದೇವಾಯ ಪ್ರಣತಾಸ್ತು ತೇ ।
ತಾನಾಹ ಶಂಕರೋ ವಾಕ್ಯಂ ಕಿಮರ್ಥಂ ಯೂಯಮಾಗತಾಃ ॥ ೩೭೦ ॥

॥ ಮುನಯ ಊಚುಃ ॥

ದೇವ ದ್ವಾದಶಲೋಕಾನಾಂ ದೃಶ್ಯಂತೇ ಭಸ್ಮರಾಶಯಃ ।
ಸ್ಥಿತಮೇಕಂ ವನಮಿದಂ ಪಶ್ಯ ತಲ್ಲೋಕಸಂಕ್ಷಯಂ ॥ ೩೭೧ ॥

---

೩೬೮. ಭೂಮಿ, ವಾಯು, ಆಕಾಶ, ನೀರು, ಚಂದ್ರ, ಸೂರ್ಯ, ಆತ್ಮಾ, ಅಗ್ನಿ, ಈ ಎಂಟು ಮೂರ್ತಿಗಳೇ ಯಾವ ಶಂಕರನ ಶರೀರವಾಗಿವೆಯೋ ಅಂತಹ ಜ್ಞಾನದಿಂದ ತಿಳಿಯಲ್ಪಡುವ ಶಂಕರನಿಗೆ ನಮಸ್ಕಾರವು.

೩೬೯. ಇಂದ್ರನಿಗೆ ಶಾಪದಿಂದ ಬಂದ ಭಗಗಳನ್ನು ಕಣ್ಣಾಗಿ ಮಾಡಿದ ಶಿವನು ಈ ಸ್ತುತಿಯನ್ನು ಕೇಳಿ, ವಿಷ್ಣುವನ್ನು ಕುರಿತು ಆ ಬ್ರಾಹ್ಮಣರನ್ನು ಕರೆದುಕೊಂಡುಬಾ ಎಂದು ಕಳುಹಿಸಿದನು.

೩೭೦. ವಿಷ್ಣುವು ಅವರೆಲ್ಲರನ್ನೂ ಕರೆತಂದನು. ಅವರು ಶಂಕರನಿಗೆ ನಮಸ್ಕರಿಸಲು ಅವರನ್ನು ಕುರಿತು ನೀವೆಲ್ಲರೂ ಏಕೆ ಬಂದಿರೆಂದನು.

೩೭೧. ಮುನಿಗಳು ಹೇಳಿದರು:—ಸ್ವಾಮಿ, ಹನ್ನೆರಡು ಲೋಕಗಳು ಸುಟ್ಟು ಬೂದಿಯರಾಶಿಯು ಕಾಣುತ್ತಿರುವುದು. ಇದೊಂದು ವನ ಮಾತ್ರ ಉಳಿದಿದೆ. ಈ ಲೋಕನಾಶವನ್ನು ನೋಡು.

॥ ಸದಾಶಿವ ಉವಾಚ ॥

**ಊರ್ಧ್ವಸ್ಥ ಪಂಚಲೋಕಾನಾಂ ದಾಹೇ ಸಂದೇಹ ಏವ ನಃ ।**
**ಕಥಮಂಗಾರವೃಷ್ಟಿಶ್ಚ ಕಥಂ ನೋ ವಾ ಮಹಾಧ್ವನಿಃ ॥ ೩೭೨ ॥**

॥ ಮುನಯ ಊಚುಃ ॥

**ಭೀತಿರಸ್ಮಾಕಮಧುನಾ ವರ್ತತೇ ವೀರಭದ್ರತಃ**
**ಸ ಏವಾಂಗಾರವೃಷ್ಟಿಂ ಚ ಪಿಪಾಸುರಿವ ತಾಮಪಾತ್ ॥ ೩೭೩ ॥**

**ದೇವೋಽಥ ವೀರಮಾಹೂಯ ಕಿಂ ವೀರೇತ್ಯಬ್ರವೀದ್ಭವಃ ।**
**ವೀರೋ ಹನೂಮತೋ ಲಿಂಗಪೀಠಾಭಾವಾದಿದಂ ಕೃತಂ ॥ ೩೭೪ ॥**

**ಕಪೇಶ್ಚಿತ್ತಂ ಪರಿಜ್ಞಾತುಂ ಮಯಾ ಕೃತಮಿದಂ ಬೃಹತ್ ।**
**ಕೃಪಾನಿಧಿರಥೋ ದೇವೋ ಯಥಾಪೂರ್ವಮಕಲ್ಪಯತ್ ॥ ೩೭೫ ॥**

---

೩೭೨. ಸದಾಶಿವನು ಹೇಳಿದನು:—ಮೇಲಿರುವ ಐದು ಲೋಕಗಳು ಸುಟ್ಟಿರುವುದರಲ್ಲಿ ನನಗೆ ಸಂದೇಹವಿದೆ. ಏಕೆಂದರೆ, ಬೆಂಕಿಯು ಕೆಳಗೆ ಬೀಳುತ್ತಿಲ್ಲ. ಹೆಚ್ಚು ಶಬ್ದವು ಕೇಳಿಸುತ್ತಿಲ್ಲ.

೩೭೩. ಮುನಿಗಳು ಹೇಳಿದರು:—ಈಗ ನಮಗೆ ವೀರಭದ್ರನಿಂದ ಬಹು ಹೆದರಿಕೆಯುಂಟಾಗಿದೆ. ಅವನೇ ಆ ಬೆಂಕಿಯ ಮಳೆಯನ್ನು ಬಾಯಾರಿದವನಂತೆ ಕುಡಿದನು.

೩೭೪. ಆಗ ವೀರಭದ್ರನನ್ನು ಕರೆದು ಇದೇನೆಂದು ಕೇಳಲು, ಅವನು ಹನುಮಂತನು ಪೂಜೆಮಾಡುವ ಲಿಂಗಕ್ಕೆ ಪೀಠಬಾರದಿದ್ದುದರಿಂದ ಹೀಗೆ ಮಾಡಿದೆನೆಂದನು.

೩೭೫-೩೭೬. ಆ ಕಪಿಯ ಮನಸ್ಸನ್ನು ತಿಳಿಯಬೇಕೆಂದು ಹೀಗೆ ಮಾಡಿದೆ ಎಂದು ಶಿವನು ಪೀಠವನ್ನು ಕಲ್ಪಿಸಿ ಸುಟ್ಟುಹೋದ ಲೋಕಗಳನ್ನು ಮೊದಲಿನಂತೆ

ದಗ್ಧಾನಪ್ಯಖಿಲಾಂಲ್ಲೋಕಾಸ್ಪೂರ್ವತಃ ಶೋಭನಾನ್ವಿಭುಃ ।
ಕಲ್ಪಯಾಮಾಸ ವಿಶ್ವಾತ್ಮಾ ವೀರಭದ್ರಮಥಾಬ್ರವೀತ್ ॥ ೩೭೬ ॥

ಆಲಿಂಗ್ಯಾಘ್ರಾಯ ಶಿರಸಿ ತಾಂಬೂಲಂ ದತ್ತವಾನ್ಹರಃ ।
ಅಥಾಸೌ ಹನುಮಾನೀಶಪೂಜನಂ ಕೃತವಾನಥ ॥ ೩೭೭ ॥

ಏಕಂ ವನಚರಂ ತತ್ರ ಗಂಧರ್ವಂ ಸವಿಪಂಚಿಕಂ ।
ಇದಮಾಹ ಮಹಾವೀಣಾ ಮಮ ವೈ ದೀಯತಾಮಿತಿ ॥ ೩೭೮ ॥

ಗಂಧರ್ವೋ ನ ಮಯಾ ತ್ಯಾಜ್ಯಾ ವೀಣಾ ಪ್ರಾಣಸಮಾ ಮಮ ।
ಮಮಾಪಿ ಪ್ರಾಣಸದೃಶೀ ವೀಣೇತ್ಯಾಹ ಕಪೀಶ್ವರಃ ॥ ೩೭೯ ॥

ಅಥ ಮುಷ್ಟಿನಿಪಾತೇನ ಗಂಧರ್ವೇ ಪತಿತೇ ಕಪಿಃ ।
ಆದಾಯ ವೀಣಾಂ ಮಹತೀಂ ಸ್ವರತಂತುಸಮನ್ವಿತಾಂ ॥ ೩೮೦ ॥

---

ಮಾಡಿದುದಲ್ಲದೆ ರಮ್ಯವನ್ನಾಗಿಯೂ ಮಾಡಿದನು. ಅನಂತರ ವೀರಭದ್ರನನ್ನು ಕುರಿತು ಸಂತೋಷವೆಂದನು.

೩೭೭. ಆಗ ಆ ವೀರಭದ್ರನನ್ನು ಆಲಂಗಿಸಿಕೊಂಡು ತಲೆಯಲ್ಲಿ ಮೂಸಿ ನೋಡಿ ತಾಂಬೂಲವನ್ನು ಕೊಟ್ಟುಕಳುಹಿಸಿದನು. ಅನಂತರ ಪಾಣಿಪೀಠ ಬರಲು ಹನುಮಂತನು ಈಶಪೂಜೆಯನ್ನು ಮಾಡಿದನು. (ಮಾಡಿ ಮುಗಿಸಿದನು.)

೩೭೮. ಆಗ ಹನುಮಂತನು ಅಲ್ಲಿ ಒಬ್ಬ ವೀಣೆಯನ್ನು ಹಿಡಿದಿರುವ ಗಂಧರ್ವನನ್ನು ನೋಡಿ, ಈ ವೀಣೆಯನ್ನು ನನಗೆ ಕೊಡೆಂದನು.

೩೭೯. ಅದಕ್ಕೆ ಗಂಧರ್ವನು, ಈ ವೀಣೆಯು ನನ್ನ ಪ್ರಾಣಗಳಿಗೆ ಸಮವಾದುದು. ಕೊಡತಕ್ಕದ್ದಲ್ಲವೆನ್ನಲು, ಕಪಿಯೂ ಕೂಡ ವೀಣೆಯು ನನಗೂ ಪ್ರಾಣಸಮವಾದುದೆಂದನು.

೩೮೦-೩೮೧. ಗಂಧರ್ವನು ವೀಣೆಯನ್ನು ಕೊಡದಿರಲು, ಕಪಿಯು ಅವನಿಗೆ ಒಂದೆರಡು ಗುದ್ದುಗಳನ್ನು ಗುದ್ದಿ, ಕೆಳಗೆ ಕೆಡವಿ, ಆ ವೀಣೆಯನ್ನು ಕಿತ್ತುಕೊಂಡು ಶ್ರುತಿಮಾಡಿ ಬಿಲ್ವಪತ್ರೆಯಂತಿರುವ ಸೋರೆಯ ಬುರುಡೆಯನ್ನು ಯಥಾ ಯೋಗ್ಯ

**ಅಲಾಬುಸಂಯುತಾಂ ಕೃತ್ವಾ ರಾಜವೃಕ್ಷಫಲಾಕೃತಿಂ ।**
**ತಸ್ಯೋರಸಿ ವಿನಿಕ್ಷಿಪ್ಯ ಗಾಯನ್ನಾಗಾಚ್ಛಿವಾಂತಿಕಂ ॥ ೩೮೧ ॥**

**ಬೃಹತೀಕುಸುಮೈಶ್ಶುದ್ಧೈರ್ದೇವಪಾದಾವಪೂಜಯತ್ ।**
**ತಸ್ಮೈ ವರಮಥ ಪ್ರಾದಾದಾಕಲ್ಪಂ ಜೀವಿತಂ ಪುನಃ ।**
**ಸಮುದ್ರಲಂಘನೇ ಶಕ್ತಿಂ ವರಂ ಪ್ರಾದಾದಥಾಪರಂ ॥ ೩೮೨ ॥**

**ಸಮಸ್ತಭೂಷಾಸುವಿಭೂಷಿತಾಂಗಃ**
**ಸ್ವದೀಪ್ತಿಮಂದೀಕೃತದೇವದೀಪ್ತಿಃ ।**
**ಪ್ರಸನ್ನಮೂರ್ತಿಸ್ತರುಣಃ ಶಿವಾಂಗಕಃ**
**ಸಂಭಾವಯಾಮಾಸ ಸಮಸ್ತದೇವಾನ್ ॥ ೩೮೩ ॥**

**ಪೀತಮುದ್ಗಮನೀಯಂ ಚ ಸಮಾದಾಯ ಮಹೇಶ್ವರಃ ।**
**ಪೀತವಸ್ತ್ರಮಿದಂ ದೇವ ತ್ವಂ ಗೃಹಾಣ ಹರೇ ಶುಭಂ ॥ ೩೮೪ ॥**

---

ವಾಗಿ ಸೇರಿಸಿ ಅದನ್ನು ಎದೆಯಲ್ಲಿ ಅವಚಿಕೊಂಡು ನುಡಿಸಿ ಗಾನಮಾಡುತ್ತ ಶಿವನ ಬಳಿಗೆ ಬಂದನು. ಹಾಗೆ ಬಂದವನು ಈಶನ ಪಾದಗಳನ್ನು ಗುಳ್ಳದ ಹೂಗಳಿಂದ ಪೂಜಿಸಿದನು.

೩೮೨. ಆಗ ಶಿವನು ಆ ಹನುಮನಿಗೆ ಕಲ್ಪಪರ್ಯಂತ ಜೀವಿಸಿರುವ ವರವನ್ನು ಕೊಟ್ಟು, ಮತ್ತೆ ಸಮುದ್ರವನ್ನು ದಾಟುವ ಶಕ್ತಿಯನ್ನೂ ದಯಪಾಲಿಸಿದನು.

೩೮೩. ಅನೇಕ ಒಡವೆಗಳಿಂದ ಅಲಂಕೃತನಾದ, ದೇವತೆಗಳ ತೇಜಸ್ಸನ್ನು ಮಂಕುಮಾಡುವ ಕಾಂತಿಯುಳ್ಳ, ಪ್ರಸನ್ನಾಕಾರವುಳ್ಳ, ಹುಡುಗನಾದ ವೀರಭದ್ರನು ಎಲ್ಲಾ ದೇವತೆಗಳಿಗೂ ಬಹುಮಾನ ಕೊಟ್ಟು ಗೌರವಿಸಿದನು.

೩೮೪. ಹಳದಿಯ ಬಣ್ಣವಾಗಿರುವ ಹೊದೆಯುವ ಬಟ್ಟೆಯನ್ನು ಈಶ್ವರನು ತೆಗೆದುಕೊಂಡು ಎಲೈ ಕಪಿಯೇ, ಈ ಹಳದಿಯ ಬಟ್ಟೆಯನ್ನು ತೆಗೆದುಕೋ ಎಂದು ಕೊಟ್ಟನು.

ಪ್ರಪ್ಮಣೇ ರಕ್ತವಸನಂ ಸರ್ವೇಷಾಂ ವಸ್ತ್ರದಸ್ತಥಾ ।
ದೇವರ್ಷಿದಾನವಾದೀನಾಂ ದತ್ತವಾನ್ವಸ್ತ್ರಯುಗ್ಮಕಂ ॥ ೩೮೫ ॥

ರಾಮೋಽಪಿ ಚೈತದಾಕರ್ಣ್ಯ ಶಂಭವೇ ಯುಗ್ಮಮರ್ಪಯತ್ ।
ಸುಸೂಕ್ಷ್ಮಂ ಬಹುಮೂಲ್ಯಂ ಚ ಸ್ವರ್ಣಭೂಷಣಮೇವ ಚ ॥ ೩೮೬ ॥

ಅಥ ಭುಕ್ತ್ವಾ ಸುಖಾಸೀನಃ ಸಾಮಾತ್ಯಸ್ಸಪುರೋಹಿತಃ ।
ನಾನಾಮುನಿಗಣೈರ್ಭೂಪೈರ್ವಾನರೈರ್ಗೌತಮೀತಟೇ ॥ ೩೮೭ ॥

ಶಂಭುಂ ಪುರಾಣತತ್ತ್ವಜ್ಞಂ ರಾಘವೋ ವಾಕ್ಯಮಬ್ರವೀತ್ ।
ತ್ವಮೇವ ಸರ್ವಂ ಜಾನೀಷೇ ಸರ್ವಧರ್ಮಗುಹಾಶಯಂ ॥ ೩೮೮ ॥

ಕಸ್ಮಿನ್ಕಸ್ಮಿನ್ಯುಗೇ ಬ್ರಹ್ಮನ್ಕಿಂ ವಿಶಿಷ್ಟಂ ವದಸ್ವ ಮೇ ॥ ೩೮೯ ॥

॥ ಶಂಭುರುವಾಚ ॥

ಧ್ಯಾನಮೇವ ಕೃತೇ ಶ್ರೇಷ್ಠಂ ತ್ರೇತಾಯಾಂ ಯಜ್ಞಮೇವ ಚ ।
ದ್ವಾಪರೇಚಾರ್ಚನಂ ತಿಷ್ಯೇ ದಾನಂ ಚ ಹರಿಕೀರ್ತನಂ ॥ ೩೯೦ ॥

---

೩೮೫. ಬ್ರಹ್ಮನಿಗೆ ಕೆಂಪಾದ ಬಟ್ಟೆಯನ್ನು ಕೊಟ್ಟನು. ಇದೇರೀತಿ ದೇವತೆಗಳು, ಋಷಿಗಳು, ರಾಕ್ಷಸರುಗಳಿಗೂ ಒಂದೊಂದು ಜೊತೆ ಬಟ್ಟೆಯನ್ನು ಶಿವನು ಕೊಟ್ಟನು.

೩೮೬. ಇದನ್ನು ಕೇಳಿ ರಾಮನೂ ಕೂಡ ಶಂಭುವಿಗೆ ನವುರಾದ ಬೆಲೆಬಾಳುವ ಒಂದುಜೊತೆ ಬಟ್ಟೆಯನ್ನು ಕೊಟ್ಟನು, ಮತ್ತು ಚಿನ್ನದ ಒಡವೆಗಳನ್ನೂ ಕೊಟ್ಟನು.

೩೮೭. ಅನಂತರ ಭೋಜನಮಾಡಿ, ಮಂತ್ರಿ ಪುರೋಹಿತರೊಡನೆಯೂ, ಅನೇಕ ಮುನಿಗಳು ರಾಜರೊಡನೆಯೂ, ಕಪಿಗಳೊಡನೆಯೂ, ಗೌತಮಿಯ ದಡದಲ್ಲಿ ಕುಳಿತಿದ್ದ ರಾಮನು, ಪುರಾಣದ ತತ್ತ್ವವನ್ನು ತಿಳಿದ ಶಂಭುವನ್ನು ಕುರಿತು ಇಂತೆಂದನು.

೩೮೮-೩೮೯. ಎಲೈ ಶಂಭುವೇ, ಸರ್ವಧರ್ಮಗಳ ಮರ್ಮವನ್ನು ನೀನು ತಿಳಿದಿದ್ದೀಯೆ. ಎಲೈ ಬ್ರಾಹ್ಮಣನೇ, ಯಾವ ಯಾವ ಯುಗದಲ್ಲಿ ಏನೇನು ವಿಶೇಷವೆಂಬುದನ್ನು ದಯವಿಟ್ಟು ಹೇಳು ಎಂದನು.

೩೯೦. ಶಂಭುವು ಹೇಳಿದನು :—ಕೃತಯುಗದಲ್ಲಿ ಧ್ಯಾನವೂ, ತ್ರೇತಾಯುಗದಲ್ಲಿ ಯಜ್ಞವೂ, ದ್ವಾಪರಯುಗದಲ್ಲಿ ಪೂಜೆಯೂ, ಕಲಿಯುಗದಲ್ಲಿ ದಾನ, ಕೀರ್ತನೆಗಳೂ ಪ್ರಶಸ್ತವಾದುವು.

**ಸರ್ವಂ ಚ ಶಸ್ತಂ ಸರ್ವತ್ರ ಧ್ಯಾನಂ ನೈವ ಕಲೌ ಯುಗೇ ।**
**ನರಾಣಾಂ ಮುಗ್ಧಚಿತ್ತತ್ವಾತ್ಕಲಿಸ್ಥಾನಾಂ ವಿಶಾಂ ಪತೇ** ॥ ೩೯೧ ॥

**ನ ಧರ್ಮೇ ನಿಯತಾ ಬುದ್ಧಿರ್ನ ವೇದೇ ನೈವ ಚ ಸ್ಮೃತೌ ।**
**ನ ಕ್ರತೌ ನ ಸ್ವಧಾಕಾರೇ ಪುರಾಣಾನಾಂ ಚ ನ ಶ್ರುತೌ** ॥ ೩೯೨ ॥

**ನ ಜಪೇ ನ ಚ ತೀರ್ಥೇಷು ನ ಚ ಶುಶ್ರೂಷಣೇ ಸತಾಂ ।**
**ನೇಜ್ಯಾಯಾಂ ದೇವತಾನಾಂ ಚ ನ ಸ್ವಜಾತೀಯಕರ್ಮಣಿ** ॥ ೩೯೩ ॥

**ನ ವೇದಸ್ಮರಣೇ ಚಾಪಿ ನ ಚ ಕ್ವಾಪಿ ವ್ರತೇ ನೃಪ ।**
**ಅತಶ್ಚ ದೀರ್ಘಕಾಲಾನಾಂ ಪುಣ್ಯಾನಾಮಕ್ಷಮಾ ನರಾಃ** ॥ ೩೯೪ ॥

**ದಾನಂ ತು ಸ್ವಲ್ಪಕಾಲತ್ವಾತ್ಕರ್ತುಂ ಶಕ್ನೋತಿ ಮಾನವಃ ।**
**ಅತಶ್ಚ ಕಲಿದುಷ್ಟಾನಾಂ ಪ್ರಾಯಶ್ಚಿತ್ತಂ ನ ವಿದ್ಯತೇ** ॥ ೩೯೫ ॥

---

೩೯೧. ಎಲ್ಲಾ ಯುಗದಲ್ಲಿಯೂ ಎಲ್ಲವೂ ಶ್ರೇಷ್ಠವಾದುವುಗಳೇ. ಆದರೆ ಕಲಿಯುಗದಲ್ಲಿ ಜನರು ಮೂಢರಾದುದರಿಂದ ಧ್ಯಾನ (ತಪಸ್ಸು) ಯುಕ್ತವಾದುದಲ್ಲ.

೩೯೨—೩೯೪. ಕಲಿಕಾಲದಲ್ಲಿ ಧರ್ಮದಲ್ಲಿ ನಿಯತವಾದ ಬುದ್ಧಿಯು ಇರುವುದಿಲ್ಲ, ವೇದದಲ್ಲಿ ಸರಿಯಾದ ನಂಬಿಕೆಯಿರುವುದಿಲ್ಲ, ಸ್ಮೃತಿಯಲ್ಲಿ ಗೌರವವಿರುವುದಿಲ್ಲ, ಯಾಗದಲ್ಲಿ ಅಕ್ಕರೆಯಿರುವುದಿಲ್ಲ. ಶ್ರಾದ್ಧಾದಿಗಳಲ್ಲಿ ನಂಬಿಕೆಯಿರುವುದಿಲ್ಲ. ಪುರಾಣದಲ್ಲಿಯೂ, ಸತ್ಪುರುಷರ ಸೇವೆಯಲ್ಲಿಯೂ ಆಸೆಯಿರುವುದಿಲ್ಲ, ದೇವತಾ ಪೂಜೆಯಲ್ಲಿ ಮನಸ್ಸಿರುವುದಿಲ್ಲ. ತಮ್ಮ ತಮ್ಮ ಜಾತಿಗೆ ಯೋಗ್ಯವಾದ ಕರ್ಮಗಳಲ್ಲಿ ಅನಾದರಮಾಡುತ್ತಾರೆ. ವೇದೋಚ್ಚಾರಣೆ ಮಾಡುವುದರಲ್ಲಿಯೂ, ಅನಾದರವೇ. ಪುಣ್ಯಕರ್ಮಗಳಲ್ಲಿ ಬುದ್ಧಿ ಹುಟ್ಟುವುದಿಲ್ಲ. ಆದ್ದರಿಂದ ಬಹುಕಾಲ ಮಾಡುವ ಪುಣ್ಯ ಕೆಲಸಗಳಲ್ಲಿ ಜನರು ಅಶಕ್ತರಾಗುತ್ತಾರೆ.

೩೯೫. ದಾನವು ಸ್ವಲ್ಪಕಾಲದಲ್ಲೇ ನೆರವೇರುವುದರಿಂದ ಮನುಷ್ಯನು ಅದನ್ನು ಮಾಡಲು ಶಕ್ತನಾಗುವನು. ಆದ್ದರಿಂದ ಕಲಿಯ ಕಲ್ಮಷದಿಂದ ಕೂಡಿದವರಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

ಕೇಷಾಂಚಿತ್ಪಾಪನಾಶಸ್ಸ್ಯಾತ್ಪ್ರಾಯಶ್ಚಿತ್ತೈಸ್ತು ನಾನ್ಯಥಾ ।
ಬ್ರಹ್ಮಜ್ಞೋ ನ ಗಯಾಶ್ರಾದ್ಧಂ ಕಾಶೀಗನ್ತಾ ಶ್ರುತೌ ರತಃ ॥ ೩೯೬ ॥

ಪುರಾಣಜ್ಞಾವಮಾಶ್ಚೈತೇ ಶ್ರೋತಾ ತಸ್ಯ ನ ವಾಚಕಃ ।
ಯುಗಾನಾಮನುಸಾರೇಣ ತಥಾರ್ಥಸ್ಯ ವಿವೇಚನಾತ್ ॥ ೩೯೭ ॥

ಸ್ವಪರಪ್ರತ್ಯಯೋತ್ಪಾದಾತ್ಪರಬ್ರಹ್ಮಪ್ರಕಾಶನಾತ್ ।
ಪುರಾಣವಕ್ತಾ ಸರ್ವಸ್ಮಾದ್ಬ್ರಾಹ್ಮಣಸ್ತು ವಿಶಿಷ್ಯತೇ ॥ ೩೯೮ ॥

ತೇನಾಪಿ ಚ ಕೃತಂ ಪಾಪಂ ನ ಸಜ್ಯೇತ್ಕಿಮುತಾನ್ಯತಃ ।
ಅನ್ಯೇಷಾಮಪಿ ಕೇಷಾಂಚಿತ್ಪುರಾಣಂ ಪಾಪನಾಶನಂ ॥ ೩೯೯ ॥

ಯಃ ಪುರಾಣೇಷು ವಿಶ್ವಾಸೀ ವಕ್ತಾರಂ ಮನ್ಯತೇ ಗುರುಂ ।
ಬ್ರಹ್ಮವಿದ್ಯಾಪ್ರದಾತಾರಂ ವಿಶೇಷಂ ಜ್ಞಾತಿಬಂಧುತಃ ॥ ೪೦೦ ॥

---

೩೯೬. ಕೆಲವರಿಗೆ ಪ್ರಾಯಶ್ಚಿತ್ತದಿಂದ ಪಾಪ ನಾಶವಾಗುತ್ತದೆ. ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಆಗುವುದಿಲ್ಲ. ಬ್ರಹ್ಮಜ್ಞನಾಗಿ ಗಯಾಶ್ರಾದ್ಧವನ್ನು ಮಾಡಿರುವವನು ಕಾಶಿಗೆ ಹೋದರೂ, ಶಾಸ್ತ್ರಗಳಲ್ಲಿ ಆಸಕ್ತನಾಗದಿರುವವನು, ಪುರಾಣ ಬಲ್ಲವನನ್ನು ಅವಮಾನಮಾಡುವವನು, ಆ ಪುರಾಣವನ್ನು ಕೇಳಿ ಅದನ್ನು ಮತ್ತೊಬ್ಬರಿಗೆ ಹೇಳದವನು, ಇವರಿಗೆ ಪ್ರಾಯಶ್ಚಿತ್ತವಿಲ್ಲ.

೩೯೭-೩೯೮. ಯುಗಗಳಿಗನುಸಾರವಾಗಿ ಪುರಾಣದ ಅರ್ಥವನ್ನು ವಿವರಿಸುವುದರಿಂದಲೂ, ತಾನು ನಂಬಿ ಮತ್ತೊಬ್ಬರನ್ನೂ ನಂಬಿಸುವುದರಿಂದಲೂ, ಪರಬ್ರಹ್ಮನನ್ನು ಪ್ರಕಾಶಪಡಿಸುವುದರಿಂದಲೂ, ಪುರಾಣವನ್ನು ಹೇಳುವವನು (ಬ್ರಾಹ್ಮಣನು) ಎಲ್ಲರಿಗಿಂತಲೂ ಶ್ರೇಷ್ಠನು.

೩೯೯. ಅವನು ಪಾಪಮಾಡಿದರೆ ಅವನಿಗೆ ಅದು ಲೋಪವಾಗುವುದಿಲ್ಲ. ಮಿಕ್ಕವರಿಂದ ಅವನಿಗೆ ಪಾಪ ಸಂಭವಿಸುವ ಸ್ಥಿತಿಯೇ ಇಲ್ಲವು. ಮತ್ತೂ ಕೆಲವರಿಗೆ ಪುರಾಣಶ್ರವಣವು ಪಾಪವನ್ನು ನಾಶಮಾಡುತ್ತದೆ.

೪೦೦-೪೦೧. ಯಾವನು ಪುರಾಣದಲ್ಲಿ ವಿಶ್ವಾಸವಿಟ್ಟು, ಆ ಪುರಾಣ ಹೇಳುವವನನ್ನು ಗುರುವನ್ನಾಗಿ ತಿಳಿದು, ಬ್ರಹ್ಮವಿದ್ಯೆಯನ್ನು ಹೇಳಿದವನನ್ನಾಗಿಯೂ, ಜ್ಞಾತಿ

**ತಸ್ಯ ಪಾಪಾನಿ ಸರ್ವಾಣಿ ವಿಲಯಂ ಯಾನ್ತ್ಯಸಂಶಯಂ ।**
**ಅಥ ಶ್ರೀಶೈಲಗಮನಂ ಪೂಜಕಸ್ಯ ಮಹೇಶಿತುಃ ॥ ೪೦೧ ॥**

**ಅತಃ ಕಲೌ ಮನುಷ್ಯಾಣಾಂ ಪುರಾಣಂ ಪಾಪನಾಶನಂ ।**
**ಪುರಾ ಕಲಿಯುಗೇ ರಾಮ ವೃತ್ತಂ ಸಂಕೀರ್ತಯೇ ಶೃಣು ॥ ೪೦೨ ॥**

**ಆಸೀತ್ತು ಗೌತಮೋ ನಾಮ ಬ್ರಾಹ್ಮಣೋ ವೇದವರ್ಜಿತಃ ।**
**ತಸ್ಯ ಪುಷ್ಟಿಃ ಪಶುಶ್ಚಾಸ್ತಾಂ ಭ್ರಾತರೌ ವೇದವರ್ಜಿತೌ ॥ ೪೦೩ ॥**

**ತಾಭ್ಯಾಂ ಸಹ ಕೃಷಿಂ ಚಕ್ರೇ ತತ್ರ ವೃದ್ಧಿಮವಾಪ ಚ ।**
**ಧನಧಾನ್ಯಾದಿಕಂ ಕಿಂಚಿದ್ರಾಜಾನಂ ದತ್ತವಾನಥ ॥ ೪೦೪ ॥**

**ಉವಾಚ ವಚನಂ ಕಿಂಚಿದಧಿಕಾರಂ ನಿರೂಪಯ ।**
**ಅರ್ಥಂ ನ ಗಮಯಿಷ್ಯಾಮಿ ತೌ ಶಕ್ತೌ ಭ್ರಾತರೌ ಮಮ ॥ ೪೦೫ ॥**

---

ಬಂಧುಗಳಿಗಿಂತ ಉತ್ಕೃಷ್ಟನನ್ನಾಗಿಯೂ, ತಿಳಿಯುತ್ತಾನೋ ಅವನ ಸರ್ವಪಾಪಗಳೂ ಸಂಶಯವಿಲ್ಲದೇ ನಾಶವಾಗುತ್ತವೆ. ಮಹೇಶನ ಪೂಜಕನಾದ ಆ ಪುರಾಣಜ್ಞನನ್ನು ಪೂಜಿಸಿದರೆ ಶ್ರೀಶೈಲದ ಯಾತ್ರೆಮಾಡಿದ ಫಲಬರುತ್ತದೆ.

೪೦೨. ಆದ್ದರಿಂದ ಕಲಿಯುಗದಲ್ಲಿ ಪುರಾಣ ಕೇಳುವುದು ಪಾಪನಾಶಕವು. ಎಲೈ ರಾಮನೇ, ಪೂರ್ವದಲ್ಲಿ ಕಲಿಯುಗದಲ್ಲಿ ನಡೆದ ಒಂದು ಕಥೆಯನ್ನು ಹೇಳುತ್ತೇನೆ, ಕೇಳು.

೪೦೩. ಕಲಿಯುಗದಲ್ಲಿ ಗೌತಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ವೇದವನ್ನು ಓದಿದವನೇ ಅಲ್ಲ. ಅವನ ಧನವೆಲ್ಲವೂ ಗೋವುಗಳು. ಅವನಿಗೆ ಇಬ್ಬರು ತಮ್ಮಂದಿರಿದ್ದರು. ಅವರೂ ವೇದಾಧ್ಯಯನ ಮಾಡಿದವರಲ್ಲ.

೪೦೪. ಆ ತಮ್ಮಂದಿರೊಡನೆ ಕೃಷಿಯನ್ನು ಮಾಡುತ್ತ ಅದರಿಂದಲೇ ಧನಿಕನಾದನು. ಅನಂತರ ಹಣ, ದವಸಗಳನ್ನು ರಾಜನಿಗೂ ಕೂಡ ಕೊಟ್ಟನು.

೪೦೫. ಆಗ ಆ ಗೌತಮನು ರಾಜನನ್ನು ಕುರಿತು ನನಗೊಂದು ಅಧಿಕಾರವನ್ನು ಕೊಡು. ನಿನ್ನ ಪ್ರಯೋಜನವನ್ನು ಹಾಳುವುದಿಲ್ಲ. ಆ ಇಬ್ಬರು ಸಹೋದರರೂ ಶಕ್ತರಾಗಿದ್ದಾರೆ. ಅವರು ತಮ್ಮ ಕೆಲಸದಲ್ಲಿ ನಿರತರಾಗಿರುತ್ತಾರೆ ಎಂದನು.

॥ ರಾಜೋವಾಚ ॥

ಬ್ರಾಹ್ಮಣಸ್ಯಾಧಿಕಾರೋ ಹಿ ವೈದಿಕೇ ಧರ್ಮಕರ್ಮಣಿ ।
ತದನ್ಯತ್ರ ನಿಯುಕ್ತಸ್ಯ ಬ್ರಾಹ್ಮಣ್ಯಂ ವಿಪ್ರಣಶ್ಯತಿ ॥ ೪೦೬ ॥

॥ ಗೌತಮ ಉವಾಚ ॥

ಯುಗೇಷ್ವನ್ಯೇಷು ಧರ್ಮೋಽಯಂ ಕಲಿಧರ್ಮೋ ನ ತಾದೃಶಃ ।
ಭೂಪತಿಸ್ತ್ವಂ ಹಿ ಭೂಪಾಲ ನೃಪಾಣಾಂ ಧರ್ಮ ಉಚ್ಯತೇ ॥ ೪೦೭ ॥

ಬ್ರಾಹ್ಮಣಶ್ಚ ಪರಿಕ್ಷೀಣಸ್ತಂ ಕುರ್ವನ್ನೈವ ದುಷ್ಯತಿ ।
ಶೂದ್ರಾಣಾಂ ಚ ಕೃಷಿರ್ಧರ್ಮೋ ನಾಪದ್ಯಪ್ಯಗ್ರಜನ್ಮನಃ ॥ ೪೦೮ ॥

ತಸ್ಮಾತ್ಕ್ಷತ್ರೇಣ ವರ್ತಿಷ್ಯೇ ಗ್ರಾಮಾನ್ಮಮ ಸಮಾದಿಶ ।
ಅನ್ಯತ್ರ ಚಾತ್ರ ಕ್ಷತ್ರೇಣ ವರ್ತನಂ ಮಮ ರೋಚತೇ ॥ ೪೦೯ ॥

---

೪೦೬. ರಾಜನು ಹೇಳಿದನು :—ಬ್ರಾಹ್ಮಣನು ವೈದಿಕೋಕ್ತವಾದ ಧರ್ಮಕರ್ಮಗಳಲ್ಲಿ ಅಧಿಕಾರಮಾಡಬೇಕು. ಅದು ಹೊರತು ಬೇರೆ ಅಧಿಕಾರಮಾಡಿದರೆ ಬ್ರಾಹ್ಮಣಿಕೆ ಹಾಳಾಗುತ್ತದೆ.

೪೦೭. ಗೌತಮನು ಹೇಳಿದನು :—ನೀನು ಹೇಳುವುದು ಬೇರೆ ಯುಗದ ಧರ್ಮವು. ಕಲಿಯುಗದ ಧರ್ಮವು ಅಂತಹುದಲ್ಲ. ನೀನು ರಾಜನು. ಆದ್ದರಿಂದ ರಾಜನ ಧರ್ಮವನ್ನು ಹೇಳುತ್ತೀಯೆ.

೪೦೮. ದುರ್ದೆಶೆಗೆ ಬಂದ ಬ್ರಾಹ್ಮಣನು ಆ ಅಧಿಕಾರವನ್ನು ಮಾಡಿದರೆ ಭ್ರಷ್ಟನಾಗುವುದಿಲ್ಲ. ಕೃಷಿಯು ಶೂದ್ರರಿಗೆ ಯುಕ್ತವಾದುದು. ಬ್ರಾಹ್ಮಣನು ಅದನ್ನು ಆಪತ್ತಿನಲ್ಲೂ ಆಶ್ರಯಿಸಬಾರದು.

೪೦೯. ಆದ್ದರಿಂದ ಕ್ಷತ್ರಿಯ ವೃತ್ತಿಯನ್ನು ಆಶ್ರಯಿಸುತ್ತೇನೆ. ಕೆಲವು ಗ್ರಾಮಗಳಿಗೆ ಅಧಿಕಾರಿಯನ್ನಾಗಿ ಮಾಡು. ಇದರಲ್ಲೇ ಆಗಲಿ, ಯಾವುದರಲ್ಲೇ ಆಗಲಿ, ಕ್ಷತ್ರಿಯ ವೃತ್ತಿಯಿಂದಿರುವುದು ನನಗೆ ಇಷ್ಟವಾಗಿದೆ.

ಅಸ್ಮನ್ನತು ತಥೇತ್ಯುಕ್ತ್ವೋ ದದೌ ಗ್ರಾಮಾನ್ದ್ವಿಜಸ್ಯ ತು ।
ಗ್ರಾಮಾಧಿಕಾರದುಷ್ಟಸ್ಯ ವರ್ತನಂ ತ್ವನ್ಯಥಾಽಭವತ್ ॥ ೪೧೦ ॥

ಅಭಕ್ಷಿ ಮಾಂಸಂ ಚಾಪಾಯಿ ಸುರಾ ಚಾಭಾಷಿ ದುರ್ವಚಃ ।
ಪರಯೋಷಾ ತಥಾಗಾಮಿ ಪರಸ್ವಂ ಪ್ರತ್ಯಹಾರಿ ಚ ॥ ೪೧೧ ॥

ಅಕ್ರೀಡಿ ದ್ಯೂತಮುಸಕೃತ್ಕಳಂಜಂ ಚಾದಿ ದುರ್ಭುಜಾ ।
ನಾಪೂಜಿ ಜಗತಾಮೀಶಃ ಶಿವೋ ವಾ ವಿಷ್ಣುರೇವ ವಾ ॥ ೪೧೨ ॥

ಏವಂ ಕಾಲೇನ ದುರ್ವೃತ್ತಂ ರಾಜಾ ವಾಕ್ಯಮಭಾಷತ ।
ವಿಪ್ರ ವಿಪ್ರತ್ವಮುತ್ಸೃಜ್ಯ ಶೂದ್ರತ್ವಂ ಪ್ರಾಪ್ತವಾನಸಿ ॥ ೪೧೩ ॥

ತಸ್ಮಾನ್ನಿಯೋಗಧರ್ಮೇಣ ಭವಂತಂ ಭ್ರಂಶಯಾಮಿ ಚ ।
ಮಾಸ್ತು ವಿಪ್ರತ್ವಮದ್ಯೈವ ಶೂದ್ರತ್ವೈವ ವರಂ ಮಮ ॥ ೪೧೪ ॥

---

೪೧೦. ಬೇರೆ ಯಾವುದೂ ಬೇಡ, ನೀನು ಹೇಳಿದಂತೆ ಗ್ರಾಮಗಳನ್ನು ಕೊಡುತ್ತೇನೆ ಎಂದು ಹೇಳಿ ಕೆಲವು ಗ್ರಾಮಗಳನ್ನು ಕೊಟ್ಟನು. ಗ್ರಾಮಾಧಿಕಾರವು ಬಂದನಂತರ ದೌಷ್ಟ್ಯವು ಬಂದಿತು. ಆ ದೌಷ್ಟ್ಯದಿಂದ ಅವನ ಸ್ಥಿತಿಯೇ ಬೇರೆಯಾಯಿತು.

೪೧೧-೪೧೨. ಮಾಂಸವನ್ನು ತಿಂದನು, ಹೆಂಡವನ್ನು ಕುಡಿದನು, ಕೆಟ್ಟ ಮಾತುಗಳನ್ನಾಡಿದನು, ಪರಸ್ತ್ರೀಯರನ್ನು ಸೇವಿಸಿದನು, ಪರರ ಸ್ವತ್ತನ್ನು ಅಪಹರಿಸಿದನು. ದ್ಯೂತವನ್ನು ಆಡಿದನು. ಈರುಳ್ಳಿ, ಬೆಳ್ಳುಳ್ಳಿಗಳನ್ನು ತಿಂದನು. ಜಗದೀಶರಾದ ವಿಷ್ಣುವನ್ನಾಗಲಿ ಶಿವನನ್ನಾಗಲಿ ಪೂಜಿಸಲೇ ಇಲ್ಲ.

೪೧೩. ಈರೀತಿ ಕೆಲವು ಕಾಲದಲ್ಲಿಯೇ ಕೆಟ್ಟುಹೋದ ಇವನನ್ನು ರಾಜನು ನೋಡಿ ಎಲೈ ಬ್ರಾಹ್ಮಣನೇ, ನೀನು ಬ್ರಾಹ್ಮಣಿಕೆಯನ್ನು ಬಿಟ್ಟು ಶೂದ್ರತನವನ್ನು ಹೊಂದಿದೆ.

೪೧೪-೪೧೫. ಆದ್ದರಿಂದ ನಿನ್ನನ್ನು ಅಧಿಕಾರದಿಂದ ತೆಗೆದುಹಾಕುತ್ತೇನೆ ಎನ್ನಲು, ಈಗಲೇ ನನಗೆ ಬ್ರಾಹ್ಮಣಿಕೆಯು ಬೇಡ. ಶೂದ್ರತನವೇ ಶ್ರೇಷ್ಠವಾಗಿದೆ. ಆ ವಸ್ತುಗಳಿಲ್ಲದೆ ಬ್ರಾಹ್ಮಣರು ಊಟಮಾಡಿದರೂ ಮಾಡಬಹುದು. ನನಗೆ ಆ

ತದ್ವೃತೇ ಯದಿ ವಿಪ್ರಾಸ್ತೇ ನ ಭೋಕ್ಷ್ಯಂತಿ ವರಂ ಮಮ ।
ನ ಹಿ ಸರ್ವಮಿದಂ ಯುಕ್ತಂ ಶಕ್ತೋಽಹಂ ಪೃಥಿವೀಪತೇ ॥ ೪೧೫ ॥

॥ ಶಂಭುರುವಾಚ ॥

ಏವಂ ವದತಿ ದುರ್ವಿಪ್ರೇ ರಾಜಾ ತೂಷ್ಣೀಮತಿಷ್ಠತ ।
ಸ ತು ವೈ ಶೂದ್ರತುಲ್ಯಶ್ಚ ಬುಭುಜೇಽನ್ನಂ ಸಹಾಮಿಷಂ ॥ ೪೧೬ ॥

ಕದಾಚಿದಥ ದುರ್ವೃತ್ತಃ ಪ್ರತೋಲೀಮಂಟಪಾಸ್ಥಿತಃ ।
ದ್ವಿಜೇನ ಪಠ್ಯಮಾನಂ ತು ಪದ್ಯಂ ತು ಶ್ರುತವಾನಿದಂ ॥ ೪೧೭ ॥

ಹೃದಯೇ ಪದ್ಯಮೇತತ್ತು ದ್ವಿಜೇರಿತಮತಿಷ್ಠತ ।
ಪರಾತ್ಪರತರಂ ಯಾಂತಿ ನಾರಾಯಣಪರಾಯಣಾಃ ।
ನ ತೇ ತತ್ರ ಗಮಿಷ್ಯಂತಿ ಯೇ ದ್ವಿಷಂತಿ ಮಹೇಶ್ವರಂ ॥ ೪೧೮ ॥

ವ್ಯಾಖ್ಯಾನಮಪಿ ಚ ಶ್ರುತ್ವಾ ಪೌರಾಣಿಕಮಭಾಷತ ।
ಕೀದೃಙ್ನಾರಾಯಣಃ ಪ್ರೋಕ್ತಃ ಕೀದೃಶೋಽಪಿ ಮಹೇಶ್ವರಃ ॥ ೪೧೯ ॥

---

ಊಟವು ಚೆನ್ನಾಗಿರುವುದಿಲ್ಲ. ಆ ಬ್ರಾಹ್ಮಣರು ಈ ಪದಾರ್ಥಗಳಿಲ್ಲದೆ ಊಟಮಾಡಿ ವರೆ ಅದು ನನಗೆ ಸರಿಯಾಗಿ ಕಾಣುವುದೂ ಇಲ್ಲ. ಅವೆಲ್ಲವೂ ಸರಿಯೂ ಅಲ್ಲ. ನಾನು ಎಲ್ಲದರಲ್ಲಿಯೂ ಶಕ್ತನಾಗಿದ್ದೇನೆ. ನನ್ನನ್ನು ತಿಗೆಯಬೇಡವೆಂದನು.

೪೧೬. ಶಂಭುವು ಹೇಳಿದನು :—ಆ ದುಷ್ಟಬ್ರಾಹ್ಮಣನು ಹೀಗೆ ಹೇಳಲು, ರಾಜನು ಸುಮ್ಮನಾದನು. ಆ ರಾಜನು ಶೂದ್ರನಿಗೆ ಸಮನಾದ ಅವನ ಮನೆಯಲ್ಲಿ ಮಾಂಸ ಸಹಿತವಾದ ಅನ್ನವನ್ನು ಊಟಮಾಡಿದನು.

೪೧೭. ಒಂದುಸಾರಿ ಆ ಅಯೋಗ್ಯಬ್ರಾಹ್ಮಣನು ಬೀದಿಯ ಚಾವಡಿಯಲ್ಲಿದ್ದಾಗ ಒಬ್ಬ ಬ್ರಾಹ್ಮಣನು ಓದುತ್ತಿದ್ದ ಪುರಾಣಶ್ಲೋಕವನ್ನು ಕೇಳಿದನು.

೪೧೮. ನಾರಾಯಣನಲ್ಲಿ ಆಸಕ್ತರಾದವರು ಉತ್ತಮೋತ್ತಮಸ್ಥಾನವನ್ನು ಹೊಂದುತ್ತಾರೆ. ಆದರೆ ಮಹೇಶ್ವರನನ್ನು ದ್ವೇಷಿಸುವವರು ಅಲ್ಲಿಗೆ ಹೋಗುವುದಿಲ್ಲ ಎಂಬ ಬ್ರಾಹ್ಮಣನು ಹೇಳಿದ ಪದ್ಯವು ಇವನ ಮನಸ್ಸಿಗೆ ನಾಟಿತು.

೪೧೯-೪೨೦. ಅದರ ಅರ್ಥವನ್ನು ಕೇಳಿ ಅನಂತರ ಪುರಾಣಿಕನನ್ನು ಕುರಿತು ಇಂತೆಂದು ಪ್ರಶ್ನಿಸಿದನು. ನಾರಾಯಣನೆಂದರೆ ಎಂತಹವನು? ಮಹೇಶ್ವರನು

ಕಿಂ ಪರಂ ತ್ವಯನಂ ಪ್ರೋಕ್ತಂ ದ್ವೀಪಃ ಕೀದೃಗುದಾಹೃತಃ ।
ಕಿಂ ತತ್ಪರಮಿತಿ ಖ್ಯಾತಂ ತತಃ ಪರತರಂ ಚ ಕಿಂ ॥ ೯೨೦ ॥

॥ ಪೌರಾಣಿಕ ಉವಾಚ ॥

ಪರಂ ತದ್ಬ್ರಹ್ಮಣಃ ಸ್ಥಾನಂ ಸುಖವ್ಯಕ್ತ್ಯೈಕಲಕ್ಷಣಂ ।
ತತಃ ಪರತರಂ ವಿಷ್ಣೋರ್ಧಾಮ ತದ್ಬ್ರಹ್ಮಣೋಽಧಿಕಂ ॥ ೪೨೧ ॥

ಅವಿನಾಶಿತಯಾ ತತ್ತು ಕೀರ್ತಿತಂ ಪರಮಂ ಪದಂ ।
ತನ್ಮಧ್ಯೇ ಪುರುಷೋ ವಿಷ್ಣುಸ್ತದಂಗಪರಮಂ ವಿಭುಃ ॥ ೪೨೨ ॥

ಆಪೋ ಹಿ ನರಜನ್ಮತ್ವಾನ್ನರಾಃ ಪ್ರೋಕ್ತಾ ಮುನೀಷಿಭಿಃ ।
ನಾರಾಶ್ಚಾಸ್ಯಾಯನಂ ಯಸ್ಮಾತ್ತೇನ ನಾರಾಯಣಃ ಸ್ಮೃತಃ ॥ ೪೨೩ ॥

ತತ್ಪರಂ ವರ್ತನಂ ಯೇಷಾಂ ತೇ ಪ್ರೋಕ್ತಾಸ್ತತ್ಪರಾಯಣಾಃ ।
ಮಹದಾದೀನಿ ತತ್ತ್ವಾನಿ ಯಾನಿ ತೇಷಾಂ ಯ ಈಶ್ವರಃ ॥ ೪೨೪ ॥

---

ಹೇಗಿರುವನು? ಪರಲೋಕವೆಂಥಾದ್ದು? ಎಂಥಾದ್ದನ್ನು ದ್ವೀಪವೆನ್ನುತ್ತಾರೆ? ಪರವೆಂದರೇನು? ಪರತರವೆಂದರೇನು?

೪೨೧. ಪೌರಾಣಿಕನು ಹೇಳಿದನು:—ಪರವೆಂದರೆ ಬ್ರಹ್ಮನ ಸ್ಥಾನವು. ಅದು ಸುಖವೊಂದೇ ಇರುವ ಸ್ಥಳವು. ಅದಕ್ಕಿಂತಲೂ ಉತ್ಕೃಷ್ಟವಾದುದು ವಿಷ್ಣುವಿನ ಲೋಕವು. ಅದು ಬ್ರಹ್ಮನ ಸ್ಥಾನಕ್ಕಿಂತ ಅಧಿಕವಾದುದು.

೪೨೨. ಅದು ನಾಶರಹಿತವಾದುದರಿಂದ ಪರಮಪದವೆಂದೆನಿಸಿಕೊಂಡಿದೆ. ಅದರ ಮಧ್ಯದಲ್ಲಿ ವಿಷ್ಣುವಿದ್ದಾನೆ. ಆ ಜಾಗವು ಪರಮೋತ್ಕೃಷ್ಟವಾದುದು, ವಿಶಾಲವಾದುದು.

೪೨೩. ನೀರಿನಲ್ಲಿ ನರನು ಹುಟ್ಟಿದುದರಿಂದ ಆ ನೀರಿಗೆ ನಾರವೆಂದು ಹೆಸರು ಎಂದು ತಿಳಿದವರು ಹೇಳುತ್ತಾರೆ. ನಾರವು ಇವನಿಗೆ ಅಯನವೆಂದರೆ ಮನೆಯಾದುದರಿಂದ ನಾರಾಯಣನೆಂದು ಹೆಸರು ಬಂದಿತು.

೪೨೪. ಆ ನಾರಾಯಣನೇ ಯಾರಿಗೆ ವೃತ್ತಿಯಾಗಿ (ಆಶ್ರಯನಾಗಿ) ಇರುವನೋ ಅವರು ತತ್ಪರಾಯಣರು.

ಸೂರ್ಯಾಗ್ನಿಶಶಿನೇತ್ರೋऽಸೌ ಮಹೇಶಸ್ತ್ವುಮಾಪತಿಃ ।
ದ್ವೇಷೋ ಹಿ ವೈರಂ ವಿಜ್ಞೇಯಮೀಶ್ವರೇ ಪರಮಾತ್ಮನಿ ॥ ೯೨೫ ॥

॥ ಶಂಭುರುವಾಚ ॥

ಏವಂ ಪುರಾಣಭೇದೇನ ಸಮೀರಿತಮಿದಂ ವಚಃ ।
ಚಿಂತಯನ್ಪುನರಪ್ಯಾಹ ಮಾದೃಶಸ್ಯ ಕಥಂ ಗತಿಃ ॥ ೯೨೬ ॥

ಪೌರಾಣಿಕೋऽಥ ತಂ ಪ್ರಾಹ ಶೃಣು ವಕ್ಷ್ಯಾಮಿ ತೇ ಗತಿಂ ।
ಕುರು ಸರ್ವೇಣ ಯತ್ನೇನ ಪ್ರಾಯಶ್ಚಿತ್ತಂ ಯಥಾವಿಧಿ ॥ ೪೨೭ ॥

ಧರ್ಮಂ ಚಾಪಿ ಯಥಾಶಕ್ತಿ ಯಥಾಕಾಲಂ ಯಥಾವಿಧಿ ।
ವಿಮುಕ್ತಪಾಪಃ ಪಶ್ಚಾತ್ತ್ವಮುತ್ತಮಾಂ ಗತಿಮೇಷ್ಯಸಿ ॥ ೪೨೮ ॥

ಪುರಾಣಮಥವಾ ನಿತ್ಯಂ ಶೃಣುಷ್ವಾವಹಿತಶ್ಚ ಸನ್ ।
ನಿರಾಶೋ ವಾ ಮಹೇಶಾನಂ ಪೂಜಯಸ್ವ ಪಿನಾಕಿನಂ ॥ ೪೨೯ ॥

---

೪೨೫. ಮಹದಾದಿ ತತ್ತ್ವಗಳಿಗೆ ಒಡೆಯನಾದವನು ಈಶ್ವರನು. ಅವನಿಗೆ ಚಂದ್ರ, ಸೂರ್ಯ, ಅಗ್ನಿ, ಇವರೇ ಕಣ್ಣುಗಳು. ಆ ಉಮಾಪತಿಯೇ ಮಹೇಶನು. ಪರಮಾತ್ಮನಾದ ಈಶ್ವರನಲ್ಲಿ ವೈರಮಾಡುವುದೇ ದ್ವೇಷವೆಂದೆನಿಸಿಕೊಳ್ಳುತ್ತದೆ.

೪೨೬. ಶಂಭುವು ಹೇಳಿದನು :--ಪುರಾಣಭೇದದಿಂದ ಹೇಳಲ್ಪಟ್ಟ ಈ ಮಾತನ್ನು ಕೇಳಿ ಯೋಚನೆ ಹುಟ್ಟಿ ನನ್ನಂತಹವನಿಗೆ ಗತಿಯು ಹೇಗೆ ಬಂದೀತು ಎಂದು ಮತ್ತೆ ಕೇಳಿದನು.

೪೨೭. ಆಗ ಪೌರಾಣಿಕನು ಅವನನ್ನು ಕುರಿತು ನೀನು ಸರ್ವಪ್ರಯತ್ನದಿಂದಲೂ ವಿಧಿವತ್ತಾಗಿ ಪ್ರಾಯಶ್ಚಿತ್ತವನ್ನು ಮಾಡಿಕೋ.

೪೨೮. ಶಕ್ತಿಗನುಗುಣವಾಗಿ, ಕಾಲಾನುಸಾರವಾಗಿ, ವಿಧಿವತ್ತಾಗಿ ಧರ್ಮವನ್ನು ಮಾಡು. ಆಗ ನಿನ್ನ ಪಾಪವೆಲ್ಲವೂ ಹೋಗಿ ಅನಂತರ ನೀನು ಉತ್ತಮವಾದ ಗತಿಯನ್ನು ಹೊಂದುತ್ತೀಯೆ ಎಂದನು.

೪೨೯. ಅದಿಲ್ಲದಿದ್ದರೆ ನಿತ್ಯವೂ ಏಕಾಗ್ರತೆಯಿಂದ ಪುರಾಣವನ್ನು ಕೇಳು, ಅದೂ ಇಲ್ಲದಿದ್ದರೆ ಆಶೆಯನ್ನು ಬಿಟ್ಟು ಮಹೇಶ್ವರನನ್ನು ಪೂಜಿಸು.

**ದೇವಂ ವಾ ಪುಂಡರೀಕಾಕ್ಷಂ ಕೇಶವಂ ಕ್ಲೇಶನಾಶನಂ ।**
**ಸನ್ಯಾಸಮಥವಾ ನಿತ್ಯಂ ಬ್ರಹ್ಮಜ್ಞಾನಪರೋ ಭವ ॥ ೪೩೦ ॥**

**ಅಥವಾ ಗಚ್ಛ ಕಾಶೀಶಂ ಮುಕ್ತ್ಯೈನಾಮ್ನ್ಯತಿಮಾಪ್ನುಹಿ ।**
**ಗಯಾಂ ವಾ ಗಚ್ಛ ತತ್ರ ತ್ವಂ ಶ್ರಾದ್ಧಂ ಕರ್ತುಂ ಪ್ರಯತ್ನತಃ ॥ ೪೩೧ ॥**

**ಅಥವಾ ಸರ್ವದೇವಾನಾಂ ಸಾರಂ ಪಾತಕನಾಶನಂ ।**
**ರುದ್ರಂ ರುದ್ರಪ್ರಿಯಕರಂ ಜಪನ್ಪ್ರತ್ಯಹಮಾದರಾತ್ ॥ ೪೩೨ ॥**

**ಶ್ರೀಶೈಲಮಥವಾ ಗಚ್ಛ ಕೇದಾರಮಥಚೇಚ್ಛಯಾ ।**
**ಅಥವಾ ಪ್ರತಿವರ್ಷಂ ತು ಮಾಘಸ್ನಾನಂ ಪ್ರವರ್ತಯ ॥ ೪೩೩ ॥**

**ಕಿಮತ್ರ ಬಹುನೋಕ್ತೇನ ಧರ್ಮಭಕ್ತಸ್ಸದಾ ಭವ ।**
**ನೈವಂ ನರಕವಾಸಸ್ತೇ ಭವಿತಾ ತು ದ್ವಿಜಾಧಮ ॥ ೪೩೪ ॥**

---

೪೩೦. ಅದೂ ಇಲ್ಲದಿದ್ದರೆ ಕ್ಲೇಶನಾಶಕನಾದ ವಿಷ್ಣುವನ್ನು ಪೂಜಿಸು. ಅದೂ ಆಗದಿದ್ದರೆ ಸನ್ಯಾಸವನ್ನು ಹೊಂದಿ ಜ್ಞಾನಿಯಾಗು.

೪೩೧. ಕಾಶಿಗಾದರೂ ಹೋಗಿ ವಿಶ್ವೇಶನನ್ನು ಭಜಿಸು. ಅಲ್ಲಿ ಮುಕ್ತಿಯಿಂದ ಉತ್ತಮಸ್ಥಾನವನ್ನು ಹೊಂದು. ಇಲ್ಲದಿದ್ದರೆ ಗಯೆಗೆ ಹೋಗಿ ಅಲ್ಲಿ ಪ್ರಯತ್ನಪಟ್ಟು ಶ್ರಾದ್ಧವನ್ನು ಮಾಡು.

೪೩೨. ಅದಿಲ್ಲದಿದ್ದರೆ ಸರ್ವದೇವತೆಗಳ ಸಾರಭೂತವೂ, ಪಾಪನಾಶಕವೂ ಆದ ರುದ್ರನಿಗೆ ಪ್ರೀತಿಕರವಾದ ರುದ್ರವನ್ನು ಶ್ರದ್ಧೆಯಿಂದ ಪ್ರತಿನಿತ್ಯವೂ ಜಪಿಸು.

೪೩೩. ಶ್ರೀಶೈಲಕ್ಕಾದರೂ ಹೋಗು, ಇಲ್ಲವೇ ಕೇದಾರಕ್ಕೆ ಹೋಗು. ಅದೂ ಆಗದಿದ್ದರೆ ಮಾಘಮಾಸದಲ್ಲಿ ಪ್ರತಿದಿನವೂ ಪ್ರಾತಃಸ್ನಾನವನ್ನು ಮಾಡು.

೪೩೪. ಬಹಳ ಹೇಳಿದುದರಿಂದೇನು? ಯಾವಾಗಲೂ ಧರ್ಮದಲ್ಲಿ ಭಕ್ತಿಯಿಟ್ಟು ಧರ್ಮವನ್ನಾಚರಿಸು. ಹಾಗಾದರೆ ನಿನಗೆ ನರಕವಾಸವಿರುವುದಿಲ್ಲ.

॥ ಗೌತಮ ಉವಾಚ ॥

ಶ್ರುತ್ವಾ ಸರ್ವಂ ಕರಿಷ್ಯಾಮಿ ಪುರಾಣಂ ಭವತೋ ಮುಖಾತ್ ।
ಶಾಸ್ತ್ರಂ ವಿಶ್ವಾಸಹೇತುಂ ಚ ವರ್ಜ್ಯಂ ಚಾಪಿ ವದಸ್ವ ಮೇ ॥ ೪೩೫ ॥

॥ ಪೌರಾಣಿಕ ಉವಾಚ ॥

ವರ್ಜ್ಯಂ ಮಾಂಸಂ ಸುರಾsನ್ಯಸ್ತ್ರೀಭೋಗೋ ದ್ಯೂತಂ ವಿಕತ್ಥನಂ ।
ಪಾರುಷ್ಯಮನೃತಂ ಮಾಯಾ ದೇವದೇವವಿನಿಂದನಂ ॥ ೪೩೬ ॥

ಗುರೂಣಾಂ ಪಿತೃವೃದ್ಧಾನಾಂ ಪುರಾಣಸ್ಮೃತಿಭಾಷಿಣಾಂ ।
ನಿಂದಿತಂ ಶ್ವೇತವೃಂತಾಕಂ ಕತಕಾಲಾಬುವರ್ತನಂ ॥ ೪೩೭ ॥

ಬೀಜಪೂರಂ ಕುಸುಂಭಂ ಚ ಲೋಹಿತಂ ಶೃಂಗವೇರ ಚ ।
ಅರಟುಂ ನಾರಿಕೇಳಂ ಚ ಕೂಷ್ಮಾಂಡಕಂ ತಥೈವ ಚ ॥ ೪೩೮ ॥

ಕೋವಿದಾರಫಲಂ ತೈಲಪಕ್ವಂ ಮಾನವಜಂ ಪಯಃ ।
ವಾಧ್ರೀರ್ಣಸಖರೀದುಗ್ಧಂ ಸೂತಕಾಕ್ಷೀರಮಾವಿಕಂ ॥ ೪೩೯ ॥

---

೪೩೫. ಗೌತಮನು ಹೇಳಿದನು:—ನಿನ್ನ ಬಾಯಿಂದ ಪುರಾಣವನ್ನು ಕೇಳಿ ಅನಂತರ ಎಲ್ಲವನ್ನೂ ಮಾಡುತ್ತೇನೆ. ವಿಶ್ವಾಸವಿಡುವುದಕ್ಕೆ ಕಾರಣವಾದ ಶಾಸ್ತ್ರವನ್ನೂ, ವರ್ಜಿಸಬೇಕಾದ ಪದಾರ್ಥಗಳನ್ನೂ ಹೇಳು.

೪೩೬. ಪೌರಾಣಿಕನು ಹೇಳಿದನು:—ಮಾಂಸ, ಪರಸ್ತ್ರೀಭೋಗ, ಹೆಂಡ, ಜೂಜು, ಆತ್ಮಶ್ಲಾಘನೆ, ಕಠಿಣವಾದ ಮಾತು, ಸುಳ್ಳುಹೇಳುವುದು, ಕಪಟ, ಶಿವನಿಂದೆಗಳನ್ನು ಬಿಡಬೇಕು.

೪೩೭—೪೩೯. ಗುರುಗಳು, ಪಿತೃಗಳು, ವೃದ್ಧರು, ಪುರಾಣ, ಸ್ಮೃತಿಗಳನ್ನು ಹೇಳುವವರನ್ನು ನಿಂದಿಸಬಾರದು. ಬಿಳಿಯಬದನೆ, ಕದವೇಕಾಯಿ ಎಂಬ ಸೋರೆಯಕಾಯಿ ಭೇದ, ಅಣಬೆ, ಶೀಬೇಕಾಯಿ, ಕುಸುಬೆ, ಕೆಂಪುಗಡ್ಡೆಯುಳ್ಳ ಗೆಣಸುಗಳು, ನಂಗೆಂಬ ತೆಂಗಿನಕಾಯಿ, ಕುಂಬಳಕಾಯಿ, ಕೋವಿದಾರಫಲ, ಎಣ್ಣೆಯಲ್ಲಿ ಬೇಯಿಸಿದ ಪದಾರ್ಥ, ಮನುಷ್ಯರ ಹಾಲು, ಹೇಸರಕತ್ತೆ ಕತ್ತೆಗಳ ಹಾಲು, ಕರುಹಾಕಿದ ಹತ್ತು ದಿನದೊಳಗಿನ ಹಾಲು, ಕುರಿಯ ಹಾಲು ಇವುಗಳನ್ನು ಸೇವಿಸಬಾರದು.

ಔಷ್ಟ್ರಮೇಕಶಫಕ್ಷೀರಂ ಮಾರ್ಗಮಾಜಂ ನೃಸಂಭವಂ ।
ವಿವತ್ಸಾಸಂಧಿನೀಕ್ಷೀರಂ ಲವಣಂ ಚೈವ ಯೋಗಿ ತತ್ ॥ ೪೪೦ ॥

ನಾಳಿಕೇರರಸಂ ಕಾಂಸ್ಯೇ ತಾಮ್ರೇ ಮಧು ಚ ಸೀಸಕೇ ।
ಕಾಚೇ ತಕ್ರಂ ಕರಂಭಾಂಶ್ಚ ಘೃತಾಕ್ತಾನ್ನೈವ ಕಾರಯೇತ್ ॥ ೪೪೧ ॥

ಹೋಮಂ ತು ಮೃಣ್ಮಯೇ ಪಾತ್ರೇ ಪುರೋಡಾಶಂ ತು ರಾಜತೇ ।
ನ ಸೇವೇತ ಪರೇ ಲೋಕೇ ಶುಭಾರ್ಥೀ ತು ವಿಚಕ್ಷಣಃ ॥ ೪೪೨ ॥

ಪಾತ್ರಾನ್ತಶ್ಚೂರ್ಣಲೇಪೋಽಪಿ ತತ್ರ ಭಕ್ಷಣಮೇವ ಚ ।
ಕ್ರಮುಕಸ್ಯ ತಥಾ ಭಕ್ಷಶ್ಚೂರ್ಣಪತ್ರಸ್ಯ ಚೈವ ಹಿ ॥ ೪೪೩ ॥

ಕ್ರಮುಕಸ್ಯಾಪಿ ಪಕ್ವಸ್ಯ ಭಕ್ಷಣಂ ಕ್ರಮಿಯೋಗಿನಃ ।
ಪಾಯಸೇ ಲವಣಂ ಚೈವ ಕೇವಲಂ ಚ ಕರಾರ್ಪಿತಂ ॥ ೪೪೪ ॥

---

೪೪೦. ಕರುವಿಲ್ಲದ ಹಸುವಿನ ಹಾಲು, ಹೋರಿಯನ್ನು ತೆಗೆದುಕೊಂಡಿರುವ ಹಸುವಿನ ಹಾಲು, ಒಂಟೆಯ ಹಾಲು, ಗೊರಸು ಸೀಳದಿರುವ ಪ್ರಾಣಿಗಳ ಹಾಲು, ಮೃಗಗಳ ಹಾಲು, ಆಡಿನ ಹಾಲು, ಮನುಷ್ಯರ ಹಾಲುಗಳನ್ನು ಕುಡಿಯಬಾರದು

೪೪೧. ಎಳನೀರನ್ನು ಕಂಚಿನ ಪಾತ್ರೆಯಲ್ಲಿ ಕುಡಿಯಬಾರದು. ಮಧುವನ್ನು ತ್ರಾಮದ ಪಾತ್ರೆಯಲ್ಲಿಯೂ, ಕುಡಿಯಬಾರದು. ಮಜ್ಜಿಗೆಯನ್ನು ಗಾಜಿನ ಪಾತ್ರೆಯಲ್ಲಿ ಕುಡಿಯಬಾರದು. ಮೊಸರಿನಿಂದ ಕಲಸಿರುವ ಹುರಿಹಿಟ್ಟಿಗೆ ತುಪ್ಪವನ್ನು ಹಾಕಬಾರದು.

೪೪೨. ಮಣ್ಣಿನ ಪಾತ್ರೆಯಲ್ಲಿ ಹೋಮಮಾಡಬಾರದು. ಪುರೋಡಾಶವನ್ನು ಬೆಳ್ಳಿಯ ಪಾತ್ರೆಯಲ್ಲಿ ತಿನ್ನಬಾರದು. ಪರಲೋಕದಲ್ಲಿ ಒಳ್ಳೆಯದನ್ನು ಅಪೇಕ್ಷಿಸುವ ಬುದ್ಧಿವಂತನು ಇವೊಂದನ್ನೂ ಮಾಡಬಾರದು.

೪೪೩. ಪಾತ್ರೆಯೊಳಗೆ ಅಂಟಿಕೊಂಡಿರುವ ಕಡೆಯ ಪದಾರ್ಥವನ್ನು ತಿನ್ನಕೂಡದು. ಅಡಿಗೆ ಮಾಡಿದ ಪಾತ್ರೆಯಲ್ಲಿಯೇ ತಿನ್ನಬಾರದು. ಒರಿಯ ಅಡಿಕೆಯನ್ನು ಎಲೆಯನ್ನು ಇಡಿದು ತಿನ್ನಬಾರದು

೪೪೪-೪೪೫. ಬೇಯುತ್ತಿರುವ ಹಸಿಯ ಅಡಕೆಯನ್ನು ತಿನ್ನಬಾರದು. ಪಾಯಸಕ್ಕೆ ಉಪ್ಪನ್ನು ಹಾಕಿ ತಿನ್ನಬಾರದು. ಪಾಯಸವನ್ನು ಕೈಯ್ಯಿಂದ ಹಾಕಿ

ಸಿಂಧುಸೌರಾಷ್ಟ್ರಕಾಂಭೋಜಮಾಗಧೇಷು ಚ ಸಿಂಹಲೇ ।
ನ ದೋಷಾಯ ಭವೇತ್ತತ್ರ ಕ್ಷೀರಂ ಚ ಲವಣಾನ್ವಿತಂ ॥ ೪೪೫ ॥

ಕ್ಷೀರಾಣಿ ಚ ಸಮುಸ್ತಾನಿ ಲವಣಾನಿ ಚ ಯೋಗತಃ ।
ದೇಶೇಷ್ವನ್ಯೇಷು ದೋಷಾಯ ಪತೇನ್ನೈವೇಹ ಸಂಶಯಃ ॥ ೪೪೬ ॥

ಕಿಮತ್ರ ಬಹುನೋಕ್ತೇನ ಸದ್ಭಿರ್ನಿಂದ್ಯಂ ವಿವರ್ಜಯೇತ್ ।

॥ ಶಂಭುರುವಾಚ ॥

ಏವಂ ತಸ್ಯ ವಚಶ್ಶ್ರುತ್ವಾ ಬ್ರಾಹ್ಮಣಸ್ಯ ಮಹಾತ್ಮನಃ ।
ಸ್ವಮೇವ ಭವನಂ ಗತ್ವಾ ಚಿಂತಯಾಮಾಸ ದುಃಖಿತಃ ॥ ೪೪೭ ॥

ರಾತ್ರೌ ಮೃತ್ಯುರ್ದಿವಾ ವೇತಿ ನ ಜಾನಾತಿ ಮಹಾನಪಿ ।
ಪರಲೋಕೇ ಸುಖಂ ದುಃಖಮಿಹ ಭೋಗವಿಬೋಧಿತಂ ॥ ೪೪೮ ॥

---

ಕೊಂಡು ತಿನ್ನಬಾರದು. ಸಿಂಧು, ಸೌರಾಷ್ಟ್ರ, ಕಾಂಭೋಜ, ಮಾಗಧ, ಸಿಂಹಳ ದೇಶಗಳಲ್ಲಿ ಹಾಲಿಗೆ ಉಪ್ಪು ಹಾಕಿಕೊಂಡು ಕುಡಿಯುತ್ತಾರೆ. ಆ ದೇಶಗಳಲ್ಲಿ ದೋಷವಾಗುವುದಿಲ್ಲ.

೪೪೬. ಯಾವ ಹಾಲೇ ಆಗಲಿ ಉಪ್ಪಿನಿಂದ ಕೂಡಿದ್ದರೆ, ಮಿಕ್ಕ ದೇಶಗಳಲ್ಲಿ ಸೇವಿಸಿದರೆ ದೋಷಭಾಗಿಗಳಾಗುತ್ತಾರೆ. ಸಂಶಯವಿಲ್ಲದೆ ಕೆಟ್ಟುಹೋಗುತ್ತಾರೆ. ಬಹಳವಾಗಿ ಹೇಳಿದುದರಿಂದ ಪ್ರಯೋಜನವೇನು? ಸತ್ಪುರುಷರು ನಿಂದ್ಯವೆಂದು ಹೇಳಿರುವುದನ್ನು ತ್ಯಜಿಸಬೇಕು.

೪೪೭. ಶಂಭುವು ಹೇಳಿದನು:—ಆ ಮಹಿಮನಾದ ಪುರಾಣಿಕನ ಈ ಮಾತುಗಳನ್ನು ಕೇಳಿ ಆ ಅಧಿಕಾರಿಯಾದ ಬ್ರಾಹ್ಮಣನು ತನ್ನ ಮನೆಗೆ ಹೋಗಿ ದುಃಖಪಡುತ್ತಾ ಈರೀತಿಯಾಗಿ ಯೋಚಿಸಿದನು.

೪೪೮. ಎಂತಹ ಮಹಿಮವಂತನಾದರೂ ತನಗೆ ರಾತ್ರಿ ಮೃತ್ಯು ಬರುವುದೇ ಅಥವಾ ಹಗಲು ಬರುವುದೇ ಎಂಬುದನ್ನು ತಿಳಿಯನು. ಇಲ್ಲಿ ನಾವು ಅನುಭವಿಸುವ ಭೋಗಗಳಿಂದ ಪರಲೋಕದ ಸುಖದುಃಖಗಳನ್ನು ಊಹಿಸುತ್ತೇವೆ.

**ಕ್ರಿಮಿಕೀಟಮನುಷ್ಯಾದ್ಯೈಃ ಸುಖದುಃಖೈಃ ಪೃಥಕ್ಪೃಥಕ್ ।**
**ಪ್ರತಿಜೀವಂ ತು ಹೇತೂನಾಂ ಭೇದೋ ಹಿ ಸುವಿನಿಶ್ಚಯಃ** ॥ ೪೨೯ ॥

**ಏಕಸ್ಯಾಪಿ ಹಿ ಜೀವಸ್ಯ ನಾಸ್ತಿ ಚೈಕವಿಧಾ ಸ್ಥಿತಿಃ ।**
**ಜನ್ಮಕಾಲೇ ಮಹಜ್ಜ್ಞಾನಂ ಶೈಶವೇಽತ್ಯಲ್ಪಬೋಧನಂ** ॥ ೪೩೦ ॥

**ಸ್ಖಲತ್ಪದೇಽಲ್ಪವಿಜ್ಞಾನಂ ಬಾಲ್ಯೇ ಚಾಲ್ಪಂ ತಥೈವ ಚ ।**
**ಕೌಮಾರೇ ಕ್ರೀಡನಾಸಕ್ತಂ ಯೌವನೇ ವಿಷಯೋಽಕ್ಷಿತಂ** ॥ ೪೩೧ ॥

**ಯೌವನೇ ವಿನಿವೃತ್ತೇ ತು ದ್ರವ್ಯಸಂಪಾದನೇಷಣಾ ।**
**ವಾರ್ಧಕೇ ಭೋಗಲಿಪ್ಸಾ ಚ ನ ಚ ಭೋಕ್ತುಂ ಕ್ಷಮೋಽಪಿ ಚ** ॥ ೪೩೨ ॥

**ದೂಷಿತಾಶ್ಲೇಷ್ಮಲಾಲಾಭಿರ್ವಲೀಪಲಿತಕಂಪನೈಃ ।**
**ಶ್ವಾಸಕಾಸಾವಿಲಾಕ್ಷಿಪ್ತೋ ಹೃಷೀಕೈರ್ವಿಷಯೈರ್ಯುತಃ** ॥ ೪೩೩ ॥

---

೪೨೯. ಕ್ರಿಮಿಕೀಟ ಮೊದಲುಗೊಂಡು ಮನುಷ್ಯನವರೆಗೂ, ಅವರವರು ಬೇರೆಬೇರೆಯಾಗಿ ಸುಖದುಃಖಗಳನ್ನು ಅನುಭವಿಸುತ್ತಿರುವುದರಿಂದ ಪ್ರತಿ ಜೀವ ದಲ್ಲಿಯೂ ಭೇದವಿರುವುದೆಂಬುದು ನಿಶ್ಚಯವು.

೪೩೦-೪೩೧. ಒಂದು ಪ್ರಾಣಿಗೂ ಕೂಡ ಒಂದೇಬಗೆಯಾದ ಸ್ಥಿತಿಯಿಲ್ಲವು. ಹುಟ್ಟುವಾಗ ಆ ಮಗುವಿಗೆ ಮಹಾಜ್ಞಾನವಿರುವುದು. ಬಾಲ್ಯದಲ್ಲಿ ಸ್ವಲ್ಪಮಾತ್ರ ಜ್ಞಾನವು. ಹೆಜ್ಜೆಯಿಡಲು ಬಂದಾಗ ಬಹು ಸ್ವಲ್ಪ ಬುದ್ಧಿಯು. ಕುಮಾರತನದಲ್ಲಿ ಆಟದಲ್ಲಿ ಆಸಕ್ತಿಯು. ಯೌವನದಲ್ಲಿ ವಿಷಯಸುಖಗಳಲ್ಲಿ ಮನಸ್ಸು ಇರುವುದು.

೪೩೨. ಯೌವನವು ಕಳೆದ ಮೇಲೆ ಹಣಸಂಪಾದನೆಯಲ್ಲಿ ಆಸೆ ಹುಟ್ಟುವುದು. ಮುಪ್ಪು ಬಂದಾಗ ಭೋಗಿಸುವ ಆಸೆ ಬರುವುದು. ಆಗ ಅನುಭವಿಸಲು ಸಮರ್ಥನಲ್ಲ.

೪೩೩—೪೩೪. ಮುಪ್ಪಿನಲ್ಲಿ ಕಣ್ಣಿನ ಜಿಬುರು, ಶ್ಲೇಷ್ಮ, ಜೊಲ್ಲು, ಸುಕ್ಕು, ನರೆ, ನಡುಕ, ಉಸುರಿನ ಹೆಚ್ಚುಕಡಿಮೆ, ಕೆಮ್ಮುಗಳಿಂದ ತೂಗಿಯಾಡುವನು. ಇಂದ್ರಿಯಗಳ ಪಾಟವವು ಕಡಿಮೆಯಾಗಿರುವುದು ಇವುಗಳಿಂದ ಕೂಡಿಕೊಂಡಿದ್ದರೂ, ಯಾವುದನ್ನೂ ಹಿಡಿದುಕೊಳ್ಳಲು ಸಮರ್ಥನಾಗುವುದಿಲ್ಲ. ಏನೂ ಗೊತ್ತಾಗುವುದೂ

**ಕಿಂಚಿದ್ವಕ್ತುಂ ನ ಶಕ್ನೋತಿ ನ ಚ ಜಾನಾತಿ ಕಿಂಚನ ।**
**ತಿಷ್ಠಂತೀಷು ಪರಸ್ತ್ರೀಷು ಗುಹ್ಯಸ್ಥಾನಂ ಪ್ರದರ್ಶಯನ್ ॥ ೪೫೪ ॥**

**ಕೋಶಕಂಡೂಯನಪರಃ ಕ್ರೂರೋ ಜೀವಿತಲಕ್ಷಣೈಃ ।**
**ಕಂಡೂಯತೇ ಸ್ಫಿಚೌ ವಸ್ತ್ರಮುದ್ಧೃತ್ಯ ಚ ವಿಚಾಲಯನ್ ॥ ೪೫೫ ॥**

**ಭುಂಜಾನಃ ಶ್ಲೇಷ್ಮಣಾ ಗ್ರಾಸಂ ಗ್ರಸಿತುಂ ನ ಚ ಶಕ್ನುಯಾತ್ ।**
**ಯದಾ ಕಾಸಸ್ತದಾ ಜಜ್ಞೇ ಪಾಯುವಾಯುಶ್ಚ ಶಬ್ದವಾನ್ ॥ ೪೫೬ ॥**

**ನಿಸ್ಸೃತಿಸ್ತು ಮಲಸ್ಯಾಪಿ ಶ್ಲೇಷ್ಮನಿರ್ಗಮ ಏವ ಚ ।**
**ಸ್ನುಷಾದಿಭರ್ತ್ಸನಂ ಬಾಲತಾಲಹಾಸ್ಯನಿದರ್ಶನಂ ॥ ೪೫೭ ॥**

**ಗುರುನಿರ್ಗಮನಾದೀನಿ ಸಂಚಿಂತ್ಯ ಚ ಪುನಃ ಪುನಃ ।**
**ಆಹೂತೋ ಭೋಜನಾದ್ಯರ್ಥಂ ಭೋಜ್ಯಾನ್ನಾದಿ ವಿನಿಂದಯನ್ ॥ ೪೫೮ ॥**

---

ಇಲ್ಲ. ಪರರ ಹೆಂಗಸರು ಎದುರಿಗೆ ಇದ್ದರೂ ಗುಹ್ಯಸ್ಥಾನವನ್ನು ತೋರಿಸುತ್ತಾ ತರುವನ್ನು ಕೆರೆದುಕೊಳ್ಳುತ್ತಿರುತ್ತಾನೆ, ಬಟ್ಟೆಯನ್ನು ಎತ್ತಿಕೊಂಡು ಆ ಬಟ್ಟೆಯನ್ನು ಕೆಳಕ್ಕೂ ಮೇಲಕ್ಕೂ ಅಲ್ಲಾಡಿಸುತ್ತ ಕುಂಡೆಗಳನ್ನು ಕೆರೆದುಕೊಳ್ಳುತ್ತಾನೆ. ಈರೀತಿ ಜೀವಿತದ ಲಕ್ಷಣಗಳಿಂದ ಕ್ರೂರನಾಗಿರುತ್ತಾನೆ.

೪೫೬. ಊಟಮಾಡುವಾಗ ಅನ್ನದ ಜೊತೆಯಲ್ಲಿಯೇ ಶ್ಲೇಷ್ಮವನ್ನೂ ತಿನ್ನುತ್ತಾನೆ, ಊಟಮಾಡುವುದಕ್ಕೂ ಶಕ್ತಿಯಿರುವುದಿಲ್ಲ, ಕೆಮ್ಮು ಬಂದಾಗ ಅಪಾನವಾಯುವು ಶಬ್ದದೊಡನೆ ಹೊರಡುತ್ತದೆ, ಆಗ ಹಿಂದುಗಡೆ ಮಲವೂ, ಮುಂದುಗಡೆ ಶ್ಲೇಷವೂ ಹೊರಡುತ್ತದೆ.

೪೫೭. ಸೊಸೆಯೇ ಮುಂತಾದವರು ಬಯ್ಯುವಿಕೆ, ಮಕ್ಕಳು ಚಪ್ಪಾಳೆ ಹೊಡೆದುಕೊಂಡು ಹಾಸ್ಯಮಾಡುವುದು, ದೊಡ್ಡವರು ಸುಮ್ಮನೆ ಹೊರಟು ಹೋಗುವುದು ಇವೆಲ್ಲವನ್ನೂ ಬಾರಿಬಾರಿಗೂ ಯೋಚಿಸಿದನು.

೪೫೮. ಭೋಜನಕ್ಕೆ ಕರೆದರೆ ಊಟಮಾಡುವ ಅನ್ನ ಮೊದಲಾದುವನ್ನು ನಿಂದಿಸುತ್ತಾನೆ. ಬಿಸಿಯಾಗಿದ್ದರೆ ಬಿಸಿ ಎಂದು ನಿಂದಿಸುತ್ತಿರುತ್ತಾನೆ. ಅನಂತರ ಯೋಚಿಸುತ್ತಾನೆ.

ಚಿರಮುಷ್ಣಂ ಚ ನಿರ್ಭರ್ತ್ಸ್ಯ ಪುನಶ್ಚಿನ್ತಾಮುವಾಪ್ಯ ಸಃ ।
ಅತಿದುಷ್ಕೃತಕರ್ಮಾಹಂ ಕಥಂ ಭೋಕ್ಷ್ಯೇ ಕಥಂ ಸ್ವಪೇ ॥ ೪೫೯ ॥

ಕಥಂ ತಿಷ್ಠೇ ಕಥಂ ಗಚ್ಛೇ ಪರಲೋಕಃ ಕಥಂ ಭವೇತ್ ।
ಇತಿ ಚಿಂತಾಕುಲೋ ನಿತ್ಯಂ ನ ನಮುತ್ಯಪರಾನ್ವಿತಃ ॥ ೪೬೦ ॥

ದ್ವಿಜಸ್ಯ ಸದನಂ ಗತ್ವಾ ಪುರಾಣಜ್ಞಸ್ಯ ರಾಘವ ।
ಲಜ್ಜಾವಾಕ್ಯತವಕ್ತ್ರಶ್ಚ ಕಿಂ ಕರೋಮೀತ್ಯಭಾಷತ ॥ ೪೬೧ ॥

ನ ಕಿಂಚಿದಪ್ಯುವಾಚಾಸೌ ದ್ವಿಜಃ ಪೌರಾಣಿಕಸ್ತದಾ ।
ಪಾಪೋಽಯಮಿತಿ ವಿಜ್ಞಾಯ ಶಿಷ್ಯೇಣ ನಿರಗಾಮಯತ್ ॥ ೪೬೨ ॥

ಗೌತಮೋಽಪಿ ವಿನಿರ್ಗತ್ಯ ದ್ವಾರ್ಯೇವ ಚ ಬಹಿಸ್ಸ್ಥಿತಃ ।
ಭುವ್ಯಾಸೀನಂ ತು ವಿಜ್ಞಾಯ ಪುರಾಣಾರ್ಥವಿಚಾರಕಂ ॥ ೪೬೩ ॥

ಕಥಂ ಕಥಮಪಿ ಪ್ರಾಪ್ಯ ಪೀಠಂ ದತ್ತಂ ಚ ನಾಭಜತ್ ।
ನಿಷಣ್ಣೋ ಭೂತಳೇ ರಾಮ ಪುರಾಣಜ್ಞಮಭಾಷತ ॥ ೪೬೪ ॥

---

೪೫೯-೪೬೦. ನಾನು ಬಹು ಪಾಪಮಾಡಿದವನು, ಹೇಗೆ ಊಟಮಾಡಲಿ? ಹೇಗೆ ಮಲಗಲಿ? ನಿಲ್ಲುವುದು ಹೇಗೆ? ಹೋಗುವುದು ಹೇಗೆ? ಸ್ವರ್ಗವು ಹೇಗೆ ಸಿಕ್ಕುತ್ತದೆ? ಎಂಬ ಚಿಂತೆಯಿಂದ ಕೂಡಿಕೊಂಡು ಇನ್ನೊಬ್ಬರನ್ನಾಶ್ರಯಿಸಿಕೊಂಡಿದ್ದರೂ ಸಾಧುತನವನ್ನು ಹೊಂದುವುದಿಲ್ಲ.

೪೬೧. ಈರೀತಿ ಯೋಚಿಸಿ ಆ ಗೌತಮನು ಪುರಾಣವನ್ನು ಹೇಳುತ್ತಿದ್ದ ಆ ಬ್ರಾಹ್ಮಣನ ಮನೆಗೆ ಹೋಗಿ ಲಜ್ಜೆಯಿಂದ ತಲೆ ಬಗ್ಗಿಸಿಕೊಂಡು ನಾನೇನು ಮಾಡಬೇಕು ಎಂದು ಕೇಳಿದನು.

೪೬೨. ಆಗ ಆ ಪುರಾಣಿಕ ಬ್ರಾಹ್ಮಣನು ಏನನ್ನೂ ಹೇಳದೆ ಇವನು ಪಾಪಿಯೆಂದು ತಿಳಿದು ಶಿಷ್ಯನಿಂದ ಹೊರಗೆ ಹೊರಡಿಸಿದನು.

೪೬೩-೪೬೪. ಗೌತಮನು ಹೊರಗೆ ಬಂದು ಬಾಗಿಲಿನಲ್ಲಿಯೇ ಇದ್ದನು. ಪುರಾಣಿಕನು ಸುಖವಾಗಿ ಕುಳಿತುಕೊಂಡುದನ್ನು ತಿಳಿದು ಅವನ ಹತ್ತಿರಕ್ಕೆ ಹೇಗೋ ಹೋದನು. ಅವನು ಕುಳಿತುಕೊಳ್ಳುವುದಕ್ಕೆ ಪೀಠವನ್ನು ಕೊಡಲು ಅದರ ಮೇಲೆ ಗೌತಮನು ಕೂರಲೂ ಇಲ್ಲ.

ಪ್ರಾಯಶ್ಚಿತ್ತಂ ಕರಿಷ್ಯಾಮಿ ತದತ್ರೈವ ವಿಧೀಯತಾಂ ॥ ೪೬೫ ॥

॥ ಬ್ರಾಹ್ಮಣ ಉವಾಚ ॥

ಪಾಪಾನಿ ಕೀರ್ತಯಸ್ವ ಸ್ತ್ವಂ ಸರ್ವಥೈವ ಕೃತಾನಿ ತು ।
ಸ ಚಾಪಿ ನಾಕೃತಂ ಕಿಂಚಿನ್ಮಯಾ ಪಾಪಮಿತೀರಯನ್ ॥ ೪೬೬ ॥

ರುದನ್ಪಪಾತ ಭೂಮ್ಯಾಂ ಚ ಕಥಂ ತಾತೇತಿ ಪೀಡಿತಃ ।
ಬ್ರಾಹ್ಮಣಸ್ತಮಥ ಪ್ರಾಹ ಪ್ರಾಯಶ್ಚಿತ್ತಂ ನ ವಿದ್ಯತೇ ।
ಮಹಾಪಾಪೇ ತ್ರಿರಾವೃತ್ತೇ ಪುನಶ್ಚ ಯದಿ ಚೇತ್ಕೃತಂ ॥ ೪೬೭ ॥

॥ ಗೌತಮ ಉವಾಚ ॥

ಪೌರಾಣಿಕ ಮಹಾಭಾಗ ಪ್ರಾಪ್ಯಾಪಿ ತ್ವಾಮಹಂ ಕಥಂ ।
ಪಾಪಯುಕ್ತೋ ದ್ವಿಜಶ್ರೇಷ್ಠ ಸಂಗತಿರ್ವಿಫಲಾ ಭವೇತ್ ॥ ೪೬೮ ॥

---

೪೬೫. ತಾನು ನೆಲದಲ್ಲೇ ಕುಳಿತುಕೊಂಡು ಪುರಾಣಜ್ಞನನ್ನು ಕುರಿತು ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳುತ್ತೇನೆ. ಅದನ್ನು ಇಲ್ಲಿಯೇ ಮಾಡಿರಿ ಎಂದು ಕೇಳಿದನು.

೪೬೬. ಬ್ರಾಹ್ಮಣನು ಹೇಳಿದನು:—ನೀನು ಮಾಡಿದ ಪಾಪಗಳನ್ನು ಎಲ್ಲವನ್ನೂ ವಿವರಿಸೆನ್ನಲು ಆ ಗೌತಮನು ನಾನು ಮಾಡದಿರುವ ಪಾಪವೇ ಇಲ್ಲವೆಂದೆನ್ನುತ್ತಾ ಅಳುತ್ತ, ಅಯ್ಯೋ ಅಪ್ಪ, ಎಂದು ಕೂಗುತ್ತ ನೆಲದ ಮೇಲೆ ಬಿದ್ದುಬಿಟ್ಟನು.

೪೬೭. ಆಗ ಆ ಪುರಾಣಿಕನು ಮಹಾಪಾಪಗಳನ್ನು ಮೂರುಬಾರಿ ಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲವೆಂದನು.

೪೬೮. ಗೌತಮನು ಹೇಳಿದನು:—ಎಲೈ ಪುಣ್ಯಾತ್ಮನಾದ ಪೌರಾಣಿಕನೆ, ನಿನ್ನ ಬಳಿಗೆ ನಾನು ಬಂದ ಮೇಲೂ, ಪಾಪಿಯಾದರೂ, ನಿನ್ನ ಸಹವಾಸವು ಹೇಗೆತಾನೇ ಫಲವಿಲ್ಲದೆ ಹೋದೀತು?

॥ ಪೌರಾಣಿಕ ಉವಾಚ ॥

ಶಾಸ್ತ್ರಂ ಪ್ರಮಾಣಂ ಸರ್ವೇಷಾಂ ಪ್ರಾಯಶ್ಚಿತ್ತವಿನಿರ್ಣಯೇ ।
ತದ್ವಿನಾ ಯೋ ಹಿ ತದ್ಬ್ರೂಯಾತ್ಪ್ರಾಯಶ್ಚಿತ್ತಂ ನ ತದ್ಭವೇತ್ ॥ ೪೬೯ ॥

ಸಕೃತ್ಕೃತೇ ಸಕೃತ್ಪ್ರೋಕ್ತಂ ದ್ವಿತೀಯೇ ದ್ವಿಗುಣಂ ಭವೇತ್ ।
ತೃತೀಯೇ ತ್ರಿಗುಣಂ ಪ್ರೋಕ್ತಂ ಚತುರ್ಥೇ ನಾಸ್ತಿ ನಿಷ್ಕೃತಿಃ ॥ ೪೭೦ ॥

ತ್ವಯಾ ಕೃತಂ ತು ಬಹುಧಾ ಚತುರ್ವಿಧಮಪೀಚ್ಛಯಾ ।
ಕಥಂ ವಕ್ತುಮಹಂ ಶಕ್ತಃ ಪ್ರಾಯಶ್ಚಿತ್ತಂ ಭವಾದೃಶೇ ॥ ೪೭೧ ॥

ಗೌತಮೋಽಪಿ ಪುನಃ ಪ್ರಾಹ ಕ್ವ ಗನ್ತವ್ಯಂ ಮಯೇತಿ ಚ ।
ಪೌರಾಣಿಕೋ ದ್ವಿಜೋ ರಾಮ ತೂಷ್ಣೀಮೇವ ಬಭೂವ ಹ ॥ ೪೭೨ ॥

ಗೌತಮೋಽಪಿ ಮಹಾಶೈಲಂ ಶ್ರಿಯಾ ಏವ ಜಗಾಮ ಹ ।
ಅಥ ತತ್ರ ನದೀಂ ಸ್ನಾತ್ವಾ ದೃಷ್ಟ್ವೇಶಂ ಮಲ್ಲಿಕಾರ್ಜುನಂ ॥ ೪೭೩ ॥

---

೪೬೯. ಪೌರಾಣಿಕನು ಹೇಳಿದನು :—ಪ್ರಾಯಶ್ಚಿತ್ತವನ್ನು ನಿರ್ಣಯಿಸುವುದರಲ್ಲಿ ಎಲ್ಲರಿಗೂ ಶಾಸ್ತ್ರಗಳೇ ಪ್ರಮಾಣಗಳು. ಆ ಶಾಸ್ತ್ರಾಧಾರವಿಲ್ಲದೆ ಯಾವನು ಪ್ರಾಯಶ್ಚಿತ್ತವನ್ನು ವಿಧಿಸುತ್ತಾನೆಯೋ ಅದು ಪ್ರಾಯಶ್ಚಿತ್ತವಾಗಲಾರದು.

೪೭೦. ಒಂದುಬಾರಿ ತಪ್ಪುಮಾಡಿದರೆ ಒಂದುಸಾರಿ ಅದಕ್ಕೆ ಯೋಗ್ಯವಾದ ಪ್ರಾಯಶ್ಚಿತ್ತವೂ, ಎರಡನೆಯಬಾರಿ ಮಾಡಿದರೆ ಎರಡುಸಲವೂ, ಮೂರನೆಯಬಾರಿ ಮಾಡಿದರೆ ಮೂರುಸಲವೂ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟಿವೆ. ನಾಲ್ಕನೆಯಬಾರಿ ತಪ್ಪುಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ.

೪೭೧. ನೀನು ಅಂತಹ ಪಾಪಗಳನ್ನು ಮನೋವಾಕ್ಕಾಯ ಕರ್ಮಗಳಿಂದ ಅನೇಕಬಾರಿ ಇಷ್ಟಬಂದಂತೆ ಮಾಡಿದ್ದೀಯೆ. ಇಂತಹ ನಿನಗೆ ನಾನು ಪ್ರಾಯಶ್ಚಿತ್ತವನ್ನು ಹೇಳಲು ಹೇಗೆತಾನೆ ಶಕ್ತನಾದೇನು ?

೪೭೨. ಅದಕ್ಕೆ ಗೌತಮನು, ನಾನು ಎಲ್ಲಿಗೆ ಹೋಗಲಿ? ಎಂದು ಮತ್ತೆ ಕೇಳಿದನು. ಅದಕ್ಕೆ ಪೌರಾಣಿಕನು ಸುಮ್ಮನಾದನು.

೪೭೩. ಆಗ ಗೌತಮನು ತನಗೆ ಶ್ರೇಯಸ್ಸಾಗುವುದಕ್ಕೋಸ್ಕರ ಶ್ರೀಶೈಲಕ್ಕೆ ಹೋದನು. ಅಲ್ಲಿ ನದಿಯಲ್ಲಿ ಸ್ನಾನಮಾಡಿದನು. ಅದು ಮಲ್ಲಿಕಾರ್ಜುನ ಕ್ಷೇತ್ರವು.

ಉಪವಾಸತ್ರಯಂ ಕೃತ್ವಾ ಶಿವರಾತ್ರಿಮುಪಿಂದತ ।
ಚತುರ್ಥಮುಪವಾಸಂ ಚ ಚಕಾರಾತೀವ ದುಃಖಿತಃ ॥ ೪೭೪ ॥

ಪಾರಣಂ ಚಾಪ್ಯಮಾಯಾಂ ಸ ಕೃತವಾನ್ಫಲವಲ್ಕಲೈಃ ।
ಅಥ ಪ್ರದಕ್ಷಿಣಂ ಚಕ್ರೇ ಶ್ರೀಶೈಲಸ್ಯ ಚ ಸ ದ್ವಿಜಃ ॥ ೪೭೫ ॥

ಗತವಾನ್ಮಂದಿರಂ ಪಶ್ಚಾಚ್ಚಿಂತಯಾತಿಕೃಶಶ್ಶ್ವಸನ್ ।
ಕಥಂ ಪಾಪನಿವೃತ್ತಿರ್ಮೇ ತೂಷ್ಣೀಂಭೂತಸ್ಯ ಸೇತ್ಸ್ಯತಿ ॥ ೪೭೬ ॥

ಅನಂತಮವಿಚಾರ್ಯಂ ಕಿಂ ಮತ್ಪಾಪಂ ಸುಮಹತ್ತರಂ ।
ಶ್ರುತ್ವಾ ನ ಕೋಽಪಿ ಮೇ ಬ್ರೂಯಾತ್ಪ್ರಾಯಶ್ಚಿತ್ತಂ ವಿಧೀಯತಾಂ ॥೪೭೭॥

ಕಿಂತು ಕಸ್ಮಿನ್ಪುರಾಣೇ ತು ಶ್ರುತೇ ಜ್ಞಾತಂ ಭವಿಷ್ಯತಿ ।
ಇತಿ ಕೃತ್ವಾ ಮತಿಂ ಸೋಽಥ ಪುರಾಣಜ್ಞಮಭಾಷತ ॥ ೪೭೮ ॥

---

೪೭೪. ಸ್ನಾನಮಾಡಿ ಮೂರು ದಿನ ಉಪವಾಸಮಾಡಲು ನಾಲ್ಕನೆಯ ದಿನ ಶಿವರಾತ್ರಿಯು ಪ್ರಾಪ್ತವಾಯಿತು. ಆ ದಿನವೂ ಕಷ್ಟದಿಂದ ನಾಲ್ಕನೆಯ ಉಪವಾಸವನ್ನೂ ಮಾಡಿದನು.

೪೭೫. ಆ ಅಮಾವಾಸ್ಯೆಯ ದಿನ ಹಣ್ಣುಸಿಪ್ಪೆಗಳನ್ನು ತಿಂದು ಪಾರಣೆಮಾಡಿದನು. ಆನಂತರ ಆತನು ಶ್ರೀಶೈಲಪರ್ವತವನ್ನು ಪ್ರದಕ್ಷಿಣೆ ಮಾಡಿದನು.

೪೭೬. ಸುಮ್ಮನೆ ಇರುವ ನನ್ನ ಪಾಪಗಳು ಹೇಗೆ ಹೋದಾವು? ಹೇಗೆ ನಾನು ಇಷ್ಟಾರ್ಥಸಿದ್ಧಿಯನ್ನು ಹೊಂದಲಿ ಎಂಬ ಚಿಂತೆಯಿಂದ ಬಡಕಲಾಗಿ ಅನಂತರ ಮನೆಗೆ ಹೋದನು.

೪೭೭. ನನ್ನ ಪಾಪವು ಬಹಳವಾದುದು. ಅದಕ್ಕೆ ಕೊನೆಯೇ ಇಲ್ಲ. ವಿಚಾರ ಮಾಡಲು ಅರ್ಹವಾದುದೂ ಅಲ್ಲ. ಇದನ್ನು ಕೇಳಿದರೆ ಯಾವನೂ ಪ್ರಾಯಶ್ಚಿತ್ತವನ್ನು ಹೇಳುವುದಿಲ್ಲ. ಏನು ಮಾಡಲಿ?

೪೭೮. ಆದರೆ ಪುರಾಣಗಳನ್ನು ಕೇಳುತ್ತಿದ್ದರೆ ಯಾವುದರಲ್ಲಿಯಾದರೂ ಪ್ರಾಯಶ್ಚಿತ್ತವು ಗೊತ್ತಾಗುತ್ತದೆ, ಎಂದು ಯೋಚಿಸಿ, ಪೌರಾಣಿಕನನ್ನು ಕುರಿತು ಇಂತೆಂದನು.

ಪುರಾಣಮೇಕಂ ಮೇ ತಾತ ವ್ಯಾಖ್ಯಾತು ಭಗವಾನಿತಿ ।
ಜಾತಕರ್ಮಾದಿಸಂಸ್ಕಾರಾನ್ಕಾರಯಸ್ವ ಮಮಾಶು ವೈ　　　॥ ೪೭೯ ॥

ದ್ವಿಜೋ ಭೂತ್ವಾ ಶೃಣೋಮ್ಯದ್ಯ ಪ್ರಾಯಶ್ಚಿತ್ತಂ ಕರೋಮ್ಯತಃ ।
ವಿಧಾಯ ಕಿಂ ಪುರಾಣಂ ಮೇ ಭವಿಷ್ಯತಿ ಚಿಕೀರ್ಷಿತಂ ।
ಅತಃ ಶಕ್ಯಂ ಕರಿಷ್ಯಾಮಿ ಪುರಾಣಾರ್ಥಂ ವಿನಿಶ್ಚಯಾತ್　　　॥ ೪೮೦ ॥

॥ ಪೌರಾಣಿಕ ಉವಾಚ ॥

ಯಥಾ ತತ್ಕೀರ್ತಯಿಷ್ಯಾಮಿ ಪುರಾಣಂ ಪಾಪನಾಶನಂ ।
ಯಥಾಜ್ಞಾನಂ ಯಥಾಶಕ್ತಿ ಯಥಾಶುದ್ಧಂ ಯಥಾವಿಧಿ ।
ಕಿಂ ವಾ ರುಚಿಪುರಾಣಂ ತೇ ಕೀರ್ತಯಿಷ್ಯೇ ತದೇವ ತು　　　॥ ೪೮೧ ॥

॥ ಗೌತಮ ಉವಾಚ ॥

ಸರ್ವಂ ರುಚಿಪುರಾಣಂ ಮೇ ವಕ್ತವ್ಯಂ ಕಿಂ ಹಿತಂ ವದ ।
ಶ್ರುತೇ ಯಸ್ಮಿನ್ಭಿದಾ ನೈವ ಜಾಯತೇ ತು ಹರೀಶಯೋಃ　　　॥ ೪೮೨ ॥

---

೪೭೯. ಎಲೈ ಪೂಜ್ಯನೇ, ನೀನು ನನಗೆ ಒಂದು ಪುರಾಣವನ್ನು ಓದಿ ಅರ್ಥವನ್ನು ವಿವರಿಸು, ಮತ್ತು ಜಾತಕರ್ಮ, ಚೌಲ, ಉಪನಯನಾದಿದ್ವಿಜರಿಗೆ ಯೋಗ್ಯವಾದ ಸಂಸ್ಕಾರಗಳನ್ನು ಮಾಡು.

೪೮೦. ಬ್ರಾಹ್ಮಣನಾಗಿ ಪುರಾಣವನ್ನು ಕೇಳುತ್ತೇನೆ, ಅನಂತರ ಪುರಾಣವಲ್ಲಿ ನನಗೆ ಇಷ್ಟಬಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ ಎಂದನು.

೪೮೧. ಪೌರಾಣಿಕನು ಹೇಳಿದನು:—ನನ್ನ ಜ್ಞಾನ, ನನ್ನ ಶಕ್ತಿ, ನನ್ನ ಶುದ್ಧಿ ಇದ್ದಷ್ಟುಮಟ್ಟಿಗೆ ವಿಧಿವತ್ತಾಗಿ ಪಾಪನಾಶಕವಾದ ಪುರಾಣವನ್ನು ಹೇಳುತ್ತೇನೆ. ಯಾವ ಪುರಾಣದಲ್ಲಿ ನಿನಗೆ ಇಷ್ಟವಿದೆ? ಅದನ್ನೇ ಹೇಳುತ್ತೇನೆ.

೪೮೨. ಗೌತಮನು ಹೇಳಿದನು:—ಎಲ್ಲಾ ಪುರಾಣವೂ ನನಗೆ ಇಷ್ಟವಾದುವುಗಳೇ ಹೇಳತಕ್ಕದ್ದೇನಿದೆ? ಹಿತವಾದುದನ್ನು ಹೇಳು. ಆದರೆ ನಾನು ಕೇಳುವ, ನೀನು ಹೇಳುವ ಪುರಾಣದಲ್ಲಿ ಶಿವವಿಷ್ಣುಗಳಿಗೆ ಭೇದಬುದ್ಧಿಯನ್ನು ಹೇಳಬಾರದು. ಆ ಬುದ್ಧಿ ನಮಗುಂಟಾಗಬಾರದು, ಅಂತಹದನ್ನು ಹೇಳು.

॥ ಪೌರಾಣಿಕ ಉವಾಚ ॥
ಕೌರ್ಮೋಕ್ತಂ ಯತ್ಪುರಾಣಂ ತದ್ದೇವಯೋರಭಿದಾಭಿದಂ ।
ಶೃಣೋತಿ ಯಸ್ತತ್ಪ್ರಥಮಂ ತಸ್ಯ ಪಾಪಂ ವಿನಶ್ಯತಿ ॥ ೪೮೩ ॥
ತಸ್ಯ ವಕ್ತಾತು ಯೋ ವಿಪ್ರಸ್ತಸ್ಯ ವಿಘ್ನಾಂತರಂ ಭವೇತ್ ।
ಶ್ರೋತವ್ಯಂ ಮನ್ಯತೇ ಪ್ರಾಯೋ ಯದಿ ಭಾರ್ಯಾ ವಿನಶ್ಯತಿ ॥ ೪೮೪ ॥
ಕಿಂ ಚೈಕಂ ದುಷ್ಕರಂ ವಕ್ಷ್ಯೇ ಶ್ರೋತುರ್ವಕ್ತುರನಿಂದಕಂ ।
ವ್ಯಾಖ್ಯಾತರಿ ಯದಿ ಪ್ರೀತಿರ್ಧರ್ಮದೇವಪ್ರಕಾಶಿನೀ ॥ ೪೮೫ ॥
ಆಚಾರದರ್ಶಕೇ ಪುಣ್ಯೇ ಕರ್ಮನೋಕ್ಷಾದಿದರ್ಶಕೇ ।
ತದಾ ತುಷ್ಟೋ ಮಹೇಶಃ ಸ್ಯಾದ್ವಿಷ್ಣುರಿಷ್ಟಫಲಪ್ರದಃ ।
ಪಿತರಸ್ತಾರಿತಾಸ್ತೇನ ಯಾಂತಿ ತೇ ಪರಮಾಂ ಗತಿಂ ॥ ೪೮೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ
ದಶಾಧಿಕಶತತಮೋಽಧ್ಯಾಯಃ

---

೪೮೩. ಪೌರಾಣಿಕನು ಹೇಳಿದನು :—ಕೂರ್ಮಪುರಾಣದಲ್ಲಿ ಶಿವಹರಿಗಳಿಗೆ ಅಭೇದವನ್ನು ಹೇಳಿದೆ. ಅದನ್ನು ಮೊದಲು ಕೇಳಿದರೆ ಅವನ ಪಾಪವು ನಾಶವಾಗುತ್ತದೆ.

೪೮೪. ಅದನ್ನು ಹೇಳುವವನಿಗೆ ವಿಘ್ನಗಳು ಬರುತ್ತವೆ. ಕೇಳುವವನ ಹೆಂಡತಿಯು ಸಾಧಾರಣವಾಗಿ ಮೃತಳಾಗುತ್ತಾಳೆ.

೪೮೫. ಕೇಳತಕ್ಕವನಿಗೂ, ಹೇಳತಕ್ಕವನಿಗೂ, ದೂಷಕವಲ್ಲದ ಒಂದು ಕಷ್ಟವಾದ ವಿಷಯವನ್ನು ಹೇಳುತ್ತೇನೆ. ಅರ್ಥ ಹೇಳುವವನಲ್ಲಿ ಪ್ರೀತಿಯಿಟ್ಟರೆ ಅದು ಧರ್ಮದೇವನನ್ನು ತೋರಿಸುತ್ತದೆ.

೪೮೬. ಪುಣ್ಯರೂಪನಾದ, ಆಚಾರವನ್ನು ತೋರಿಸುವ ಕರ್ಮ, ಮೋಕ್ಷ, ಮೊದಲಾದುವುಗಳನ್ನು ತೋರಿಸುವ, ಆತನಲ್ಲಿ ಶ್ರವಣಮಾಡುವವನು ಪ್ರೀತಿಯಿಟ್ಟಿದ್ದರೆ ಆಗ ಮಹೇಶನು ಸಂತೋಷಪಡುತ್ತಾನೆ. ವಿಷ್ಣುವು ಅದರ ಫಲವನ್ನು ಕೊಡುತ್ತಾನೆ. ಅವನ ಪಿತೃಗಳು ಅವನಿಂದ ನರಕದಿಂದ ದಾಟಿಸಲ್ಪಟ್ಟವರಾಗಿ ಉತ್ತಮ ಗತಿಯನ್ನು ಹೊಂದುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ನೂರ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಏಕಾದಶಾಧಿಕಶತತಮೋಽಧ್ಯಾಯಃ

॥ ಶ್ರೀರಾಮ ಉವಾಚ ॥

**ಕಥಂ ಪಾತಕಸಂಘಾತಸಂಕ್ರಮೋ ಬ್ರಾಹ್ಮಣಾಧಮೋ ।**
**ಪುರಾಣಜ್ಞಃ ಕಥಂ ವ್ಯಾಖ್ಯಾಂ ಚಕಾರ ದ್ವಿಜಸತ್ತಮ ॥ ೧ ॥**

॥ ಶಂಭುರುವಾಚ ॥

**ಅಧ್ಯಾಪನೇ ಚಾಧ್ಯಯನೇ ಜಾಯತೇ ಚಾಥ ಸಂಗಮಃ ।**
**ಸಂಗತೌ ವತ್ಸರಂ ರಾಮ ಯಾತಿ ಪಾತಕಿಪಾತಕಂ ॥ ೨ ॥**

**ಪುರಾಣಜ್ಞೇ ತು ಕಾಕುತ್ಸ್ಥ ಸರ್ವತತ್ತ್ವಾರ್ಥವೇದಿನಿ ।**
**ಅಪಿ ಪಾತಕಸಂದೋಹಚೀರ್ಣಪಾಪಂ ಪ್ರಣಶ್ಯತಿ ॥ ೩ ॥**

---

## ನೂರಹನ್ನೊಂದನೆಯ ಅಧ್ಯಾಯವು

೧. ಶ್ರೀರಾಮನು ಹೇಳಿದನು :—ಮಹಾ ಪಾಪಗಳ ಗುಂಪಿನಿಂದ ಕೂಡಿರುವ ಆ ನೀಚಬ್ರಾಹ್ಮಣನಿಗೆ ಪೌರಾಣಿಕನು ಹೇಗೆತಾನೇ ಪುರಾಣವನ್ನು ಹೇಳಿ ಅರ್ಥವನ್ನು ವಿವರಿಸಿದನು ?

೨. ಶಂಭುವು ಹೇಳಿದನು :—ಅಧ್ಯಯನವನ್ನು ಹೇಳಿಕೊಡುವುದು, ಹೇಳಿಸಿಕೊಳ್ಳುವುದು, ಈ ವಿಷಯದಲ್ಲಿ ಒಬ್ಬರಿಗೊಬ್ಬರಿಗೆ ಸಮಾಗವುಂಟಾಗುತ್ತದೆ. ಈ ಸೇರುವಿಕೆಯು ವರ್ಷಪರ್ಯಂತರವಾದರೆ ಪಾಪಿಯ ಪಾಪವೆಲ್ಲವೂ ನಾಶವಾಗುತ್ತದೆ.

೩. ಎಲ್ಲಾ ಶಾಸ್ತ್ರಾರ್ಥಗಳನ್ನೂ ಬಲ್ಲ ಪುರಾಣಿಕನ ಸಹವಾಸವು ಒಂದು ವರ್ಷ ಪರ್ಯಂತವಿದ್ದರೆ ಪಾಪಗಳೆಲ್ಲವೂ ಒಂದಾಗಿ ಗುಂಪು ಸೇರಿಕೊಂಡು ಪಾಪ ಮಾಡಿದರೂ ಆ ಪಾಪವು ನಾಶವಾಗುತ್ತದೆ.

ಪ್ರಭೂತವನ್ಹಿನಾಶೇ ಹಿ ದ್ರುಮರಾಶಿರ್ವ್ಯಥೈವ ಹಿ ।
ಶಲಭೋ ದೀಪನಾಶಾಯ ವನ್ಹಿನಾಶಾಯ ನ ಪ್ರಭುಃ ॥ ೪ ॥

ಕೃತ್ಸ್ನಂ ಪಾಪಂ ತಥಾನ್ಯೇಷಾಂ ನಾಶನಾಯ ಪುರಾಣಿಕಃ ।
ಭೂತಾದಿಗ್ರಸ್ತಮರ್ತ್ಯಾನಾಂ ಭೂತಾದಿಭಯಮೋಚಕಃ ॥ ೫ ॥

ಸಮಂತ್ರವಾನಪನಯೇದ್ವ್ಯಥಾ ನ ಸ್ವಯಮಾತುರಃ ।
ಪೌರಾಣಿಕಸ್ತಥಾ ಪಾಪಂ ನ ಕಿಂಚಿತ್ಪ್ರಾಪ್ತುಮರ್ಹತಿ ॥ ೬ ॥

ಆತ್ಮನಾ ಚ ಕೃತಂ ಪಾಪಮನ್ಯೈರಪಿ ಚ ಯತ್ಕೃತಂ ।
ಪುರಾಣಜ್ಞೋ ನಾಶಯತಿ ತ್ವತಿದುಷ್ಟಂ ಸ್ವಕರ್ಮ ವಾ ॥ ೭ ॥

ಭವಾನೀಶೆ ಹೃಷೀಕೇಶೇ ಸಮವೃತ್ತಿರ್ವಿವೇಕವಾನ್ ।
ಲೋಕವೇದಕ್ರಿಯಾವೇತ್ತಾ ರುದ್ರಜಾಪ್ಯನತಿಸ್ಪೃಹಃ ॥ ೮ ॥

---

೪. ಮರಗಳ ರಾಶಿಯನ್ನು ಹೆಚ್ಚಾದ ಬೆಂಕಿಯ ಮೇಲೆ ಹಾಕಿದರೆ ಆ ಬೆಂಕಿಯು ನಾಶವಾಗುತ್ತದೆ. ದೀಪದ ಹುಳುವು ದೀಪವನ್ನು ನಾಶಮಾಡೀತೇ ಹೊರತು ಬೆಂಕಿಯನ್ನು ನಾಶಮಾಡಲಾರದು.

೫. ಆರೀತಿಯಾಗಿ ಪುರಾಣಿಕನು ಇತರರ ಪಾಪಗಳನ್ನು ನಾಶಮಾಡುತ್ತಾನೆ. ಪಿಶಾಚಾದಿಗಳು ಬಾಧಿಸುತ್ತಿದ್ದರೂ, ಅದರ ಬಾಧೆಯನ್ನು ಈತನು ನಾಶಮಾಡುತ್ತಾನೆ.

೬. ರೋಗಿಯಾದವನು ಮಂತ್ರಜ್ಞನಾದರೂ ತನಗೆ ತಾನು ಏನೂ ಮಾಡಿಕೊಳ್ಳಲಾರನು. ಹಾಗೆ ಪೌರಾಣಿಕನು ಪಾಪವನ್ನು ಹೊಂದುವುದಿಲ್ಲ.

೭. ಪುರಾಣಜ್ಞನು ತಾನು ಮಾಡಿದ, ಇತರರು ಮಾಡಿದ ಪಾಪಗಳನ್ನೂ ನಾಶಮಾಡುತ್ತಾನೆ. ತಾನು ಮಾಡಿಕೊಂಡಿರುವ ಪಾಪವು ಬಹಳ ಕೆಟ್ಟದಾದರೂ ಅದನ್ನು ತಾನೇ ನಾಶಮಾಡಿಕೊಳ್ಳಬಲ್ಲನು.

೮. ವಿವೇಕವುಳ್ಳ ಅವರು ಶಿವವಿಷ್ಣುಗಳಲ್ಲಿ ಒಂದೇರೀತಿಯಿರುತ್ತಾರೆ ಪುರಾಣಿಕನು ಲೌಕಿಕ ವೈದಿಕವೆರಡರಲ್ಲೂ ತಿಳುವಳಿಕೆಯುಳ್ಳವನಾಗಿ, ರುದ್ರನನ್ನು ಜಪಿಸುವವನಾಗಿ, ಹೆಚ್ಚು ಆಸೆಯನ್ನು ಬಿಟ್ಟಿರಬೇಕು.

**ತುಷ್ಟಃ ಶಾಂತಃ ಕ್ರಿಯಾದಕ್ಷಃ ಪ್ರಭೂತೋದ್ಯೋಗಕೃದ್ವಶೀ ।**
**ಯಥೈವ ತೇ ಪುರಾಣಜ್ಞೋ ವಸಿಷ್ಠೋ ಭಗವಾನೃಷಿಃ ॥ ೯ ॥**

**ನಿಯೋಗಾತ್ತವ ಭೂಪಾಲ ಹ್ಯಯೋಧ್ಯಾಯಾಮಧಿಷ್ಠಿತಃ ।**
**ಅಪಾಲಯದ್ಭುವಂ ಕೃತ್ಸ್ನಾಂ ತ್ವಾಂ ಚ ರಕ್ಷಸ್ಸಮಾಪತತ್ ॥ ೧೦ ॥**

**ಸ ಚ ಶುಕ್ರೋಪದೇಶೇನ ರಾಕ್ಷಸಸ್ತ್ವಾಮಥಾಭ್ಯಗಾತ್ ।**
**ಮೃಗಾಸಕ್ತಂ ಹನಿಷ್ಯಾಮಿ ನಾನ್ಯಥಾವಸರಸ್ತ್ವಿತಿ ॥ ೧೧ ॥**

**ಅಥ ವಿಪ್ರೋ ವಿದಿತ್ವೈತದ್ವಸಿಷ್ಠಸ್ತ್ವದ್ಧಿತಪ್ರಿಯಃ ।**
**ಸುಪ್ತಂ ಪ್ರಮತ್ತಂ ಕಾಕುತ್ಸ್ಥಂ ರಕ್ಷೋ ಹಂತಿ ನ ಸಂಶಯಃ ॥ ೧೨ ॥**

**ಬ್ರಹ್ಮಾವಾಪ್ತವರಂ ತದ್ಧಿ ಮಯಾ ಕಾರ್ಯಂ ನಿವಾರಣಂ ।**
**ಇತಿ ಸಂಚಿಂತ್ಯ ವಿಪ್ರರ್ಷಿಃ ಸೇನಾಮಾದಾಯ ನಿರ್ಗತಃ ॥ ೧೩ ॥**

---

೯. ಯಾವಾಗಲೂ ಸಂತೋಷದಿಂದಿರಬೇಕು. ಶಾಂತಿಯಿಂದ ಇರಬೇಕು. ಕೆಲಸದಲ್ಲಿ ಶಕ್ತನಾಗಿರಬೇಕು. ಬಹಳ ಕೆಲಸವನ್ನು ಮಾಡತಕ್ಕವನಾಗಿರಬೇಕು. ಇಂದ್ರಿಯ ನಿಗ್ರಹವು ಉಳ್ಳವನಾಗಿರಬೇಕು. ಒಟ್ಟಿನಲ್ಲಿ ನಿನ್ನ ಪೌರಾಣಿಕನಾದ ಪೂಜ್ಯನಾದ ವಸಿಷ್ಠನಿರುವಂತಿರಬೇಕು.

೧೦. ಎಲೈ ರಾಮನೇ, ನಿನ್ನ ಅಪ್ಪಣೆಯಂತೆ ಅಯೋಧ್ಯೆಯಲ್ಲಿದ್ದು ಅವನೇ ಲೋಕವೆಲ್ಲವನ್ನೂ ತಾನೇ ಆಳಿದನು. ನಿನ್ನನ್ನು ಕೊಲ್ಲಲು ಒಬ್ಬ ರಾಕ್ಷಸನು ಬಂದನು.

೧೧. ಆ ರಾಕ್ಷಸನು ಶುಕ್ರನ ಉಪದೇಶದಿಂದ ನಿನ್ನನ್ನು ಕೊಲ್ಲುವುದಕ್ಕೆ ಬಂದನು. ಅವನಿಗೆ ನಿನ್ನನ್ನು ಕೊಲ್ಲಲು ಸಮಯಸಿಕ್ಕಿದುದರಿಂದ ಬೇಟೆಗೆ ಬಂದಾಗ ಕೊಲ್ಲಬೇಕು. ಅದಿಲ್ಲದಿದ್ದರೆ ಸಮಯವಿಲ್ಲವೆಂದು ಸಮಯವನ್ನು ಕಾಯುತ್ತಿದ್ದನು.

೧೨-೧೩. ನಿನ್ನ ಹಿತವನ್ನು ಕೋರುವ ಆ ಬ್ರಹ್ಮರ್ಷಿಯಾದ ವಸಿಷ್ಠನು ಇದನ್ನು ತಿಳಿದು ಮಲಗಿರುವಾಗಲೋ, ಉದಾಸೀನದಿಂದಿರುವಾಗಲೋ ಆ ರಾಕ್ಷಸನು ಕೊಂದುಬಿಡುವನು ಸಂಶಯವಿಲ್ಲ. ಬ್ರಹ್ಮನು ಕೊಟ್ಟಿರುವ ವರದಲ್ಲಿ ಈ ರಾಮನಿಂದ ಅನೇಕ ರಾಕ್ಷಸರ ನಾಶವಾಗಬೇಕಾಗಿದೆ. ಆದ್ದರಿಂದ ನಾನು ಅದಕ್ಕೆ ಅವಕಾಶ ಕೊಡಬಾರದು ಎಂದು ಯೋಚಿಸಿ ಆ ವಸಿಷ್ಠನು ಸೇನೆಯನ್ನು ತೆಗೆದುಕೊಂಡು ಅವನನ್ನು ಕೊಲ್ಲಲು ಹೊರಟನು.

ರಕ್ಷೋ ಹನ್ತುಮಶಕ್ತಸ್ತು ಮೃತ್ಯುಹೀನಂ ತತೋ ಮುನಿಃ ।
ಸ್ವಯಂ ಚ ರಾಕ್ಷಸೋ ಭೂತ್ವಾ ವಾಕ್ಯಮಾಹ ಮಹಾಮುನಿಃ ॥ ೧೪ ॥

ಕಿಮರ್ಥಮಾಗತೋಽಸೀಹ ವನಂ ಮುನಿನಿಷೇವಿತಂ ।
ಸ ಆಹ ರಾಜಾ ರಕ್ಷೋಘ್ನಸ್ತಮಹಂ ಹನ್ತುಮಾಗತಃ ॥ ೧೫ ॥

ಮುನಿರಪ್ಯಾಹ ಕಿಂ ತೇನ ಜೀವಿತೇನ ಮೃತೇನ ವಾ ।
ಭುಕ್ತ್ವಾಮಿಷಂ ಮದೀಯಂ ತು ಯುದ್ಧಂ ಕೃತ್ವಾ ಜಯಂ ವ್ರಜ ॥ ೧೬ ॥

॥ ರಾಕ್ಷಸ ಉವಾಚ ॥

ಕಥಂ ತ್ವಂ ರಾಕ್ಷಸೋ ಮಹ್ಯಂ ಭಕ್ಷಣಾಯ ಭವಿಷ್ಯಸಿ ।
ವಸಿಷ್ಠೋಽಪ್ಯಥ ಮಾನುಷ್ಯಮಾಸ್ಥಾಯ ವಿಯತಿ ಸ್ಥಿತಃ ॥ ೧೭ ॥

ನಿಷ್ಠೀವ್ಯ ಮಸ್ತಕೇ ತಸ್ಯ ಮುಷ್ಟಿನಾ ತಮತಾಡಯತ್ ।
ತಾಡಿತೋ ರಾಕ್ಷಸಸ್ತೇನ ವ್ಯದ್ರಾವಯದೃಷಿಶ್ಚ ತಂ ॥ ೧೮ ॥

---

೧೪. ಸಾವಿಲ್ಲದಿರುವ ಆ ರಾಕ್ಷಸನನ್ನು ಆ ಋಷಿಯು ಕೊಲ್ಲಲಾರದೆ ತಾನೂ ರಾಕ್ಷಸನಾಗಿ ಅವನನ್ನು ಕುರಿತು ಇಂತೆಂದನು.

೧೫. ಎಲೈ ರಾಕ್ಷಸನೇ, ನೀನೇಕೆ ಮುನಿಗಳಿರುವ ಈ ಕಾಡಿಗೆ ಬಂದೆ ಎನ್ನಲು ಆ ರಾಕ್ಷಸನು, ಈ ರಾಮನೆಂಬ ರಾಜನು ರಾಕ್ಷಸರನ್ನೆಲ್ಲಾ ಕೊಂದುಹಾಕುತ್ತಾನೆ. ಆದ್ದರಿಂದ ಅವನನ್ನು ಕೊಲ್ಲಲು ಬಂದೆನು ಎಂದನು.

೧೬. ಆಗ ವಸಿಷ್ಠನು ಅವನು ಸಾಯಲಿ ಇರಲಿ ಅದರಿಂದ ನಿನಗೇನು? ನನ್ನೊಡನೆ ಯುದ್ಧಮಾಡಿ ಜಯಶಾಲಿಯಾಗಿ ನನ್ನ ಮಾಂಸವನ್ನು ತಿನ್ನು ಎಂದನು.

೧೭. ರಾಕ್ಷಸನು ಹೇಳಿದನು :— ನೀನೂ ರಾಕ್ಷಸನಾದುದರಿಂದ ನಾನು ತಿನ್ನಲು ಸಾಧ್ಯವಿಲ್ಲವೆನ್ನಲು, ಆಗ ವಸಿಷ್ಠನು ಮನುಷ್ಯನಾಗಿ ಅಂತರಿಕ್ಷದಲ್ಲಿಯೇ ನಿಂತನು.

೧೮. ಹೀಗೆ ಮನುಷ್ಯಾಕಾರವನ್ನು ಹೊಂದಿದ ವಸಿಷ್ಠನು ಆ ರಾಕ್ಷಸನ ತಲೆಯ ಮೇಲೆ ಉಗಿದು ಮುಷ್ಟಿಯಿಂದ ಗುದ್ದಿದನು. ಏಟುತಿಂದು ಆ ರಾಕ್ಷಸನೂ ಆ ಋಷಿಯನ್ನು ಓಡಿಸಿಕೊಂಡು ಬಂದನು.

**ಪಲಾಯಮಾನಾವನ್ಯೋನ್ಯಂ ಜಲಧಿಂ ತು ಗತಾವುಭೌ ।**
**ತತ್ರಸ್ಥೇನ ಗ್ರಹೇಣಾಸೌ ಗೃಹೀತೋ ರಾಕ್ಷಸಸ್ತದಾ ॥ ೧೯ ॥**

**ಮುನಿಃ ಪುನರಯೋಧ್ಯಾಯಾಂ ಪೂರ್ವವತ್ಸಮತಿಷ್ಠತ ॥ ೨೦ ॥**

**॥ ಶಂಭುರುವಾಚ ॥**

**ತಸ್ಮಾತ್ಸ್ವಾಭಿಮತಂ ಕುರ್ಯಾತ್ಪುರಾಣಜ್ಞೋ ವಿಮತ್ಸರಃ ।**
**ಶ್ರವಣಸ್ಯ ವಿಧಾನಂ ಚ ಕಥಯಾಮಿ ಶುಭಂ ಶೃಣು ॥ ೨೧ ॥**

**ಶುಕ್ಲಪಕ್ಷೇ ದಿನೇ ಶುದ್ಧೇ ವಾರನಕ್ಷತ್ರಯೋಗತಃ ।**
**ಕರಣೇ ಚಾಪಿ ಲಗ್ನೇ ಚ ಗ್ರಹತಾರಾಬಲಾನ್ವಿತೇ ॥ ೨೨ ॥**

**ಅಮೂಢೇ ನ ಗ್ರಹೇ ಬಾಲೇ ನ ಚ ವೃದ್ಧೌ ಗುರೌಸ್ಥಿತೇ ।**
**ನ ಕೃಷ್ಣಪಕ್ಷೇ ಗ್ರಹಣೇ ನ ಚ ನಾಸ್ತಿಕಸಂನಿಧೌ ॥ ೨೩ ॥**

**ಪೂರ್ವೋಕ್ತಲಕ್ಷಣೋಪೇತಂ ಪುರಾಣಂ ಶೃಣುಯಾದಿತಿ ।**
**ಶುದ್ಧಗೇಹೇಽಥವಾ ಶುದ್ಧವೇದಿಕಾಯಾಂ ಮಠೇಽಥವಾ ॥ ೨೪ ॥**

---

೧೯-೨೦. ಇಬ್ಬರೂ ಓಡುತ್ತಾ ಸಮುದ್ರದ ಹತ್ತಿರಕ್ಕೆ ಹೋದರು. ಅಲ್ಲಿದ್ದ ಒಂದು ಗ್ರಹವು ಆ ರಾಕ್ಷಸನನ್ನು ಹಿಡಿದುಕೊಂಡಿತು. ಈ ವಸಿಷ್ಠಋಷಿಯು ಮತ್ತೆ ಅಯೋಧ್ಯೆಗೆ ಬಂದು ಮೊದಲಿನಂತೆಯೇ ಇದ್ದನು.

೨೧. ಆದ್ದರಿಂದ ಪುರಾಣಜ್ಞನು ಹೊಟ್ಟೆಕಿಚ್ಚು ಪಡದೆ ತನ್ನ ಇಷ್ಟಾರ್ಥವನ್ನು ಸಾಧಿಸಿಕೊಳ್ಳಬೇಕು. ಪುರಾಣಶ್ರವಣದ ರೀತಿಯನ್ನು ಹೇಳುತ್ತೇನೆ ಅದನ್ನು ಕೇಳು.

೨೨-೨೩. ಶುಕ್ಲಪಕ್ಷದಲ್ಲಿ ವಾರ, ನಕ್ಷತ್ರ, ಕರಣ, ಲಗ್ನ, ತಿಥಿ ಇವು ಶುದ್ಧವಾಗಿರಬೇಕು ಮತ್ತು ಚಂದ್ರಬಲ ತಾರಾಬಲಗಳು ಸರಿಯಾಗಿರಬೇಕು. ಗ್ರಹಗಳು ಮೂಢರಾಗಿರಕೂಡದು, ಗ್ರಸ್ತರಾಗಿರಬಾರದು, ಬಾಲರಾಗಿರಬಾರದು, ಗುರುವು ಉಚ್ಚನಾಗಿರಬೇಕು, ಕೃಷ್ಣಪಕ್ಷವಾಗಿರಬಾರದು, ಗ್ರಹಣವಾಗಿರಬಾರದು, ನಾಸ್ತಿಕರಿರಬಾರದು, ಈ ರೀತಿಯಾಗಿರುವಾಗ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ಪುರಾಣವನ್ನು ಕೇಳಬೇಕು.

೨೪—೨೬. ಶುದ್ಧವಾದ ಮನೆ, ಶುದ್ಧವಾದ ಜಗುಲಿ, ಮಠ, ನದೀತೀರ, ದೇವಸ್ಥಾನ, ಸಭೆಯ ಮಂಟಪ, ದಾರಿಯಲ್ಲಿರುವ ಚಾವಡಿ, ಚೆನ್ನಾಗಿರುವ ಛತ್ರ,

ನದೀತೀರೇ ದೇವಗೃಹೇ ಸಭಾಮಂಟಪ ಏವ ಚ ।
ರಥ್ಯಾಮುಖೇಽಥವಾ ರಮ್ಯೇ ಪುಣ್ಯಶಾಲಾಸು ರಾಘವ ॥ ೨೫ ॥

ಸ್ವಯಂ ನಮಸ್ಯ ವಿಪ್ರೇಂದ್ರಾನ್ಪುರಾಣಜ್ಞಂ ವಿಶೇಷತಃ ।
ಆಸನಂ ಕಲ್ಪಿತಂ ಕುರ್ಯಾದೂರ್ಧ್ವಂ ಸರ್ವವಿಶೇಷಿತಂ ॥ ೨೬ ॥

ಏಹಿ ಧರ್ಮಾಸನಮಿತಿ ವಕ್ತವ್ಯಂ ಸ್ಯಾದನಿಷ್ಠುರಂ ।
ಪುರಾಣಪ್ರಕ್ರಮದಿನೇ ಯತ್ಕಾರ್ಯಂ ತದುದೀರಯೇ ॥ ೨೭ ॥

ವ್ಯಾಖ್ಯಾತಾರಂ ಪುರಾಣಸ್ಯ ವಸ್ತ್ರಾದ್ಯೈಃ ಪರಿಪೂಜ್ಯ ಚ ।
ಶುಭಾನಿ ದತ್ವಾ ವಸ್ತ್ರಾಣಿ ಸೂಕ್ಷ್ಮಾಣಿ ಚ ನವಾನಿ ಚ ॥ ೨೮ ॥

ಕರಕಂಠವಿಭೂಷಾದಿ ಪಾತ್ರಮಾಸನಮೇವ ಚ ।
ಗಂಧಪುಷ್ಪಾಕ್ಷತೈಃ ಪೂಜ್ಯ ತಾಂಬೂಲಂ ವಿನಿವೇದ್ಯ ಚ ॥ ೨೯ ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ೩೦ ॥

---

ಮುಂತಾದುವುಗಳು. ಇಂತಹವುಗಳಲ್ಲಿ ಪುರಾಣವನ್ನು ಹೇಳಿಸಬೇಕು. ಮೊದಲು ಬ್ರಾಹ್ಮಣರನ್ನೂ ಪೌರಾಣಿಕನನ್ನೂ ನಮಸ್ಕರಿಸಬೇಕು. ಆ ಪುರಾಣ ಹೇಳುವವನು ಕುಳಿತುಕೊಳ್ಳಲು ಎಲ್ಲರಿಗಿಂತಲೂ ಎತ್ತರವಾದ ಜಾಗವನ್ನು ಮಾಡಬೇಕು.

೨೭. ಪುರಾಣಿಕನನ್ನು ಕುರಿತು ಈ ಧರ್ಮಾಸನಕ್ಕೆ ಬಾ ಎಂಬುದಾಗಿ ನಮ್ರತೆಯಿಂದ ಕರೆಯಬೇಕು. ಪುರಾಣವನ್ನು ಮೊದಲುಮಾಡುವ ದಿನದಲ್ಲಿ ಏನು ಮಾಡಬೇಕೆಂಬುದನ್ನು ಹೇಳುತ್ತೇನೆ.

೨೮—೩೦. ಪುರಾಣ ಹೇಳತಕ್ಕವನಿಗೆ ಹೊಸದಾಗಿ ಚೆನ್ನಾಗಿರುವ ಬಟ್ಟೆಗಳನ್ನು ಕೊಟ್ಟು ಗೌರವಿಸಬೇಕು. ಕೈ, ಕತ್ತುಗಳಿಗೂ ಆಭರಣವನ್ನು ಕೊಡಬೇಕು. ಪಾತ್ರೆಗಳನ್ನೂ ಪೀಠವನ್ನೂ ಕೊಡಬೇಕು. ಗಂಧ, ಹೂ, ಅಕ್ಷತೆಗಳಿಂದ ಪೂಜೆ ಮಾಡಿ ತಾಂಬೂಲವನ್ನು ಕೊಡಬೇಕು. ಅನಂತರ ಬೆಳ್ಳಗಿರುವ ಬಟ್ಟೆಯನ್ನು ಹೊದೆದಿರುವ, ಚಂದ್ರನಂತೆ ಬೆಳ್ಳಗಿರುವ, ನಾಲ್ಕು ಭುಜಗಳುಳ್ಳ, ಪ್ರಸನ್ನವಾದ ಮುಖವುಳ್ಳ ವಿಷ್ಣುವನ್ನು ಸಕಲ ವಿಘ್ನಗಳ ನಾಶಕ್ಕಾಗಿ ಧ್ಯಾನಿಸಬೇಕು.

**ಸಭಾಸದಶ್ಚ ಸಂಪೂಜ್ಯ ಗಣೇಶಂ ಪ್ರಾರ್ಥಯೇತ್ತತಃ ।**
**ಓಂ ನಮ ಇತ್ಯಾದಿಮಂತ್ರೇಣ ಪೂಜನಂ ಭಾರತೀನುತಿಃ ॥ ೩೧ ॥**

**ಪ್ರಾತಃಕಾಲೇ ಪುರಾಣಸ್ಯ ಪ್ರಕ್ರಮಂ ಪ್ರಾರಭೇದಿತಿ ।**
**ಉಪಕ್ರಮದಿನೇ ರಾಮ ತ್ರಿಪಂಚದಶ ವಾ ಶುಭಾಃ ॥ ೩೨ ॥**

**ಶ್ಲೋಕಾ ದ್ವಿತೀಯೇ ದಿವಸೇ ತತೋ ದ್ವಿಗುಣತಶ್ಶುಭಾಃ ।**
**ತೃತೀಯದಿವಸೇ ರಾಮ ತತಶ್ಚಾಧಿಕಮಿಷ್ಯತೇ ॥ ೩೩ ॥**

**ದಿನಾನಾಮವ್ಯವಚ್ಛೇದಾದ್ವ್ಯಾಖ್ಯಾನಂ ಶ್ರವಣಂ ತಥಾ ।**
**ವ್ಯವಸ್ಥಿತಿರ್ಯದಾ ಜಾತಾ ತದಾ ಪೌರಾಣಿಕಂ ಗುರುಂ ॥ ೩೪ ॥**

**ತಾಂಬೂಲಾದಿ ಪ್ರದಾಯಾಥ ಪರೇದ್ಯುಃ ಶೃಣುಯಾದಪಿ ।**
**ಪುರಾಣಮೇವಂ ಶ್ರೋತವ್ಯಂ ದೈನಂದಿನಮಿತಿ ಶ್ರುತಿಃ ॥ ೩೫ ॥**

---

೩೧. ಸಭಾಪೂಜೆಯನ್ನು ಮಾಡಿ ಅನಂತರ ಗಣೇಶನ ಪ್ರಾರ್ಥನೆಯನ್ನು ಮಾಡಬೇಕು. ಆ ಗಣೇಶನನ್ನು ಅವನ ಮಂತ್ರದ ಹಿಂದಕ್ಕೆ ಓಂಕಾರವನ್ನು ಮುಂದಕ್ಕೆ ನಮಃ ಶಬ್ದವನ್ನು ಸೇರಿಸಿ ಪೂಜಿಸಬೇಕು.

೩೨-೩೩. ಪುರಾಣದ ಪ್ರಾರಂಭವನ್ನು ಬೆಳಗಿನ ಹೊತ್ತು ಮಾಡಬೇಕು. ಪ್ರಾರಂಭದ ದಿನದಲ್ಲಿ ಮೂರು, ಐದು ಅಥವಾ ಹತ್ತು ಶ್ಲೋಕಗಳನ್ನು ಹೇಳಿ ಅವುಗಳಿಗೆ ಅರ್ಥ ವಿವರಣೆಯನ್ನು ಹೇಳಬೇಕು. ಅದು ಶುಭಕರವು. ಎರಡನೆಯ ದಿನದಲ್ಲಿ ಅದಕ್ಕೆರಡರಷ್ಟು ಹೇಳಬೇಕು. ಮೂರನೆಯ ದಿನದಲ್ಲಿ ಅದಕ್ಕೂ ಹೆಚ್ಚಾಗಿ ಹೇಳಬೇಕು.

೩೪-೩೫. ಒಂದು ದಿನವೂ ಬಿಡದೆ ಪುರಾಣವನ್ನು ಹೇಳುತ್ತಾ ವಿವರಿಸುತ್ತಿರಬೇಕು. ಅದನ್ನು ಪ್ರತಿದಿನವೂ ಬಿಡದೆ ಕೇಳುತ್ತಿರಬೇಕು. ಒಂದು ಘಟ್ಟಕ್ಕೆ ನಿಂತಾಗ ಆ ಗುರುವಾದ ಪುರಾಣಿಕನನ್ನು ತಾಂಬೂಲ ಮುಂತಾದುವನ್ನು ಕೊಟ್ಟು ಗೌರವಿಸಿ ಮರುದಿನದಿಂದ ಪುನಃ ಕೇಳಬೇಕು. ಈರೀತಿಯಾಗಿ ಪುರಾಣವನ್ನು ಪ್ರತಿದಿನವೂ ಕೇಳಬೇಕೆಂದು ಶ್ರುತಿಯಿರುತ್ತದೆ.

ವ್ರತರೂಪೇಣ ಯಃ ಕಶ್ಚಿತ್ಪುರಾಣಂ ಶೃಣುಯಾನ್ನರಃ ।
ಯದ್ದೈವಂ ತತ್ಪುರಾಣಂ ತು ತತ್ರ ಯಾತಿ ನ ಸಂಶಯಃ ॥ ೩೬ ॥

ಪುರಾಣಂ ಶ್ರೋತುಕಾಮೋ ಯಃ ಶ್ಲೋಕಶ್ಚೈಕೋಽಪಿ ಚೇಚ್ಛ್ರುತಃ ।
ತದ್ದಿನೇ ತು ಕೃತಂ ಪಾಪಂ ನಾಶಯೇತ್ತು ನ ಸಂಶಯಃ ॥ ೩೭ ॥

ಏವಂ ಪುರಾಣಂ ಶೃಣುಯಾಚ್ಚ ಯಸ್ತು
ಸ ಬ್ರಹ್ಮಹತ್ಯಾಕೃತಪಾಪಬಂಧಾತ್ ।
ಸುರಾಪೀತಿಃ ಸ್ವರ್ಣಹರಶ್ಚ ರಾಮ
ಗುರ್ವಂಗನಾಗಶ್ಚ ವಿಮುಕ್ತಿಮೇತಿ ॥ ೩೮ ॥

ಪಾಪಾನಿ ಚಾನ್ಯಾನಿ ಕೃತಾನಿ ಪುಂಭಿಃ
ಸರ್ವಾಣಿ ನಶ್ಯಂತಿ ಪುರಾಕೃತಾನಿ ।
ಇಹಾಪಿ ಯಾನ್ಯಬ್ದಶತಾರ್ಜಿತಾನಿ
ಶ್ರೋತುರ್ವಿನಶ್ಯಂತಿ ತಥಾ ಚ ವಕ್ತುಃ ॥ ೩೯ ॥

---

೩೬. ಯಾರಾದರೂ ಪುರಾಣವನ್ನು ವ್ರತರೂಪದಿಂದ ಹೇಳಿಸಿ ಕೇಳಿದರೆ, ಆ ಪುರಾಣವು ಯಾವ ದೇವರನ್ನು ಹೊಂದುತ್ತದೆಯೋ ಎಂದರೆ ಹೇಳುತ್ತದೆಯೋ ಆ ದೇವರನ್ನೇ ಈತನು ಕೊನೆಗೆ ಹೊಂದುತ್ತಾನೆ.

೩೭. ಪುರಾಣವನ್ನು ಕೇಳಲಿಚ್ಛಿಸುವವನು ಒಂದು ಶ್ಲೋಕವನ್ನು ಕೇಳಿದರೂ ಕೂಡ ಆ ಶ್ಲೋಕವು ಆ ದಿನ ಮಾಡಿದ ಪಾಪವನ್ನು ನಾಶಮಾಡುತ್ತದೆ ಸಂಶಯವಿಲ್ಲ.

೩೮. ಎಲೈ ರಾಮನೇ, ಈರೀತಿಯಾಗಿ ನಿಯಮದಿಂದ ಪುರಾಣವನ್ನು ಕೇಳಿದವನು ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುದಾರಗಮನವೇ ಮುಂತಾದ ಮಹಾಪಾತಕಗಳಿಂದ ಮುಕ್ತನಾಗುತ್ತಾನೆ.

೩೯. ಈರೀತಿ ನಿಯಮದಿಂದ ಕೇಳುವವನ ಮತ್ತು ಹೇಳುವವನ ಹಿಂದಿನ ಜನ್ಮಗಳ ಪಾಪಗಳೂ, ಈಗ ನೂರಾರು ವರ್ಷಗಳಿಂದ ಮಾಡಿರುವ ಪಾಪಗಳೂ ನಾಶವಾಗುತ್ತವೆ.

ಕಲೌ ಸಮಸ್ತವಿಪ್ರಾಣಾಂ ಸರ್ವಜ್ಞತ್ವಂ ನ ವಿದ್ಯತೇ ।
ವಿಗುಣಾಪಿ ತತೋ ವ್ಯಾಖ್ಯಾ ಫಲದಾ ದಾನಕರ್ಮವತ್ ॥ ೪೦ ॥

ಪುರಾಣಾನಾಮಭಿಪ್ರಾಯಂ ವ್ಯಾಸೋ ವೇದ ನ ಚಾಪರಃ ।
ಅಹಂ ವೇದ್ಮಿ ವಿಶೇಷೇಣ ವ್ಯಾಸಾದಪಿ ವಿಧೇರಪಿ ॥ ೪೧ ॥

ನ ಸ್ವಾಧ್ಯಾಯಸ್ತಪೋ ವಾಪಿ ನ ಮಂತ್ರೋ ನ ಜುಹೋತಯಃ ।
ಫಲಂತಿ ನ ತಥಾ ತಿಷ್ಯೇ ಪುರಾಣಶ್ರವಣಂ ಯಥಾ ॥ ೪೨ ॥

ಏಕೈಕಶ್ರವಣಾದೇವ ಪಾತಕಂ ಮಹದೇವ ತು ।
ನಾಶಮಾಪ್ನೋತ್ಯಸಂದೇಹಃ ಶ್ರೀಶೈಲವರ್ತನಾದಿವ ॥ ೪೩ ॥

ಅತೋ ಗುರುಃ ಪುರಾಣಜ್ಞಃ ಶ್ರೋತೃವೃಂದೋಽಘನಾಶನಃ ।
ನ ತಸ್ಮಾದಧಿಕಃ ಕಶ್ಚಿದ್ಗುರುರಸ್ತಿ ಗತಿಪ್ರದಃ ॥ ೪೪ ॥

---

೪೦. ಕಲಿಯುಗದಲ್ಲಿ ಜನರು ವಿದ್ಯಾವಂತರಾಗಿದ್ದರೂ, ಸರ್ವಜ್ಞರಾಗಿರುವುದಿಲ್ಲ. ಆದುದರಿಂದ ಅವರ ವ್ಯಾಖ್ಯಾನವು ವ್ಯತಾಸವಾಗಿದ್ದರೂ ದಾನಕರ್ಮವು ಫಲಕೊಡುವಂತೆ ಫಲವನ್ನೇ ಕೊಡುತ್ತದೆ.

೪೧. ಪುರಾಣಗಳ ಅಭಿಪ್ರಾಯಗಳನ್ನು ವ್ಯಾಸನೊಬ್ಬನೇ ತಿಳಿದಿರುವನು. ಮತ್ತೊಬ್ಬನಿಗೆ ಗೊತ್ತಿಲ್ಲ. ಆದರೆ ನಾನು ಮಾತ್ರ ಆ ವ್ಯಾಸ ಮತ್ತು ಬ್ರಹ್ಮ ಇವರಿಬ್ಬರಿಗಿಂತಲೂ ಚೆನ್ನಾಗಿ ತಿಳಿದಿದ್ದೇನೆ.

೪೨. ವೇದಾಧ್ಯಯನ, ತಪಸ್ಸು, ಮಂತ್ರ ಯಾಗಗಳಾವುವೂ, ಕೂಡ ಕಲಿಯುಗದಲ್ಲಿ ಪುರಾಣವು ಫಲಕೊಡುವಂತೆ ಕೊಡುವುದಿಲ್ಲ.

೪೩. ಅನೇಕವಾದ ಪುರಾಣಗಳಲ್ಲಿ ಶ್ರೀಶೈಲದ ವಾಸದಂತೆ ಒಂದೊಂದೇ ಪುರಾಣಗಳು ಮಹಾಪಾಪಗಳನ್ನು ನಾಶಮಾಡುತ್ತವೆ, ಸಂದೇಹವಿಲ್ಲ.

೪೪. ಆದ್ದರಿಂದ ಪುರಾಣವನ್ನು ತಿಳಿದಿರುವ ಗುರುವು ಕೇಳುವವನ ಪಾಪವನ್ನು ನಾಶಮಾಡುತ್ತಾನೆ. ಅವನಿಗಿಂತಲೂ ಉತ್ತಮಗತಿಯನ್ನು ಕೊಡುವ ಗುರುವು ಇಲ್ಲ.

ಮಂತ್ರೇಷು ಗುರವೋ ಯೇ ಚ ವೇದಶಾಸ್ತ್ರೇಷು ಯೇ ಮತಾಃ ।
ನೇಶತೇ ಸರ್ವವಿಜ್ಞಾನಂ ದಾತುಂ ತಸ್ಮಾನ್ನ ಬೋಧಕಾಃ ॥ ೪೫ ॥

ಪಿಶಾಚಾಃ ಪ್ರಾಯಶೋ ರಾಮ ಬ್ರಹ್ಮರಾಕ್ಷಸನಾಮಿನಃ ।
ವೇದಮಂತ್ರಸ್ಯ ವೇತ್ತಾರೋ ದೃಶ್ಯನ್ತೇ ನ ಪುರಾಣವಿತ್ ॥ ೪೬ ॥

ಪುರಾಣವಿಮುಖೋ ನೈವ ಸರ್ವಸ್ಸರ್ವಂ ಹಿ ಪಶ್ಯತಿ ।
ಪುರಾಣಜ್ಞೋ ಹಿ ತತ್ತಸ್ಮಾತ್ಪಾಪನಾಶಕರಃ ಪ್ರಭುಃ ॥ ೪೭ ॥

ತತ್ಪೂಜಾ ಸರ್ವಪೂಜಾ ಸ್ಯಾತ್ಸರ್ವದ್ರೋಹೋಽಸ್ಯ ಪೀಡನಂ ।
ಯಥಾ ಸಮಸ್ತದಾನಾನಾಂ ವಿದ್ಯಾದಾನಂ ಪ್ರಶಸ್ಯತೇ ॥ ೪೮ ॥

ಪೌರಾಣಿಕಸ್ತಥಾ ರಾಮ ತತ್ರ ದಾನಂ ಮಹತ್ಫಲಂ ॥ ೪೯ ॥

---

೪೫. ಎಲೈ ರಾಮನೇ, ಮಂತ್ರ ವೇದಗಳಲ್ಲಿ ಗುರುಗಳಾದವರು ಸಮಸ್ತ ಜ್ಞಾನವನ್ನು ಕೊಡಲು ಸಮರ್ಥರಾಗಲಾರರು. ಆದ್ದರಿಂದ ಅವರನ್ನು ಬೋಧಕರೆನ್ನ ಲಾಗುವುದಿಲ್ಲ.

೪೬. ಎಲೈ ರಾಮನೇ, ಸಾಧಾರಣವಾಗಿ ವೇದ ಮಂತ್ರಗಳನ್ನು ಬಲ್ಲವರೇ ಪಿಶಾಚಿಗಳಾಗಿ ಬ್ರಹ್ಮರಾಕ್ಷಸವೆಂಬ ಹೆಸರನ್ನು ಹೊಂದಿರುತ್ತಾರೆ. ಪುರಾಣಜ್ಞನು ಆರೀತಿ ಬ್ರಹ್ಮರಾಕ್ಷಸನಾಗಿರುವುದು ತಿಳಿಯಬಂದಿಲ್ಲ.

೪೭. ಆದ್ದರಿಂದ ಯಾವನು ಕೂಡ ಪುರಾಣವನ್ನು ಕೇಳದಿರಬಾರದು. ಆ ಪುರಾಣವನ್ನು ಕೇಳಿದರೆ ಪ್ರತಿಯೊಬ್ಬನಿಗೂ ಎಲ್ಲವೂ ಗೊತ್ತಾಗುತ್ತದೆ. ಆದ್ದರಿಂದ ಪುರಾಣಿಕನು ಪಾಪವನ್ನು ನಾಶಮಾಡುವ ಸ್ವಾಮಿಯು.

೪೮-೪೯. ಆತನನ್ನು ಪೂಜಿಸಿದರೆ ಎಲ್ಲರನ್ನೂ ಪೂಜಿಸಿದಂತೆ ಆಗುತ್ತದೆ. ಅವನಿಗೆ ತೊಂದರೆ ಮಾಡಿದರೆ ಎಲ್ಲರನ್ನೂ ತೊಂದರೆಮಾಡಿದಂತೆ ಆಗುತ್ತದೆ. ದಾನ ಗಳಿಗೆಲ್ಲಾ ವಿದ್ಯಾದಾನವು ಹೇಗೆ ಶ್ರೇಷ್ಠವೋ ಹಾಗೆ ಪುರಾಣಿಕನು ಉತ್ತಮನು. ಅವನಿಗೆ ಕೊಟ್ಟ ದಾನವು ಮಹಾಫಲವನ್ನು ಕೊಡುತ್ತದೆ.

॥ ಶ್ರೀರಾಮ ಉವಾಚ ॥

ಕಿಂ ವಾ ಪೌರಾಣಿಕೇ ದೇಯಂ ಕಿಯತ್ಕೀದೃಶಮೇವ ಚ ।
ಪುರಾಣಂ ಕೀದೃಶಂ ವರ್ಜ್ಯಂ ವರ್ಜ್ಯಃ ಕೀದೃಕ್ಪುರಾಣವಿತ್ ॥ ೫೦ ॥

॥ ಶ್ರೀ ಶಂಭುರುವಾಚ ॥

ಷಡ್ರಸಾನನ್ನಪಾನಾನಿ ಸ್ನೇಹದ್ರವ್ಯಾಣಿ ಯಾನಿ ಚ ।
ಗೃಹಂ ಸೋಪಸ್ಕರಂ ರಾಮ ಪುರಾಣಜ್ಞಾಯ ದಾಪಯೇತ್ ॥ ೫೧ ॥

ಪರ್ಯಾಪ್ತಾನ್ಯೇವ ಸರ್ವಾಣಿ ತ್ವಧಿಕಾನಿ ಫಲಾಧಿಕಂ ॥ ೫೨ ॥

ದದ್ಯಾದ್ದ್ರವ್ಯಮತೋ ಭೂಯಃ ಸಚೈಲಂ ಶೋಭಿತಂ ಮೃದು ।
ಭೂಷಣಾಣಿ ಯಥಾರ್ಹಾಣಿ ಸ್ವಶಕ್ತ್ಯಾ ಪ್ರತಿಪಾದಯೇತ್ ॥ ೫೩ ॥

ಗಂಧಪುಷ್ಪಂ ಪ್ರತಿದಿನಂ ಕೇವಲಂ ಗಂಧಮೇವ ವಾ ।
ಕೇವಲಂ ವಾ ತಥಾ ಪುಷ್ಪಂ ಫಲಕಾಲೇ ಫಲಾನ್ಯಪಿ ॥ ೫೪ ॥

---

೫೦. ಶ್ರೀರಾಮನು ಕೇಳಿದನು :—ಪುರಾಣಿಕನಿಗೆ ಏನನ್ನು ಕೊಡಬೇಕು? ಎಷ್ಟನ್ನು ಕೊಡಬೇಕು? ಎಂತಹುದನ್ನು ಕೊಡಬೇಕು? ಎಂತಹ ಪುರಾಣವನ್ನು ಕೇಳಬಾರದು? ಎಂತಹ ಪೌರಾಣಿಕನನ್ನು ಬಿಟ್ಟುಬಿಡಬೇಕು?

೫೧-೫೨. ಶ್ರೀ ಶಂಭುವು ಹೇಳಿದನು :—ಷಡ್ರಸಗಳಿಂದ ಕೂಡಿದ ಅನ್ನ ಪಾನಗಳನ್ನೂ, ತುಪ್ಪ, ಎಣ್ಣೆಗಳಿಂದ ಕೂಡಿದ ಪದಾರ್ಥಗಳನ್ನೂ, ಎಲ್ಲಾ ಪದಾರ್ಥ ಗಳಿಂದಲೂ ಕೂಡಿರುವ ಮನೆಯನ್ನೂ, ಪುರಾಣಿಕನಿಗೆ ಕೊಡಬೇಕು. ಅವನಿಗೆ ಬೇಕಾದುವೆಲ್ಲವನ್ನೂ ಕೊಡಬೇಕು. ಹೆಚ್ಚಾಗಿ ಕೊಟ್ಟರೆ ಹೆಚ್ಚು ಫಲವುಂಟು.

೫೩. ಆದ್ದರಿಂದ ಹೆಚ್ಚಾಗಿ ಹಣವನ್ನೂ, ಒಳ್ಳೆಯ ಬಟ್ಟೆಗಳನ್ನೂ ಕೊಡ ಬೇಕು. ಶಕ್ತಿಗನುಗುಣವಾಗಿ ಆಭರಣಗಳನ್ನೂ ಕೊಡಬೇಕು.

೫೪-೫೫. ಪ್ರತಿದಿನವೂ ಹೂವು ಗಂಧಗಳನ್ನೂ, ಹೂ, ಗಂಧಗಳೊಂದೊಂದ ನ್ನಾದರೂ ಕೊಡಬಹುದು. ಹಣ್ಣಿನ ಕಾಲದಲ್ಲಿ ಆಯಾ ಹಣ್ಣುಗಳನ್ನು ಕೊಡಬೇಕು.

ತಾಂಬೂಲಂ ಚ ತಥಾ ದದ್ಯಾನ್ನಮಸ್ಕುರ್ಯಾಚ್ಚ ಭಕ್ತಿತಃ ।
ಪುರಾಣಸ್ಯ ಸಮಾಪ್ತೌ ತು ದದ್ಯಾದ್ದಾನಾದಿಕಂ ತಥಾ ॥ ೫೫ ॥

ಅಧಿಕಂ ತು ತಥಾ ದೇಯಂ ಭೂಹಿರಣ್ಯಾದಿಕಂ ನೃಪ ।
ನ ಚ ತೂಷ್ಣೀಮುಪಕ್ರಮ್ಯ ಶ್ರೋತುಮರ್ಹತಿ ಕಶ್ಚನ ॥ ೫೬ ॥

ಸಭಾಸದ್ಭಿಃ ಕೃತಾ ಚೈವ ಯಾ ಪೂಜ್ಯೈಕೇನ ವಾ ಕೃತಾ ।
ದೇವಸ್ಥಾನೇ ಯಥಾಶಕ್ತಿ ಸರ್ವೈಃ ಪೂಜನಮಿಷ್ಯತೇ ॥ ೫೭ ॥

ತೀರ್ಥೇಽಪಿ ಚ ಯಥಾ ರಾಮ ಪುಣ್ಯೇಷ್ವಾಯತನೇಷು ಚ ।
ಸ್ವಶಕ್ತ್ಯಾ ಪೂಜನಂ ಕುರ್ಯಾತ್ಪುರಾಣಜ್ಞಾಯ ರಾಘವ ॥ ೫೮ ॥

ಶ್ರೋತುಸ್ತು ಲಕ್ಷಣಂ ಪೂರ್ವಂ ಮಯೋಕ್ತಂ ಭವತೇ ನೃಪ ।
ಪೌರಾಣಿಕಸ್ಯ ಸರ್ವಸ್ಯ ಲಕ್ಷಣಂ ಕಥಯಾಮಿ ತೇ ॥ ೫೯ ॥

---

ತಾಂಬೂಲವನ್ನೂ ಕೊಟ್ಟು ಭಕ್ತಿಯಿಂದ ನಮಸ್ಕರಿಸಬೇಕು. ಪುರಾಣ ಮುಗಿದ ಮೇಲೆ ದಾನಗಳನ್ನು ಕೊಡಬೇಕು.

೫೬. ಹಣವನ್ನಾಗಲಿ ಭೂಮಿಯನ್ನಾಗಲೀ ಹೆಚ್ಚಾಗಿ ಕೊಡಬಹುದು. ಏನೂ ಕೊಡದೆ ಪ್ರಾರಂಭಿಸಿ ಒಬ್ಬನೂ ಕೇಳಬಾರದು.

೫೭. ಸಭೆಯವರು ಮಾಡಬೇಕಾದ ಪೂಜೆಯನ್ನು ಯಾವನಾದರೂ ಒಬ್ಬನೇ ಮಾಡಬಹುದು ಅಥವಾ ಎಲ್ಲರೂ ದೇವಸ್ಥಾನಗಳಲ್ಲಿ ಸೇರಿ ಶಕ್ತ್ಯನುಗುಣವಾಗಿ ಪೂಜೆ ಮಾಡಬಹುದು.

೫೮. ತೀರ್ಥಕ್ಷೇತ್ರ ಪುಣ್ಯಕ್ಷೇತ್ರಗಳಲ್ಲಿರುವ ಪುರಾಣಿಕರಿಗೆ ಮನುಷ್ಯನು ಶಕ್ತ್ಯನುಗುಣವಾಗಿ ಹಣ ಮುಂತಾದುವನ್ನು ಕೊಟ್ಟು ಗೌರವಿಸಬೇಕು.

೫೯. ಪುರಾಣವನ್ನು ಕೇಳತಕ್ಕವನ ಲಕ್ಷಣವನ್ನು ಮೊದಲೇ ಹೇಳಿದೆನು. ಈಗ ಪುರಾಣ ಹೇಳುವವನ ಲಕ್ಷಣವನ್ನು ಹೇಳುತ್ತೇನೆ.

**ಕುಲಹೀನೋ ಮಹಾವ್ಯಾಧಿರ್ಮಹಾಪಾಪೀ ತಿರಸ್ಕೃತಃ**
**ಶೌಚಾಚಾರವಿಹೀನಶ್ಚ ವೇದಸ್ಮೃತಿವಿವರ್ಜಿತಃ** ॥ ೬೦ ॥

**ಅನ್ಯದೇವಃ ಪ್ರೂತಿವಚೋ ವ್ಯಂಗಶ್ಚಾಪ್ಯಧಿಕಾಂಗವಾನ್ ।**
**ಪರಭಾರ್ಯಾಪತಿಃ ಸ್ತೇನಃ ಪ್ರಾಣಿಹಂತಾ ನಿರಾಕೃತಿಃ** ॥ ೬೧ ॥

**ಅಥ ವರ್ಜ್ಯಾಃ ಪುರಾಣಂ ತೇ ಕಥಯಾಮಿ ನೃಪೋತ್ತಮ ।**
**ಪೂರ್ವಜೈರುಚ್ಯಮಾನಂ ಚ ಮತ್ಪ್ರೋಕ್ತಂ ಮುನಿಭಿಃ ಪರೈಃ** ॥ ೬೨ ॥

**ವ್ಯಾಸಾದಯೋ ಮುನಿವರಾ ಯತ್ಪ್ರೋಚುಸ್ತದುದೀರಯೇತ್ ।**
**ಪುರಾಣಸ್ಥಂ ಪಠೇದ್ಗ್ರಂಥಂ ವ್ಯಾಖ್ಯಾಸ್ಯೇಚ್ಚ ವಿಚಾರಯನ್** ॥ ೬೩ ॥

**ಯಯಾ ಕಯಾಪಿ ವಾ ರಾಮ ಭಾಷಯಾ ದೇಶಭೇದತಃ ।**
**ನ ದೇಶಭಾಷಾರಚಿತಂ ಗ್ರಂಥಂ ಶ್ರುತ್ವಾ ಫಲಂ ಲಭೇತ್** ॥ ೬೪ ॥

---

೬೦-೬೧. ಕುಲಹೀನ, ಕುಷ್ಠ ಮೊದಲಾದ ಮಹಾರೋಗಪೀಡಿತನು. ಮಹಾ ಪಾಪಮಾಡಿದವನು, ಜನಗಳಿಂದ ಬಹಿಷ್ಕಾರಹೊಂದಿದವನು, ಶುಚಿ ಆಚಾರಗಳಿಲ್ಲದವನು, ವೇದ ಸ್ಮೃತಿಗಳನ್ನು ನಂಬದೇ ಇರುವವನು, ಅವನ್ನು ಅಧ್ಯಯನ ಮಾಡದವನು, ತಾನು ಹೇಳುವ ಪುರಾಣಕ್ಕಿಂತ ಬೇರೆ ದೇವರ ಆಚಾರವುಳ್ಳವನು, ಅಥವಾ ನಾಸ್ತಿಕನಾದವನು, ಮಾತನ್ನು ಶುದ್ಧವಾಗಿ ಆಡದವನು, ಹೆಚ್ಚಾದ ಇಲ್ಲವೇ ಕಡಿಮೆಯಾದ ಅವಯವಗಳುಳ್ಳವನು, ಜಾದರಮಾಡುವವನು, ಕಳ್ಳನು, ಪ್ರಾಣಿ ಹಿಂಸೆ ಮಾಡುವವನು, ಭವ್ಯವಾದ ಆಕಾರವಿಲ್ಲದವನು, ಇಂತಹವರು ಪುರಾಣ ಹೇಳಲು ಯೋಗ್ಯರಲ್ಲ.

೬೨. ಪೂರ್ವದವರು ಹೇಳುತ್ತಿರುವುದು, ನಾನು ಹೇಳುವುದು, ಶ್ರೇಷ್ಠರಾದ ಮುನಿಗಳು ಹೇಳಿದುದು, ವ್ಯಾಸಾದಿ ಮುನಿಗಳು ಹೇಳಿರುವುದು, ಇಂತಹ ಪುರಾಣ ಗಳನ್ನು ಹೇಳಬೇಕೇ ಹೊರತು ಮಿಕ್ಕವನ್ನು ಹೇಳಬಾರದು.

೬೩-೬೪. ಪುರಾಣದಲ್ಲಿರುವ ಮೂಲಗ್ರಂಥವನ್ನೇ ಓದಬೇಕು, ಆ ಗ್ರಂಥ ವನ್ನು ಚರ್ಚಿಸುತ್ತಾ ಅರ್ಥವನ್ನು ಹೇಳಬೇಕು, ಸಂಸ್ಕೃತದ ಗ್ರಂಥವನ್ನು ಓದುತ್ತಾ ಆಯಾ ದೇಶಭಾಷೆಯಲ್ಲಿ ಅರ್ಥವನ್ನು ಹೇಳಬೇಕು, ದೇಶಭಾಷೆಯಲ್ಲಿ ಮಾತ್ರ ಬರೆದಿ ರುವ ಪುರಾಣಗ್ರಂಥವನ್ನು ಓದಿ ತಿಳಿದುಕೊಂಡರೆ ಪುರಾಣವನ್ನು ಕೇಳಿದ ಫಲವು ಬರುವುದಿಲ್ಲ.

ವ್ಯಾಖ್ಯಾ ಯಾ ಕಾಪಿ ಕಾಕುತ್ಸ್ಥ ಪುರಾಣಸ್ಯ ಹಿತಾ ಹಿ ಸಾ ।
ತಸ್ಮಾತ್ತ್ವಂ ದೇವ ಯಾಚಸ್ವ ವ್ಯಾಖ್ಯಾಸ್ಯೇ ಯತ್ಪುರಾಣಕಂ ॥ ೬೫ ॥

॥ ಶಂಭುರುವಾಚ ॥

ಏವಂ ಪೌರಾಣಿಕೇನೋಕ್ತಂ ಶ್ರುತವಾನಪಿ ಗೌತಮಃ ।
ಸ್ವಯಂ ವಸ್ತ್ರತ್ರಯಂ ಪ್ರಾದಾದ್ಬ್ರಾಹ್ಮಣಾಯ ಮಹಾತ್ಮನೇ ॥ ೬೬ ॥

ಕೌರ್ಮಂ ಪುರಾಣಂ ಪ್ರಥಮಂ ಶ್ರುತವಾನಿತಿ ನಃ ಶ್ರುತಂ ।
ದತ್ತವಾನ್ಸ್ವರ್ಣಮಧಿಕಂ ವಸ್ತ್ರಾಣಿ ಚ ಶುಭಾನಿ ಚ ॥ ೬೭ ॥

ಅಥ ಲೈಂಗಂ ಚ ಶುಶ್ರಾವ ವೈಷ್ಣವಂ ವಾಮನಂ ತಥಾ ।
ಪಾದ್ಮಂ ಚ ಗಾರುಡಂ ಚೈವ ಸೌರಂ ಬ್ರಾಹ್ಮಮಥೈವ ಚ ॥ ೬೮ ॥

ಏವಮಷ್ಟ ಸ ಶುಶ್ರಾವ ಪುರಾಣಾನಿ ಸ ಗೌತಮಃ ।
ಅಥ ರಾಮಾಯಣಂ ಚೈವ ಕೌರ್ಮಮೇವ ಪುನಶ್ಚ ಸಃ ॥ ೬೯ ॥

---

೬೫. ಪೌರಾಣಿಕನ ವಿವರಣೆಯು ಆ ಪುರಾಣಕ್ಕೆ ಅನುಕೂಲವಾಗಿರಬೇಕು, ನೀನು ಯಾವುದು ಬೇಕೋ ಕೇಳು, ಆ ಪುರಾಣವನ್ನು ವಿವರಿಸುತ್ತೇನೆ.

೬೬. ಶಂಭುವು ಹೇಳಿದನು :—ಈರೀತಿ ಪುರಾಣಿಕನು ಹೇಳಿದುದನ್ನು ಕೇಳಿ ಗೌತಮನು ತಾನಾಗಿಯೇ ಪುರಾಣಿಕನಿಗೆ ಮೂರು ಬಟ್ಟೆಗಳನ್ನು ಕೊಟ್ಟನು.

೬೭. ಗೌತಮನು ಕೂರ್ಮಪುರಾಣವನ್ನು ಮೊದಲು ಕೇಳಿದನೆಂದು ಕೇಳಿದ್ದೇವೆ. ಬಹುವಾದ ಚಿನ್ನವನ್ನೂ ಬಟ್ಟೆಗಳನ್ನೂ ಕೊಟ್ಟನೆಂದೂ ಸಹ ಕೇಳಿದ್ದೇವೆ.

೬೮. ಅನಂತರ ಗೌತಮನು ಲಿಂಗ, ವಿಷ್ಣು, ವಾಮನ, ಪಾದ್ಮ, ಗರುಡ, ಸೌರ, ಬ್ರಹ್ಮ, ಪುರಾಣಗಳೆಂಟನ್ನೂ ಕ್ರಮವಾಗಿ ಕೇಳಿದನು.

೬೯. ಅನಂತರ ರಾಮಾಯಣವನ್ನೂ ಕೇಳಿದನು, ಮತ್ತೆ ಕೂರ್ಮಪುರಾಣವನ್ನು ಕೇಳಿದನು.

ಶಿವ ನಾರಾಯಣೇತ್ಯೇವಂ ಜಪಂ ಚಕ್ರೇ ಸದೈವ ಹಿ ।
ಅವಾಪ ನಿಧನಂ ಚಾಪಿ ಸ ಗತೋ ಬ್ರಹ್ಮಣಃ ಪದಂ ॥ ೨೦ ॥

ಬ್ರಹ್ಮಸಂಪೂಜಿತೋ ವಿಪ್ರೋ ವಿಷ್ಣುಲೋಕಮಥಾಗಮತ್ ।
ವಿಷ್ಣುನಾ ಪೂಜಿತಸ್ಸೋಽಥ ಜಗಾಮ ಶಿವಮಂದಿರಂ ॥ ೨೧ ॥

ಸರ್ವೇಷಾಮೇವ ವಂದ್ಯೋಽಸೌ ಗೌತಮೋ ಮುನಿಸತ್ತಮಃ ।
ಭಾರತಶ್ರವಣೇ ಚಾಪಿ ನಿಯಮಾ ಯೇ ಮಯೇರಿತಾಃ ॥ ೨೨ ॥

ಪುರಾ ವ್ಯಾಸೇನ ಮುನಿನಾ ತ್ರಿವರ್ಷಾದ್ಯತ್ಕೃತಂ ಶುಭಂ ।
ಶ್ರವಣಾತ್ತಸ್ಯ ಕೃತ್ಸ್ನಸ್ಯ ವ್ಯಾಕರ್ತಾ ಭಾರತಸ್ಯ ಯಃ ॥ ೨೩ ॥

ನ ಕಿಂಚಿತ್ಪ್ರಣಮೇದ್ವಿಪ್ರಂ ಮುಕ್ತ್ವಾ ಯೋಗಿನಮುತ್ತಮಂ ।
ಸರ್ವೇಷಾಮೇವ ವಂದ್ಯೋಽಸೌ ಭಾರತಂ ವ್ಯಾಕರೋತಿ ಯಃ ॥ ೨೪ ॥

---

೨೦. ಅವನು ಯಾವಾಗಲೂ ಶಿವ, ನಾರಾಯಣ ಎಂದೇ ಜಪಮಾಡುತ್ತಿದ್ದು ಮೃತಿಯನ್ನೈದಿದನು. ಬ್ರಹ್ಮಲೋಕವನ್ನು ಹೊಂದಿದನು.

೨೧. ಅಲ್ಲಿ ಆ ಗೌತಮನು ಬ್ರಹ್ಮನಿಂದ ಪೂಜಿಸಲ್ಪಟ್ಟವನಾಗಿ ವಿಷ್ಣು ಲೋಕಕ್ಕೆ ಹೋದನು. ಅಲ್ಲಿ ವಿಷ್ಣುವಿನಿಂದ ಪೂಜಿತನಾಗಿ ಶಿವನ ಲೋಕಕ್ಕೆ ಹೋದನು.

೨೨. ಈ ಗೌತಮನು ಎಲ್ಲರಿಗೂ ಪೂಜ್ಯನಾಗಿದ್ದಾನೆ. ಭಾರತದ ಶ್ರವಣದಲ್ಲಿ ಕೂಡ ನಾನು ಹಿಂದೆ ಹೇಳಿದ ನಿಯಮಗಳನ್ನೇ ಅನುಸರಿಸಬೇಕು.

೨೩-೨೪. ಪೂರ್ವದಲ್ಲಿ ವ್ಯಾಸನು ಮೂರು ವರ್ಷಗಳ ಕಾಲ ಶ್ರಮಪಟ್ಟು ಮಾಡಿದ ಭಾರತವನ್ನು ಕೇಳಿ ಅದನ್ನು ವಿವರಿಸುವವನು ಯಾವ ಬ್ರಾಹ್ಮಣನಿಗೂ ನಮಸ್ಕರಿಸಬಾರದು. ಆದರೆ ಯೋಗಿಯನ್ನು ಕಂಡರೆ ನಮಸ್ಕರಿಸಬೇಕು. ಆರೀತಿ ಪುರಾಣ ವಿವರಣಕಾರನು ಎಲ್ಲರಿಗಿಂತಲೂ ಉತ್ತಮನು. ಅವನನ್ನು ಎಲ್ಲರೂ ಪೂಜಿಸಬೇಕು.

ಯೋ ಮಹಾಭಾರತಂ ನಿತ್ಯಂ ವ್ಯಾಖ್ಯಾಸ್ಯತಿ ಪಠೇಚ್ಚ ವಾ ।
ಸ ಸರ್ವೇಭ್ಯೋಽಧಿಕೋ ವಿಪ್ರಸ್ತಾರಯೇಚ್ಚೈವ ಮಾನವಾನ್ ॥ ೭೫ ॥

ವ್ಯಾಕರೋತಿ ಚ ಪರ್ವೈಕಂ ಸರ್ವಾಣಿ ಕತಿಚಿತ್ತು ವಾ ।
ಸರ್ವಪಾಪವಿನಿರ್ಮುಕ್ತೋ ಹವ್ಯೇ ಕವ್ಯೇ ವಿಶಿಷ್ಯತೇ ॥ ೭೬ ॥

ತಮೇವ ಪ್ರಣಮೇದ್ವಿಪ್ರಂ ತಮೇವಾರ್ಹಂ ಚ ಪೂಜಯೇತ್ ।
ತಮೇವ ಭೋಜಯೇನ್ನಿತ್ಯಂ ಸರ್ವಂ ತಸ್ಮೈ ನಿವೇದಯೇತ್ ॥ ೭೭ ॥

ತಸ್ಯ ಪೂಜಾವಿಧಿಃ ಪ್ರೋಕ್ತೋ ವ್ಯಾಖ್ಯಾನಸಮಯೇ ದ್ವಿಜ ।
ಪ್ರತಿಪೂಜ್ಯೋಽಥ ವಸ್ತ್ರಾದ್ಯೈಃ ಪೂಜಯೇದ್ವಿಧಿಮಾರ್ಗತಃ ॥ ೭೮ ॥

ಆದಿಪರ್ವಸಮಾಪ್ತೌ ತು ಸೂಕ್ಷ್ಮವಸ್ತ್ರತ್ರಯಂ ದದೇತ್ ।
ಸುವರ್ಣಂ ಚ ಯಥಾಶಕ್ತಿ ಸಭಾಪರ್ವಣಿ ವಾಸಸೀ ॥ ೭೯ ॥

---

೭೫. ಯಾವನು ನಿತ್ಯವೂ ಮಹಾಭಾರತವನ್ನು ವಿವರಿಸುತ್ತಾನೆಯೋ ಅಥವಾ ಓದುತ್ತಾನೆಯೋ ಆ ಬ್ರಾಹ್ಮಣನು ಎಲ್ಲರಿಗಿಂತಲೂ ಶ್ರೇಷ್ಠನು. ಅವನು ಎಲ್ಲರನ್ನೂ ಪಾಪದಿಂದ ನಿವೃತ್ತರನ್ನಾಗಿ ಮಾಡುತ್ತಾನೆ.

೭೬. ಭಾರತದ ಎಲ್ಲಾ ಪರ್ವಗಳನ್ನಾಗಲಿ ಕೆಲವನ್ನಾಗಲಿ ಕೊನೆಗೆ ಒಂದನ್ನಾಗಲಿ ವ್ಯಾಖ್ಯಾನಮಾಡಿದರೆ (ಅರ್ಥವನ್ನು ಹೇಳಿದರೆ) ಅವನ ಪಾಪಗಳೆಲ್ಲವೂ ಹೋಗುತ್ತವೆ. ಅವನು ಹವ್ಯ (ದೇವತೆಗಳ ಕೆಲಸ) ಕವ್ಯ (ಪಿತೃಕೆಲಸ) ಗಳಲ್ಲಿ ಬಹು ಯೋಗ್ಯನಾಗುತ್ತಾನೆ.

೭೭. ಆರೀತಿ ವ್ಯಾಖ್ಯಾನಮಾಡಿದವನಿಗೆ ಯಾವಾಗಲೂ ನಮಸ್ಕಾರಮಾಡಬೇಕು, ಅವನನ್ನು ಪೂಜಿಸಬೇಕು, ಅವನಿಗೆ ಭೋಜನ ಮಾಡಿಸಬೇಕು, ಎಲ್ಲವನ್ನೂ ಅವನಿಗೇ ಕೊಡಬೇಕು.

೭೮. ಅರ್ಥವನ್ನು ವಿವರಿಸುವಾಗ ಅವನನ್ನು ವಸ್ತ್ರಾದಿಗಳಿಂದ ಶಾಸ್ತ್ರೋಕ್ತವಾಗಿ ಪೂಜಿಸಬೇಕೆಂಬ ನಿಯಮವನ್ನು ಹಿಂದೆಯೇ ಹೇಳಿದ್ದೇನೆ.

೭೯-೮೦. ಆದಿಪರ್ವವು ಮುಗಿದ ಮೇಲೆ ಮೂರು ಪಂಚೆಗಳನ್ನು ಕೊಡಬೇಕು, ಶಕ್ತ್ಯನುಗುಣವಾಗಿ ಚಿನ್ನವನ್ನೂ ಕೊಡಬೇಕು. ಸಭಾಪರ್ವವು ಮುಗಿದ ಮೇಲೆ

**ಅನುಶಾಸನಿಕಾರಣ್ಯಸ್ವರ್ಗಾರೋಹೇಷು ಪರ್ವಸು ।**
**ಆದಿಪರ್ವಾಣಿ ಯಾ ಪೂಜಾ ಸಾ ಪೂಜಾ ನೃಪಪುಂಗವ ॥ ೮೦ ॥**

**ಕರ್ಣಾಶ್ವಮೇಧವೈರಾಟಶಲ್ಯದ್ರೋಣೇಷು ಪರ್ವಸು ।**
**ಸೂಕ್ಷ್ಮವಸ್ತ್ರತ್ರಯಂ ಶುದ್ಧಂ ನಿಷ್ಕದ್ವಯಮಥಾಪಿ ವಾ ॥ ೮೧ ॥**

**ಕ್ಷುದ್ರಪರ್ವಸ್ವಥಾನ್ಯೇಷು ನಿಷ್ಕಾವಥ ಸಮಾನಯೇತ್ ।**
**ಹರಿವಂಶೇ ಸನಿಷ್ಕಂ ತು ವಸ್ತ್ರತ್ರಿತಯಮೇವ ತು ॥ ೮೨ ॥**

**ಭಾರತಸ್ಯಾಖಿಲಸ್ಯೈವ ಸಮಾಪ್ತೌ ಕ್ಷೇತ್ರದೋ ಭವೇತ್ ।**
**ರಾಮಾಯಣಸ್ಯ ಶ್ರವಣೇ ಕಾಂಡೇ ಕಾಂಡೇ ಪ್ರಪೂಜಯೇತ್ ॥ ೮೩ ॥**

**ಕ್ಷೇತ್ರಂ ಪರ್ಯಾಪ್ತಮಥವಾ ಸುವರ್ಣಮಪಿ ದಾಪಯೇತ್ ।**
**ವ್ಯಾಖ್ಯಾತಾ ಗುರುವಾಕ್ಯಸ್ಯ ಸರ್ವಕಲ್ಮಷನಾಶನಃ ॥ ೮೪ ॥**

---

ಎರಡು ಪಂಚೆಗಳನ್ನು ಕೊಡಬೇಕು ಮತ್ತು ಶಕ್ತ್ಯನುಗುಣವಾಗಿ ಹಣವನ್ನು ಕೊಡಬೇಕು. ಅನುಶಾಸನಿಕ, ಅರಣ್ಯ, ಸ್ವರ್ಗಾರೋಹಣ ಪರ್ವಗಳು ಮುಗಿದಾಗ ಆದಿಪರ್ವದಂತೆ ಮೂರು ಪಂಚೆಗಳನ್ನೂ, ಯಥಾಶಕ್ತಿ ಸುವರ್ಣವನ್ನೂ ಕೊಡಬೇಕು.

೮೧. ಕರ್ಣ, ಅಶ್ವಮೇಧ, ವಿರಾಟ, ಶಲ್ಯ, ದ್ರೋಣಪರ್ವಗಳು ಮುಗಿದಾಗ ಮಲ್ಲಾದ ಮೂರು ಬಟ್ಟೆಗಳನ್ನಾಗಲೀ, ಎರಡು ಸುವರ್ಣ ನಾಣ್ಯಗಳನ್ನಾಗಲೀ ಕೊಡಬೇಕು.

೮೨. ಉಳಿದ ಸಣ್ಣಸಣ್ಣ ಪರ್ವಗಳು ಮುಗಿದಾಗ ಎರಡೆರಡು ಚಿನ್ನದ ನಾಣ್ಯಗಳನ್ನು ಕೊಡಬೇಕು. ಹರಿವಂಶವನ್ನು ಓದಿದಾಗ ಒಂದು ನಿಷ್ಕವನ್ನೂ, ಮೂರು ಪಂಚೆಗಳನ್ನೂ ಕೊಡಬೇಕು.

೮೩. ಭಾರತವೆಲ್ಲವನ್ನೂ ಕೇಳಿ ಮುಗಿದ ಮೇಲೆ ಹೊಲ, ಗದ್ದೆ, ತೋಟಗಳನ್ನು ಕೊಡಬೇಕು. ರಾಮಾಯಣವನ್ನು ಕೇಳುವಾಗ ಕಾಂಡಕಾಂಡಕ್ಕೂ ಪುರಾಣಿಕನನ್ನು ಪೂಜಿಸಬೇಕು.

೮೪. ಅದಿಲ್ಲದಿದ್ದರೆ ಅವನ ಜೀವನಕ್ಕೆ ಸಾಕಾಗುವಷ್ಟು ಭೂಮಿಯನ್ನಾದರೂ ಕೊಡಬೇಕು ಅಥವಾ ಚಿನ್ನವನ್ನು ಕೊಡಬೇಕು. ಗುರುವಿನ ಮಾತಿಗೆ ಅರ್ಥ ಹೇಳುವವನು ಪಾಪವೆಲ್ಲವನ್ನೂ ನಾಶಮಾಡುತ್ತಾನೆ.

ಅರ್ಥೋ ಧರ್ಮಶ್ಚ ಕಾಮಶ್ಚ ಮೋಕ್ಷಶ್ಚ ನೃಪಸತ್ತಮ ।
ವ್ಯಾಖ್ಯಾಶ್ರವಣತಸ್ಸರ್ವೇ ಸಿಧ್ಯಂತಿ ಚ ಸುಬುದ್ಧಯಃ ॥ ೮೫ ॥

ಬ್ರಹ್ಮಹತ್ಯಾದಿಪಾಪಾನಾಂ ಸರ್ವೇಷಾಮಪಿ ನಾಶನಂ ।
ಏಕೇನ ಶ್ರವಣೇನಾಸ್ಯ ಕಿಂ ನರೈರ್ನ ಶ್ರುತಂ ಭುವಿ ॥ ೮೬ ॥

ಯಾನವಸ್ತ್ರಸುವರ್ಣಾದ್ಯೈರ್ನಿತ್ಯಮೇನಂ ಪ್ರಪೂಜಯೇತ್ ।
ವ್ಯಾಖ್ಯಾತಾರಂ ಯತಃ ಪಾಪಸಂದೋಹಸ್ಯ ವಿನಾಶನಂ ॥ ೮೭ ॥

ಅನ್ಯಾನ್ಯಪಿ ಪುರಾಣಾನಿ ಮುನಿಪ್ರೋಕ್ತಾನಿ ತಾನ್ಯಪಿ ।
ಶ್ರೋತ್ರೃಣಾಂ ಪಾಪನಾಶಾಯ ವಕ್ತುಶ್ಚಾಪಿ ವಿಶೇಷತಃ ॥ ೮೮ ॥

ಯಶ್ಚ ಸರ್ವಪುರಾಣಾನಿ ಷಡ್ವಿಂಶತ್ತು ಪ್ರಕೀರ್ತಯೇತ್ ।
ಶೃಣೋತಿ ವಾ ನ ತಸ್ಯಾಸ್ತಿ ವಿತ್ತಚ್ಛೇದಃ ಕದಾಚನ ॥ ೮೯ ॥

---

೮೫. ಆ ಅರ್ಥವನ್ನು ಕೇಳಿದರೆ ಧರ್ಮ, ಅರ್ಥ, ಕಾಮ, ಮೋಕ್ಷ ಸದ್ಬುದ್ಧಿಗಳು ಸಿದ್ಧಿಸುತ್ತವೆ.

೮೬. ಬ್ರಹ್ಮಹತ್ಯಾದಿ ಪಾಪಗಳೂ, ಉಳಿದ ಎಲ್ಲಾ ಪಾಪಗಳೂ ಕೂಡ ಇದರ ಶ್ರವಣ ಒಂದರಿಂದಲೇ ನಾಶವಾಗುತ್ತವೆಂದು ಯಾವ ಮನುಷ್ಯನು ತಾನೆ ಭೂಮಿಯಲ್ಲಿ ಕೇಳಿಲ್ಲ?

೮೭. ಪುರಾಣಿಕನು ಪಾಪಗಳ ಗುಂಪನ್ನು ನಾಶಮಾಡುತ್ತಾನಾದುದರಿಂದ ಅವನನ್ನು ವಾಹನ, ಬಟ್ಟೆ, ಚಿನ್ನ ಇವೇ ಮೊದಲಾದ ದ್ರವ್ಯಗಳಿಂದ ಪೂಜಿಸಬೇಕು.

೮೮. ಋಷಿಗಳು ಹೇಳಲ್ಪಟ್ಟ ಮಿಕ್ಕ ಪುರಾಣಗಳೂ ಕೂಡ ಕೇಳುವವರ ಮತ್ತು ಹೇಳುವವರ ಪಾಪಗಳನ್ನು ನಾಶಮಾಡುತ್ತವೆ.

೮೯. ಯಾವನು ಇಪ್ಪತ್ತಾರು ಪುರಾಣಗಳನ್ನು ಹೇಳುತ್ತಾನೆಯೋ ಮತ್ತು ಯಾವನು ಕೇಳುತ್ತಾನೆಯೋ ಅವನ ಹಣವು ಯಾವಾಗಲೂ ನಾಶಹೊಂದುವುದಿಲ್ಲ.

ಬ್ರಾಹ್ಮಂ ಪುರಾಣಂ ಪ್ರಥಮಂ ದ್ವಿತೀಯಂ ಪಾದ್ಮಮೇವ ಚ ।
ತೃತೀಯಂ ವೈಷ್ಣವಂ ಚೈವ ಚತುರ್ಥಂ ಶೈವಮುಚ್ಯತೇ ॥ ೯೦ ॥

ಅಥ ಭಾಗವತಂ ಪ್ರೋಕ್ತಂ ಪಂಚಮಂ ಷಷ್ಠಮುಚ್ಯತೇ ।
ಭವಿಷ್ಯಂ ನಾರದೀಯಂ ಚ ಸಪ್ತಮಂ ಪರಿಕೀರ್ತಿತಂ ॥ ೯೧ ॥

ಮಾರ್ಕಂಡೇಯಮಿತಿ ಪ್ರೋಕ್ತಮಷ್ಟಮಂ ನವಮಂ ತಥಾ ।
ಆಗ್ನೇಯಂ ಬ್ರಹ್ಮವೈವರ್ತಂ ದಶಮಂ ಪರಿಕೀರ್ತಿತಂ ॥ ೯೨ ॥

ಲೈಂಗಂ ಚ ವಾಮನಂ ಚೈವ ಸ್ಕಾಂದಂ ಮಾತ್ಸ್ಯಮಥೈವ ಚ ।
ಕೌರ್ಮಂ ವಾರಾಹಮುದಿತಂ ಗಾರುಡಂ ಚಾಥ ಕೀರ್ತಿತಂ ॥ ೯೩ ॥

ಬ್ರಹ್ಮಾಂಡಮಿತ್ಯಷ್ಟಾದಶ ಪುರಾಣಾನಿ ವಿದುರ್ಬುಧಾಃ ಃ
ತಥಾ ಚೋಪಪುರಾಣಾನಿ ಕಥಯಿಷ್ಯಾಮ್ಯತಃ ಪರಂ ॥ ೯೪ ॥

ಆದ್ಯಂ ಸನತ್ಕುಮಾರಾಖ್ಯಂ ನಾರಸಿಂಹಮತಃ ಪರಂ ।
ತೃತೀಯು ಮಾಂಡಮುದ್ದಿಷ್ಟಂ ದೂರ್ವಾಸಸಮಥೈವ ಚ ॥ ೯೫ ॥

---

೯೦-೯೧. ಬ್ರಹ್ಮಪುರಾಣವು ಒಂದನೆಯದು, ಪದ್ಮಪುರಾಣವು ಎರಡನೆಯದು, ವೈಷ್ಣವಪುರಾಣವು ಮೂರನೆಯದು, ಶೈವವು ನಾಲ್ಕನೆಯದು, ಭಾಗವತವು ಐದನೆಯದು, ಭವಿಷ್ಯಪುರಾಣವು ಆರನೆಯದು, ನಾರದೀಯಪುರಾಣವು ಏಳನೆಯದು.

೯೨-೯೩. ಮಾರ್ಕಂಡೇಯಪುರಾಣವು ಎಂಟನೆಯದು, ಆಗ್ನೇಯಪುರಾಣವು ಒಂಭತ್ತನೆಯದು, ಬ್ರಹ್ಮವೈವರ್ತವು ಹತ್ತನೆಯದು, ಲೈಂಗವು ಹನ್ನೊಂದನೆಯದು, ವಾಮನಪುರಾಣವು ಹನ್ನೆರಡನೆಯದು, ಸ್ಕಾಂದಪುರಾಣವು ಹದಿಮೂರನೆಯದು, ಮತ್ಸ್ಯಪುರಾಣವು ಹದಿನಾಲ್ಕನೆಯದು, ಕೌರ್ಮಪುರಾಣವು ಹದಿನೈದನೆಯದು. ವರಾಹಪುರಾಣವು ಹದಿನಾರನೆಯದು, ಗರುಡಪುರಾಣವು ಹದಿನೇಳನೆಯದು.

೯೪. ಬ್ರಹ್ಮಾಂಡಪುರಾಣವು ಹದಿನೆಂಟನೆಯದು, ಹೀಗೆ ಪುರಾಣಗಳು ಹದಿನೆಂಟು. ಇನ್ನು ಮೇಲೆ ಉಪಪುರಾಣಗಳನ್ನೂ ಹೇಳುತ್ತೇನೆ.

೯೫-೯೬. ಸನತ್ಕುಮಾರಪುರಾಣವು ಒಂದನೆಯದು, ನಾರಸಿಂಹವು ಎರಡನೆಯದು, ಆಂಡಪುರಾಣವು ಮೂರನೆಯದು, ದೂರ್ವಾಸಪುರಾಣವು ನಾಲ್ಕನೆಯದು,

ನಾರದೀಯಮುಥಾನ್ಯಂ ಚ ಕಾಪಿಲಂ ಮಾನವಂ ತಥಾ ।
ತದ್ವದೌಶನಸಪ್ರೋಕ್ತಂ ಬ್ರಹ್ಮಾಂಡಂ ಚ ತಥಾಪರಂ ॥ ೯೭ ॥

ವಾರುಣಂ ಕಾಳಿಕಾಹ್ವಾನಂ ಮಾಹೇಶಂ ಸಾಂಬಮೇವ ಚ ।
ಸೌರಂ ಪಾರಾಶರಂ ಚೈವ ಮಾರೀಚಂ ಭಾರ್ಗವಾಹ್ವಯಂ ॥ ೯೭ ॥

ಕೌಮಾರಂ ಚ ಪುರಾಣಾನಿ ಕೀರ್ತಿತಾನ್ಯಷ್ಟ ವೈ ದಶ ।
ಅಷ್ಟಾದಶಪುರಾಣಾನಾಂ ವ್ಯಾಕರ್ತಾ ತು ಭವೇನ್ಮನುಃ ॥ ೯೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ ಏಕಾದಶಾಧಿಕಶತತಮೋಽಧ್ಯಾಯಃ



---

ನಾರದೀಯಪುರಾಣವು ಐದನೆಯದು, ಕಾಪಿಲವು ಆರನೆಯದು, ಮಾನವಪುರಾಣವು ಏಳನೆಯದು, ಶುಕ್ರನು ಹೇಳಿದ ಶುಕ್ರಪುರಾಣವು ಎಂಟನೆಯದು, ಬ್ರಹ್ಮಾಂಡ ಪುರಾಣವು ಒಂಭತ್ತನೆಯದು.

೯೭. ವಾರುಣಪುರಾಣವು ಹತ್ತನೆಯದು, ಕಾಳಿಕಾಪುರಾಣವು ಹನ್ನೊಂದನೆಯದು, ಮಹೇಶಪುರಾಣವು ಹನ್ನೆರಡನೆಯದು, ಸಾಂಬಪುರಾಣವು ಹದಿಮೂರನೆಯದು, ಸೌರಪುರಾಣವು ಹದಿನಾಲ್ಕನೆಯದು, ಪಾರಾಶರಪುರಾಣವು ಹದಿನೈದನೆಯದು, ಮಾರೀಚವು ಹದಿನಾರನೆಯದು, ಭಾರ್ಗವಪುರಾಣವು ಹದಿನೇಳನೆಯದು.

೯೮. ಕೌಮಾರಪುರಾಣವು ಹದಿನೆಂಟನೆಯದು. ಈರೀತಿಯಾಗಿ ಉಪ ಪುರಾಣಗಳೂ ಹದಿನೆಂಟಿವೆ. ಈ ಹದಿನೆಂಟು ಉಪಪುರಾಣಗಳಿಗೂ ಮನುವು ವಿವರಣೆಯನ್ನು ಬರೆದಿದ್ದಾನೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ನೂರ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ದ್ವಾದಶಾಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಸಂಧ್ಯಾವಂದನಕರ್ಮ ಕ್ರಿಯತಾ-
ಮಿತಿ ರಾಮೋ ಮುನಿಮಾಚಷ್ಟಾಯಂ ।
ಉಷ್ಣದ್ಯುತಿರಸ್ಯಸ್ತಮುಪೈತಿ
ದ್ವಿಜಕುಲಮೇತನ್ನೀಡಮುಪೈತಿ ॥ ೧ ॥

ಸ್ವಯಮಪಿ ಸಂಧ್ಯಾವಂದನಕಾಮೋಽ
ವ್ರಜದುತ್ತರದಿಶಮುಜ್ಝಿತಯಾನಃ ।
ಹಾಹಾಹೂಹೂಕೃತಸಂಗೀತಿ-
ರ್ಬಂದೀಪ್ರಮುಖಪ್ರಸ್ತುತಕೀರ್ತಿಃ ॥ ೨ ॥

---

## ನೂರಹನ್ನೆರಡನೆಯ ಅಧ್ಯಾಯವು

೧. ಸೂತನು ಹೇಳಿದನು :—ಆಗ ರಾಮನು ಮುನಿಯನ್ನು ಕುರಿತು, ಸೂರ್ಯನು ಮುಳುಗುತ್ತಿದ್ದಾನೆ. ಪಕ್ಷಿಗಳೆಲ್ಲವೂ ಗೂಡಿಗೆ ಹೋಗುತ್ತಿವೆ. ಸಂಧ್ಯಾವಂದನೆಯನ್ನು ಮಾಡು ಎಂದು ಹೇಳಿದನು.

೨. ರಾಮನು ತಾನೂ ಕೂಡ ಹಾಹಾ ಹೂಹೂಗಳ ಸಂಗೀತವನ್ನು ಕೇಳುತ್ತ ಚಾರಣರು ಹೊಗಳುತ್ತಿರಲು, ವಾಹನದಿಂದಿಳಿದು ಸಂಧ್ಯಾವಂದನೆಗೋಸ್ಕರ ಉತ್ತರ ದಿಕ್ಕಿಗೆ ಹೋದನು.

ಗೌತಮೀತಟಮುಪೇತ್ಯ ರಾಘವೋ
ವಾಯುನಂದನಸುಧೌತಪದ್ಯುಗಃ ।
ಜಾಂಬವತ್ಕೃತಕರಾವಲಂಬನಃ
ಪ್ರಾಪದುತ್ಪಥನದೀಂ ತು ಗೌತಮೀಂ ॥ ೩ ॥

ಕರದ್ವಯೇ ಧೃತಕುಶಸ್ಸ ರಾಘವಃ
ಪ್ರಾಗಮುದ್ವರುಣದಿಶಾಮುಥೋತ್ತಮಾಂ ।
ದತ್ವಾ ತತೋಽರ್ಘತ್ರಿತಯಂ ತಥಾವಿಧಃ
ಪ್ರಹೃಷ್ಟರೋಮಾಥ ಜಜಾಪ ಸೋಽನ್ತರೇ ।
ಸಂಪ್ರಾರ್ಥಯಿತ್ವಾ ವರುಣಂ ಯಥಾಕ್ರಮಂ
ಶಂಭುಂ ವಸಿಷ್ಠಂ ಪ್ರಣನಾಮ ರಾಘವಃ ॥ ೪ ॥

ತಾಭ್ಯಾಂ ಕೃತಾಶೀರಗಮುನ್ಮನಃಪದಂ
ಹನೂಮತಾ ಕ್ಷಾಳಿತಪಾದಪಂಕಜಃ ।
ಜುಹಾವ ವಹ್ನಿಂ ನಥ ವಂದಿಮಾಗಧೈಃ
ಸಂಸ್ತೂಯಮಾನೋಽಥ ಚ ನಿರ್ಯಯೌ ಬಹಿಃ ॥ ೫ ॥

---

೩. ಅನಂತರ ರಾಮನು ಗೌತಮೀನದಿಯ ದಡಕ್ಕೆ ಹೋದನು. ಹನುಮಂತನು ಕಾಲುಗಳೆರಡನ್ನೂ ತೊಳೆದನು. ಜಾಂಬವಂತನು ಹಸ್ತಲಾಘವ ಕೊಡುತ್ತಿರಲು ಇಷ್ಟಬಂದಂತೆ ಹೋಗುತ್ತಿರುವ ಆ ಗೌತಮೀನದಿಯನ್ನು ಹೊಂದಿದನು.

೪. ರಾಮನು ಬೊಗಸೆಯಲ್ಲಿ ದರ್ಭೆಯನ್ನಿಟ್ಟುಕೊಂಡು ದಕ್ಷಿಣದಿಕ್ಕಿಗೆ ನಿಂತುಕೊಂಡು ಮೂರುಬಾರಿ ಅರ್ಘ್ಯವನ್ನು ಕೊಟ್ಟು ಸಂತೋಷದಿಂದ ಮನಸ್ಸಿನಲ್ಲಿಯೇ ಜಪಿಸಿದನು. ಅನಂತರ ಉಪಸ್ಥಾನರೂಪವಾದ ವರುಣ ಪ್ರಾರ್ಥನೆಯನ್ನೂ ಮಾಡಿ ಶಂಭುವನ್ನೂ ವಸಿಷ್ಠನನ್ನೂ ವಂದಿಸಿದನು.

೫. ಆ ಶಂಭು ವಸಿಷ್ಠರ ಆಶೀರ್ವಾದವನ್ನು ಹೊಂದಿ ಹನುಮಂತನು ಪುನಃ ಕಾಲನ್ನು ತೊಳೆಯಲು ಒಳಗೆ ಹೋಗಿ ಔಪಾಸನವನ್ನು ಮಾಡಿಕೊಂಡು ಅನಂತರ ವಂದಿಗಳು ಹೊಗಳುತ್ತಿರಲು ಹೊರಗೆ ಬಂದನು.

ಪ್ರಹಸಚ್ಚಂದ್ರಕಿರಣೈಃ ಸುಧಾಲಿಪ್ತಮಿವಾಂಬರಂ
ಪ್ರಸಕ್ತತಾರಾಕುಸುಮಂ ವಿತಾನಮಿವ ಸರ್ವತಃ ॥ ೬ ॥

ಅಥಾಗಚ್ಛತ್ಸೌಧತಲಂ ವೃದ್ಧಾಮಾತ್ಯೇನ ಕಲ್ಪಿತಂ ।
ನಾನಾಸನಸಮೋಪೇತಂ ಸಭಾಸ್ಥಾನಂ ಯಯೌ ನೃಪಃ ॥ ೭ ॥

ಅಥ ಮುನಿಂ ಹ್ಯುಪವೇಶ್ಯ ಸ ರಾಘವಃ
ಸ್ವಯಮಪಿ ಪ್ರಥಮಾಸನಮಾಭಜತ್ ।
ಕಪಿಗಣಾಃ ಪರಿತಃ ಪೃಥುವಿಗ್ರಹಾ
ರಚನಯಾ ಸ್ಥಿತಿಮಾಪ್ರತಿಪೇದಿರೇ ॥ ೮ ॥

ಸುಖಸ್ಥಿತಂ ನೃಪಮಭಿವೀಕ್ಷ್ಯ ಸ ದ್ವಿಜೋ
ವಚಸ್ತದಾ ಸಮುಚಿತಮಾಹ ಶಂಭುಃ ।
ಇಹಸ್ಥಿತೋ ಭವತಿ ಸಮಸ್ತಪೂಜಿತಃ
ಕಥಂ ಕಥಾ ನೃಪವರ ವರ್ತತೇ ಗುಹಾಯಾಂ ॥ ೯ ॥

---

೬. ಆಗ ಆಕಾಶವು ಚಂದ್ರನ ಕಿರಣಗಳಿಂದ ಸುಣ್ಣಬಳಿದಂತೆ ಕಾಣುತ್ತಿದ್ದಿತು. ಮತ್ತು ಮೇಲ್ಕಟ್ಟಿನಲ್ಲಿ ಇಳಿಯಾಗಿ ಬಿಟ್ಟಿರುವ ಹೂಗಳಂತೆ ನಕ್ಷತ್ರಗಳು ಆ ಆಕಾಶದಲ್ಲಿ ಪ್ರಕಾಶಿಸುತ್ತಿದ್ದುವು.

೭. ಅನಂತರ ಅರಮನೆಯ ಅಂಗಳಕ್ಕೆ ಬಂದನು. ಅಲ್ಲಿ ಆಚಾರವನ್ನು ಬಲ್ಲ ಮಂತ್ರಿಯು ಸಿದ್ಧಪಡಿಸಿದ್ದ ಅನೇಕಬಗೆಯ ಆಸನಗಳಿಂದ ಕೂಡಿದ ಸಭಾಸ್ಥಾನವನ್ನು ಆ ರಾಮನು ಹೊಂದಿದನು.

೮. ಅನಂತರ ಆ ಶಂಭುಮುನಿಯನ್ನು ಕೂರಿಸಿ ರಾಮನು ತಾನು ಅಗ್ರಾಸನದಲ್ಲಿ ಕುಳಿತನು. ಅನಂತರ ಕಪಿಗಳು ಯೋಗ್ಯತೆಗನುಸಾರವಾಗಿ ಕ್ರಮವಾಗಿ ಕುಳಿತುಕೊಂಡವು.

೯. ಆಗ ಶಂಭುವು ಆಸ್ಥಾನದಲ್ಲಿ ಸುಖವಾಗಿ ಕುಳಿತಿರುವ ಶ್ರೀರಾಮನನ್ನು ನೋಡಿ ಎಲೈ ರಾಮನೆ, ಇಲ್ಲಿ ಸಮಸ್ತ ಜನರಿಂದಲೂ ಪೂಜಿತನಾಗಿ ಕುಳಿತಿದ್ದೀಯೆ. ನಿನ್ನ ಕಥೆಯು ಮಾತ್ರ ಗುಟ್ಟಾಗಿ ಮೊದಲೇ ಹರಡಿರಲು ಕಾರಣವೇನು ಎಂದನು.

ಆಕರ್ಣ್ಯಾಥ ರಘೂದ್ವಹೋ ದ್ವಿಜವಚಃ ಶುಶ್ರೂಷುರಾಸೀತ್ಕಥಾಂ
ತತ್ರಸ್ಥೋ ನಿಪುಣಂ ನಿವಾರ್ಯ ವಚನಂ ಸರ್ವೈಶ್ಶ್ರುತಂ ತತ್ಕ್ಷಣಾತ್ ।
ಶುಶ್ರಾವಾಥ ಕಥಾಂ ಮಹಾದ್ಭುತತಯಾ ಸ್ವಾತ್ಮಾಶ್ರಯಾಮನ್ಯಥಾ
ರಕ್ಷೋಬಾಧನವಾದಿನೀಮಥ ನೃಪಃ ಕಿಂ ತ್ವೇತದಿತ್ಯಾಹ ಚ ॥ ೧೦ ॥

ಕುಂಭಶ್ರೋತ್ರವಧಃ ಪುರಾ ಸಮುಜನಿ ಪ್ರಾಪ್ತೋ ದಶಾಸ್ಯೋ ವಧಂ
ಪಶ್ಚಾದಿತ್ಯಯಮನ್ಯಥಾ ವಿರಚಿತಂ ರಾಮಾಯಣಂ ಭಾಷತೇ ।
ಕೋಽಯಂ ವಿಪ್ರವರಃ ಸಮಸ್ತಜನತಾನಾಸ್ತಿತ್ವಸಂಪಾದಕೋ
ರಾಜ್ಞಾಂ ಸ್ಥಾನಮುಪೇತ್ಯ ವಕ್ತಿ ಸ ಮಯಾ ದಂಡ್ಯೋಽಥ ಪೂಜ್ಯೋಽಥ ವಾ
॥ ೧೧ ॥

ಅಥಾಹ ಜಾಂಬವಾನಮುಂ ರಘೂತ್ತಮಂ ಕಥಾಂ ಪ್ರತಿ
ರಾಮಾಯಣಂ ನ ತಾವಕಂ ತ್ವಿದಂ ತು ಕಲ್ಪಿತಂ ಮತಂ ।
ಸಮಸ್ತಮತ್ರ ವಿಸ್ತರಾದ್ವದಾಮಿ ದೇವ ತಚ್ಛೃಣು
ಪಂಕೇರುಹಸ್ಯ ಸೂನುತೋ ಮಯಾ ಶ್ರುತಂ ಪುರಾ ಹ್ಯಭೂತ್ ॥ ೧೨ ॥

---

೧೦. ಶ್ರೀರಾಮನು ಆ ಬ್ರಾಹ್ಮಣನ ಮಾತನ್ನು ಕೇಳಿ ಕಥೆಯನ್ನು ಕೇಳಲು ಆಸೆಪಟ್ಟನು,- ಸಭಾಸ್ಥಾನದಲ್ಲಿ ಚತುರತೆಯಿಂದ ಗದ್ದಲವನ್ನು ನಿಲ್ಲಿಸಲು, ಎಲ್ಲರೂ ಅದನ್ನು ಕೇಳಿದರು. ತನ್ನನ್ನು ಆಶ್ರಯಿಸಿದ, ರಾವಣಾದಿಗಳನ್ನೂ ಕೊಂದ ಕಥೆಯನ್ನು ಬೇರೆಯವರು ಮಾಡಿದರೆಂಬ ಆಶ್ಚರ್ಯವನ್ನು ಕೇಳಿ, ನೀನು ಹೇಳುವುದು ಇದೇನು ಎಂದನು.

೧೧. ಕುಂಭಕರ್ಣನನ್ನು ಮೊದಲು ಕೊಂದೆ, ಅನಂತರ ರಾವಣನ ವಧೆಯು ನಡೆಯಿತು. ಎಂಬುದಾಗಿ ಈತನು ರಾಮಾಯಣವನ್ನು ಮೊದಲೇ ಬೇರೆಯವರು ಮಾಡಿದ್ದರು ಎಂದು ಹೇಳುತ್ತಾನಲ್ಲ. ಈ ಬ್ರಾಹ್ಮಣನಾರು? ಎಲ್ಲರಿಗೂ ರಾಜಾಸ್ಥಾನದಲ್ಲಿ ಬಂದು ನಾಸ್ತಿಕ್ಯಬುದ್ಧಿಯನ್ನುಂಟುಮಾಡುತ್ತಾನಲ್ಲ. ನಾನು ಇವನನ್ನು ಸುಳ್ಳು ಹೇಳುವನೆಂದು ಶಿಕ್ಷಿಸಬೇಕೆ? ಅಥವಾ ಇವನು ಹೇಳುವ ಯುಕ್ತಿವಾದವನ್ನು ಗೌರವಿಸಬೇಕೆ?

೧೨. ಆಗ ಜಾಂಬವನು ಶ್ರೀರಾಮನನ್ನು ಕುರಿತು ಎಲೈ ರಾಘವನೇ, ಈ ರಾಮಾಯಣವು ನಿನ್ನದಲ್ಲ, ಕಲ್ಪಿತವಾದುದು, ನಾನು ಪೂರ್ವದಲ್ಲಿ ಬ್ರಹ್ಮನಿಂದ ಕೇಳಿದ್ದೆನು. ಅದೆಲ್ಲವನ್ನೂ ಈಗ ವಿಸ್ತಾರವಾಗಿ ಆಗ ಕೇಳಿದ್ದಂತೆಯೇ ಹೇಳುತ್ತೇನೆ ಕೇಳು ಎಂದನು.

ಜಾಂಬವಂತಂ ವಿಜ್ಞಾಪ್ಯ ರಾಮಚಂದ್ರೋ ವಚನಮಾಹ ॥ ೧೩ ॥

॥ ಶ್ರೀ ರಾಮ ಉವಾಚ ॥

ಕೀರ್ತಯ ಪುರಾಣಂ ಮೇ ಶುಶ್ರೂಷುಃ ಕುತೂಹಲಾದಹಂ
ಪ್ರಣೀತಂ ತತ್ಕೇನ ಚ ವಿಜ್ಞಾತಂ ॥ ೧೪ ॥

ಜಾಂಬವಾನಥ ಬಭಾಷೇ ಹಿ ॥ ೧೫ ॥

ವಿಧಾತ್ರೇ ನಮಸ್ತಥೈವ ವಿಧುಭೂಷಣಕೇಶವಾಭ್ಯಾಂ ॥ ೧೬ ॥

ಅಥ ಪುರಾತನರಾಮಾಯಣಂ ಕಥಯಾಮಿ ಯಸ್ಯ ಶ್ರವಣೇ-
ನಾಖಿಲಜನ್ಮಸಂಪಾದಿತಪಾಪಕ್ಷಯೋ ಜಾಯತೇ ॥ ೧೭ ॥

ಅಥ ತಥಾಪಿ ದಶರಥೋ ದಶರಥಸಮಾನರಥೀ ಮಹೀಯಸಾ
ಬಲೇನ ಸುಮನಸಂ ನಾಮ ನಗರಂ ಜಿಗಮಿಷಯಾ ಪಂಕೇರುಹ-
ಸುತಸುತಂ ವಸಿಷ್ಠಮಾಹೂಯ ನಮಸ್ಕೃತ್ವಾ ಮುನಿದತ್ತಾ-

---

೧೩. ಜಾಂಬವಂತನ ವಿಜ್ಞಾಪನೆಯನ್ನು ಕೇಳಿ ರಾಮಚಂದ್ರನು ಇಂತೆಂದನು.

೧೪. ಶ್ರೀರಾಮನು ಹೇಳಿದನು :—ಆ ಪುರಾಣವನ್ನು ನನಗೆ ಹೇಳು. ನಾನು ಕೇಳಬೇಕೆಂದಿದ್ದೇನೆ. ಯಾರು ಆ ರಾಮಾಯಣವನ್ನು ಬರೆದರು ? ಯಾರಿಗೆ ಮೊದಲು ಗೊತ್ತಾಯಿತು ?

೧೫-೧೬. ಅನಂತರ ಜಾಂಬವಂತನು ಹೇಳಿದನು:—ಬ್ರಹ್ಮನಿಗೆ ನಮಸ್ಕಾರವು. ಹಾಗೆಯೇ ಚಂದ್ರಶೇಖರ ವಿಷ್ಣುಗಳಿಗೂ ನಮಸ್ಕಾರವು.

೧೭. ಮೊದಲು ಹಿಂದಿನ ರಾಮಾಯಣವನ್ನು ಹೇಳುತ್ತೇನೆ. ಅದನ್ನು ಕೇಳುವುದರಿಂದ ಸಕಲ ಜನ್ಮಗಳಲ್ಲಿಯೂ ತಾನು ಮಾಡಿರುವ ಪಾಪವು ನಾಶವಾಗುತ್ತದೆ.

೧೮. ಅನಂತರ ಹತ್ತುಜನ ರಥಿಕರಿಗೆ ಸಮಾನನಾದ ದಶರಥನು ಬಹುವಾದ ಸೈನ್ಯದೊಡನೆ ಹೋಗಿ ಸುಮನಸವೆಂಬ ಪಟ್ಟಣವನ್ನು ಜಯಿಸಬೇಕೆಂದು ಬ್ರಹ್ಮನ ಮಗನಾದ ವಸಿಷ್ಠನನ್ನು ಕರೆಸಿ, ಆತನಿಗೆ ನಮಸ್ಕರಿಸಿ ಅವನ ಆಶೀರ್ವಾದವನ್ನು ಹೊಂದಿ,

ನುಜ್ಞಃ ಶತಾಕ್ಷೌಹಿಣೀಸೇನಯಾ ಸಹಾರುಹ್ಯ ತುರಗಮುಖ್ಯಂ
ಚಂದ್ರಸಮಾನಶರೀರಮತಿರೋಷಸಮಾವಿಷ್ಟೋ ವಿಷ್ಟರಶ್ರವ-
ಸಮಾರಾಧ್ಯ ದಂಡಯಾತ್ರಾಂ ಚಕಾರ ॥ ೧೮ ॥

ಸಾಧ್ಯೋ ನಾಮ ಸ್ವೀಯಯಾ ಸೇನಯಾ ವೃತೋ ದಶರಥಾಭಿ
ಮುಖಮಾಯಯೌ ಯೋದ್ಧುಂ ಯುದ್ಧಂ ಚಾನ್ಯೋನ್ಯಮ
ಭೂತ್ ॥ ೧೯ ॥

ಮಾಸಮೇಕಂ ಯುದ್ಧಂ ಕೃತ್ವಾ ದಶರಥಸ್ತಂ ಸಾಧ್ಯಂ ಜಗ್ರಾಹ ॥೨೦॥

ಅಥ ಸಾಧ್ಯಸೂನುರ್ಭೂಷಣೋ ನಾಮಾಲ್ಪಪರಿವಾರೋ ಯು-
ಯುಧೇ ದಶರಥೇನ ॥ ೨೧ ॥

ದಶರಥೋಽಪಿ ಸಾಧ್ಯಸೂನುಂ ಭುವೋ ಭೂಷಣಮವಲೋಕ್ಯ
ಯೋದ್ಧುಮೇವ ನೈಚ್ಛತ್ ॥ ೨೨ ॥

---

ಅವನ ಒಪ್ಪಿಗೆಯಿಂದ ನೂರು ಅಕ್ಷೌಹಿಣೀ ಸೇನೆಯೊಡನೆ ಚಂದ್ರನಂತೆ ಬೆಳ್ಳಗಿರುವ ಉತ್ತಮವಾದ ಕುದುರೆಯ ಮೇಲೆ ಕುಳಿತುಕೊಂಡು ಬಹು ಕೋಪದಿಂದ ಕೂಡಿ. ವಿಷ್ಣುವನ್ನು ಪೂಜಿಸಿ, ಯುದ್ಧಕ್ಕೆ ಹೊರಟನು.

೧೯. ಅಲ್ಲಿನ ದೊರೆಯಾದ ಸಾಧ್ಯನೆಂಬುವನು ತನ್ನ ಸೇನೆಯೊಡನೆ ದಶರಥನ ಎದುರಿಗೆ ಯುದ್ಧಮಾಡಲು ಹೊರಟುಬಂದನು. ಇಬ್ಬರಿಗೂ ಯುದ್ಧವು ನಡೆಯಿತು.

೨೦. ಒಂದು ತಿಂಗಳವರೆಗೆ ಯುದ್ಧಮಾಡಿ ದಶರಥನು ಆ ಸಾಧ್ಯನನ್ನು ಹಿಡಿದನು.

೨೧. ಅನಂತರ ಆ ಸಾಧ್ಯನ ಮಗನಾದ ಭೂಷಣನೆಂಬುವನು ಸ್ವಲ್ಪ ಸೇನೆ ಯೊಡನೆ ಬಂದು ಆ ದಶರಥನೊಡನೆ ಯುದ್ಧಮಾಡಿದನು.

೨೨. ದಶರಥನಾದರೋ ಲೋಕಕ್ಕೇ ಭೂಷಣದಂತಿರುವ ಆ ಭೂಷಣನನ್ನು ನೋಡಿ ಅವನೊಡನೆ ಯುದ್ಧಮಾಡಲು ಇಚ್ಛಿಸಲಿಲ್ಲ.

**ಕಥಮೇತಾದೃಶಂ ಹನ್ಮಿ ಚಾಸ್ಮಿನ್ಹತೇಽಸ್ಯ ಕಥಂ ಪಿತಾ ಭವಿಷ್ಯತಿ ಕಥಂ ತನ್ಮಾತಾ ಕಥಮುಪ್ರೌಢಯೌವನಾ ಪ್ರಿಯಾ ಭಾರ್ಯಾಮುಷ್ಯ ಹಿ ದೇಹೇ ಸಮಾಲಿಂಗನಚುಂಬನಪರಿವರ್ತಿನವೀನತರದಳಾರವಿಂದಪದಾನಿ ಕುಸುಮಾನೀವ ದೃಶ್ಯಂತೇ ॥ ೨೩ ॥**

**ಏತತ್ಸಮಾನವರ್ಣವಯಾ ಏತಾದೃಶಸುಭಗಃ ಪರಮಪ್ರೀತಿವರ್ಧನೋ ನಾಮ ಪುತ್ರೋ ಭಲ್ಲೂಕಭಕ್ಷಿತೋ ಮೃತಃ ಸ್ಮೃತಿಮಯಂ ಪ್ರಾಪ್ಯಾಪಿ ಮಾಂ ರಕ್ಷಯಿತುಮಿಚ್ಛತೀವ ಮಮ ಹೃದಯಮನ್ಯಥಾ ಕರೋತೀತಿ ಮನಸಾ ವಿತರ್ಕ್ಯಾತಿಬಾಲಕಂ ಗ್ರಹೀತುಮಾರಭತ ॥ ೨೪ ॥**

**ಸ ಚ ಸಾಧ್ಯೋಽಪಿ ಪರಾಧೀನೋ ಬಭೂವ ॥ ೨೫ ॥**

---

೨೩. ಈರೀತಿ ಇರುವ ಇವನನ್ನು ಹೇಗೆ ಕೊಲ್ಲಲಿ? ಇವನನ್ನು ಕೊಂದ ಮೇಲೆ ಇವನ ತಂದೆಯು ಹೇಗೆತಾನೇ ಬದುಕಿಯಾನು? ತಾಯಿಯ ಗತಿಯೇನು? ಈಗತಾನೇ ಸಮಾಗಮವನ್ನು ಹೊಂದಿರುವ ಪ್ರೌಢವಯಸ್ಸು ಅತಿಯಾಗದಿರುವ ಪ್ರೀತಿಪಾತ್ರಳಾದ ಈತನ ಹೆಂಡತಿಯ ಗತಿಯೇನು? ಇವನ ಮೈಯಲ್ಲಿ ಅಪ್ಪಿಕೊಳ್ಳುವುದು, ಮುತ್ತಿಡುವುದು, ಇವುಗಳಿಂದ ಕೆಂಪಾಗಿ ಅತಿ ಹೊಸದಾದ ಕಮಲದ ಎಸಳಿನಂತೆ ಕಾಣುವ ಈತನ ಕಾಲುಗಳು ಹೂವಿನಂತೆ ಕಾಣುತ್ತವೆ.

೨೪. ಇವನಿಗೆ ಸಮವಾದ ಬಣ್ಣ, ವಯಸ್ಸುಗಳುಳ್ಳ, ಇವನಂತೆಯೇ ಸುಂದರನಾದ ಪರಮಪ್ರೀತಿವರ್ಧನನೆಂಬ ಹೆಸರುಳ್ಳ ಮಗನನ್ನು ಹುಲಿಯು ತಿಂದುಹಾಕಿ ಅವನೂ ಸತ್ತುಹೋದನು. ಅದೂ ನನಗೆ ಜ್ಞಾಪಕಕ್ಕೆ ಬಂದು ಇವನನ್ನು ಕಾಪಾಡಲು ಇಚ್ಛೆಯುಂಟಾಗುತ್ತದೆ. ಈ ಕಾರಣಗಳಿಂದ ನನ್ನ ಮನಸ್ಸೇ ಬೇರೆಯಾಗಿ ಇವನನ್ನು ಕಾಪಾಡುವಂತೆ ಮಾಡುತ್ತಿದೆ ಎಂದು ಯೋಚಿಸಿ ಆ ಹುಡುಗನ ಮೇಲೆ ಬಿದ್ದು ಹಿಡಿಯಲು ಪ್ರಯತ್ನಪಟ್ಟನು.

೨೫. ಆ ಸಾಧ್ಯನೂ ಕೂಡ ದಶರಥನಿಗೆ ಸಿಕ್ಕಿಬಿದ್ದನು.

ಸ ಚ ಕುಮಾರೇಣ ಸಹ ಪರಾಜಯಖೇದಮುಮತ್ವಾ ಸುಖ-
ಮುಧ್ಯುವಾಸ ಚ ॥ ೨೬ ॥

ಸ ದಶರಥೋಽಪಿ ತತ್ರ ಮಾಸಂ ಸ್ಥಿತ್ವಾ ತತ್ಪುತ್ರ ಸಂದರ್ಶನ
ಸುಖಮವಲೋಕ್ಯಾಚಿಂತಯತ್ ॥ ೨೭ ॥

ಅಹೋ ಸರ್ವದುಃಖಾಪನೋದನಕ್ಷಮಮೇತನ್ಮುಖಾವಲೋ
ಕನಂ ಪುತ್ರಸಂವರ್ಧನಂ ನಾಮ ॥ ೨೮ ॥

ಸರ್ವರಾಷ್ಟ್ರಕೋಽಪಿ ಮಮ ಜಯಃ ಪುತ್ರವಿಯೋಗಮನು-
ಸ್ಮರತೋ ದುಃಖಾಯ ಕೇವಲಂ ಭವತಿ ತದಸ್ಯ ಪೃಚ್ಛಾಂ
ಕರೋಮಿ ಕಥಮೀದೃಶೋ ಜಾಯತೇ ಪುತ್ರ ಇತಿ ವಿತರ್ಕ್ಯ
ತಮಪೃಚ್ಛತ್ ॥ ೨೯ ॥

ಸಾಧ್ಯೋಽಪಿ ಸಕಲಮೋಕ್ಷಮಾರ್ಗಂ ಕ್ಷಿತೀಶಾಯಾದಿಶತ್ ॥ ೩೦ ॥

---

೨೬. ಆ ಸಾಧ್ಯನು ಮಗನಾದ ಭೂಷಣನೊಡನೆ ಸೋತ ದುಃಖವನ್ನು ಲೆಕ್ಕಿಸದೆ ಸುಖವಾಗಿದ್ದನು.

೨೭. ಆ ದಶರಥನೂ ಕೂಡ ಆ ಸಾಧ್ಯನು ಮಗನನ್ನು ನೋಡಿ ಸಂತೋಷ ಪಡುವುದನ್ನು ತಿಳಿದು ತಾನು ಯೋಚಿಸಿದನು.

೨೮. ಈ ಹುಡುಗನ ಮುಖದರ್ಶನವು ಎಲ್ಲ ದುಃಖಗಳನ್ನೂ ನಾಶಮಾಡುತ್ತದೆ. ಆಶ್ಚರ್ಯವು. ಇಂತಹ ಹುಡುಗನನ್ನು ಸಾಕುತ್ತಿದ್ದರೆ ಹೇಗಿರಬಹುದು!

೨೯. ನಾನು ಎಲ್ಲಾ ಲೋಕಗಳನ್ನೂ ಗೆದ್ದಿದ್ದರೂ ಆ ಜಯವು, ನನಗೆ ಮಗನಿಲ್ಲದಿರುವುದನ್ನು ಜ್ಞಾಪಿಸಿಕೊಂಡರೆ ಬಹಳ ದುಃಖವನ್ನುಂಟುಮಾಡುತ್ತದೆ. ಆದ್ದರಿಂದ ಇಂತಹ ಮಗನನ್ನು ಏನುಮಾಡಿದರೆ ಪಡೆಯಬಹುದೆಂದು ಇವನನ್ನೇ ಕೇಳುತ್ತೇನೆ. ಎಂದು ಯೋಚಿಸಿ ಅವನನ್ನು ಕೇಳಿದನು.

೩೦. ಸಾಧ್ಯನೂ ಕೂಡ ದಶರಥನಿಗೆ ಸಕಲ ಮೋಕ್ಷಮಾರ್ಗವನ್ನು ತಿಳಿಸಿದನು.

ಹರೀಶಾನೌ ಸಹಾರಾಧ್ಯ ಸರ್ವೈಕಾದಶೀರುಪೋಷ್ಯ ದ್ವಾದಶೀಷು
ಬ್ರಾಹ್ಮಣಾನಾರಾಧ್ಯ ತತ್ಕಾಲಭವಂ ಫಲಪೂರ್ವಮನ್ನಾದ್ಯಂ
ವ್ಯಂಜನಂ ಪುಷ್ಪಂ ವಾ ನ್ಯಾಯೇನ ಸಂಪಾದ್ಯ ಕಪಿಲಾಘೃತೇನ
ಕೇಶವಂ ಸ್ನಾಪಯಿತ್ವಾ ಮುದ್ಗಚೂರ್ಣೇನ ಸಂಲಿಪ್ಯ ಸ್ವಾದೂ
ದಕೇನ ಸ್ನಾಪಯಿತ್ವಾ ಸುರಭಿಪಟೀರಂ ಸ್ವಯಮುದ್ಘೃಷ್ಟಂ
ಮೃಗನಾಭ್ಯಾಗರುಸಾರೇಣ ವಾ ಸಮೇತಂ ದೇವಾಂಗೇ ಸರ್ವ
ಮುಪಲಿಪ್ಯ ತುಳಸೀದಳೈರ್ಯೂಥಿಕಾಕರವೀರನೀಲೋತ್ಪಲ
ಕಮಲಕೋಕನದದ್ರೋಣಕುಸುಮಮರುವಕದಮನಕಗಿರಿಕ
ರ್ಣಿಕಾಕೇತಕೀದಳಪೂರ್ವೈರ್ಯಥಾಸಂಭವಮಭ್ಯರ್ಚ್ಯ ದ್ವಾದಶಾ
ಕ್ಷರೇಣ ಪುರುಷಸೂಕ್ತೇನ ವಾ ನಾಮ್ನಾ ವಾ ಷೋಡಶೋಪ
ಚಾರೇಣ ವಾರಾಧ್ಯ ಪ್ರಣಮ್ಯ ನೃತ್ಯಂ ಕೃತ್ವಾ ದೇವಂ ಕ್ಷಮಾ
ಪಯೇತ್ ॥ ೩೧ ॥

---

೩೧. ಶಿವವಿಷ್ಣುಗಳನ್ನು ಜೊತೆಯಲ್ಲಿಯೇ ಪೂಜಿಸಿ, ಏಕಾದಶಿಗಳು ಬಂದಾಗ ಲೆಲ್ಲಾ ಉಪವಾಸಮಾಡಿ, ದ್ವಾದಶಿಯ ದಿನ ಬ್ರಾಹ್ಮಣರನ್ನು ಪೂಜಿಸಿ, ಆ ಋತುವಿನ ಹಣ್ಣುಗಳನ್ನೂ ಸಂಪಾದಿಸಿ, ಅವನ್ನೂ ಅನ್ನವೇ ಮೊದಲಾದ ವ್ಯಂಜನಗಳನ್ನೂ, ಹೂವನ್ನೂ ಕೂಡ, ನ್ಯಾಯಮಾರ್ಗದಿಂದ ಸಂಪಾದಿಸಿ, ಅವರಿಗೆ ಅರ್ಪಿಸಿ ತೃಪ್ತಿಪಡಿಸ ಬೇಕು. ಕಪಿಲೆಯ ಹಸುವಿನ ತುಪ್ಪದಿಂದ ಕೇಶವನಿಗೆ ಅಭಿಷೇಕಮಾಡಿ, ಹೆಸರು ಹಿಟ್ಟಿನಿಂದ ಉಜ್ಜಿ, ಒಳ್ಳೆಯ ನೀರಿನಿಂದ ಸ್ನಾನಮಾಡಿಸಿ, ವಾಸನೆಯಾಗಿರುವ ಶ್ರೀಗಂಧ ವನ್ನು ತಾನೇ ತೇದು, ಅದಕ್ಕೆ ಕಸ್ತೂರಿ ಅಗರುಗಳನ್ನು ಮಿಶ್ರಮಾಡಿ ದೇವರ ಮೈಗೆಲ್ಲಾ ಪೂಸಿ ತುಳಸಿದಳ, ಗರುಗ, ಕಣಿಗಲೆ, ಕನ್ನೈದಿಲೆ, ಕಮಲ, ನೀಲೋತ್ಪಲ, ತುಂಬೆಹೂ, ಮರುಗ, ದವನ, ಗಿರಿಕರ್ಣಿಕೆ, ತಾಳೇಹೂಗಳಿಂದ ಶಕ್ತಿಗನುಗುಣವಾಗಿ ಪೂಜಿಸಿ, ದ್ವಾದಶಾಕ್ಷರ ಮಂತ್ರದಿಂದಾಗಲಿ (ಓಂನಮೋಭಗವತೇ ವಾಸುದೇವಾಯ) ಪುರುಷಸೂಕ್ತದಿಂದಾಗಲಿ, ಹನ್ನೆರಡು ಹೆಸರು ಅಥವಾ ಇಪತ್ತುನಾಲ್ಕು ಹೆಸರು ಗಳಿಂದಾಗಲಿ, ಷೋಡಶ (ಹದಿನಾರು) ಉಪಚಾರಗಳಿಂದಾಗಲಿ ಪೂಜಿಸಿ ನಮಸ್ಕರಿಸಿ, ನರ್ತನವನ್ನು ಮಾಡಿ, ಕ್ಷಮೆಯನ್ನು ಕೇಳಿಕೊಳ್ಳಬೇಕು.

ತಥಾ ವ್ರತಾನಿ ಚ ವಿಚಿತ್ರಾಣಿ ನಾರಾಯಣಪ್ರೀಣನಾಯ ಕುರ್ಯಾತ್ ॥ ೩೨ ॥

ಪ್ರಸನ್ನೋ ಭಗವಾನ್ಸ್ವನಿರೀಕ್ಷಿತಂ ಪುತ್ರಂ ಯಚ್ಛತಿ ತದಮುಮಾರಾಧಯಸ್ವೇತಿ ದಶರಥಮುಕ್ತವಾನ್ ॥ ೩೩ ॥

ಸ ಚಾಪಿ ಸಾಧ್ಯಂ ತತಸ್ಸ್ಥಾಪ್ಯ ಗತ್ವಾಯೋಧ್ಯಾಂ ತಥಾ ಸರ್ವಂ ಕೃತವಾನ್ ॥ ೩೪ ॥

ಅಥ ಪುತ್ರಕಾಮೇಷ್ಟೌ ಸಮಾಪ್ತಾಯಾಮಾಹವನೀಯಾದ್ಯಜ್ಞೋ ಮೂರ್ತಿಮಾನ್ಭೂತಃ ಶಂಖಚಕ್ರಗದಾಪಾಣಿರುದತಿಷ್ಠತ್ ॥ ೩೫ ॥

ರಾಜಾನಂ ವರಂ ವೃಣೀಷ್ವೇತ್ಯುಕ್ತವಾನ್ ॥ ೩೬ ॥

---

೩೨. ಹೀಗೆಯೇ ಇನ್ನೂ ಅನೇಕ ಬಗೆಯಾದ ವ್ರತಗಳನ್ನು ನಾರಾಯಣನ ಪ್ರೀತ್ಯರ್ಥವಾಗಿ ಮಾಡಬೇಕು.

೩೩. ಪೂಜ್ಯನಾದ ಸ್ವಾಮಿಯು ಸಂತೋಷಪಟ್ಟು ನೀನು ಅಪೇಕ್ಷಿಸುವಂತಹ ಮಗನನ್ನು ಕೊಡುತ್ತಾನೆ. ಆದ್ದರಿಂದ ಈ ವಿಷ್ಣುವನ್ನು ಪೂಜಿಸು ಎಂದು ದಶರಥನಿಗೆ ಹೇಳಿದನು.

೩೪. ಆ ದಶರಥನು ಸಾಧ್ಯನನ್ನು ಆ ಸುಮನಸ್ಸೆಂಬ ಅವನ ಪಟ್ಟಣದಲ್ಲಿಯೇ ಸ್ಥಾಪಿಸಿ ಅಯೋಧ್ಯೆಗೆ ಹೋಗಿ ಹಾಗೆಯೇ ಎಲ್ಲವನ್ನೂ ಸಹ ಮಾಡಿದನು.

೩೫. ಅನಂತರ ದಶರಥನು ಪುತ್ರಕಾಮೇಷ್ಟಿಯಾಗವನ್ನು ಮಾಡಲು, ಆ ಯಜ್ಞವು ಮುಗಿಯುತ್ತಿರುವಾಗ ಆಹವನೀಯವೆಂಬ ಅಗ್ನಿಯಿಂದ ಯಜ್ಞಪುರುಷನು ಶಂಖ, ಚಕ್ರ, ಗದೆಗಳನ್ನು, ಕೈಯಲ್ಲಿ ಹಿಡಿದುಕೊಂಡು ಪ್ರತ್ಯಕ್ಷವಾಗಿ ಬಂದನು.

೩೬. ರಾಜನಾದ ದಶರಥನನ್ನು ಕುರಿತು ಬೇಕಾದ ವರವನ್ನು ಕೇಳಿಕೋ ಎಂದನು.

ಸ ಚ ರಾಜಾ ವವ್ರೇ ಪುತ್ರಾನತಿಧಾರ್ಮಿಕಾನ್ದೀರ್ಘಾಯುಷಶ್ಚ-
ತುರೋ ಲೋಕೋಪಕಾರಕಾನ್ದೇಹೀತಿ ॥ ೩೭ ॥

ಅಥ ರಾಜಮಹಿಷ್ಯಶ್ಚತಸ್ರಃ ಕೌಸಲ್ಯಾ ಸುಮಿತ್ರಾ ಸುರೂಪಾ
ಸುವೇಷಾ ಚೇತಿ ರಾಜಾನಮಬ್ರುವನ್ದೇವ ಪ್ರತಿಯೋಷ
ಮೇಕೇನ ಪುತ್ರೇಣ ಭವಿತವ್ಯಂ ॥ ೩೮ ॥

॥ ಅಥ ಕೌಸಲ್ಯೋವಾಚ ॥

ಏಷ ಯದಿ ಪ್ರಸನ್ನೋ ದೇವಸ್ತದಯಮುತ್ಪದ್ಯತಾಂ ಮಮ ॥ ೩೯ ॥

॥ ರಾಜೋವಾಚ ॥

ಮಮ ದಿಷ್ಟಂ ತದಯಂ ಪ್ರಾರ್ಥ್ಯತೇ ಹರಿಃ ॥ ೪೦ ॥

ವಿಷ್ಣೋ ಪ್ರಸೀದ ದೇವೇಶ ಕಮಲಾಪತೇ ಶಂಖಚಕ್ರಗದಾಧರ
ವಿಭೀಷಣಸೃಷ್ಟಿಸಮಸ್ತಲೋಕಪಾಲಾದಿಪೂಜಿತಪಾದಯುಗಳ

---

೩೭. ಆ ರಾಜನು ಬಹು ಧರ್ಮಿಷ್ಠರಾದ, ದೀರ್ಘಾಯುಸ್ಸನ್ನು ಹೊಂದಿರುವ, ಲೋಕೋಪಕಾರಕರಾದ ನಾಲ್ಕು ಜನ ಮಕ್ಕಳನ್ನು ಕೊಡೆಂದು ಕೇಳಿದನು.

೩೮. ಅನಂತರ ರಾಜನ ಹೆಂಡತಿಯಾದ ಕೌಸಲ್ಯೆ, ಸುಮಿತ್ರೆ, ಸುರೂಪೆ, ಸುವೇಷೆಯೆಂಬ ನಾಲ್ವರು ಎಲೈ ದೊರೆಯೇ, ನಮ್ಮ ನಾಲ್ವರಲ್ಲಿಯೂ ಒಬ್ಬೊಬ್ಬರಿಗೂ ಒಬ್ಬೊಬ್ಬ ಮಗನಾಗಬೇಕು, ಎಂದು ಕೇಳಿಕೊಂಡರು.

೩೯. ಕೌಸಲ್ಯೆಯು ಹೇಳಿದಳು:—ಈ ಸ್ವಾಮಿಯು ಪ್ರಸನ್ನನಾಗಿರುವುದಾದರೆ ಇವನೇ ನನ್ನಲ್ಲಿ ಹುಟ್ಟಲಿ.

೪೦. ರಾಜನು ಹೇಳಿದನು:—ನನ್ನ ಅದೃಷ್ಟವು ಈ ಹರಿಯನ್ನೇ ಕೇಳಿಕೊಳ್ಳುತ್ತೇನೆ

೪೧. ವಿಷ್ಣುವೇ ಪ್ರಸನ್ನನಾಗು, ದೇವತೆಗಳಿಗೆ ಒಡೆಯನಾದ, ಲಕ್ಷ್ಮಿಗೆ ಗಂಡನಾದ, ಶಂಖಚಕ್ರಗದೆಗಳನ್ನು ಧರಿಸಿರುವ, ವಿಭೀಷಣ, ಸಮಸ್ತ ಪ್ರಾಣಿಗಳು, ಲೋಕ

**ಶಾಶ್ವತ ನಮಸ್ತೇ ನಮಸ್ತ ಏವಂ ಸ್ತುತೋ ಭಗವಾನಥ ರಾಜಾ-
ನಮಾಹ ॥ ೪೧ ॥**

**॥ ಮಾಧವ ಉವಾಚ ॥**

**ತವ ಪುತ್ರೋ ಭವಿಷ್ಯಾಮಿ ಕೌಸಲ್ಯಾಯಾಮಥ ಚರುಂ ಪ್ರವಿ
ವೇಶ ಹರಿಸ್ತಂ ಚರುಂ ಹಿ ಚತುರ್ಧಾ ವಿಭಜ್ಯ ಭಾರ್ಯಾಭ್ಯೋ
ದತ್ತವಾನ್ ॥ ೪೨ ॥**

**ಅಥ ಕೌಸಲ್ಯಾಯಾಂ ರಾಮೋ ಲಕ್ಷ್ಮಣಸ್ಸುಮಿತ್ರಾಯಾಂ
ಸುರೂಪಾಯಾಂ ಭರತಃ ಸುವೇಷಾಯಾಂ ಶತ್ರುಘ್ನೋ
ಜಜ್ಞೇ ॥ ೪೩ ॥**

**ಖಾತ್ಪುಷ್ಪವೃಷ್ಟಿಶ್ಚ ಪಪಾತ ॥ ೪೪ ॥**

**ಅಥ ಚತುರಾನನಃ ಸ್ವಯಮುಪೇತ್ಯ ಜಾತಕರ್ಮಾದಿಕಾಃ
ಕ್ರಿಯಾಶ್ಚಕ್ರೇ ॥ ೪೫ ॥**

---

ಪಾಲಕರು, ಇವರೇ ಮೊದಲಾದವರಿಂದ ನಮಸ್ಕರಿಸಲ್ಪಟ್ಟ ಎರಡು ಕಾಲುಗಳುಳ್ಳ ವನೇ, ನಾಶವಿಲ್ಲದವನೇ, ಹರಿಯೇ, ನಿನಗೆ ನಮಸ್ಕಾರವು, ನಿನಗೆ ನಮಸ್ಕಾರವು. ಈ ರೀತಿ ದಶರಥನು ಸ್ತೋತ್ರಮಾಡಲಾಗಿ ಆ ಭಗವಂತನು ದಶರಥನನ್ನು ಕುರಿತು ಇಂತೆಂದನು.

೪೨. ಮಾಧವನು ಹೇಳಿದನು:—ನಿನಗೆ ಮಗನಾಗಿ ಹುಟ್ಟುತ್ತೇನೆಂದು ಹೇಳಿ, ಆಚರುವನ್ನು ವಿಷ್ಣುವು ಪ್ರವೇಶಿಸಿದನು. ರಾಜನು ಆಚರುವನ್ನು (ಹೋಮ ದ್ರವ್ಯವನ್ನು) ನಾಲ್ಕು ಭಾಗವಾಗಿ ಭಾಗಿಸಿ ಆ ನಾಲ್ವರು ಹೆಂಡರಿಗೆ ಕೊಟ್ಟನು.

೪೩. ಅನಂತರ ಕೌಸಲ್ಯೆಯಲ್ಲಿ ರಾಮನೂ, ಸುಮಿತ್ರೆಯಲ್ಲಿ ಲಕ್ಷ್ಮಣನೂ, ಸುರೂಪೆಯಲ್ಲಿ ಭರತನೂ, ಸುವೇಷೆಯಲ್ಲಿ ಶತ್ರುಘ್ನನೂ ಹುಟ್ಟಿದರು.

೪೪. ಅಂತರಿಕ್ಷದಿಂದ ಹೂಮಳೆ ಸುರಿಯಿತು.

೪೫. ಆಗ ಬ್ರಹ್ಮನು ತಾನಾಗಿಯೇ ಬಂದು ಜಾತಕರ್ಮವೇ ಮುಂತಾದ ಸಂಸ್ಕಾರಗಳನ್ನು ಮಾಡಿದನು.

ತ್ರಿಭುವನಾಭಿರಾಮತಯಾ ರಾಮ ಇತಿ ನಾಮ ಚಕ್ರೇ ರೂಪ-ಶೌರ್ಯಾದಿಲಕ್ಷ್ಮೀಯೋಗ್ಯತಯಾ ಲಕ್ಷ್ಮಣ ಇತ್ಯಪರಸ್ಯ ಭುವಂ ಭಾರಾತ್ತಾರಯತೀತಿ ಭರತಃ ಶತ್ರೂನ್ ಘ್ನಂತೀತಿ ಶತ್ರುಘ್ನ ಇತಿ ನಾಮಾನಿ ಕೃತ್ವಾ ಬ್ರಹ್ಮಾ ಸ್ವಭವನಂ ಜಗಾಮ ಶಿಶವಶ್ಚ ವೃದ್ಧಿಮೇವ ॥ ೪೬ ॥

ಅಥ ಪಾದಸಂಚಾರಿಣಂ ಬಾಲಚಂದ್ರಸಂಕಾಶದರ್ಶಂ ಬಿಂಬಾ-ಧರಮುನ್ನತತಿಲಪ್ರಸೂನನಾಸಂ ಪುರಶ್ಚೂಲಿಕಾಲಂಬಮಾನ-ರತ್ನಪತ್ರಕಂ ಶ್ರವಣಲೋಲಂಬಮಾನಕುಂಡಲಂ ವಕ್ಷಸ್ಥಳ-ವಿಚಲಿತಸ್ಥೂಲಮುಕ್ತಾಹಾರಂ ವಿಲಸತ್ಕಾರ್ತಸ್ವರಬಾಹುವಲ-ಯಂ ಸಿಂಜನ್ಮಣಿಕಂಕಣರತ್ನಾಂಗುಳೀಯಹೇಮಮಣಿರಚಿತ-ಶ್ರೋಣೀಸೂತ್ರಂ ಸಿಂಜನ್ನೂಪುರೋಪಶೋಭಿತಪಾದಮಂಗು-ಳೀಯೋಪಶೋಭಿತಪಾದಮಧ್ಯಾಂಗುಳಿಕಂ ವಜ್ರಾಂಕುಶ-ಸರೋಜಲಾಂಛನಶೋಭಿತೋರುಪಾದತಲಂ ತೂಣೀರಸದೃಶ-

---

೪೬. ಮೂರು ಲೋಕಗಳಲ್ಲಿಯೂ ಮನೋಹರನಾಗಿರುವುದರಿಂದ ರಾಮನೆಂದು ಒಬ್ಬನಿಗೂ, ಶೌರ್ಯ ಮೊದಲಾದುವುಗಳಿಂದ ಕೂಡಿ ಯೋಗ್ಯನಾಗಿರುವುದರಿಂದ ಲಕ್ಷ್ಮಣನೆಂದು ಮತ್ತೊಬ್ಬನಿಗೂ, ಭೂಮಿಯನ್ನು ಭಾರದಿಂದ ಪರಿಹರಿಸುತ್ತಾನಾದುದರಿಂದ ಮಗದೊಬ್ಬನಿಗೆ ಭರತನೆಂದೂ, ಶತ್ರುಗಳನ್ನು ಕೊಲ್ಲುತ್ತಾನಾದುದರಿಂದ ಉಳಿದವನಿಗೆ ಶತ್ರುಘ್ನನೆಂದೂ ಹೆಸರಿಟ್ಟು, ತನ್ನ ಲೋಕಕ್ಕೆ ಹೋದನು. ಮಕ್ಕಳೂ ದೊಡ್ಡವರಾದರು.

೪೭. ಅನಂತರ ನಡೆಯುತ್ತಿರುವ, ಬಾಲಚಂದ್ರನಂತೆ ಕಾಣುತ್ತಿರುವ, ತೊಂಡೆಯಹಣ್ಣಿನಂತೆ ತುಟಿಯುಳ್ಳ, ಎತ್ತರವಾಗಿ ಎಳ್ಳುಹೂವಿನಂತಿರುವ ಮೂಗುಳ್ಳ, ಮುಂಜುಟ್ಟಿನಂತೆ ನೇತಾಡುತ್ತಿರುವ ರತ್ನದಿಂದ ಕೂಡಿದ ಎಲೆಯುಳ್ಳ, ಕಿವಿಯಲ್ಲಿ ಅಲ್ಲಾಡುತ್ತಿರುವ ಲೋಲಕ್ಕೆಂಬ ಕರ್ಣಾಭರಣವುಳ್ಳ, ಎದೆಯ ಪ್ರದೇಶದಲ್ಲಿ ಅಲ್ಲಾಡುತ್ತಿರುವ ಮುತ್ತಿನ ಹಾರವುಳ್ಳ, ಪ್ರಕಾಶಮಾನವಾದ ಚಿನ್ನದ ತೋಳು ಬಳೆಯುಳ್ಳ, ಧ್ವನಿಮಾಡುತ್ತಿರುವ ಕೈಬಳೆಗಳುಳ್ಳ ಮತ್ತು ಉಂಗುರವುಳ್ಳ, ಚಿನ್ನದಿಂದಲೂ ಮಣಿಗಳಿಂದಲೂ ಮಾಡಿರುವ ಉಡಿದಾರವುಳ್ಳ, ಧ್ವನಿಮಾಡುತ್ತಿರುವ ಕಾಲುಬಳೆಯನ್ನು ಹೊಂದಿರುವ ಕಾಲುಗಳುಳ್ಳ, ಕಾಲಿನ ಮಧ್ಯದ ಬೆರಳಿಗೆ ಮಿಂಚನ್ನು ಹಾಕಿಕೊಂಡಿ

ಜಂಘಂ ಕರಿಕರಸದೃಶೋರುಂ ವಿಸ್ತೃತಜಘನಂ ಸೂಕ್ಷ್ಮಮಧ್ಯಂ ವರ್ತುಲಾವರ್ತಕಂ ಗಂಭೀರನಾಭಿಮಿಂದ್ರನೀಲಶಿಲಾವಿಶಾಲ-ವಕ್ಷಃಸ್ಥಳಂ ಕಂಬುಗ್ರೀವಂ ಚಂದ್ರಬಿಂಬಸದೃಶವದನಮರ್ಧ ಚಂದ್ರಸದೃಶಲಲಾಟಂ ನೀಲಕುಟಿಲಕುಂತಳಂ ಕ್ರೀಡಾಸಕ್ತಂ ಧೂಳಿಭಿರಾಪಾಂಡುರಂ ಫುಲ್ಲಪದ್ಮದಳಾರಕ್ತ ವಿಲೋಲಲೋ-ಚನಂ ಮಹೇಶ್ವರಮಿವೋದ್ಧೂಳಿತ ಭೂತಿಂ ಮಹೇಶ್ವರಮಿವ ದಿಗಂಬರಂ ರಾಮಂ ಕುಮಾರಂ ರಾಜಾ ದಶರಥೋ ದೃಷ್ಟ್ವಾ ಹರ್ಷಪರಿಪೂರ್ಣಹೃದಯಃ ಪುತ್ರಮಾಲಿಂಗ್ಯ ಚುಂಬಿತ್ವಾ ವಕ್ಷ ಸ್ಯಾಲಿಲಿಂಗ ದೃಢಂ ॥ ೪೭ ॥

ಅಥ ಕುಮಾರೋಽಪಿ ಪಾರ್ಶ್ವೇನಾಂಗಮಾರೋಪ್ಯ ಕಲಕಲಿತ-ಲೋಚನೋ ಯತ್ಕಿಂಚಿದುವಾಚ ಯಾಚಮಾನಮಿತಸ್ತತೋ ವೀಕ್ಷಮಾಣಸ್ತಾತ ಗಚ್ಛೇ ಶಯೇ ತಾತ ಕ್ರೀಡಾಮಿ ತಾತೇ-

---

ರುವ, ವಜ್ರ, ಅಂಕುಶ, ಕಮಲಗಳ ಚಿಹ್ನೆಗಳುಳ್ಳ ಹೆಜ್ಜೆಯನ್ನು ಹೊಂದಿರುವ, ಬತ್ತಳಿಕೆಯಂತಿರುವ ಮುಂಡಿಗಳುಳ್ಳ, ಆನೆಯ ಸೊಂಡಲಿನಂತಿರುವ ತೊಡೆಗಳುಳ್ಳ, ಅಗಲವಾಗಿರುವ ಕುಂಡೆಗಳಿರುವ, ಸಣ್ಣದಾಗಿರುವ ನಡುವುಳ್ಳ, ಬಳಸಿಕೊಂಡಿರುವ ಹೊಕ್ಕುಳಿನ ಮಧ್ಯಭಾಗವುಳ್ಳ, ಆಳವಾದ ಹೊಕ್ಕುಳುಳ್ಳ, ಇಂದ್ರನೀಲದ ಚಪ್ಪಡಿಯಂತೆ ಅಗಲವಾದ ಎದೆಯುಳ್ಳ, ಶಂಖದಂತೆ ಕತ್ತುಳ್ಳ, ಚಂದ್ರಬಿಂಬದಂತಿರುವ ಮುಖವುಳ್ಳ, ಅರ್ಧಚಂದ್ರನಂತಿರುವ ಹಣೆಯುಳ್ಳ, ಕಪ್ಪಗೂ ಗುಂಗುರುಗುಂಗುರಾಗಿಯೂ ಇರುವ ಮುಂಗುರುಳುಗಳುಳ್ಳ, ಆಟದಲ್ಲಿ ಅಪೇಕ್ಷೆಯುಳ್ಳ, ಧೂಳಿನಿಂದ ಬೂದುಬಣ್ಣವಾಗಿರುವ, ಅರಳಿರುವ ಕಮಲದಂತೆ ಕೆಂಪಗಿರುವ, ಚಂಚಲವಾದ ಕಣ್ಣುಗಳುಳ್ಳ, ಮಹೇಶ್ವರನಂತೆ ವಿಭೂತಿಯನ್ನು ಬಳಿದುಕೊಂಡಿರುವ, ಮಹೇಶ್ವರನಂತೆ ದಿಗಂಬರನಾದ, ಮಗುವಾದ ರಾಮನನ್ನು ರಾಜನಾದ ದಶರಥನು ನೋಡಿ, ಹರ್ಷದಿಂದ ತುಂಬಿದ ಮನಸುಳ್ಳವನಾಗಿ, ಮಗುವನ್ನು ಅಪ್ಪಿಗೊಂಡು, ಮುತ್ತಿಕ್ಕಿ ಎದೆಯಿಂದ ಗಟ್ಟಿಯಾಗಿ ಅಪ್ಪಿಕೊಂಡನು.

೪೮. ಅನಂತರ ಆ ರಾಮನೂ ಕೂಡ ಮಗ್ಗುಲಾಗಿ ಮೇಲೆಹತ್ತಿ ಚಂಚಲವಾದ ಕಣ್ಣುಳ್ಳವನಾಗಿ, ಇತ್ತತ್ತ ನೋಡುತ್ತ, ಅಪ್ಪ ಹೋಗುತ್ತೇನೆ, ಅಪ್ಪ ಮಲಗುತ್ತೇನೆ, ಅಪ್ಪ ಆಡುತ್ತೇನೆ, ಇದೇ ಮೊದಲಾಗಿ ಹೇಳುತ್ತಾ ಏನೇನನ್ನೋ ಹೇಳು

ತ್ವಾದಿ ಪುತ್ರಸುಖಮನುಭೂಯಾನುಭೂಯ ನಿರ್ವೃತಿಂ ಯಯೌ ॥ ೪೮ ॥

ಅಥ ಕದಾಚಿದ್ಭೋಕ್ತುಮಾಗತೇ ರಾಜನಿ ರಾಮಚಂದ್ರೋ ಬಾಲಕ್ರೀಡಾಸಕ್ತಹೃದಯೋ ಬಹುಕ್ರೀಡನಕಕರಕಮಲಉತ್ಪ್ಲುತಧಾವಮಾನೋ ನರಪತಿಪುರಸ್ಥಿತಃಮಣಿಖಚಿತಸುವರ್ಣಭಾಜನಸ್ಥಮನ್ನಂ ವಾಮಕರೇಣ ಗೃಹೀತ್ವಾ ರಾಜನಿ ಚಿಕ್ಷೇಪ ॥ ೪೯ ॥

ಇದಮಪಿ ರಾಜಾ ಸುಖಾಯ ಮೇನ ಏತಾದೃಶಾನ್ಯನ್ಯಾನಿ ಚಕಾರ ರಾಮಚಂದ್ರಃ ॥ ೫೦ ॥

ಅಥ ಕದಾಚಿತ್ಕ್ರೀಡಮಾನೇ ರಾಮೇ ವಾತ್ಯಾ ರಾಮಮಪಾತಯದ್ರಾಮಶ್ಚ ರುದನ್ನಪತತ್ ॥ ೫೧ ॥

ಏತಸ್ಮಿನ್ನಂತರೇ ಬ್ರಹ್ಮರಾಕ್ಷಸೋ ರಾಮಮಗೃಹ್ಣಾದ್ರಾಮಶ್ಚ ಮೂರ್ಛಾಮಾಪ ಹ ॥ ೫೨ ॥

---

ತ್ತಿದ್ದನು. ಈರೀತಿಯಿಂದ ರಾಜನು ಪುತ್ರಸುಖವನ್ನು ಅನುಭವಿಸಿ ಸೌಖ್ಯವನ್ನು ಹೊಂದಿದನು.

೪೯. ಒಂದುಸಾರಿ ರಾಜನು ಊಟಕ್ಕೆ ಬಂದಾಗ ರಾಮಚಂದ್ರನು ಬಾಲ್ಯದ ಆಟದಲ್ಲಿ ಮನಸ್ಸುಳ್ಳವನಾಗಿ, ಬಹಳ ಆಟವಾಡಿದ ಕೈಯುಳ್ಳವನಾಗಿಯೇ ನೆಗೆದು ನೆಗೆದು ಓಡುತ್ತ ಬಂದು, ರಾಜನ ಎದುರಿಗಿದ್ದ, ಮಣಿಗಳನ್ನು ಕೆತ್ತಿರುವ ಚಿನ್ನದ ಹರಿವಾಣದಲ್ಲಿದ್ದ ಅನ್ನವನ್ನು ಎಡಗೈಯಿಂದ ತೆಗೆದುಕೊಂಡು ರಾಜನ ಮೇಲೆ ಎಸೆದನು.

೫೦. ಇದನ್ನೂ ಕೂಡ ರಾಜನು ಸುಖವನ್ನಾಗಿಯೇ ಭಾವಿಸಿಕೊಂಡನು. ರಾಮಚಂದ್ರನು ಇದೇ ರೀತಿಯಾದ ಇನ್ನೂ ಅನೇಕ ಚೇಷ್ಟೆಗಳನ್ನು ಹೀಗೆಯೇ ಮಾಡಿದನು.

೫೧. ರಾಮನು ಆಡುತ್ತಿರುವಾಗ ಒಂದುಸಾರಿ ಸುಂಟರಗಾಳಿಯು ಕೆಡವಲು ರಾಮನು ಅಳುತ್ತಾ ಬಿದ್ದನು.

೫೨. ಈ ಸಮಯದಲ್ಲಿ ಒಂದು ಬ್ರಹ್ಮರಾಕ್ಷಸವು ರಾಮನನ್ನು ಹಿಡಿದುಕೊಂಡಿತು. ರಾಮನು ಮೂರ್ಛೆಯನ್ನು ಹೊಂದಿದನು.

**ಅಥ ಸಹಚರೋ ಬಾಲ ಇತಸ್ತತೋ ರೋರೂಯಮಾಣೋ**
**ರಾಮಂ ತಥಾವಿಧಂ ರಾಜ್ಞೇ ವ್ಯಜ್ಞಾಪಯತ್ ॥ ೫೩ ॥**

**ಅಥ ರಾಜಾ ರಾಮಮಾದಾಯ ವಸಿಷ್ಠಮಾಹ ॥ ೫೪ ॥**

**ಕಿಮಿದಂ ರಾಮಸ್ಯೇತಿ ಪಪ್ರಚ್ಛ। ಅಥ ವಸಿಷ್ಠೋ ಭಸ್ಮಾ-**
**ದಾಯಾಽಭಿಮಂತ್ರ್ಯ ಬ್ರಹ್ಮರಾಕ್ಷಸಂ ಮೋಚಯಾಮಾಸ**
**ಪಪ್ರಚ್ಛ ಕೋ ಭವಾನಿತಿ ॥ ೫೫ ॥**

**ಸ ಚಾಹಾಽಹಂ ವೇದಗರ್ವಿತೋ ಬ್ರಾಹ್ಮಣೋ ಬಹುಶಃ ಪರ**
**ಧನಮಪಹೃತ್ಯ ಬ್ರಹ್ಮರಾಕ್ಷಸೋ ಜಾತೋ ಮೇ ನಿಷ್ಕೃತಿಂ**
**ವಿಚಾರಯ ॥ ೫೬ ॥**

**॥ ವಸಿಷ್ಠ ಉವಾಚ ॥**

**ಇದ ಮಿತಃಪರಮೇಕವರ್ಷಶತೋಪಭೋಗ್ಯಂ ರಾಕ್ಷಸತ್ವಂ**

---

೫೩. ಆಗ ಜೊತೆಯಲ್ಲಿದ್ದ ಹುಡುಗನು ಇತ್ತತ್ತ ಓಡಾಡುತ್ತಾ ಅಳುತ್ತಾ ರಾಮನು ಹಾಗೆ ಮೂರ್ಛೆಬಿದ್ದಿರುವುದನ್ನು ರಾಜನಿಗೆ ತಿಳಿಸಿದನು.

೫೪. ಅನಂತರ ರಾಜನು ರಾಮನನ್ನು ತೆಗೆದುಕೊಂಡು ಬಂದು, ವಸಿಷ್ಠನಿಗೆ ಹೇಳಿದನು.

೫೫. ರಾಮನಿಗೆ ಏನಾಗಿದೆ ಎಂದು ಕೇಳಿದನು. ಆಗ ವಸಿಷ್ಠನು ವಿಭೂತಿಯನ್ನು ತೆಗೆದುಕೊಂಡು ಮಂತ್ರಿಸಿ ಬ್ರಹ್ಮರಾಕ್ಷಸನನ್ನು ಬಿಡಿಸಿದನು. ಅದನ್ನು ಕುರಿತು ನೀನಾರೆಂದು ಕೇಳಿದನು.

೫೬. ಆಗ ಆ ಬ್ರಹ್ಮರಾಕ್ಷಸವು, ನಾನು ವೇದ ಓದಿ ಗರ್ವವನ್ನು ಹೊಂದಿದ ಬ್ರಾಹ್ಮಣನು. ಅನೇಕಬಾರಿ ಪರರ ಹಣವನ್ನು ಕದ್ದು ಬ್ರಹ್ಮರಾಕ್ಷಸನಾದೆ. ನನಗೆ ಪ್ರಾಯಶ್ಚಿತ್ತವನ್ನು ನಿಷ್ಕರ್ಷಿಸು ಎಂದಿತು.

೫೭. ವಸಿಷ್ಠನು ಹೇಳಿದನು :—ಈ ನಿನ್ನ ಬ್ರಹ್ಮಪಿಶಾಚತನವು ಒಂದು ನೂರು ವರ್ಷಗಳ ನರಕವಾಸವನ್ನು ಭೋಗಿಸುವಷ್ಟಿದೆ. ಭಾಗೀರಥಿಯಲ್ಲಿ ಒಂದು

ನರಕಂ ಭಾಗೀರಥೀಸ್ನಾನಮೇಕಂ ಶಿವಾಯ ಬಿಲ್ವಪತ್ರಶತಂ
ಸಮರ್ಪ್ಯ ತತಃ ಸ್ನಾತ್ವಾ ಪಾಪಾದ್ವಿಮುಕ್ತೋ ಭವಸೀತಿ ॥ ೫೭ ॥

ಕದಾಚಿತ್ತಾದೃಶಂ ಕೃತಪುಣ್ಯಂ ತವ ಪದಂ ಪ್ರಯಚ್ಛಾಮಿ
ತದುಪರಿ ಶಿಷ್ಟಗತಿಂ ಭಜೇತಿ ವಸಿಷ್ಠವಾಕ್ಯಮಾಕರ್ಣ್ಯ ಬ್ರಹ್ಮ-
ರಾಕ್ಷಸೋ ವಸಿಷ್ಠೋಪದಿಷ್ಟಪುಣ್ಯವಶಾದ್ದಿವ್ಯಶರೀರೋಭೂತ್ವಾ
ನಮಸ್ಕೃತ್ವಾ ಸ್ವರ್ಗಂ ಜಗಾಮ ॥ ೫೮ ॥

ಅಥ ರಾಮಂ ಪ್ರಾಪ್ತೇ ಕಾಲ ಉಪನೀಯ ವಸಿಷ್ಠೋ ವೇದಾನ-
ಧ್ಯಾಪಯಾಮಾಸ ಷಡಂಗಾನಿ ಮೀಮಾಂಸಾದ್ವಯಂ ನೀತಿ-
ಶಾಸ್ತ್ರಂ ಚಾಧ್ಯಾಪಯಾಮಾಸ ॥ ೫೯ ॥

ಅಥ ಧನುರ್ವೇದಮಾಯುರ್ವೇದಂ ಭರತಗಾಂಧರ್ವವಾಸ್ತು-
ಶಾಕುನವಿವಿಧಯುದ್ಧಶಾಸ್ತ್ರಾಣಿ ಚ ॥ ೬೦ ॥

---

ಸಾರಿ ಸ್ನಾನಮಾಡಿ ವಿಶ್ವೇಶ್ವರನಿಗೆ ಒಂದುನೂರು ಬಿಲ್ವಪತ್ರೆಗಳನ್ನು ಪೂಜೆಮಾಡಿ ಮತ್ತೆ ಭಾಗೀರಥಿಯಲ್ಲಿ ಸ್ನಾನಮಾಡಿದರೆ ಆ ಪಾಪವು ಹೋಗಿ ಪಿಶಾಚತನದಿಂದ ಪಾರಾಗುತ್ತೀಯೆ.

೫೮. ನಾನು ಒಂದುಬಾರಿ ಆರೀತಿ ಪುಣ್ಯವನ್ನು ಮಾಡಿರುವುದನ್ನು ಕೊಡುತ್ತೇನೆ. ಅನಂತರ ಉತ್ತಮಗತಿಯನ್ನು ಹೊಂದು ಎಂದು ಹೇಳಿದ ವಸಿಷ್ಠನ ಮಾತನ್ನು ಆ ಬ್ರಹ್ಮರಾಕ್ಷಸನು ಕೇಳಿ, ವಸಿಷ್ಠನು ಕೊಟ್ಟ ಪುಣ್ಯದಿಂದ ಉತ್ತಮಶರೀರವನ್ನು ಹೊಂದಿ ಅವನಿಗೆ ನಮಸ್ಕಾರಮಾಡಿ ಸ್ವರ್ಗವನ್ನು ಹೊಂದಿತು.

೫೯. ಅನಂತರ ರಾಮನಿಗೆ ಸರಿಯಾದ ಕಾಲದಲ್ಲಿ ಎಂದರೆ ಎಂಟನೆಯ ವಯಸ್ಸಿನಲ್ಲಿ ರಾಜನು ಉಪನಯನಮಾಡಿದನು. ಅನಂತರ ವಸಿಷ್ಠನು ನಾಲ್ಕು ವೇದಗಳನ್ನೂ ಅಧ್ಯಯನ ಮಾಡಿಸಿದನು. ಅಲ್ಲದೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಆರು ವೇದಾಂಗಗಳನ್ನೂ ಅಭ್ಯಸಿಸಿದನು. ಪೂರ್ವಮೀಮಾಂಸ, ಉತ್ತರಮೀಮಾಂಸಗಳನ್ನೂ, ನೀತಿಶಾಸ್ತ್ರವನ್ನೂ ಹೇಳಿಕೊಟ್ಟನು.

೬೦. ಅನಂತರ ಧನುರ್ವೇದ, ಆಯುರ್ವೇದ, ಭರತಶಾಸ್ತ್ರ, ಗಾಂಧರ್ವವಿದ್ಯೆ, ವಾಸ್ತುವಿದ್ಯೆ, ಶಕುನಶಾಸ್ತ್ರ, ನಾನಾಬಗೆಯಾದ ಯುದ್ಧ ವಿದ್ಯೆಗಳನ್ನೂ ಕಲಿಸಿದನು.

**ಅಥ ವಿವಾಹಂ ಕರ್ತುಕಾಮೇನ ರಾಜ್ಞಾ ದಶರಥೇನ ನಾನಾ-
ದೇಶಜನಪತೀನ್ಪ್ರತಿ ದೂತಾಃ ಪ್ರೇರಿತಾಃ ॥ ೬೧ ॥**

**ಅಥ ಕಶ್ಚಿ ಚ್ಛೀಘ್ರಮಾಗತ್ಯ ರಾಜಾನಮಿದಮಬ್ರವೀದ್ರಾಜ-
ನ್ವಿದರ್ಭದೇಶಾಧಿಪತಿರ್ವಿದೇಹೋ ನಾಮ ರಾಜಾ ತಸ್ಯ ಪುತ್ರೀ
ವೈದೇಹೀ ಹೋಮಲಬ್ಧಾ ರೂಪೇಣ ಲಕ್ಷ್ಮೀಸಮಾ ಸರ್ವ-
ಲಕ್ಷಣಸಂಪನ್ನಾ ರಾಮಯೋಗ್ಯಾ ವಿದ್ಯತೇ ಸ ಚ ತಾಂ ದಾತುಂ
ರಾಜಾ ರಾಮಾಯೋದ್ಯುಕ್ತಸ್ತದ್ಗಮ್ಯತಾಂ ಶೀಘ್ರಮಿತಿ ॥ ೬೨ ॥**

**ಅಥ ವಸಿಷ್ಠಾದೀನ್ಪ್ರೇಷಯಾಮಾಸ ತೇ ಚ ತತ್ರ ಗತ್ವಾ
ತಾಂ ಚ ನಿರೀಕ್ಷ್ಯ ಲಗ್ನಂ ನಿಶ್ಚಿತ್ಯಾಯೋಧ್ಯಾಯಾಮೇತ್ಯ
ರಾಜಾನಮುಕ್ತ್ವಾ ರಾಮಸಹಿತಾಃ ಪೃಥ್ವೀಪತಿಸಮೇತಾಃ
ಶೀಘ್ರಂ ವಿವಿಧಕರಿತುರಗಶಕಟಶಿಬಿಕಾಂದೋಳಿಕಾಭಿರತಿ-
ಸುಭಗರೂಪಭೋಗವಿಲಾಸಕ್ರಿಯಾನಿಪುಣಾ ಹಿ ವಿದಿತವಿವಿಧ-**

---

೬೧. ಆಮೇಲೆ ರಾಜನು ರಾಮನಿಗೆ ಮದುವೆಮಾಡಬೇಕೆಂದು ನಾನಾ ದೇಶದ ರಾಜರುಗಳ ಬಳಿಗೆ ದೂತರನ್ನು ಕಳುಹಿದನು.

೬೨. ಆಗ ಒಬ್ಬ ದೂತನು ಬೇಗಬಂದು ದಶರಥನಿಗೆ ಇಂತೆಂದನು. ಎಲೈ ದೊರೆಯೇ, ವಿದರ್ಭದೇಶದ ದೊರೆಯಾದ ವಿದೇಹನೆಂಬ ದೊರೆ ಇರುವನಷ್ಟೆ. ಅವನ ಮಗಳು ವೈದೇಹಿ ಎಂಬುವಳು ಇರುವಳು. ಯಜ್ಞದಲ್ಲಿ ಹುಟ್ಟಿದವಳು. ಸೌಂದರ್ಯ ದಲ್ಲಿ ಲಕ್ಷ್ಮಿಯಂತಿದ್ದಾಳೆ. ಎಲ್ಲಾ ಲಕ್ಷಣಗಳೂ ಅವಳಲ್ಲಿವೆ. ರಾಮನಿಗೆ ಯೋಗ್ಯ ಳಾಗಿದ್ದಾಳೆ. ಆ ರಾಜನೂ ಕೂಡ ಆಕೆಯನ್ನು ರಾಮನಿಗೆ ಕೊಡಲು ಪ್ರಯತ್ನ ವುಳ್ಳವನಾಗಿದ್ದಾನೆ ಆದ್ದರಿಂದ ಬೇಗ ಅಲ್ಲಿಗೆ ಹೋಗು ಎಂದನು.

೬೩. ದಶರಥನು ವಸಿಷ್ಠನೇ ಮುಂತಾದವರನ್ನು ಅಲ್ಲಿಗೆ ಕಳುಹಿಸಿದನು. ಅವರು ಆ ವಿದರ್ಭದೇಶಕ್ಕೆ ಹೋಗಿ ಆ ಹುಡುಗಿಯನ್ನು ನೋಡಿ ಲಗ್ನವನ್ನೂ ನಿಶ್ಚಯ ಮಾಡಿ ಅಯೋಧ್ಯೆಗೆ ಬಂದು ರಾಜನಿಗೆ ಹೇಳಿ ರಾಮನೊಡನೆಯೂ ದಶರಥನೊಡ ನೆಯೂ ಕೂಡಿಕೊಂಡು ನಾನಾಬಗೆಯಾದ ಆನೆ, ಕುದುರೆ, ಬಂಡಿ, ಪಲ್ಲಕ್ಕಿ, ಮ್ಯಾನಗ ಳಿಂದ ಕೂಡಿಕೊಂಡು, ಅತಿ ಸುಂದರಿಯರೂ ಭೋಗವಿಲಾಸಗಳಲ್ಲಿ ನಿಪುಣರೂ ಆದ

ಚೇಷ್ಟಾ ಗಂಧರ್ವಕಾಮಶಾಸ್ತ್ರಕುಶಲಾ ಮೃದುಕಠಿಣಪೃಥುಪ-
ಯೋಧರಾಸನ್ನಕಂಠಾಃ ಸ್ಥೂಲಸೂಕ್ಷ್ಮಲಲಾಟಬಿಂಬದಶ-
ನಚ್ಛದಮುಖಪಂಕಜಾಃ ಕುಟಿಲಕುಂತಳದೀರ್ಘಕೇಶ-
ಧಮ್ಮಿಲ್ಲಾಃ ಕನಕಪತ್ರಕರ್ಣಾಃ ಸ್ನಾನಚೇಷ್ಟಯೋತ್ಥಿತ-
ರೋಮಶೋಭಿತಾ ಜಪಾರಕ್ತದಶನಾ ವಿಶದವಿಸ್ಫುರಚ್ಛಫರೀ-
ಲೋಚನಾಃ ಶುಕ್ತಿಕಾಸದೃಶಶ್ರವಣಾ ನಕ್ಷತ್ರಸದೃಶಸ್ಥೂಲ-
ಮುಕ್ತಾಫಲೋಪಶೋಭಿತನಾಸಾಪುಟಾ ಮುಕುರಸದೃಶಕ-
ಪೋಲಾಸ್ತಿಲಪ್ರಸೂನನಾಸಿಕಾ ಆನಮ್ರಮಧ್ಯಪ್ರದೇಶಚೂಚುಕಾ
ಇಂದ್ರಗೋಪಪ್ರತೀಕಾಶಾಧರಪುಟದಶನಕ್ಷತಾಃ ಸಮದೀರ್ಘ-
ಕಾಂಗಪ್ರದರ್ಶನಾಸ್ಥಿತಸರ್ವಪ್ರದೇಶವರ್ತುಲಾನತಿಮಾಂಸಲಾಃ
ಪಿಂಡಕಾಗ್ರಂಥಿನೀವ್ಯೋ ವಳಿತಬಾಹುಮೂಲಾ ಅನತಿಚಿರಕಾ-
ಲೋತ್ಥಿತರೋಮತಯಾ ಹರಿದ್ರಾವರ್ಣತಯಾ ಚ ಕರ್ಣಿಕಾ-

---

ಬಗೆಬಗೆಯ ಚೇಷ್ಟೆಗಳನ್ನು ಬಲ್ಲ, ನೃತ್ತ ಮನ್ಮಥಕಳಾಶಾಸ್ತ್ರಗಳಲ್ಲಿ ಜಾಣರಾದ, ಮೆತ್ತಗಿರುವಿಕೆಯಿಂದ ಕೂಡಿರುವ ಕಾಠಿಣ್ಯವುಳ್ಳ ದೊಡ್ಡದಾದ ಕುಚಗಳಿಗೆ ಹತ್ತಿರವಿರುವಂತಿರುವ ಕತ್ತುಳ್ಳವರಾದ, ದಪ್ಪವೂ ಸಣ್ಣದೂ ಆಗಿರುವ ಹಣೆ ತುಟಿಗಳಿಂದ ಕೂಡಿರುವ, ಕಮಲದಂತಿರುವ ಮುಖವುಳ್ಳ, ಗುಂಗುರುಗುಂಗುರಾಗಿ ಉದ್ದವಾದ ಕೂದಲುಗಳ ತುರುಬುಳ್ಳ, ಓಲೆಯಿಂದ ಕೂಡಿರುವ ಕಿವಿಯುಳ್ಳ, ಸ್ನಾನಮಾಡುವಾಗ ತಿಕ್ಕಿರುವುದರಿಂದ ಮೇಲಕ್ಕೆದ್ದಿರುವ ರೋಮಗಳಿಂದ ಪ್ರಕಾಶಿತರಾದ, ದಾಸವಾಳದ ಹೂವಿನಂತೆ ಕೆಂಪಾದ ಹಲ್ಲುಗಳುಳ್ಳ, ಅಗಲವಾಗಿ ಪ್ರಕಾಶಿಸುವ ಮೀನಿನಂತೆ ಕಣ್ಣುಳ್ಳ, ಕಪ್ಪೆಯಚಿಪ್ಪಿನಂತಿರುವ ಕಿವಿಯುಳ್ಳ, ನಕ್ಷತ್ರದಂತೆ ದಪ್ಪವಾದ ಮುತ್ತಿನಂತೆ ಪ್ರಕಾಶಿಸುವ ಮೂಗಿನ ತುದಿಗಳುಳ್ಳ, ಕನ್ನಡಿಯಂತೆ ಕಪೋಲಗಳುಳ್ಳ, ಎಳ್ಳಿನ ಹೂವಿನಂತಿರುವ ಮೂಗುಳ್ಳ, ಸ್ತನಗಳ ಮುಂಭಾಗವು ಮೇಲಕ್ಕೆ ಎದ್ದು ಮಧ್ಯಭಾಗವು ಸ್ವಲ್ಪ ಬಿಲ್ಲಿನಂತೆ ಬಗ್ಗಿಯೂ ಇರುವ ಮೊಲೆಗಳ ತುದಿಯುಳ್ಳವರಾದ, ಜಸವನ ಹುಳುವಿನಂತೆ ವಕ್ರವಾಗಿರುವ ಗಾಯವನ್ನು ಹೊಂದಿರುವ ತುಟಿಗಳುಳ್ಳ, ಸಮವಾಗಿಯೂ, ಉದ್ದವಾಗಿಯೂ ಇರುವ ಅವಯವಗಳ ತೋರುವಿಕೆಯಲ್ಲಿ ಕಂಡುಬರುತ್ತಿರುವ ಎಲ್ಲಾ ಅವಯವಗಳ ಡೊಂಕೂ ಕೃಶತೆಯೂ ಉಳ್ಳ, ಮುಂಭಾಗದಲ್ಲಿ ಗಂಟುಕಟ್ಟಿ ಸಿಕ್ಕಿಸಿಕೊಂಡಿರುವ ಸೀರೆಯ ಗಂಟುಳ್ಳ, ಸುಕ್ಕುಬಿದ್ದಿರುವ ಮೊಲೆಗಳ ಬುಡಭಾಗದ ಪಾರ್ಶ್ವಗಳುಳ್ಳ, ಹೊಸದಾಗಿ ಹುಟ್ಟುತ್ತಿರುವ ರೋಮಗಳಿಂದಲೂ,

**ರದಳಸದೃಶಬಾಹುಮೂಲಾ ಮೃದುಸ್ನಿಗ್ಧವರ್ತುಲಸೂಕ್ಷ್ಮ-
ಮಧ್ಯಪ್ರದೇಶಾಃ ಕಠಿನಸ್ಥೂಲವರ್ತುಲಾಮಗ್ನ ಚೂಚುಕಪರ-
ಸ್ಪರಸ್ಥಾನಾಕ್ರಮಣಸ್ಪರ್ಧಿಪಯೋಧರಮಧ್ಯಲಬ್ಧಪದಕಪ-
ಯೋಧರೋಪರಿಚಂಚಲವಿವಿಧಮಣಿಮಯಹಾರೋಪಶೋಭಿ-
ತವಕ್ಷಸ್ಥಲಾಃ ಪಯೋಧರಪರಿತೋ ಲಬ್ಧಪದತಯಾ ತರುಣ-
ದೃಷ್ಟಿಪರಸ್ಪರಯಾsಸಮಾನಯಾ ನಾಭಿಕೂಪೋಪರಿತರೋ-
ಮರಾಜ್ಯೋಪಶೋಭಿತೋದರಪ್ರದೇಶಾ ಭಜ್ಯಮಾನಮಧ್ಯಸ್ಥ-
ಲೀಕರಣ ಏವ ವಲೀತ್ರಯೋಪಶೋಭಿತಾ ಮುಷ್ಟಿಗ್ರಾಹ್ಯ-
ಮಧ್ಯಾಃಕರಿಕರೋಪಮಜಘನಪ್ರದೇಶಾ ಆರೋಮಶಮೃದು-
ಸ್ನಿಗ್ಧಾಮಲಾಸಮಜಾನ್ವ್ಯಃ ಕದಳೀಸ್ತಂಭಸನ್ನಿಭೋರುಯು-
ಗಳಾ ಆಮಗ್ನಜಾನುಕೃಶಕುಂಶವರ್ತುಲಪಿಂಡಿಕಾರಹಿತಜಂಘಾ
ಆಮಗ್ನಗುಲ್ಫಾ ಆಸೂಕ್ಷ್ಮಸ್ನಿಗ್ಧದೀರ್ಘದೀರ್ಘಾಂಗುಳಿಪಾದಾ**

---

ಅರಶಿನದ ಬಣ್ಣದಿಂದಲೂ ಕೂಡಿರುವುದರಿಂದ ಕರ್ಣಿಕಾರದ ಹೂವಿನಂತಿರುವ ಭುಜಗಳುಳ್ಳ, ಮೃದುವಾಗಿಯೂ ಮನೋಹರವಾಗಿಯೂ ದುಂಡಗೂ ಇರುವ ಸೊಂಟಗಳುಳ್ಳ, ಗಟ್ಟಿಯಾಗಿಯೂ ದಪ್ಪವಾಗಿಯೂ ದುಂಡಗೂ ಇರುವ ಮೊಲೆಯ ತೊಟ್ಟು ಒಳಗೆ ಸೇರಿಕೊಂಡಿದ್ದು ಒಂದು ಮತ್ತೊಂದರ ಜಾಗವನ್ನು ಬಲಾತ್ಕಾರದಿಂದ ಹೊಂದುವುದಕ್ಕೆ ಪೈಪೋಟಿಮಾಡುತ್ತಿರುವ ಮೊಲೆಗಳ ಮಧ್ಯದಲ್ಲಿ ಹಾಕಿಕೊಂಡಿರುವ ಪದಕಗಳು ಸ್ತನಗಳ ಅಲುಗಾಟದ ಏಟಿನಿಂದ ಹಾರಾಡುತ್ತಿರುವ ನಾನಾಬಗೆಯಾದ ಮಣಿಗಳಿಂದ ಕೂಡಿರುವ ಹಾರಗಳಿಂದ ಪ್ರಕಾಶಮಾನವಾದ ಎದೆಗಳುಳ್ಳ, ಸ್ತನಗಳ ಸುತ್ತಲೂ ಜಾಗವನ್ನು ಹೊಂದಿರುವ ಯುವಕರ ನೋಟದ ಅನ್ಯೋನ್ಯತೆಯ ಸಮಾನವಲ್ಲದಿರುವಿಕೆಯಿಂದ ಹೊಕ್ಕುಳಿನ ಮೇಲುಭಾಗದಲ್ಲಿರುವ ರೋಮಗಳ ಸಾಲಿನಿಂದ ಪ್ರಕಾಶಿಸುವ ಹೊಟ್ಟೆಗಳುಳ್ಳ, ಮುರಿದುಹೋಗುತ್ತಿರುವ ಸೊಂಟದ ಸ್ಥಳದಲ್ಲಿ ಕೂಡಿಸುವುದಕ್ಕೋಸ್ಕರಲೇ ಇರುವ ತ್ರಿವಳಿಗಳೆಂಬ ಮೂರು ಸುಕ್ಕುಗಳಿಂದ ಪ್ರಕಾಶಿಸುತ್ತಿರುವಂಥ, ಹಿಡಿಯಲ್ಲಿ ಹಿಡಿದುಕೊಳ್ಳಲು ಯೋಗ್ಯವಾದ ಸೊಂಟಗಳುಳ್ಳ, ಆನೆಯ ಸೊಂಡಲಿನಂತಿರುವ ತೊಡೆಗಳುಳ್ಳ, ಸ್ವಲ್ಪ ಕೂದಲುಗಳನ್ನು ಹೊಂದಿ ಮೃದುವೂ ಮನೋಹರವೂ ಕೊಳೆಯಿಲ್ಲದೆಯೂ ಇರುವ ಒಂದೇ ಸಮವಿಲ್ಲದ ಮಂಡಿಗಳುಳ್ಳ, ಬಾಳೆಯ ಕಂಬದಂತಿರುವ ಎರಡು ತೊಡೆಗಳುಳ್ಳ, ಮಂಡಿಯಲ್ಲಿಯೇ ಮುಳುಗಿ ಹೋಗಿರುವಂತಿರುವುದರಿಂದ ಸಣ್ಣಗೆ ಬಗ್ಗಿ ದುಂಡಗೆ ಇರುವುದರಿಂದ ದಪ್ಪವಾಗಿ

**ನೂಪುರರವಾಹ್ವಯಮಾನಮದನಾ ಹಂಸಮತಂಗಜಗಮನಾ ದಕ್ಷಿಣಾಂಗುಷ್ಠಸ್ಪರ್ಶಿಕಚ್ಛಾಗ್ರಾ ಉಪರಿಕಚ್ಛಂ ನೀವಿಂ ಕೃತ್ವಾ ಕರದ್ವಯಯುತಾ ವಸ್ತ್ರಪ್ರದೇಶಕಂಠಮಪ್ರಾವೃತ್ಯಾಪರವಸನ-ಪರಿಭಾಗಾ ವೃತ್ತಸ್ತನವಸನಾಪರಭಾಗೇ ವಾಮಾಂಸ ಏವ ದಕ್ಷಿ-ಣಪಾರ್ಶ್ವಗತೇನ ದಶಾಭಾಗೇನ ನಾಭಿಪ್ರಾಂತೇನ ಪ್ರವೇಶಿನೋ ಪಶೋಭಿತಗಾತ್ರ ಯಷ್ಟಯೋ ಯೋಷಿತೋ ವಿವಾಹಮಂಗಳ ಕರ್ಮಕರಣಾಯಾನೇಕಶ ಆಗಚ್ಛನ್** ॥ ೬೩ ॥

**ಬಾಲಿಕಾಶ್ಚ ವಿದ್ಯುಲ್ಲತಾಂಶುಶೋಭಿತಗಾತ್ರಯಷ್ಟಯಉದ್ಭಿನ್ನ-ಕುಚಕಮಲಕುಡ್ಮಲವಿವಿಧಹಾರೋ ಪ ಶೋ ಭಿ ತ ವ ಕ್ಷ ಸೋ ಯತ್ಕಿಂಚಿದ್ಭಾಷಿಣ್ಯೋಽತಿಚಪಲಮೃದುಗತಯೋ ವೃದ್ಧವನಿ-ತಾಶ್ಚಾಗಚ್ಛನ್** ॥ ೬೪ ॥

---

ಕಾಣುವ ಜಾಗವೇ ಇಲ್ಲದಿರುವ ಮಂಡಿಯುಳ್ಳ, ಮಾಂಸದಿಂದ ತುಂಬಿಕೊಂಡಿರುವ ಹಿಮ್ಮಡಿಗಳುಳ್ಳ, ಸಣ್ಣದಾಗಿಯೂ, ಮನೋಹರವಾಗಿಯೂ, ಉದ್ದುದ್ದವಾಗಿಯೂ ಇರುವ ಕಾಲಿನ ಬೆರಳುಗಳುಳ್ಳ, ಕಾಲುಬಳೆಯ ಶಬ್ದದಿಂದ ಮನ್ಮಥನನ್ನು ಕರೆಯುತ್ತಿರುವ, ಹಂಸ, ಮದ್ದಾನೆಯ ನಡಗೆಯಂತೆ ನಡಗೆಯುಳ್ಳ, ಬಲಗಡೆಯ ಕಾಲಿನ ಉಂಗುರವನ್ನು ಸೋಕುತ್ತಿರುವ ಕಚ್ಚೆಯ ತುದಿಯುಳ್ಳ, ಮೇಲುಗಚ್ಚೆಯನ್ನು ಗಂಟು ಹಾಕಿ ಎರಡು ಕೈಯಲ್ಲೂ ಹಿಡಿದಿರುವ, ಉಟ್ಟಿರುವ ಬಟ್ಟೆಯಿಂದ ಕತ್ತಿನ ಜಾಗವನ್ನು ಹೊದ್ದುಕೊಳ್ಳದೆ ಬೇರೆ ಬಟ್ಟೆಯಿಂದ ಹೊದ್ದುಕೊಂಡಿರುವಂಥ, ದುಂಡಗಿರುವ ಸ್ತನಗಳ ಬಟ್ಟೆಯ ಕೊನೆಯಿರುವ ಎಡಗಡೆಯ ಭುಜದ ಮೇಲಕ್ಕೆ ಬಲಭಾಗದಿಂದ ಬಂದಿರುವ ಶೆರಗಿನ ತುದಿಯ ಗಂಟಿನೊಡನೆ ಸೇರಿಸಿರುವುದರಿಂದ ಪ್ರಕಾಶಿಸುವ ಶರೀರವುಳ್ಳ ಹೆಂಗಸರು, ಮದುವೆಯ ಮಂಗಳ ಕಾರ್ಯವನ್ನು ಮಾಡಲು ಹೀಗೆ ನಾನಾ ಬಗೆಯಾಗಿ ಬಂದರು.

೬೪. ಮಿಂಚಿನ ಕಾಂತಿಯಂತಿರುವ ದೇಹವುಳ್ಳ, ಆಗತಾನೆ ಮೇಲಕ್ಕೇಳುತ್ತಿರುವ ಕಮಲದ ಮಗ್ಗುಗಳಂತಿರುವ ಸ್ತನಗಳಿಂದಲೂ, ನಾನಾಬಗೆಯ ಹಾರಗಳಿಂದಲೂ ಪ್ರಕಾಶಿಸುವ ಎದೆಯ ಪ್ರದೇಶವುಳ್ಳ, ಏನೇನೋ ಮಾತಾಡುತ್ತ ಬಹು ಚಂಚಲವಾದ, ಮೆತ್ತಗೆ ನಡೆಯುವ, ಹುಡುಗಿಯರೂ, ಮುದಿಹೆಂಗಸರೂ ಬಂದರು.

ಅಥ ವಿದೇಹಪುರತಃ ಕ್ರೋಶಮಾತ್ರೇ ಚೂತವನಿಕಾಯಾಂ ವಿವಿಧವಿಟಪವಿಸ್ತಾರಪ್ರದೇಶವಿವಿಧವಿಹಂಗಕೂಜಿತಾಕರ್ಣನ-ದತ್ತಕರ್ಣವನಹರಿಣಶಾವವತ್ಯಾಂ ಮಹಾರಜತನಿರ್ಮಿತೋ-ಚ್ಚನೀಚಪ್ರಾಸಾದೋಪಶೋಭಿತಪ್ರದೇಶವಿವಿಧವಿಹಂಗಾಯಾಂ ಹೇಮವಲ್ಕಲಸಂವೀತಭಸಿತೋದ್ಧೂಲಿತಶರೀರಜಟಿಲಮುನಿ-ಗಣಧ್ಯಾನೋಪಾಸನೋಪಶೋಭಿ ವೃಕ್ಷಮಾಲಾಯಾಂ ವಿವಿಧ-ವಿದ್ಯಾಧರವಧೂಪಯೋಧರಭಾರಾಭಿಭೂತವಿಚರಿತತರಂಗಸರ-ಸೀಯುತಾಯಾಂ ಸರಸ್ತೀರಮಿಳಿತಸ್ವೈರಂಧ್ರೀಯುವತಿಭಿರಾ-ಹೂಯಮಾನತರುಣಜನಾಯಾಂ ನಾನಾವರ್ಣಕುಸುಮಸೌರಭ ವಾಸಿತಾಶೇಷಪ್ರದೇಶಾಯಾಮಿತಸ್ತತೋ ರಿರಂಸಯಾ ಪ್ರದ-ರ್ಶಿತಸ್ಫಾರಶಫರೀವಿಲೋಚನತರಳಚಕ್ಷುಷಾ ಪ್ರಭಾವಿಲಸಿತ-ಶರೀರವೇಶ್ಯಾಜನಾಯಾಂ ವಿವಿಧಾಶ್ಚರ್ಯಯುತಾಯಾಂ ದಶ-

---

೬೫. ಆಮೇಲೆ ವಿದೇಹನ ಪಟ್ಟಣಕ್ಕೆ ಮೂರು ಮೈಲಿಗಳ ದೂರದಲ್ಲಿ ನಾನಾ ಬಗೆಯ ಮರಗಳಿಂದ ವಿಸ್ತಾರವಾಗಿರುವ ಪ್ರದೇಶವುಳ್ಳ, ನಾನಾಬಗೆಯ ಪಕ್ಷಿಗಳ ಧ್ವನಿಯಲ್ಲಿ ಕಿವಿಗೊಟ್ಟ ಕಾಡುಜಿಂಕೆಗಳ ಮರಿಗಳುಳ್ಳ, ಚಿನ್ನದಿಂದ ಮಾಡಿದ ದೊಡ್ಡ ಚಿಕ್ಕ ಮಹಡಿಮನೆಗಳಿಂದ ಪ್ರಕಾಶಿಸುತ್ತಿರುವ ಪ್ರದೇಶಗಳ ಲೋದಗೆಗಳುಳ್ಳ, ಚಿನ್ನದ ಜರತಾರಿಯಿಂದ ಕೂಡಿದ ನಾರುಬಟ್ಟೆಯನ್ನುಟ್ಟು, ಬೂದಿಬಳಿದಿರುವ ಶರೀರ ಮತ್ತು ಜಟೆಗಳುಳ್ಳ, ಮುನಿಗಳ ಗುಂಪಿನ ಧ್ಯಾನದಿಂದಲೂ, ಪೂಜೆಯಿಂದಲೂ ಪ್ರಕಾಶಿಸುತ್ತಿರುವ ಮರಗಳ ಸಾಲುಳ್ಳ, ನಾನಾವಿಧವಾದ ವಿದ್ಯಾಧರಸ್ತ್ರೀಯರಮಾಲೆಗಳಭಾರದಿಂದ ವೇಗವು ಕಡಿಮೆಯಾಗಿ ಸಂಚರಿಸುವ ಅಲೆಗಳುಳ್ಳ ಕೊಳಗಳಿಂದ ಕೂಡಿದ, ಸರೋವರದ ತೀರದಲ್ಲಿ ಸೇರುವ, ಇತರರ ಮನೆಯಲ್ಲಿ ಕೆಲಸಮಾಡಿಕೊಂಡಿರುವ ಯುವತಿಯರಿಂದ ಕರೆಯಲ್ಪಡುತ್ತಿರುವ ಯುವಕಜನರುಳ್ಳ, ನಾನಾಬಣ್ಣದ ಹೂವಿನ ವಾಸನೆಯಿಂದ ವಾಸನೆಯಾಗಿರುವ ಎಲ್ಲಾ ಪ್ರದೇಶಗುಳುಳ್ಳ, ಇಲ್ಲಲ್ಲಿ ಆಟವಾಡಬೇಕೆಂಬ ಇಚ್ಛೆಯಿಂದ ಪ್ರಕಾಶಪಡಿಸಿದ ಪ್ರಕಾಶಮಾನವಾದ ಮೀನಿನಂತಿರುವ ಕಣ್ಣುಗಳಂತೆ ಚಂಚಲವಾದ ಕಣ್ಣುಗಳಿಂದ ಕೂಡಿಕೊಂಡು ಕಾಂತಿಯಿಂದ ಕೂಡಿರುವ ಸೂಳೆಯರುಳ್ಳ, ನಾನಾ ವಿಧದ ಆಶ್ಚರ್ಯದಿಂದ ಕೂಡಿರುವ ಮಾವಿನ ತೋಪಿನಲ್ಲಿ, ದಶರಥನು

ರಥಃ ಸಾಮಾತ್ಯಪುರೋಹಿತಾಭಿರಾಮ ರಾಮಾದಿಪುತ್ರಸಹಿತಃ ಸುಖಮುವಾಸ ॥ ೬೫ ॥

ಅಥ ವೈದೇಹೋsಪಿ ಮಿಥಿಲಾಂ ನಾನಾಪತಾಕೋಪಶೋಭಿತಾಂ ವಿವಿಧಪ್ರಸಾದಗೋಪುರಾಂ ದೇವತಾಯತನೋಪಶೋಭಿತಾಮನ್ಯೋನ್ಯಕೇಳಿಚತುರಯುವತಿಜನಾನುಕೀರ್ಣಮುಶೀರವಿರಚಿತಮಹಾಪ್ರಪಾಂ ಸುಕೇಳಿಜನೋಪಶೋಭಿತವಿಶಿಖಾಂ ವಿವಿಧಪಣ್ಯೋಪಶೋಭಿತರಥ್ಯಾಂ ತತ್ರ ಬ್ರಹ್ಮಘೋಷಶೋಭಿತಮಠಾಂ, ಪ್ರತಿಮಂದಿರಂ ಮೀಮಾಂಸಾದಿವ್ಯಾಖ್ಯಾನಸಂಪಾದಿತಮಾಧ್ಯಯನಾಂ ಸುಪುಣ್ಯಹವಿರ್ಗಂಧಸಾಮಾದಿಸ್ವರಪದಕ್ರಮಶ್ರುತಿಬ್ರಾಹ್ಮಣವಾಟಿಕಾಮನೇಕಪರಿವೃಢಮಂದಿರಪ್ರವೇಶಷ್ಕ್ರೀತಾಗುರುಕುಸುಮಾಮಧ್ವರ್ಯುವೇಷಾಂ ಮೃದುಲವಸನ-

---

ಮಂತ್ರಿ ಪುರೋಹಿತರಿಂದಲೂ, ಮನೋಹರವಾದ ರಾಮನೇ ಮುಂತಾದ ಮಕ್ಕಳಿಂದಲೂ ಕೂಡಿಕೊಂಡು ಬಿಡಾರವನ್ನು ಬಿಟ್ಟು ಸುಖವಾಗಿದ್ದನು.

೬೬. ಇತ್ತಕೂಡ ಮಿಥಿಲಾಪಟ್ಟಣವನ್ನು ಬಗೆಬಗೆಯ ಬಾವುಟಗಳಿಂದ ಮಹಡಿಮನೆಗಳನ್ನೂ, ಊರು ಬಾಗಿಲುಗಳನ್ನೂ, ಶೃಂಗರಿಸಿ ದೇವಸ್ಥಾನಗಳನ್ನೂ ಅಲಂಕರಿಸಿದ್ದರು. ಲಾಮಂಚದ ಹುಲ್ಲಿನಿಂದ ಗುಡಿಸಲುಗಳನ್ನು ಕಟ್ಟಿಸಿ ಅದರಲ್ಲಿ ಅರವಟ್ಟಿಗೆಯನ್ನಿಟ್ಟು ಅದರಲ್ಲಿ ಹೆಂಗಸರನ್ನು ನಿಯಮಿಸಿದ್ದನು. ಅವರು ಪರಸ್ಪರವಾಗಿ ಆಟವಾಡುವುದರಲ್ಲಿ ಜಾಣರಾದ ಯುವತಿಯರಾಗಿದ್ದರು. ಸಂತೋಷದಿಂದ ಆ ಊರಿನ ರಸ್ತೆಯಲ್ಲಿ ಯಾವಾಗಲೂ ಜನರು ನೆರೆದಿರುತ್ತಿದ್ದರು. ಅನೇಕ ವಿಧವಾದ ಅಂಗಡಿಗಳನ್ನು ಮಾರ್ಗದಲ್ಲಿ ಇಟ್ಟುಕೊಂಡು ವ್ಯಾಪಾರಮಾಡುತ್ತಿದ್ದರು. ವೇದದ ಧ್ವನಿಯು ಅಲ್ಲಿನ ಮಠಗಳಲ್ಲೆಲ್ಲಾ ಧ್ವನಿತವಾಗುತ್ತಿದ್ದಿತು. ಪ್ರತಿಯೊಂದು ಮನೆಯಲ್ಲಿಯೂ ಮೀಮಾಂಸವೇ ಮೊದಲಾದ ಶಾಸ್ತ್ರಗಳ ಅರ್ಥವಿವರಣೆಯಿಂದ ಅಧ್ಯಯನದ ಕೊನೆಯನ್ನು ಸರಿಯಾಗಿ ಸಂಪಾದಿಸಿರುವರು. ಪುಣ್ಯವನ್ನು ಕೊಡುವ ಹವಿಸ್ಸಿನ ವಾಸನೆ, ಸಾಮಾದಿ ವೇದಗಳ ಸ್ವರ, ಪದ, ಕ್ರಮ ಇವುಗಳ ಧ್ವನಿಯುಳ್ಳ ಬ್ರಾಹ್ಮಣರ ಅಗ್ರಹಾರವಿರುವುದು. ಅನೇಕಜನ ದೊಡ್ಡವರೂ ಕೂಡ ಮನೆಗಳಿಗೆ

ತಾಂಬೂಲರಕ್ತದನ್ತಚ್ಛದಕಾಮಿನೀಂ ಮೃದುವಚನಕಠಿನ-
ವಚನಕರಸಂಜ್ಞಾನಿವಾರಿತಪ್ರತಿವಚನವಿವಿಧೋಪಾಯನಾಹರ-
ಣಕರಜನೋಪಶೋಭಿತಾಂ ಮೃದುಧವಳಜಘನಪರಿವೀತವ
ಸ್ತ್ರೋಪರಿಭಾಗೇನ ಸ್ನಿಗ್ಧವರ್ತುಲಪರಸ್ಪರಸಂಘರ್ಷಪಯೋ-
ಧರಮಧ್ಯಪ್ರದೇಶೋಪಶೋಭಿತವಾಮಾಂಸಕಂಠೋಪಶೋಭಿ-
ತವನಿತಾಂ ವಿವಿಧಮುಕ್ತಾಹಾರಜಪಾಸಂಕಾಶದಶನಚ್ಛದಮಂ-
ದಹಾಸಮಾಲಾಕಾರಸಹಸ್ರೋಪಶೋಭಿತಾಂ ಪುಣ್ಯಾಸವಸಾ-
ಧನಮಂದಿರಾಂ ತತ್ರ ತತ್ರ ವಿಚಿತ್ರತೋರಣಾಂ ವಿಶುದ್ಧವೀ-
ಥಿಕಾಂ ತತ್ರ ತತ್ರ ಸ್ಥಾಪಿತಕಲ್ಪಪಾದಪಾಂ ರಂಭಾವಿಭೂಷಿತ-
ದ್ವಾರಾಂ ಪುರೀಂ ಶೋಭಿತಾಂ ಶೋಭಯಾಮಾಸ ॥ ೬೬ ॥

---

ಬಂದು ಅಗುರನ್ನೂ, ಹೂವನ್ನೂ ಕೊಂಡುಕೊಳ್ಳುತ್ತಿರುವರು. ಎಲ್ಲರೂ ಹೋಮ ಮಾಡುವ ಅಧ್ವರ್ಯುವಿನ ವೇಷದಿಂದಲೇ ಇರುವರು. ಅಲ್ಲಿನ ಹೆಂಗಸರು ಮಲ್ಲು ಬಟ್ಟೆಯನ್ನುಟ್ಟು, ತಾಂಬೂಲವನ್ನು ಹಾಕಿಕೊಂಡು ತುಟಿಯನ್ನು ಕೆಂಪಗೆ ಮಾಡಿ ಕೊಂಡಿರುವರು. ಮೃದುವಾದ ಮಾತಿನಿಂದಲೂ, ಕಠಿಣವಾದ ಮಾತಿನಿಂದಲೂ, ಕೈಸನ್ನೆಯಿಂದಲೂ, ಪ್ರತ್ಯುತ್ತರ ಕೊಡುವುದನ್ನು ತಡೆಯುತ್ತ ಅನೇಕ ಬಗೆಯಾದ ಕಪ್ಪಗಳನ್ನು ಜನಗಳು ತರುತ್ತಿರುವರು. ಅಲ್ಲಿರುವ ಹೆಂಗಸರು ಮೆತ್ತಗೂ, ಬೆಳ್ಳಗೂ, ಸೊಂಟದ ಮುಂಭಾಗಗಳ ಮೇಲೆ ಸುತ್ತಿರುವ ಬಟ್ಟೆಗಳ ಮೇಲುಭಾಗವನ್ನು ಮನೋ ಹರವಾಗಿಯೂ, ದುಂಡಗೂ ಒಂದಕ್ಕೊಂದು ತಿಕ್ಕುತ್ತಲೂ ಇರುವ ಮೊಲೆಗಳ ಮಧ್ಯಪ್ರದೇಶದಿಂದ ತಂದು ಎಡಗಡೆಯ ಹೆಗಲಿನ ಮೇಲೆ ಹಾಕಿಕೊಂಡು ಇರುವರು. ಅಲ್ಲಿ ಹೂಮಾಲೆಯನ್ನು ಮಾರುವವರು ನಾನಾಬಗೆಯಾದ ಮುತ್ತಿನ ಹಾರಗಳಿಂದಲೂ, ಕೆಂಪುದಾಸವಾಳದ ಹೂವಿನಂತಿರುವ ತುಟಿಗಳಿಂದಲೂ, ಕೂಡಿಕೊಂಡು ನಗುತ್ತಿರು ವರು. ಆ ಊರಿನಲ್ಲಿ ಉತ್ತಮವಾದ ಮದ್ಯಗೃಹಗಳಿರುವುವು. ಅಲ್ಲಲ್ಲಿ ಚಿತ್ರವಿಚಿತ್ರ ವಾದ ತೋರಣಗಳನ್ನು ಕಟ್ಟಿರುವರು. ಬೀದಿಯು ಶುದ್ಧವಾಗಿರುವುದು. ಅಲ್ಲಲ್ಲಿಯೇ ಕಲ್ಪವೃಕ್ಷಗಳನ್ನು ನೆಟ್ಟಿದ್ದಾರೆ. ಬಾಗಿಲುಗಳಿಗೆ ಬಾಳೆಯ ಕಂಬವನ್ನು ಕಟ್ಟಿದ್ದಾರೆ. ಸರ್ವಕಾಲದಲ್ಲಿಯೂ ಈ ಮಿಥಿಲಾಪಟ್ಟಣವು ಈರೀತಿಯಿರುತ್ತಿದ್ದರೂ ಈಗ ಇನ್ನೂ ಇವೆಲ್ಲವನ್ನೂ ಹೆಚ್ಚಿಸಿ ಕಾಂತಿಯುಳ್ಳದ್ದನ್ನಾಗಿ ಮಾಡಿದನು.

ಅಥಾಭಿಕಲನಾರ್ಥಂ ವಿಲಾಸಿನ್ಯೋ ನಿಶಾದೂರ್ವಾಕ್ಷತಮಂತ್ರ-
ಮಂಗಳಕಜ್ಜಲಿತಕೈಶಿಕಧಮ್ಮಿಲ್ಲತೇಲಗ್ರಂಥಿತಜಟೋಪಶೋ-
ಭಿತಸೀಮಂತಶೀರ್ಷಶೋಭಿತನಾಸಾಮುಖವಿಚಿತ್ರಾಭರಣಾ
ಹೇಮಪಾತ್ರಾವಸ್ಥಿತಾಜ್ಯಗುಗ್ಗುಲುಫಲಾದಿಸೌಭಾಗ್ಯದ್ರವ್ಯಮು-
ದ್ವಹಸ್ತೀಭಿಃ ಸ್ತ್ರೀಭಿರನ್ಯೈರಪಿ ಶೋಭಿತಜನ್ಯೈಃ ಸ ರಾಜಾ
ನಿರ್ಜಗಾಮ ॥ ೬೭ ॥

ತದಾನೀಂ ಮಂಗಳತೂರ್ಯಘೋಷಾ ದೇವದುಂದುಭಿಭೇರೀ-
ನಿಸ್ಸಾಣಮರ್ದಲಶಂಖಾದಿನಾದಾಃ ಪ್ರಾದುರ್ಬಭೂವುಃ ॥ ೬೮ ॥

ಗಾಯಕಾಶ್ಚ ಮಂಗಳಾನಿ ಜಗುಃ ॥ ೬೯ ॥

ಮಂಗಳವೇದವಾಕ್ಯಾನುಪಾಠೇನ ವೈದಿಕಾ ಬ್ರಾಹ್ಮಣಾಃ ಕುಲ-
ಪಾಠಕಾ ಭೇರೀಘೋಷೇಣ ಕೃತ್ಸ್ನಮಾಕಾಶಮಪೂರಯನ್ ॥ ೭೦ ॥

---

೬೭. ಅನಂತರ ಅರಶಿನ, ಗರಿಕೆ, ಮಂತ್ರಾಕ್ಷತೆ, ಮಂಗಳದ ಕಣ್ಣುಕಪ್ಪು ಗಳಿಂದ ತಲೆಯ ಜುಟ್ಟನ್ನು ಜಡೆಹಾಕಿಕೊಂಡು ತುರುಬು ಕಟ್ಟಿಕೊಂಡು ಜಡೆಯನ್ನು ಎತ್ತಿ ತುರುಬಾಗಿಟ್ಟುಕೊಂಡೂ ಅವುಗಳಲ್ಲಿ ಅನೇಕ ಒಡವೆಗಳನ್ನು ಅಲಂಕರಿಸಿ ಕೊಂಡೂ, ಬೈತಲೆಯನ್ನೂ ತೆಗೆದುಕೊಂಡು ಆ ಬೈತಲೆಯ ಮೇಲೆ ಬಗೆಬಗೆಯ ಆಭ ರಣಗಳನ್ನು ತೊಟ್ಟುಕೊಂಡು, ಮೂಗುಗಳಿಗೆ ಮೂಗುತಿಗಳನ್ನು ಹಾಕಿಕೊಂಡು, ಇವೇ ಮುಂತಾದ ಆಭರಣಗಳುಳ್ಳ ಮುತ್ತೈದೆಯರು ಚಿನ್ನದ ತಟ್ಟೆಯಲ್ಲಿ ತುಪ್ಪ, ಗುಗ್ಗುಳ, ಫಲಗಳು, ಸೌಭಾಗ್ಯ, ಮಂಗಳದ್ರವ್ಯಗಳು ಇವುಗಳನ್ನು ಹಿಡಿದುಕೊಂಡಿ ರುವ ಹೆಂಗಸರುಗಳೊಡನೆಯೂ, ಒಳ್ಳೆಯ ಬಟ್ಟೆ ಮುಂತಾದುವುಗಳಿಂದ ಶೋಭಿಸುವ ಇತರರೊಡನೆಯೂ ರಾಜನು ಎದುರುಗೊಳ್ಳುವುದಕ್ಕೆ ಹೊರಟನು.

೬೮. ಆಗ ಮಂಗಳಧ್ವನಿಗಳುಳ್ಳ ನಗಾರಿ, ಭೇರಿ, ಕೊಂಬು, ಮದ್ದಳೆ, ಶಂಖ ಮೊದಲಾದುವುಗಳು ಧ್ವನಿಗೈದುವು.

೬೯. ಹಾಡುಗಾರರು ಮಂಗಳಗಳನ್ನು ಹಾಡಿದರು.

೭೦. ಮಂಗಳಕರವಾದ ವೇದವಾಕ್ಯಗಳನ್ನು ಹೇಳುವುದರಿಂದ ವೈದಿಕ ಬ್ರಾಹ್ಮಣರು, ಪುರೋಹಿತರು ಭೇರಿಯ ಧ್ವನಿಯ ಜೊತೆಯಲ್ಲಿ ಆಕಾಶವೆಲ್ಲವನ್ನೂ ತುಂಬಿದರು.

ಅಥಾನ್ಯೋನ್ಯಾಕ್ಷತಾಃ ಪೂರ್ವಮಂಗೀಕುರ್ವಂತಃ ಸೂತವಂದಿ-
ಜನಾದಿಭಿಃ ಸ್ತೂಯಮಾನಾಃ ಪುರಂ ಪ್ರವಿವಿಶುಃ ॥ ೭೧ ॥

ವಿದೇಹನಗರಾತ್ಪಶ್ಚಿಮಭಾಗೇ ನಿರ್ಮಿತಂ ಮಂದಿರಂ ದಶರಥಃ
ಪ್ರವಿವೇಶ ॥ ೭೨ ॥

ಅವಶಿಷ್ಟಾಶ್ಚ ಯಥಾಯೋಗ್ಯಂ ವಿಭವನಂ ವಿವಿಶುಃ ॥ ೭೩ ॥

ಅಥ ನಾರದೋ ಮಿಥಿಲಾಂ ತದಾನೀಮೇವಾಗಚ್ಛತ್ ॥ ೭೪ ॥

ವಿದೇಹೋಽಪಿ ದೇವರ್ಷಿಮಭಿಪೂಜ್ಯ ಸ್ವಾಗತಂ ಪೃಷ್ಟ್ವಾ
ಭೋಜನಂ ಚ ಕಾರಯಿತ್ವಾ ಸುಖಾಸೀನಾಯ ಮುನಯೇ
ಸಘನಸಾರತಾಂಬೂಲಂ ದತ್ವಾ ವ್ಯಜ್ಞಾಪಯತ್ ॥ ೭೫ ॥

ಶ್ವೋ ವಿವಾಹೇ ಭವಾನಿಹ ಸ್ಥಾತುಮರ್ಹತಿ ಕಾರಯತಾಂ
ವಿವಾಹಂ ॥ ೭೬ ॥

---

೭೧. ಮೊದಲು ಒಬ್ಬರಿಗೊಬ್ಬರ ಮೇಲೆ ಅಕ್ಷತೆಯನ್ನು ಎರಚಿ, ಸೂತ ರಿಂದಲೂ ವಂದಿಗಳಿಂದಲೂ ಹೊಗಳಿಸಿಕೊಳ್ಳುತ್ತಾ ಪಟ್ಟಣವನ್ನು ಪ್ರವೇಶಿಸಿದರು.

೭೨. ವಿದೇಹನ ಪಟ್ಟಣಕ್ಕಿಂತ ಪಶ್ಚಿಮಭಾಗದಲ್ಲಿ ಏರ್ಪಡಿಸಿರುವ ಮನೆ ಯನ್ನು ದಶರಥನು ಪ್ರವೇಶಿಸಿದನು.

೭೩. ಉಳಿದ ಪರಿವಾರದವರೂ ನೆಂಟರೂ ಅವರವರಿಗೆ ತಕ್ಕಂತೆ ಏರ್ಪಡಿ ಸಿರುವ ಬೇರೆ ಬೇರೆ ಮನೆಗಳಿಗೆ ಹೋದನು.

೭೪. ಆಗ ನಾರದನು ಆಗಲೇನೇ ಮಿಥಿಲೆಗೆ ಬಂದನು.

೭೫. ಜನಕನು ದೇವರ್ಷಿಯಾದ ನಾರದನನ್ನು ಪೂಜಿಸಿ ಸುಖಾಗಮನವನ್ನು ಕೇಳಿ, ಊಟವನ್ನು ಮಾಡಿಸಿ ಸುಖದಿಂದ ಕುಳ್ಳಿರಿಸಿ, ಪಚ್ಚೆಕರ್ಪೂರದಿಂದ ಕೂಡಿದ ತಾಂಬೂಲವನ್ನು ಕೊಟ್ಟು ವಿಜ್ಞಾಪಿಸಿಕೊಂಡನು.

೭೬. ನಾಳೆ ನಡೆಯುವ ಮದುವೆಯಲ್ಲಿ ನೀನಿದ್ದು ಅದನ್ನು ಮಾಡಿಸಬೇಕು.

॥ ನಾರದ ಉವಾಚ ॥

ಶ್ವೋ ಹಿ ನಕ್ಷತ್ರಂ ಸೂರ್ಯನಕ್ಷತ್ರದರ್ಶನಂ ತತ್ರ ವಿವಾಹೋ ನ ಕರ್ತವ್ಯ ಇತಿ ॥ ೭೭ ॥

ಅಥ ಮೌಹೂರ್ತಿಕಂ ವೃದ್ಧಗಾರ್ಗ್ಯಮಾಹೂಯ ರಾಜಾ ಪಪ್ರಚ್ಛ ಕ್ವ ವಿವಾಹ ಮುಹೂರ್ತಃ ॥ ೭೮ ॥

ಶ್ವ ಇತಿ ಗಾರ್ಗ್ಯ ಉವಾಚ ॥ ೭೯ ॥

ರಾಜಾ ಚ ನಾರದಂ ಗಾರ್ಗ್ಯಂ ಚೋದೀಕ್ಷ್ಯ ಭೋ ಇದ-ಮಿತ್ಥ ಮಿತಿ ಪಪ್ರಚ್ಛ ॥ ೮೦ ॥

ಅಥ ನಾರದೋ ಗಾರ್ಗ್ಯಮುವಾಚ ಕಥಮುಕ್ತಲಗ್ನಂ ದಾಸ್ಯಸಿ ॥ ೮೧ ॥

ಅಥ ಗಾರ್ಗ್ಯೋ ವಿಷಘಟಿಕಾಶ್ಚ ವಿಹಾಯ ಲಗ್ನಂ ದಾಸ್ಯಾ-ಮೀತ್ಯುವಾಚ ॥ ೮೨ ॥

---

೭೭. ನಾರದನು ಹೇಳಿದನು:—ನಾಳೆಯ ನಕ್ಷತ್ರವನ್ನು ಸೂರ್ಯನು ದೃಷ್ಟಿಸುತ್ತಾನೆ. ಆ ನಕ್ಷತ್ರದಲ್ಲಿ ಮದುವೆಯನ್ನು ಮಾಡಬಾರದು.

೭೮. ಆಮೇಲೆ ರಾಜನು ಮುಹೂರ್ತವನ್ನು ಬಲ್ಲ ವೃದ್ಧ ಗಾರ್ಗ್ಯನನ್ನು ಕರೆದು ವಿವಾಹಮುಹೂರ್ತವು ಯಾವಾಗ ಎಂದನು.

೭೯. ನಾಳೆ ಎಂಬುದಾಗಿ ಗಾರ್ಗ್ಯನು ಹೇಳಿದನು.

೮೦. ರಾಜನು ನಾರದನನ್ನೂ ಗಾರ್ಗ್ಯನನ್ನೂ ನೋಡುತ್ತಾ ಸ್ವಾಮಿ ಗಾರ್ಗ್ಯರೆ, ಈ ಮುಹೂರ್ತವು ರವಿದೃಷ್ಟವಾಗಿದೆಯಂತಲ್ಲ ಎಂದನು.

೮೧. ಆಗ ನಾರದನು ಗಾರ್ಗ್ಯನನ್ನು ಕುರಿತು ನೀನು ಹೇಳಿದ ಲಗ್ನವನ್ನು ನಾಳೆ ಹೇಗೆ ಕೊಡುತ್ತೀಯೆ ಎಂದನು

೮೨. ಆಗ ಗಾರ್ಗ್ಯನು ವಿಷಘಟಿಯನ್ನು ಬಿಟ್ಟು (ತ್ಯಾಜ್ಯವನ್ನು ಕಳೆದು) ಲಗ್ನವನ್ನು ಕೊಡುತ್ತೇನೆ ಎಂದನು.

ನಾರದೋಽಪಿ ಬ್ರಹ್ಮವಚನಾನಿ ಕಿಂ ನ ಜಾನಾಸೀತ್ಯುಕ್ತ್ವಾ-
ನ್ಗಾರ್ಗ್ಯಂ ॥ ೮೩ ॥

ಗಾರ್ಗ್ಯೇಣ ಪೃಷ್ಟಸ್ತಾನ್ದೋಷಾನಪಠತ್ ॥ ೮೪ ॥

ಉಲ್ಕಾ ಚ ಬ್ರಹ್ಮದಂಡಶ್ಚ ಮೋಘಃ ಕಂಪಸ್ತಥೈವ ಚ ।
ಸರ್ವಕಾರ್ಯವಿನಾಶಾಯ ದೃಷ್ಟಾ ವೈ ಬ್ರಹ್ಮಣಾ ಪುರಾ ॥ ೮೫ ॥

ಪ್ರತಿಷ್ಠಾಸು ವಿವಾಹೇಷು ಮೌಂಜೀಬಂಧಾಭಿಷೇಕತಃ ।
ಅನ್ಯೇಷು ಸರ್ವಕಾರ್ಯೇಷು ವಿಷನಾಡೀರ್ವಿವರ್ಜಯೇತ್ ॥ ೮೬ ॥

ಅತಃ ಪರಂ ತು ಕಾರ್ಯಾಣಾಂ ಕರಣೇ ನ ಚ ದೋಷಭಾಕ್ ।
ವಿವಾಹಾದಿಷು ಕಾರ್ಯೇಷು ದೋಷಮೇವ ವದಾಮ್ಯತಃ ॥ ೮೭ ॥

ಉಲ್ಕಾದಹೇತ್ಕುಲಂ ಸರ್ವಂ ಬ್ರಹ್ಮದಂಡೋ ವಿನಾಶಯೇತ್
ಮೋಘಸ್ತು ಮರಣಾಯ ಸ್ಯಾತ್ಕಂಪಃ ಕಂಪಾಯ ಕರ್ಮಣಃ ॥

---

೮೩. ನಾರದನು ಗಾರ್ಗ್ಯನನ್ನು ಬ್ರಹ್ಮನ ವಚನವನ್ನು ಮರೆತುಬಿಟ್ಟೆಯಾ? ಎಂದನು.

೮೪. ಗಾರ್ಗ್ಯನು ಅದೇನೆಂದು ಕೇಳಲು, ನಾರದನು ಆ ದೋಷಗಳನ್ನು ಅವನಿಗೆ ಹೇಳಿದನು.

೮೫. ಉಲ್ಕ, ಬ್ರಹ್ಮದಂಡ, ಮೋಘ, ಕಂಪಗಳೆಂಬ ದೋಷಗಳುಳ್ಳ ನಕ್ಷತ್ರಗಳು ಸರ್ವಕಾರ್ಯವನ್ನು ನಾಶಮಾಡುತ್ತವೆಂದು ಬ್ರಹ್ಮನು ಹೇಳಿರುವನು.

೮೬. ದೇವತಾಪ್ರತಿಷ್ಠೆ, ಮದುವೆ, ಮುಂಜಿ, ರಾಜ್ಯಾಭಿಷೇಕ ಇವುಗಳು ಹೊರತು ಇತರ ಕೆಲಸಗಳಲ್ಲಿ ವಿಷಗಳಿಗೆಗಳನ್ನು ಬಿಡಬೇಕು.

೮೭. ಪ್ರತಿಷ್ಠೆ ಮೊದಲಾದ ಕೆಲಸಗಳನ್ನು ಹೊರತು ಮಿಕ್ಕ ಕಾರ್ಯಗಳಲ್ಲಿ ವಿಷನಾಡಿಯು ದೋಷವಾಗುವುದಿಲ್ಲ. ವಿವಾಹಾದಿಗಳಲ್ಲಿ ಆ ವಿಷನಾಡಿಯು ದೋಷವೇ ಆಗುತ್ತದೆ.

೮೮. ಉಲ್ಕವೆಂಬ ದೋಷವಿರುವಾಗ ವಿವಾಹಾದಿಗಳನ್ನು ಮಾಡಿದರೆ ಉಲ್ಕೆಯೆಂಬುದು ಕುಲವನ್ನು ಸುಡುತ್ತದೆ. ಬ್ರಹ್ಮದಂಡವು ಕುಲವನ್ನು ನಾಶಮಾಡುತ್ತದೆ.

ಇತಿ ನಾರದೋಕ್ತಮಾಕರ್ಣ್ಯ ಗಾರ್ಗ್ಯೋ ಮುನಿರ್ಮೌನಪ
ರೋಽಭವತ್ ॥ ೮೮ ॥

ದಧ್ಯೌ ರವಿಂ ಗ್ರಹಪತಿಂ ವಿಹಾಯ ವಿಷನಾಡೀರ್ವಿವಾಹಃ
ಕ್ರಿಯತಾಮಿತಿ ॥ ೮೯ ॥

॥ ನಾರದ ಉವಾಚ ॥

ಕಥಂ ಬ್ರಹ್ಮವಚನಂ ॥ ೯೦ ॥

॥ ಸೂರ್ಯ ಉವಾಚ ॥

ದೇಶಭೇದೇನ ವ್ಯವಸ್ಥೋದಿತಾ ತದಸ್ಮಿನ್ದೇಶೇ ವಿವಾಹೋ
ವಿಷಘಟಿಕಾ ವಿಹಾಯ ಕರ್ತವ್ಯ ಏವ ॥ ೯೧ ॥

ನಾರದೋಽಪ್ಯನುಮೇನೇ ॥ ೯೨ ॥

ಉವಾಚ ಶ್ವಃ ಪರಾಹ್ಣೇ ಚ ಕ್ಷತ್ರವಿವಾಹಶ್ಚ ಭವೇದತಃ ಸ್ವಯಂ-
ವರಾರ್ಥಂ ನೃಪಾ ಆಗಚ್ಛನ್ತು ತನ್ನೃಪದೂತಾನ್ಪ್ರೇಷಯ ॥ ೯೩ ॥

---

ಮೋಘವು ಮೃತ್ಯುವನ್ನುಂಟುಮಾಡುತ್ತದೆ. ಕಂಪವು ಕಾರ್ಯವನ್ನು ನಡುಗುವಂತೆ ಮಾಡುತ್ತದೆ. ಈರೀತಿ ನಾರದನು ಹೇಳಿದುದನ್ನು ಕೇಳಿ ಗಾರ್ಗ್ಯನು ಮೌನವನ್ನು ತಾಳಿದನು.

೮೯. ಆಗ ರವಿಯನ್ನು ಧ್ಯಾನಿಸಲು ಆತನು ಬಂದು ವಿಷಗಳಿಗೆಗಳನ್ನು ಬಿಟ್ಟು ವಿವಾಹವನ್ನು ಮಾಡಬಹುದೆಂದನು.

೯೦. ನಾರದನು ಹೇಳಿದನು :—ಬ್ರಹ್ಮವಚನಕ್ಕೆ ಗತಿಯೇನು ?

೯೧. ಸೂರ್ಯನು ಹೇಳಿದನು :—ದೇಶಭೇದದಿಂದ ವ್ಯವಸ್ಥೆಯನ್ನು ಹೇಳಿದ್ದಾನೆ. ಈ ದೇಶದಲ್ಲಿ ವಿಷಗಳಿಗೆಗಳನ್ನು ಬಿಟ್ಟು ವಿವಾಹವನ್ನು ಮಾಡಬಹುದು.

೯೨. ನಾರದನೂ ಕೂಡ ಒಪ್ಪಿದನು.

೯೩. ಅಲ್ಲದೆ ನಾರದನು ಮತ್ತೂ ಇಂತೆಂದನು. ನಾಳೆಯದಿನ ಪರಾಹ್ಣದಲ್ಲಿ ಎಂದರೆ ಮಧ್ಯಾಹ್ನಕ್ಕೆ ಮುಂಚೆ ಕ್ಷತ್ರಿಯ ವಿವಾಹವು ನಡೆಯುತ್ತದೆ ಆದ್ದರಿಂದ ಎಲ್ಲಾ ರಾಜರೂ ಸ್ವಯಂವರಕ್ಕೆ ಬರಲಿ. ಆಯಾ ರಾಜರ ಸೇವಕರೊಡನೆ ಹೇಳಿ ಕಳುಹಿಸು ಎಂದನು.

**ಅಥ ರಾಜಾ ವಿದೇಹೋ ದಶರಥಾನುಮತೇನ ಸರ್ವಾನೇವ ನೃಪಾನಾಗಮಯ್ಯಾಚಿಂತಯತ್ಕಥಂ ಸರ್ವಾನೇವ ತಿರಸ್ಕೃತ್ಯ ವೈದೇಹೀ ರಾಮಾಯ ದೇಯೇತಿ ॥ ೯೪ ॥**

**ಅಥ ರಾತ್ರೌ ಮುಹುರ್ಮುಹುರ್ನಿಶ್ವಸ್ಯ ನಿದ್ರಾಳುರಪಿ ನ ನಿದ್ರಾ-ಮವಾಪ ॥ ೯೫ ॥**

**ಅಥ ಮಧ್ಯೇನಿಶಂ ರಾಜಾ ಶುಚಿರ್ಭೂತ್ವಾ ತ್ರ್ಯಂಬಕಂ ಸಾಂಬಿಕಂ ಮಂಗಳದುಕೂಲಧಾರಿಣಾ ಕಮಲಭವಪುರುಷೋ-ತ್ತಮಶಕ್ರಪ್ರಮುಖನಿಖಿಲದೇವೈರ್ಭೃಗುಪ್ರಮುಖಮುನಿವರ್ಯೈ-ರ್ಹಾಹಾಪ್ರಮುಖಗಂಧರ್ವೈಸ್ತುಂಬುರುಪ್ರಮುಖ್ಯೈಶ್ಚ ಶ್ರುತಿ-ಸ್ಮೃತೀತಿಹಾಸಪುರಾಣೈರ್ಮೂರ್ತಿಮದ್ಭಿಶ್ಚ ಸಿದ್ಧವಿದ್ಯಾಧರಾದಿ-ಮಾತೃಕಾಗಣೈರ್ನಂದೀಪ್ರಮುಖಗಣೈಶ್ಚ ಸೇವ್ಯಮಾನಪಾದ-ಕಮಲಂ ಸರ್ವಾಮಂಗಳಪರಿಮೋಚಕಮತಿಪುಣ್ಯಸಲಿಲಯಾ**

---

೯೪. ಒಡನೆಯೇ ರಾಜನಾದ ಜನಕನು ದಶರಥನ ಒಪ್ಪಿಗೆಯನ್ನು ಪಡೆದು, ಎಲ್ಲಾ ರಾಜರನ್ನೂ ಕರೆಸಿದನು. ಅನಂತರ ಎಲ್ಲಾ ರಾಜರನ್ನೂ ತಿರಸ್ಕರಿಸಿ ಸೀತೆಯನ್ನು ರಾಮನಿಗೆ ಹೇಗೆ ಕೊಡಲಿ ಎಂದು ಯೋಚಿಸಿದನು.

೯೫. ಆಮೇಲೆ ರಾತ್ರಿಯಲ್ಲಿ ಬಾರಿಬಾರಿಗೂ ನಿಟ್ಟುಸಿರುಬಿಡುತ್ತಾ ನಿದ್ದೆ ಬರುತ್ತಿದ್ದರೂ ನಿದ್ದೆಯನ್ನೇ ಮಾಡಲಿಲ್ಲ.

೯೬. ಆಮೇಲೆ ರಾಜನಾದ ಜನಕನು ಅರ್ಧರಾತ್ರಿಯಲ್ಲಿ ಶುಚಿಯಾಗಿ ಪಾರ್ವತಿಯೊಡಗೂಡಿದಂಥ, ಮಂಗಳಕರವಾದ ರೇಷ್ಮೆಯ ಬಟ್ಟೆಗಳನ್ನು ಧರಿಸಿಕೊಂಡಿರುವ, ಬ್ರಹ್ಮ ವಿಷ್ಣು ಇಂದ್ರನೇ ಮುಂತಾದ ದೇವತೆಗಳಿಂದಲೂ, ಭೃಗುವೇ ಮೊದಲಾದ ಋಷಿಶ್ರೇಷ್ಠರಿಂದಲೂ, ಹಾಹಾ ಮೊದಲಾದ ಗಂಧರ್ವರಿಂದಲೂ, ತುಂಬುರು ಮುಂತಾದವರಿಂದಲೂ, ಆಕಾರವನ್ನು ಪಡೆದು ಬಂದಿರುವ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳಿಂದಲೂ, ಸಿದ್ಧರಿಂದಲೂ, ವಿದ್ಯಾಧರರಿಂದಲೂ, ಮಾತೃಕಾ ಗಣಗಳಿಂದಲೂ, ನಂದಿ ಮುಂತಾದ ಗಣಗಳಿಂದಲೂ, ಸೇವಿಸಲ್ಪಡುತ್ತಿರುವ ಪಾದ ಕಮಲಗಳುಳ್ಳಂಥ, ಅಮಂಗಳಗಳನ್ನೆಲ್ಲಾ ನಾಶಮಾಡುವಂಥ ಬಹು ಪವಿತ್ರವಾದ ಗಂಗೆಯಿಂದಲೂ, ಕಳಂಕವಿಲ್ಲದ ಚಂದ್ರನಿಂದಲೂ ಸೇವಿಸಲ್ಪಡುತ್ತಿರುವ ತಲೆಯು

**ಗಂಗಯಾ ನಿಷ್ಕಳಂಕೇನ ಚಂದ್ರಮಸಾ ಸೇವ್ಯಮಾನಶಿರೋ-
ಭಾಗಂ ವಾಮಾಂಕಾರೂಢಯಾ ಗಿರಿಜಯಾ ಪ್ರದೀಯಮಾನ-
ವೀಟಿಂ ಸಹಾಸಂ ಸಕಾಮಂ ಸಹಾವೇಕ್ಷಣಮಾದದಾನಂ ಗೋ-
ಕ್ಷೀರಸದೃಶಂ ಪ್ರತಿಕೂಲಕಸ್ತೂರಿಕಾಸದೃಶಕಂಠಂ ಮೃದು-
ಸೂಕ್ಷ್ಮಸ್ನಿಗ್ಧಜಟಾಭಿರ್ವಿರಚಿತಕಪರ್ದಂ ವಿಶುದ್ಧಕಾರ್ತಸ್ವರ-
ಕುಂಡಲೋಪಶೋಭಿತಗಂಡಭಾಗಂ ದ್ವಿರಷ್ಟವರ್ಷವಯಸಂ
ಗೋಕ್ಷೀರಸದೃಶಸ್ಥೂಲಮುಕ್ತಾಫಲಕೌಸುಂಭವರ್ಣಾಂಚಲೇ-
ನಾವೇಷ್ಟಿತಶಿರೋಭಾಗಂ ವಿವಿಧರತ್ನವಿರಚಿತಕಾರ್ತಸ್ವರಭೂಷಿ-
ತವಕ್ಷಃಸ್ಥಳಮತಿಧವಳೋಪವೀತೇನೋಪಶೋಭಿತಶರೀರಮಂ-
ಬಿಕಾನುಲಗ್ನಕುಂಕುಮಾರುಣಸುಗಂಧಿ ಶ ರ ಮಿ ೀ ಕ್ಷ ಮಾ ಣ ಂ
ತರ್ಜ್ಯಮಾನಮಾರ್ಗಣಕೋಟಿಕಂದರ್ಪಸದೃಶಂ ಮನಸಾಽ
ಚಿಂತಯತ್ ॥ ೯೬ ॥**

---

ಭಾಗವುಳ್ಳ, ಎಡತೊಡೆಯ ಮೇಲೆ ಕುಳಿತಿರುವ ಪಾರ್ವತಿಯಿಂದ ಕೊಡಲ್ಪಡುತ್ತಿರುವ ತಾಂಬೂಲವುಳ್ಳಂಥ ನಗುವಿನಿಂದಲೂ, ಇಚ್ಛೆಯಿಂದಲೂ ನೋಡುತ್ತ ಆ ತಾಂಬೂಲ ವನ್ನು ತೆಗೆದುಕೊಳ್ಳುತ್ತಿರುವಂಥ, ಹಸುವಿನ ಹಾಲಿನಂತೆ ಬೆಳ್ಳಗಿರುವ ಬಿಳುಪಿಗೆ ವಿರುದ್ಧವಾದ ಬಣ್ಣವುಳ್ಳ. ಕಸ್ತೂರಿಯಂತಿರುವ ಕತ್ತುಳ್ಳ, ಮೆತ್ತಗೂ ಸೂಕ್ಷ್ಮವಾ ಗಿಯೂ ಮನೋಹರವಾಗಿಯೂ ಇರುವ ಜಟೆಗಳಿಂದ ಮಾಡಿಕೊಂಡಿರುವ ಕಂದರ್ಪ ವೆಂಬ ಜುಟ್ಟಿನ ಗಂಟುಳ್ಳ, ಶುದ್ಧವಾದ ಚಿನ್ನದ ಕರ್ಣಾಭರಣಗಳಿಂದ ಪ್ರಕಾಶಿಸುವ ಕಪೋಲಗಳುಳ್ಳಂಥ, ಹದಿನಾರು ವರ್ಷ ವಯಸ್ಸುಳ್ಳಂಥ, ಹಸುವಿನ ಹಾಲಿನಂತೆ ಬೆಳ್ಳಗೂ, ದಪ್ಪವಾಗಿಯೂ ಇರುವ ಮುತ್ತಿನ ಸರದಿಂದಲೂ, ಕಾವಿಯಬಣ್ಣ ವಸ್ತ್ರ ದಿಂದಲೂ, ತಲೆಯನ್ನು ಸುತ್ತಿಕೊಂಡಿರುವಂಥ ನಾನಾಬಗೆಯ ರತ್ನಗಳನ್ನು ಕೆತ್ತಿದ ಚಿನ್ನದ ಸರದಿಂದ ಅಲಂಕರಿಸಲ್ಪಟ್ಟ ಎದೆಯ ಪ್ರದೇಶವುಳ್ಳಂಥ, ಬಹು ಬೆಳ್ಳಗಿರುವ ಜನಿವಾರದಿಂದ ಪ್ರಕಾಶಿಸುತ್ತಿರುವ ಶರೀರವುಳ್ಳಂಥ, ಅಂಬಿಕೆಯನ್ನು ಮುಟ್ಟುವುದ ರಿಂದ ಅಂಟಿಕೊಂಡಿರುವ ಕುಂಕುಮದಿಂದ ಕೆಂಪಗೂ ಸುಗಂಧವಾಗಿಯೂ ಇರುವ, ಬಾಣವನ್ನು ನೋಡುತ್ತಿರುವಂಥ, ಹೆದರಿಕೆಯನ್ನು ಹೊಂದಿರುವ ಬಾಣವುಳ್ಳ, ಕೋಟಿ ಜನ ಮನ್ಮಥರಂತಿರುವ ಮುಕ್ಕಣ್ಣನಾದ ಈಶ್ವರನನ್ನು ಮನಸ್ಸಿನಿಂದ ಧ್ಯಾನಿಸಿದನು.

ಜಜಾಪ ಶತರುದ್ರೀಯಂ ಜುಹಾವ ಚ ತೇನೈವ ಕಾಮಾಹುತಿಂ
ಪ್ರಾಸ್ತುವಚ್ಚ ಪುರುಷಸೂಕ್ತೇನ ॥ ೯೭ ॥

ಅಥ ತಾದೃಶ ಏವ ಮಹೇಶ್ವರಸ್ತತ್ರ ಪ್ರಾದುರಭೂತ್ ॥ ೯೮ ॥

ಅಥ ರಾಜಾ ನಮಸ್ಕೃತ್ಯಾಸ್ತುವೀತ ॥ ೯೯ ॥

॥ ರಾಜೋವಾಚ ॥

ಕ್ಷಿತಿಸಲಿಲಗಗನಪವನದಹನರವಿಶಶಿಯಜಮಾನಮೂರ್ತಿಭಿರ-ಷ್ಟಮೂರ್ತೇ ವಿಶ್ವಮೂರ್ತೇ ಲೋಕಮೂರ್ತೇ ತ್ರಿಭುವನ-ಮೂರ್ತೇ ವೇದಪುರಾಣಮೂರ್ತೇ ಯಜ್ಞಮೂರ್ತೇ ಸ್ತೋ-ತ್ರಮೂರ್ತೇ ಶಾಸ್ತ್ರಮೂರ್ತೇ ಸ್ವಧಾಮೂರ್ತೇ ನಾರಾಯಣ-ಮೂರ್ತೇ ಸರ್ವದೇವತಾಮೂರ್ತೇ ತ್ರಯೀಮಯ ತ್ರಯೀ-ಪ್ರಮಾಣ ತ್ರಯೀನೇತ್ರ ಸಾಮಪ್ರಿಯ ವಸುಧಾರಾಪ್ರಿಯ

---

೯೭. ಶತರುದ್ರೀಯವನ್ನು ಜಪಿಸಿದನು, ಆಶತರುದ್ರೀಯದಿಂದ ಕಾಮಾಹುತಿಯನ್ನು ಕೊಟ್ಟನು, ಪುರುಷಸೂಕ್ತದಿಂದ ಸ್ತೋತ್ರವನ್ನೂ ಮಾಡಿದನು.

೯೮. ಅನಂತರ ಅವನು ಸ್ತೋತ್ರಮಾಡಿದಂತಹ ಮಹೇಶ್ವರನೇ ಅಲ್ಲಿ ಕಾಣಿಸಿಕೊಂಡನು.

೯೯. ಆಮೇಲೆ ರಾಜನು ಆ ಸ್ವಾಮಿಗೆ ನಮಸ್ಕರಿಸಿ ಸ್ತೋತ್ರಮಾಡಿದನು.

೧೦೦. ರಾಜನು ಹೇಳಿದನು:—ಭೂಮಿ, ನೀರು, ಆಕಾಶ, ಗಾಳಿ, ಬೆಂಕಿ, ಸೂರ್ಯ, ಚಂದ್ರ, ಯಾಗಮಾಡುವವನು ಈ ಎಂಟು ಜನರಿಂದ ಕೂಡಿದ ಮೂರ್ತಿಯೆ, ಪ್ರಪಂಚವನ್ನೇ ದೇಹವಾಗಿ ಉಳ್ಳವನೇ, ಲೋಕದ ಆಕಾರನೇ, ಮೂರುಲೋಕದ ದೇಹವುಳ್ಳವನೇ, ವೇದಪುರಾಣಗಳ ರೂಪವಾದವನೇ, ಯಾಗರೂಪವಾದ ಶರೀರವುಳ್ಳವನೇ, ಸ್ತೋತ್ರಮೂರ್ತಿಯೇ, ಶಾಸ್ತ್ರಮೂರ್ತಿಯೆ, ಸ್ವಧಾಮೂರ್ತಿಯೆ, (ಸ್ವಧಾ ಎಂದರೆ ಪಿತೃಗಳಿಗೆ ಕೊಡುವ ಹವಿಸ್ಸು) ನಾರಾಯಣಮೂರ್ತಿಯೆ, ಸಮಸ್ತ ದೇವತಾ ಮೂರ್ತಿಯೇ, ವೇದಸ್ವರೂಪನೇ, ವೇದಗಳನ್ನು ಪ್ರಮಾಣವಾಗಿ ಉಳ್ಳವನೇ, ವೇದಗಳೇ ಕಣ್ಣಾಗಿ ಉಳ್ಳವನೇ, ಸಾಮವೇದಪ್ರಿಯನೇ, ತುಪ್ಪದ ಧಾರೆಯಲ್ಲಿ ಪ್ರೀತಿಯುಳ್ಳ

ಭಕ್ತಿಪ್ರಿಯ ಭಕ್ತಸುಲಭಾ ಭಕ್ತವಿದೂರ ಸ್ತುತಿಪ್ರಿಯ ಧೂಪಪ್ರಿಯ ದೀಪಪ್ರಿಯ ಘೃತಕ್ಷೀರಪ್ರಿಯ ದ್ರೋಣಕರವೀರಪ್ರಿಯ ಶ್ರೀಪತ್ರಪ್ರಿಯ ಕಮಲಕಲ್ಹಾರಪ್ರಿಯ ನಂದ್ಯಾವರ್ತಪ್ರಿಯ ವಕುಳಪ್ರಿಯ ಯೂಥಿಕಾಪ್ರಿಯ ಕೋಕನದಪ್ರಿಯ ಗ್ರೀಷ್ಮಜಲಾವಾಸಪ್ರಿಯ ಯಮನಿಯಮಪ್ರಿಯ ನಿಯತೇಂದ್ರಿಯಪ್ರಿಯ ಜಪಪ್ರಿಯ ಶ್ರಾದ್ಧಪ್ರಿಯ ಗಾನಪ್ರಿಯ ಗಾಯತ್ರೀಪ್ರಿಯ ಪಂಚಬ್ರಹ್ಮಪ್ರಿಯ ಸದಾಚಾರಪ್ರಿಯ ಗೋತ್ರೋತ್ಸಾದಿಕಮಲಭವಹರಿಹರನಯನ ಸ ಮ ರ್ಚಿ ತ ಪಾ ದ ಕ ಮ ಲ ಜಯಪ್ರದ ಹರಿಪ್ರಾರ್ಥಿತಜಲೋತ್ಪಾಟಿತಚಕ್ರಪ್ರದರ್ಶಕಕೃತ್ಸ್ನಸ್ಮೃತಿಯುಕ್ತಿಪ್ರದ ಸ್ಮೃತಿಮಂಗಲಪ್ರದಮಹ್ಯಾಂ ಜಯ ನಮಸ್ತೇ ನಮಸ್ತೇ ॥ ೧೦೦ ॥

---

ಪನೇ, ಭಕ್ತಿಯಲ್ಲಿ ಪ್ರೀತಿಯುಳ್ಳವನೇ, ಭಕ್ತರಿಗೆ ಸುಲಭನೇ, ಭಕ್ತರಲ್ಲದವರಿಗೆ ದೂರನಾದವನೇ, ಸ್ತೋತ್ರದಲ್ಲಿ ಪ್ರಿತಿಯುಳ್ಳವನೇ, ಧೂಪದಲ್ಲಿ ಪ್ರೀತಿಯುಳ್ಳವನೇ, ದೀಪದಲ್ಲಿ ಪ್ರೀತಿಯುಳ್ಳವನೇ, ಹಾಲು ತುಪ್ಪದಲ್ಲಿ ಪ್ರೀತಿಯುಳ್ಳವನೇ, ತುಂಬೆ, ಕಣಿಗಲೆ ಹೂಗಳಲ್ಲಿ ಪ್ರೀತಿಯುಳ್ಳವನೇ, ಬಿಲ್ವಪತ್ರೆಯಲ್ಲಿ ಪ್ರೀತಿಯುಳ್ಳವನೇ, ಕಮಲ ಕಲ್ಹಾರಗಳಲ್ಲಿ ಪ್ರೀತಿಯುಳ್ಳವನೇ, ನಂಜಬಟ್ಟಲಹೂವಿನಲ್ಲಿ ಪ್ರೀತಿಯುಳ್ಳವನೇ, ಪಗಡೇಹೂವಿನಲ್ಲಿ ಪ್ರೀತಿಯುಳ್ಳವನೇ, ಗರುಗದ ಹೂವಿನಲ್ಲಿ ಪ್ರೀತಿಯುಳ್ಳವನೇ, ಕೆಂಪು ಉತ್ಪಲದ ಹೂವಿನಲ್ಲಿ ಪ್ರೀತಿಯುಳ್ಳವನೇ, ಬೇಸಿಗೆಯಲ್ಲಿ ನೀರಿನಲ್ಲಿ ವಾಸಿಸಲು ಇಷ್ಟವುಳ್ಳವನೇ, ಶರೀರಸಾಧನೆಯು ಅಪೇಕ್ಷೆಯ ಕರ್ಮವೇ ವ್ರತವಾಗಿ ಉಳ್ಳವನೇ, ಇಂದ್ರಿಯನಿಗ್ರಹವುಳ್ಳವರಲ್ಲಿ ಪ್ರೀತಿವಂತನೇ. ಜಪದಲ್ಲಿ ಪ್ರೀತಿಯುಳ್ಳವನೇ, ಶ್ರಾದ್ಧದಲ್ಲಿ ಪ್ರೀತಿಯುಳ್ಳವನೇ, ಗಾನದಲ್ಲಿ ಪ್ರೀತಿಯುಳ್ಳವನೇ, ಗಾಯತ್ರಿಯಲ್ಲಿ ಪ್ರೀತಿಯುಳ್ಳವನೇ, ಪಂಚಬ್ರಹ್ಮಗಳಲ್ಲಿ ಪ್ರೀತಿಯುಳ್ಳವನೇ, ಸದಾಚಾರದಲ್ಲಿ ಪ್ರೀತಿಯುಳ್ಳವನೇ, ಇಂದ್ರ, ಬ್ರಹ್ಮ, ಹರಿ, ಸೂರ್ಯ, ಚಂದ್ರ, ಅಗ್ನಿಗಳಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೇ, ಜಯವನ್ನು ಕೊಡತಕ್ಕವನೇ, ವಿಷ್ಣುವಿನಿಂದ ಪ್ರಾರ್ಥಿತನಾಗಿ ನೀರಿನಲ್ಲಿ ಚಕ್ರ ಪ್ರದರ್ಶನವನ್ನು ಮಾಡಿ ಅದರಂತೆ ಚಕ್ರದ ಜ್ಞಾಪಕವನ್ನು ತಂದವನೇ, ಒಳ್ಳೆಯ ಜ್ಞಾನವನ್ನು ಕೊಡತಕ್ಕವನೇ. ಭೂಮಿಯಲ್ಲಿ ಸರ್ವೋತ್ಕೃಷ್ಟದಿಂದಿರುವ ನಿನಗೆ ನಮಸ್ಕಾರವು, ನಮಸ್ಕಾರವು.

ಇತಿ ಸ್ತೋತ್ರಮಾಕರ್ಣ್ಯ ಭಗವಾನ್ಶಿವೋ ರಾಜಾನಮುವಾಚ
ವರದೋಽಹಂ ವರಂ ವೃಣು ॥ ೧೦೧ ॥

॥ ರಾಜೋವಾಚ ॥

ಮಮ ಕನ್ಯಾ ವೈದೇಹೀ ರಾಮಾಯ ದಿತ್ಸಿತಾ ಸ್ವಯಂವರೇ ಕುಲರೂಪಬಲೋತ್ಸಾಹಸಂಪನ್ನಾನೇಕಭೂಪರಾಕ್ಷಸವಿಪ್ರಾದಿ-ಸರ್ವಪ್ರಾಣಿಸಮಾಗಮೇ ರಾಮಾಧಿಕಬಲೋ ಯದಿ ತಾಮು-ಗೃಹೀತ್ತದಾ ವಚನಮನೃತಂ ಮಮ ಪಾಪಂ ಚ ಭವಿಷ್ಯತಿ ಪ್ರತ್ಯುತ ದಶರಥೋಽಪಿ ಸರ್ವಾನೇವಾಗತಾನ್ವಿಜೇತುಮಲಂ ಕ್ಷತ್ರ ಕದನಶ್ಚ ರಾಮೋ ಯದ್ಯಾಯಾಸ್ಯತಿ ತರ್ಹಿ ಮಮ ಸುತಾಂ ಕಿಂ ಕರಿಷ್ಯತಿ ವಾ ಕಿಂ ಕಿಂ ವಾ ಪ್ರೇಷಯಿಷ್ಯತಿ ಕೀದೃಶಂ ಕಾರಯಿಷ್ಯತಿ ಮಮ ಕಿಂ ವಾ ಕರಿಷ್ಯತಿ ಸರ್ವಥಾ ಹಿ ಪ್ರಭೂತ-ಬಲವಾಹನೋ ನರಪತಿರಶೇಷಮಪಿ ತ್ರಿಭುವನಂ ಹನ್ಯಾತ್ಕಿಮುತ

---

೧೦೧. ಈರೀತಿಯಾದ ಸ್ತೋತ್ರವನ್ನು ಕೇಳಿ ಪೂಜ್ಯನಾದ ಈಶ್ವರನು ಜನಕ ನನ್ನು ಕುರಿತು ನಾನು ತುಷ್ಟನಾಗಿದ್ದೇನೆ, ವರವನ್ನು ಕೊಡುತ್ತೇನೆ, ವರವನ್ನು ಕೇಳು ಎಂದನು.

೧೦೨. ರಾಜನು ಹೇಳಿದನು:—ನಾನು ನನ್ನ ಮಗಳಾದ ವೈದೇಹಿಯನ್ನು ರಾಮನಿಗೆ ಕೊಡಬೇಕೆಂದಿದ್ದೇನೆ. ಕುಲ, ರೂಪು, ಉತ್ಸಾಹಗಳಿಂದ ಕೂಡಿದ ಬಹು ಜನ ರಾಜರು, ರಾಕ್ಷಸರು, ಬ್ರಾಹ್ಮಣರು ಸೇರತಕ್ಕ ಸ್ವಯಂವರದಲ್ಲಿ ರಾಮನಿಗಿಂತಲೂ ಹೆಚ್ಚು ಬಲವುಳ್ಳವನು ಆಕೆಯನ್ನು ವರಿಸಿದರೆ ಆಗ ನನ್ನ ಮಾತು ಸುಳ್ಳಾಗುತ್ತದೆ. ನನಗೆ ಪಾಪಸಂಘಟನೆಯೂ ಆಗುತ್ತದೆ. ಇದೂ ಅಲ್ಲದೆ ದಶರಥನೂ ಕೂಡ ಅಲ್ಲಿಗೆ ಬರತಕ್ಕವರೆಲ್ಲರನ್ನೂ ಸಹ ಜಯಿಸಲು ಸಮರ್ಥನು. ಕ್ಷತ್ರಿಯರ ಮಹಾಯುದ್ಧವೇ ಪ್ರಾಪ್ತವಾಗುತ್ತದೆ. ರಾಮನು ಬಂದಪಕ್ಷದಲ್ಲಿ ನನ್ನ ಮಗಳನ್ನು ಏನುಮಾಡುತ್ತಾನೆಯೋ? ಯಾರುಯಾರನ್ನು ಕಳುಹಿಸುತ್ತಾನೆಯೋ? ಏನೇನು ಮಾಡಿಸುತ್ತಾನೆಯೋ? ನನ್ನನ್ನೂ ಕೂಡ ಏನುಮಾಡುತ್ತಾನೆಯೋ? ಎಲ್ಲಾ ಪ್ರಕಾರವಾಗಿಯೂ ಬಹಳ ಸೈನ್ಯವುಳ್ಳ ಆ ದಶರಥರಾಜನು ಮೂರು ಲೋಕವೆಲ್ಲವನ್ನೂ ಕೂಡ ಕೊಂದಾನು.

ಮಾಮಲ್ಪಸತ್ತ್ವಂ ಕಿಮುತ ಬಹುನಾ ಭವಾನೇವ ಶರಣಂ ಮಮೋಪಾಯಂ ವದ ಯಥಾ ವಿವಾಹೇ ಶ್ರೇಯೋ ಭವಿಷ್ಯತಿ ರಾಮಶ್ಚ ಜಾಮಾತಾ ಭವಿಷ್ಯತಿ ॥ ೧೦೨ ॥

ಶಂಭುರಪಿ ತಥಾ ಕರೋಮೀತ್ಯುವಾಚ ರಾಮ ಏವ ನಾಥಃ ಸೀತಾಯಾ ಭವಿಷ್ಯತಿ ರಾಮಂ ಚ ಕೃತ್ವಾ ಸ್ವಸ್ತ್ಯೈವ ಕರಿ-ಷ್ಯಾಮಿ ಗೃಹಾಣಾಜಗವಂ ಧನುರಿದಂ ॥ ೧೦೩ ॥

॥ ರಾಜೋವಾಚ ॥

ಕಿಮನೇನಾಜಗವೇನ ಧನುಷಾ ಸ್ವಯಂವರೇ ಸೀತಾಂ ರಾಮಂ ಪ್ರಾಪಯ ॥ ೧೦೪ ॥

॥ ಶಂಭುರುವಾಚ ॥

ಇದಂ ಧನುರಸಜ್ಯಂ ಮೇ ಯಸ್ತು ಸಜ್ಯಂ ಕರಿಷ್ಯತಿ ।
ತಸ್ಮೈ ದೇಯಾ ಮಯಾ ಸೀತಾ ಪ್ರತಿಜ್ಞಾಮೇವಮಾಚರ ॥ ೧೦೫ ॥

---

ಅಂತಹುದರಲ್ಲಿ ಸ್ವಲ್ಪ ಬಲವುಳ್ಳ ನನ್ನನ್ನು ಬಿಟ್ಟಾನೆ? ಬಹಳ ಮಾತಿನಿಂದೇನು? ನೀನೇ ನನಗೆ ಶರಣವು. ಮದುವೆಯಲ್ಲಿ ಒಳ್ಳೆಯದಾಗುವ ಹಾಗೂ, ರಾಮನು ಅಳಿಯನಾಗುವ ಹಾಗೂ ನನಗೆ ಉಪಾಯವನ್ನು ಹೇಳು.

೧೦೩. ಶಂಭುವೂ ಕೂಡ ಹಾಗೆಯೇ ಮಾಡುತ್ತೇನೆಂದು ಹೇಳಿ, ರಾಮನೇ ಸೀತೆಗೆ ಗಂಡನಾಗುತ್ತಾನೆ. ರಾಮನಿಗೆ ಒಳ್ಳೆಯದನ್ನು ಮಾಡುತ್ತೇನೆ. ಈ ಅಜಗವ ನೆಂಬ ನನ್ನ ಬಿಲ್ಲನ್ನು ತೆಗೆದುಕೋ ಎಂದನು.

೧೦೪. ರಾಜನು ಹೇಳಿದನು:—ಈ ಅಜಗವವೆಂಬ ಧನುಸ್ಸೇತಕ್ಕೆ? ಸ್ವಯಂ ವರದಲ್ಲಿ ಸೀತೆಯನ್ನೂ ರಾಮನನ್ನೂ ಸೇರಿಸು.

೧೦೫. ಶಂಭುವು ಹೇಳಿದನು:—ಹೆದೆಯೇರಿಸದಿರುವ ಈ ನನ್ನ ಬಿಲ್ಲನ್ನು ಯಾವನು ಹೆದೆಯೇರಿಸುತ್ತಾನೆಯೋ ಅವನಿಗೆ ಸೀತೆಯನ್ನು ಕೊಡುತ್ತೇನೆ ಎಂದು ಪ್ರತಿಜ್ಞೆಯನ್ನು ಮಾಡು.

ಇತ್ಯೇವಮುಕ್ತ್ವಾ ಭಗವಾನ್ಗಣೈರನ್ತರ್ದಧೇ ಹರಃ ।
ಅಥಾದಾತುಂ ಧನೂ ರಾಜಾ ನ ಶಶಾಕಾತಿಯತ್ನತಃ ॥ ೧೦೬ ॥

ಅಥೋಲ್ವಲಂ ಶತಸಹಸ್ರಗಜಬಲಂ ಸಮಾಹೂಯ ಗೃಹಾಣೇ-
ತ್ಯುವಾಚ ॥ ೧೦೭ ॥

ಸ ಚಾಪಿ ಮಾತುಳಂ ನತ್ವಾಅಟ್ಟಹಾಸಂ ಕೃತ್ವೋತ್ಪ್ಲುತ್ಯ ಧನುರ್ದ್ವಾ-
ಭ್ಯಾಂ ಕರಾಭ್ಯಾಮುದ್ಧಧಾರ ಜಾನುಪರ್ಯಂತಂ ॥ ೧೦೮ ॥

ಮಾತುಲೋ ಮಾರೀಚಃ ಶ್ರುತ್ವೈಕಾಕೀ ವಿಪ್ರವೇಷಂ ಕೃತ್ವಾ
ವಿದೇಹಮುಯಾಚತ ವೈಶ್ವದೇವಾನ್ತೇ ಪ್ರಾಪ್ತಮತಿಥಿಮಾಮವೇಹಿ
॥ ೧೦೯ ॥

॥ ರಾಜೋವಾಚ ॥

ಸ್ವಾಗತಂ ಭೋ ಇದಂ ಬ್ರಹ್ಮನ್ನಾಸನಂ ನಿಷೀದೇತಿ ॥ ೧೧೦ ॥

---

೧೦೬. ಹೀಗೆಂದು ಆ ಸ್ವಾಮಿಯಾದ ಹರನು ಹೇಳಿ ಅಂತರ್ಧಾನನಾದನು. ಅನಂತರ ಈ ಧನುಸ್ಸನ್ನು ತೆಗೆದುಕೊಂಡು ಹೋಗಲು ಜನಕನು ಎಷ್ಟು ಪ್ರಯತ್ನ ಪಟ್ಟರೂ ಆಗಲೇ ಇಲ್ಲ.

೧೦೭. ಆಮೇಲೆ ಒಂದುಲಕ್ಷ ಆನೆಗಳ ಬಲವುಳ್ಳ ಉಲ್ವಲನ್ನು ಕರೆದು ತೆಗೆದುಕೋ ಎಂದನು.

೧೦೮. ಅವನೂ ಕೂಡ ಸೋದರಮಾವನಾದ ಮಾರೀಚನಿಗೆ ನಮಸ್ಕರಿಸಿ, ದೊಡ್ಡದಾಗಿ ನಕ್ಕು, ನೆಗೆದು ಆ ಬಿಲ್ಲನ್ನು ಎರಡು ಕೈಯಲ್ಲೂ ಹಿಡಿದು ಮಂಡಿಯ ವರಿಗೂ ಎತ್ತಿದನು.

೧೦೯. ಇದನ್ನು ಆ ಸೋದರಮಾವನಾದ ಮಾರೀಚನು ತಿಳಿದು, ಒಬ್ಬಂಟಿಗನಾಗಿ ಬ್ರಾಹ್ಮಣವೇಷವನ್ನು ಹಾಕಿಕೊಂಡು ಜನಕನ ಬಳಿಗೆ ಬಂದು ವೈಶ್ವದೇವದ ಕಡೆಯಲ್ಲಿ ಬಂದ ಅತಿಥಿಯನ್ನಾಗಿ ತಿಳಿ ಎಂದನು.

೧೧೦. ರಾಜನು ಹೇಳಿದನು :—ಅಯ್ಯಾ ಸುಖಾಗಮನವೇ ? ಇದು ಬ್ರಾಹ್ಮಣನಿಗೆ ಆಸನವು, ಕುಳಿತುಕೋ.

ಸ ಚಾತಿಥಿಸ್ತಥೇತ್ಯುಕ್ತ್ವಾ ನಿಷಸಾದ ॥ ೧೧೧ ॥

ಅಥ ರಾಜಾ ಜಲಮಾದಾಯ ಪಾದೌ ಪ್ರಕ್ಷಾಳ್ಯ ಗಂಧಪುಷ್ಪಾಕ್ಷತೈರಭ್ಯರ್ಚ್ಯ ಮಹಾಜಂ ತಸ್ಮೈ ನಿವೇದ್ಯ ಭೋಜನಾಯ ಪ್ರಾರ್ಥಯಾಮಾಸ ॥ ೧೧೨ ॥

ಸ ಚಾಪಿ ತದನ್ನಂ ಷಡ್ರಸೋಪೇತಂ ಸೌವರ್ಣಭಾಜನಗತಮೀಕ್ಷಮಾಣ ಇವೇತಸ್ತತೋ ವಿಲೋಕಯಾಮಾಸ ॥ ೧೧೩ ॥

ತಸ್ಮಿನ್ನೇವಾವಸರೇ ಸೀತಾ ಪದ್ಮಕಿಂಜಲ್ಕಪ್ರಭೇಷದಾರುಣವಸನಂ ಬಿಭ್ರತೀ ನೀಲಕುಟಿಲಕುಂತಳೈಶ್ಚಲದ್ಭಿರ್ಯೂನಾಂ ಮನಾಂಸ್ಯಾಕರ್ಷಯದ್ಭಿರಿದಂ ಪ್ರೇಕ್ಷ್ಯಮಾಣದೃಷ್ಟಿಭಗ್ನಕಲ್ಪೈರಿವ ಸ್ತ್ರೀಣಾಂ ಚಿತ್ತಮೀದೃಶಮಿತಿ ದರ್ಶಯದ್ಭಿರಿವೋಪಶೋಭಿತಲಲಾಟಾನಂಗಚಾಪಸುಭ್ರೂಃ ಪದ್ಮಪತ್ರಾರುಣವಿಲೋಚನಾ ತಿಲಪ್ರಸೂನನಾಸಾ ಮೃದುಸ್ನಿಗ್ಧರೋಮಶಕಪೋಲಾನಂತರಾ-

೧೧೧. ಆ ಅತಿಥಿಯೂ ಹಾಗೇ ಆಗಲೆಂದು ಹೇಳಿ ಕುಳಿತುಕೊಂಡನು.

೧೧೨. ಆಗ ರಾಜನು ನೀರನ್ನು ತಂದು ಕಾಲುಗಳನ್ನು ತೊಳೆದು ಗಂಧ, ಹೂ, ಅಕ್ಷತೆಗಳಿಂದ ಪೂಜಿಸಿ ಅವನಿಗೆ ದೊಡ್ಡದೊಂದು ಹೋತನನ್ನು ಒಪ್ಪಿಸಿ ಊಟಕ್ಕೆ ಏಳಬೇಕೆಂದನು.

೧೧೩. ಆ ಅತಿಥಿಯು ಚಿನ್ನದ ಹರಿವಾಣದಲ್ಲಿ ಬಡಿಸಿರುವ ಷಡ್ರಸದಿಂದ ಕೂಡಿದ ಅನ್ನವನ್ನು ನೋಡುತ್ತಿರುವಂತೆಯೇ ಅತ್ತಿತ್ತ ನೋಡಿದನು.

೧೧೪. ಅದೇ ಸಮಯದಲ್ಲಿ ಪದ್ಮದ ಹೂವಿನ ಕುಸುಮದ ಬಣ್ಣದಂತೆ ಬಣ್ಣವುಳ್ಳ, ಸ್ವಲ್ಪ ಕೆಂಪಾದ ಬಟ್ಟೆಯನ್ನು ಉಟ್ಟಿರುವ, ಹಾರಾಡುತ್ತಿರುವ, ಯುವಕರ ಮನಸ್ಸನ್ನು ಎಳೆಯುತ್ತಿರುವಂಥ, ನೋಡುತ್ತಿರುವವರ ದೃಷ್ಟಿಯು ತಗಲಿ ಮುರಿದು ಹೋದ ಚೂರೋ ಎಂಬಂತಿರುವ, ಹೆಂಗಸರ ಮನಸ್ಸೇ ಈ ರೀತಿಯಾದುದು ಎಂಬುದನ್ನು ತೋರಿಸುತ್ತಿರುವಂತೆ ಇರುವ, ಕಪ್ಪಗಿರುವ. ಗುಂಗುರುಗುಂಗುರಾದ ಕೂದಲುಗಳಿಂದ ಪ್ರಕಾಶಿಸುತ್ತಿರುವ ಹಣೆಯುಳ್ಳಂಥ, ಮನ್ಮಥನ ಧನುಸ್ಸಿನಂತಿರುವ ಹುಬ್ಬುಗಳುಳ್ಳಂಥ, ಪದ್ಮದ ಎಸಳಿನಂತೆ ಕೆಂಪಾದ ಕಣ್ಣುಗಳುಳ್ಳ, ಎಳ್ಳಿನ ಹೂವಿನಂತಿರುವ

ರಕ್ಶೋ್ರೀಷ್ಠಾ ರಕ್ತಾಸನಮಣಿಕಣಿಕಾನಿಭದಾಡಿಮೀದಶನಾ ಜಪಾರುಣಾಧರಾತಿಶೋಭಿತಚುಬುಕಾ ಶುಕ್ತಿವರ್ಣಾ ಸಮು- ದೀರ್ಘಕಂಠಾsತಿಮಾಂಸಲವಕ್ಷಃಪೀನೋದ್ಭಿನ್ನಕುಚಕುಡ್ಮಲಾ- ನೇಕಹಾರೋಪಶೋಭಿತಾ ಸುಭಗಾಕಾರಾsನತಿಮಾಂಸಲಬಾ- ಹುಲತಾಮುಗ್ಧಾಯತಸಮಾನಾಂಗುಳಿಶಿಖಾ ಪದ್ಮಾರುಣಪಲ್ಲ- ವಾ ವಿವಿಧಬಹುರತ್ನಾಂಗುಳಿಭೂಷಣಾ ಮುಷ್ಟಿಗ್ರಾಹ್ಯಮಧ್ಯಾ ಸುರೋಮರಾಜಿಗಂಭೀರನಾಭಿಃ ಪೃಥುಜಘನಾ ಕರಿಕರೋರು- ಸ್ತ್ರೂಣೀರಜಂಘಾ ಸುಪಾದಕಮಲಾ ನೂಪುರಾದಿಪಾದವಿಭೂ- ಷಣಾ ಪಾದಾಂಗುಳಿಭೂಷಿತಾ ವಿಕಸಿತಸೌಗಂಧಿಕಂ ವಿದಧತೀ ಭುಂಜಾನಮಾರೀಚಸ್ಯ ಪುರತಶ್ಚಾಗತಾ ॥ ೧೧೪ ॥

---

ಮೂಗುಳ್ಳಂಥ, ಮೃದುವಾಗಿಯೂ ನುಣುಪಾಗಿಯೂ ಕೂದಲಿಲ್ಲದೆಯೂ ಇರುವ ಕಪಾಲವುಳ್ಳಂಥ, ಸಂದುಬಿಡದ ಕೆಂಪಾದ ತುಟಿಗಳುಳ್ಳ, ಕೆಂಪಗಿರುವ ಒಸಡು ಮಣಿ ಗಳ ಮೇಲೆ ದಾಳಿಂಬದ ಮಣಿಗಳಂತಿರುವ ಹಲ್ಲುಗಳುಳ್ಳಂಥ, ದಾಸವಾಳದ ಹೂವಿ ನಂತೆ ಕೆಂಪಗಿರುವ ಕೆಳದುಟಿಯಿಂದ ಪ್ರಕಾಶಿಸುವ ಗಲ್ಲವುಳ್ಳಂಥ, ಕಪ್ಪೆಯಚಿಪ್ಪಿನ ಬಣ್ಣವುಳ್ಳ ಸಮನಾಗಿಯೂ, ಉದ್ದವಾಗಿಯೂ ಇರುವ ಕತ್ತುಳ್ಳ, ಹೆಚ್ಚು ಮಾಂಸ ದಿಂದ ಕೂಡಿರುವ ಎದೆಯುಳ್ಳ, ಆಗತಾನೇ ದಪ್ಪವಾಗಲು ಮೊದಲಾಗಿರುವ ಮೊಲೆ ಗಳುಳ್ಳ, ಅನೇಕವಾದ ಹಾರಗಳಿಂದ ಶೋಭಿಸುತ್ತಿರುವ ಮನೋಹರವಾದ ಆಕಾರ ವುಳ್ಳ, ಹೆಚ್ಚು ದಪ್ಪವಿಲ್ಲದಿರುವ ತೋಳು, ಸ್ವಲ್ಪ ಬಗ್ಗಿಕೊಂಡು ಉದ್ದವಾಗಿದ್ದು ಕೊಂಡು ಸಮವಾಗಿರುವ ಉಗುರುಗಳುಳ್ಳ, ಪದ್ಮದಂತೆ ಕೆಂಪಾದ ಬೆರಳುಗಳುಳ್ಳ, ನಾನಾಬಗೆಯಾದ ರತ್ನಗಳಿಂದ ಕೂಡಿರುವ ಉಂಗುರಗಳುಳ್ಳ, ಹಿಡಿಯಲ್ಲಿ ಹಿಡಿಯು ವಷ್ಟು ಸಣ್ಣದಾದ ನಡುವುಳ್ಳ, ಒಳ್ಳೆಯ ರೋಮಗಳ ಸಾಲಿನಿಂದ ಕೂಡಿರುವ, ಆಳ ವಾದ ಹೊಕ್ಕಳುಳ್ಳ, ಅಗಲವಾಗಿರುವ ದಿಮ್ಮಿಕಟ್ಟುಳ್ಳಂಥ, ಆನೆಯ ಸೊಂಡಲಿನಂತೆ ಇರುವ ತೊಡೆಗಳುಳ್ಳ, ಬತ್ತಳಿಕೆಯಂತಿರುವ ಮಂಡಿಗಳುಳ್ಳ, ಕಮಲದಂತಿರುವ ಹೆಜ್ಜೆಗಳುಳ್ಳ, ಕಾಲುಕಡಗ ಮಿಂಚು ಮುಂತಾದ ಕಾಲಿನ ಒಡವೆಯನ್ನು ಹಾಕಿ ಕೊಂಡಿರುವ ಕಾಲು, ಅದರ ಬೆರಳುಗಳುಳ್ಳಂಥ, ಅರಳಿದ ಸುಗಂಧರಾಜಹೂವನ್ನು ಧರಿಸಿರುವ ಸೀತೆಯು, ಊಟಮಾಡುತ್ತಿರುವ ಮಾರೀಚನ ಎದುರಿಗೆ ಬಂದಳು.

ವೀಕ್ಷ್ಯೈಸಾವಚಿಂತಯದೇನಾಂ ಕಥಮುಪಹರಾಮಿ ಕಥಮಾ-
ಲಿಂಗಾಮಿ ಕಥಮನ್ಯದ್ಯತ್ಕಿಂಚಿತ್ಕರೋಮೀತ್ಯೇವಮವಸರ-
ಮಲಭಮಾನಸ್ತೂಷ್ಣೀಮೇವ ವಿನಿರ್ಗತಃ ॥ ೧೧೫ ॥

ಅಥ ದೇವಧನುಸ್ಸಜ್ಜೀಕರಣಾಯ ಯುತಮಾನಾಹಂಪೂರ್ವಿ-
ಕಯಾ ವಿದ್ಯಮಾನಾ ಅನ್ಯೋನ್ಯತಿರಸ್ಕಾರೇಣ ಮಹೇಂದ್ರಃ
ಪ್ರಾಪ ಧನುರುತ್ತಮಂ ಪ್ರಾಂತದ್ವಯೋಪಾರಂ ನಾವನಮ
ಯಿತುಂ ಶಶಾಕ ॥ ೧೧೬ ॥

ಅಥ ಸೂರ್ಯೋ ಧನುರಾದಾಯ ನಮಯನ್ನೇವ ನಿಪಪಾತ ॥ ೧೧೭ ॥

ವಾಯುರ್ಬಲವತಾಂ ಶ್ರೇಷ್ಠೋ ಜಗ್ರಾಹಾಜಗವಮಥ ಸ್ವೇ-
ನೈವ ಕರೇಣೋತ್ಕರ್ಷಯನ್ನಧಃ ಪಪಾತ ॥ ೧೧೮ ॥

ಧನುಶ್ಚ ವಾಯೋರುಪರಿ ಪಪಾತ ॥ ೧೧೯ ॥

---

೧೧೫. ಆಕೆಯನ್ನು ನೋಡಿ ಈಕೆಯನ್ನು ಹೇಗೆತಾನೇ ಕದಿಯಲಿ? ಹೇಗೆ ಆಲಂಗಿಸಲಿ? ಇನ್ನೇನನ್ನಾದರೂ ಹೇಗೆತಾನೇ ಮಾಡಲಿ ಎಂದು ಯೋಚಿಸುತ್ತ ಸಮಯ ಸಿಕ್ಕದೆ ಸುಮ್ಮನೆ ಹೊರಟುಹೋದನು.

೧೧೬. ಅನಂತರ ಆ ದೇವಧನುಸ್ಸನ್ನು ಹೆದೆಯೇರಿಸಲು ನಾನು ಮೊದಲು ತಾನು ಮೊದಲೆಂದು ಅವಸರಪಡುತ್ತಿದ್ದ ಯುವಕರನ್ನು ತಿರಸ್ಕರಿಸುವ ಮಹೇಂದ್ರನು, ಆಚೆ ಈಚೆ ತುದಿಗಳು ಉದ್ದವಾಗಿರುವ ಶ್ರೇಷ್ಠವಾದ ಧನುಸ್ಸನ್ನು ಬಗ್ಗಿಸಲಾರದೆ ಹೋದನು.

೧೧೭. ಸೂರ್ಯನೂ ಕೂಡ ಆ ಧನುಸ್ಸನ್ನು ತೆಗೆದುಕೊಂಡು ಬಗ್ಗಿಸುತ್ತಿರು ವಾಗಲೇ ಬಿದ್ದುಬಿಟ್ಟನು.

೧೧೮. ಬಲಿಷ್ಠರಲ್ಲಿ ಶ್ರೇಷ್ಠವಾದ ವಾಯುವು ಈ ಬಿಲ್ಲನ್ನು ಹಿಡಿದುಕೊಂಡನು. ತನ್ನ ಕೈಯಿಂದಲೇ ಬಗ್ಗಿಸುತ್ತ ಕೆಳಕ್ಕೆ ಬಿದ್ದನು.

೧೧೯. ಆ ಬಿಲ್ಲು ವಾಯುವಿನ ಮೇಲೆ ಬಿದ್ದಿತು.

**ಅಹಸಂಸ್ತದಾ ಸರ್ವೇ ॥ ೧೨೦ ॥**

**ಏತಸ್ಮಿನ್ನಂತರೇ ತುರಗವರಮಾರುಹ್ಯ ಬಾಣಾಸುರಃ ಸಹಸ್ರ ಬಾಹುರೇಕಾನೇಕಶಿರೋಭಿರ್ದೈತ್ಯೈಃ ಪರಿವೃತಃ ಪ್ರಹ್ಲಾದ ಸಮೇತೋ ವಿದೇಹಪುರೀಮಾಜಗಾಮ ॥ ೧೨೧ ॥**

**ಅಥ ಸ್ವವಿಭೂಷಣೋದ್ಭಾಸಿತಾಂ ದಿಶಾಂ ಕುರ್ವನ್ಸ್ವತೇಜಸಾ ಅಪಯುಶಸೋ ದೇವತಾಃ ಕುರ್ವನ್ನಾನಾವಿಧಗೀತಿಂ ಶೃಣ್ವನ್ ದ್ವ್ಯಂಗುಳಮಾತ್ರೇಣ ಶಕ್ತೋ ವಿರರಾಮ ॥ ೧೨೨ ॥**

**ಪ್ರಹ್ಲಾದೋ ಬಲಿಶ್ಚೈವ ಧಾವಾತೇ ಅಥ ವಿರೇಮತುಃ ॥ ೧೨೩ ॥**

**ಅಥ ರಾಕ್ಷಸೇಷು ತೂಷ್ಣೀಂಭೂತೇಷು ರಾಜಾನೋಽತಿಬಲಿನಃ ಸಮಾಗತಾ ಜ್ಯಾಬಂಧಾಶಕ್ತಾ ಅಪಸೃತ್ಯ ತಸ್ಥುಃ ॥ ೧೨೪ ॥**

---

೧೨೦. ಆಗ ಎಲ್ಲರೂ ನಕ್ಕರು.

೧೨೧. ಇಷ್ಟರೊಳಗೆ ಒಳ್ಳೆಯ ಕುದುರೆಯನ್ನು ಹತ್ತಿಕೊಂಡು ಸಾವಿರ ತೋಳುಗಳುಳ್ಳ ಬಾಣಾಸುರನು ಬಂದು, ಎರಡು ರೀತಿ ನಾನಾಸಂಖ್ಯೆಯ ತಲೆಗಳುಳ್ಳ ದೈತ್ಯರಿಂದ ಕೂಡಿಕೊಂಡು ಪ್ರಹ್ಲಾದನೊಡನೆ ವಿದೇಹನ ಪಟ್ಟಣಕ್ಕೆ ಬಂದನು.

೧೨೨. ಆಗ ಆ ಬಾಣಾಸುರನು ದಿಕ್ಕುಗಳನ್ನು ಒಡವೆಗಳಿಂದ ಪ್ರಕಾಶಿಸುವಂತೆ ಮಾಡುತ್ತಾ, ದೇವತೆಗಳಿಗೆ ಕೆಟ್ಟ ಯಶಸ್ಸನ್ನುಂಟುಮಾಡುತ್ತ ಅನೇಕಬಗೆಯಾದ ಗೀತಗಳನ್ನು ಕೇಳುತ್ತ, ಎರಡು ಅಂಗುಲದಷ್ಟು ಇರುವವರೆಗೂ ಹೆದೆಯೇರಿಸಿ ಮುಂದೆ ಆಗದೆ ಸುಮ್ಮನಾದನು.

೧೨೩. ಪ್ರಹ್ಲಾದನೂ ಬಲಿಯೂ ಓಡಿಬಂದು ನೋಡಿ ಸುಮ್ಮನಾದರು.

೧೨೪. ರಾಕ್ಷಸರೆಲ್ಲರೂ ಸುಮ್ಮನಾಗಲು ಅತಿ ಬಲಿಷ್ಠರಾದ ರಾಜರುಗಳು ಬಂದರು. ಹೆದೆಯೇರಿಸಲಾರದೆ ಹಿಂತಿರುಗಿ ಹೋದರು (ಸುಮ್ಮನಾದರು).

ಅಥ ಬ್ರಾಹ್ಮಣಾಸ್ಸಮಾಗತಾಃ ॥ ೧೨೫ ॥

ಅಥ ವಿಶ್ವಾಮಿತ್ರೋ ಧನುರಾದಾಯೈಕಾಂಗುಳಿಪರ್ಯಂತಂ ಸಜ್ಯಂ ಕೃತ್ವಾ ವಿರರಾಮ ನಿವೃತ್ತಾಶ್ಚಾಪರೇ ॥ ೧೨೬ ॥

ಅಥ ದಿನಮಾತ್ರೇ ಧನುಷಿ ತೂಷ್ಣೀಂಭೂತೇ ರಾಘವಸ್ಸಹಾನುಜೈರಾಗತ್ಯ ಧನುರ್ನಿರೀಕ್ಷ್ಯೋಪಾಸ್ಪೃಶತ್ ॥ ೧೨೭ ॥

ಅಥ ರಾಜಕುಮಾರಾಃ ಶತಸ್ಸಮಾಗತಾಸ್ಸರ್ವಾಭರಣಭೂಷಿತಾ ಧನುರ್ದೃಷ್ಟ್ವಾ ಪಸ್ಪೃಶುರ್ನ ಚ ಚಾಲನಕ್ಷಮಾಃ ॥ ೧೨೮ ॥

ಅಥ ದಾಶರಥಿಪ್ರಮುಖಾಃ ಕುಮಾರಾಸ್ಸಮಾಗತಾಃ ॥ ೧೨೯ ॥

ಅಥ ವೇತ್ರಜರ್ಝರಪಾಣಯಃ ಸಮಾಗಮನ್ಸರ್ವಾನೇವಾಪಸಾರಯಾಮಾಸುಃ ॥ ೧೩೦ ॥

---

೧೨೫. ಅನಂತರ ಬ್ರಾಹ್ಮಣರು ಬಂದರು.

೧೨೬. ವಿಶ್ವಾಮಿತ್ರನು ಬಂದು ಧನುಸ್ಸನ್ನೆತ್ತಿ ಹೆದೆಯೇರಿಸಲು ಒಂದಂಗುಲ ವಿರುವಷ್ಟರಲ್ಲಿ ಆಗದೆ ಸುಮ್ಮನಾದನು. ಮಿಕ್ಕವರೂ ಸುಮ್ಮನಾದರು.

೧೨೭. ಅನಂತರ ಒಂದು ದಿನವೆಲ್ಲಾ ಆ ಧನುಸ್ಸನ್ನು ಯಾರೂ ಮುಟ್ಟದೆ ಸುಮ್ಮನೆ ಬಿದ್ದಿರಲು, ರಾಮನು ತಮ್ಮಂದಿರೊಡನೆ ಬಂದು ಅದನ್ನು ನೋಡಿ ಮುಟ್ಟಿದನು.

೧೨೮. ಅನಂತರ ರಾಜಪುತ್ರರು ಸಕಲಾಭರಣವನ್ನು ತೊಟ್ಟು ನೂರರಗಟ್ಟಲೆ ಬಂದು ಧನುಸ್ಸನ್ನು ನೋಡಿ ಮುಟ್ಟಿದರು. ಅಲ್ಲಾಡಿಸುವುದಕ್ಕೂ ಸಹ ಸಮರ್ಥರಾಗಲಿಲ್ಲ.

೧೨೯. ಅನಂತರ ರಾಮನೇ ಮುಂತಾದ ಹುಡುಗರು ಬಂದರು.

೧೩೦. ಆಗ ಬೆತ್ತದ ಕೋಲನ್ನು ಕೈಯಲ್ಲಿ ಹಿಡಿದು ಸೇವಕರು ಬಂದು ಎಲ್ಲರನ್ನೂ ದೂರಕ್ಕೆ ಕಳುಹಿಸಿದರು.

ಅಥ ರಾಮೋ ಲಕ್ಷ್ಮಣಹಸ್ತಂ ಗೃಹೀತ್ವಾ ಸರ್ವಾಭರಣ-
ಭೂಷಿತೋ ಧನುರಾಸಾದ್ಯ ಸ್ಪೃಷ್ಟ್ವಾ ನತ್ವಾ ಪ್ರದಕ್ಷಿಣೀಕೃತ್ಯ
ಧನುರಾದಾಯೋದ್ದಧಾರ ॥ ೧೩೧ ॥

ತದಾದಾನಸಮಯೇ ಸರ್ವ ಏವೈತ್ಯ ಸಹಾಸಮೂಚುರತ್ರ ಭಗ್ನಾ
ಮಹಾರಥಾ ಇತಿ ॥ ೧೩೨ ॥

ಅಥ ರಾಮೋ ಧನುರ್ಜ್ಯಾಸ್ಥಾನಮುಪನಮಯ್ಯ ಧನುಷಿ ಜಾನುಂ
ಕೃತ್ವಾ ಸಜ್ಯಮೇಕಕರೇಣೋತ್ಪಾದಯನ್ಕೋಟ್ಯಾ ನ್ಯದಾಪ-
ಯತ್ ॥ ೧೩೩ ॥

ಅಥ ಸಜ್ಜೀಕೃತಂ ದೃಷ್ಟ್ವಾ ಸರ್ವ ಏವ ನಾಸಾಗ್ರನ್ಯಸ್ತಾಂಗುಲ-
ಯೋಽಭವನ್ ॥ ೧೩೪ ॥

ರಾಮೋಽಪಿ ಜ್ಯಾಮನುನಾದಯಂಸ್ತೇನ ನಾದೇನ ಸರ್ವೇಷಾಂ
ಮನಾಂಸಿ ಕ್ಷುಭಿತಾನ್ಯಕರೋತ್ ॥ ೧೩೫ ॥

---

೧೩೧. ಅನಂತರ ಸರ್ವಾಭರಣವನ್ನೂ ತೊಟ್ಟು ಪ್ರಕಾಶಿಸುತ್ತ, ರಾಮನು ಲಕ್ಷ್ಮಣನ ಕೈಯನ್ನು ಹಿಡಿದುಕೊಂಡು ಬಿಲ್ಲಿನ ಬಳಿಗೆ ಬಂದು, ಮುಟ್ಟಿ ನಮಸ್ಕರಿಸಿ ಪ್ರದಕ್ಷಿಣೆಮಾಡಿ ಧನುಸ್ಸನ್ನು ಎತ್ತಿದನು.

೧೩೨. ರಾಮನು ಆ ಧನುಸ್ಸನ್ನು ತೆಗೆದುಕೊಳ್ಳುವಾಗ ಎಲ್ಲರೂ ಬಂದು ನಗುತ್ತ, ಇದನ್ನು ಎತ್ತುವುದರಲ್ಲಿ ಮಹಾರಥರೆಲ್ಲರೂ ಕೈಯಲ್ಲಿ ಆಗದವರಾದರು ಎಂದರು.

೧೩೩. ಅನಂತರ ರಾಮನು ಬಿಲ್ಲಿನ ಹೆದೆಯ ಜಾಗವನ್ನು ಬಗ್ಗಿಸಿ ಧನುಸ್ಸಿನ ಮಧ್ಯಕ್ಕೆ ಮಂಡಿಯನ್ನು ಕೊಟ್ಟು ಅಮುಕಿ, ಮತ್ತೊಂದು ಕೈಯಿಂದ ಹುರಿ (ಹೆದೆ) ಯನ್ನು ಮೇಲಕ್ಕೆ ತೆಗೆದುಕೊಂಡು ತುದಿಗೆ ಸಿಕ್ಕಿದನು.

೧೩೪. ಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಿದುದನ್ನು ನೋಡಿ ಎಲ್ಲರೂ ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಂಡರು.

೧೩೫. ರಾಮನೂ ಕೂಡ ಆ ಧನುಸ್ಸಿನ ಹಗ್ಗವನ್ನು ಎಳೆದು ಧ್ವನಿಮಾಡಿ ಸುತ್ತ ಆ ಸದ್ದಿನಿಂದ ಎಲ್ಲರ ಮನಸ್ಸನ್ನೂ ಕಲಕಿದನು.

ರಾಮೇಣ ಸಜ್ಜಿತಂ ಧನುರಿತಿ ಸರ್ವತ್ರ ವಾದಸ್ಸಂಜಾತೋ
ಜನಕೋಽಪಿ ಸೀತಾಂ ರಾಮಾಯ ದದೌ ॥ ೧೩೬ ॥

ರಾಜಭಿಶ್ಚ ಯುದ್ಧಂ ಕೃತ್ವಾ ನಿರ್ಜಿತ್ಯ ಸ್ವಪುರೀಮಗಾತ್ ॥ ೧೩೭ ॥

ಅಥ ದಶರಥೋ ರಾಮಂ ಯೌವರಾಜ್ಯೇಽಭಿಷಿಚ್ಯ ಸುಖೀಬ-
ಭೂವ ॥ ೧೩೮ ॥

ಸರ್ವಪ್ರಜಾರಂಜನಾಚ್ಚ ರಾಮೋ ರಾಜಾನುಮತ ಇತಿ ಸರ್ವ-
ಪ್ರಜಾವಾದೋಽಭೂತ್ ॥ ೧೩೯ ॥

ಅಥ ಕೇಕಯದೇಶಾಧಿಪತಿತನಯಾ ಸುವೇಷಾ ರಾಮಂ
ರಾಜಾನಮಸಹಮಾನಾ ರಾಜಾನಮುವಾಚ ಮಮ ವರ-
ದಾನಾವಸರ ಇತಿ ॥ ೧೪೦ ॥

ರಾಜಾಽಚಿಂತಯತ್ಕಿಂ ದೇಯಮಿತಿ ॥ ೧೪೧ ॥

---

೧೩೬. ರಾಮನು ಧನುಸ್ಸನ್ನು ಎದೆಯೇರಿಸಿದನೆಂದು ಹೆಲ್ಲೆಡೆಯಲ್ಲಿಯೂ, ಹರಡಿತು. ಜನಕನೂ ಕೂಡ ಸೀತೆಯನ್ನು ರಾಮನಿಗೆ ಕೊಟ್ಟನು.

೧೩೭. ಅನಂತರ ರಾಜರೆಲ್ಲರೂ ಮೇಲೆ ಬೀಳಲು ಅವರೊಡನೆ ಯುದ್ಧಮಾಡಿ ಗೆದ್ದು ತನ್ನ ಪಟ್ಟಣಕ್ಕೆ ಹೋದನು.

೧೩೮. ಇತ್ತ ದಶರಥನು ರಾಮನನ್ನು ಯುವರಾಜಪದವಿಯಲ್ಲಿ ಅಭಿಷೇಕ ಮಾಡಿ ಸಂತೋಷಪಟ್ಟನು.

೧೩೯. ಎಲ್ಲ ಪ್ರಜೆಗಳನ್ನೂ ಸಂತೋಷಪಡಿಸುತ್ತಿರುವುದರಿಂದ ರಾಮನು ಎಲ್ಲಾ ಪ್ರಜೆಗಳಿಗೂ ಇಷ್ಟನು ಎಂದು ಎಲ್ಲಾ ಕಡೆಯಲ್ಲಿಯೂ ಹೇಳುತ್ತಿದ್ದರು.

೧೪೦. ಆಮೇಲೆ ಕೇಕಯ ರಾಜನ ಮಗಳಾದ ಸುವೇಷೆಯು ರಾಮನು ಮುಂದೆ ರಾಜನಾಗುವುದನ್ನು ಸಹಿಸದೆ ರಾಜನನ್ನು ಕುರಿತು ನನಗೆ ವರವನ್ನು ಕೊಡಲು ಈಗ ಸಮಯ ಬಂದಿದೆ ಎಂದಳು.

೧೪೧. ರಾಜನು ಏನು ಕೊಡಬೇಕೆಂದು ಯೋಚಿಸಿದನು.

॥ ದೇವ್ಯುವಾಚ ॥

ಚತುರ್ದಶ ವರ್ಷಾಣಿ ರಾಮೋ ವನಂ ವಿಶತು ಪಾಲಯತು
ರಾಜ್ಯಂ ಭರತಃ ॥ ೧೪೨ ॥

ರಾಜಾ ಚಾನೃತವಚನದೋಷಭಯಾತ್ಕಥಂ ಕಥಮಪಿ ಸ್ವೀಚ-
ಕಾರ ॥ ೧೪೩ ॥

ಅಥ ವಸಿಷ್ಠಂ ಭಾವಿತಯಾಽಪ್ರೋಚತ ರಾಮೋ ವನಾಯ
ನಿರ್ಗಚ್ಛತ್ಯಸ್ಯ ಕಿಂ ವಾ ಭವೇದಿತಿ ವಿಚಾರ್ಯ ಶುಭಾಶುಭಂ
ಬ್ರೂಹಿ ॥ ೧೪೪ ॥

ವಿಸಿಷ್ಠೋ ವಿಚಾರ್ಯ ಸಹರ್ಷಂ ರಾಜಾನಮುವಾಚ ॥ ೧೪೫ ॥

ಗತ್ವಾ ವನಂ ನಿಖಿಲದಾನವವೀರಹನ್ತಾ
ಶಂಭೋರನೇಕವಿಧಪೂಜನಮಾತನೋತಿ ।
ಸೀತಾವಿಯೋಗರುಷಿತಃ ಕಪಿಸೇನಯಾ ಚ
ತೀರ್ತ್ವಾರ್ಣದಧಿಂ ದಶಮುಖಂ ಚ ನಿಹನ್ತಿ ರಾಮಃ ॥ ೧೪೬ ॥

---

೧೪೨. ದೇವಿಯು ಹೇಳಿದಳು :—ರಾಮನು ಹದಿನಾಲ್ಕು ವರ್ಷಗಳು ಕಾಡಿಗೆ ಹೋಗಲಿ. ಭರತನು ರಾಜ್ಯವನ್ನು ಆಳಲಿ.

೧೪೩. ರಾಜನೂ ಕೂಡ ಆ ಮಾತನ್ನು, ಸುಳ್ಳಾಡಿದ ದೋಷ ಬರುವುದೆಂಬ ಭಯದಿಂದ ಒಪ್ಪಿಕೊಂಡನು.

೧೪೪. ಆಗ ದಶರಥನು ವಸಿಷ್ಠನನ್ನು ಕುರಿತು ರಾಮನು ಕಾಡಿಗೆ ಹೋಗುತ್ತಾನೆ. ಇವನಿಗೆ ಏನಾದೀತೆಂಬುದನ್ನು ಯೋಚಿಸಿ ಒಳ್ಳೆಯದು ಕೆಟ್ಟದುಗಳನ್ನು ಹೇಳು ಎಂದನು.

೧೪೫. ವಸಿಷ್ಠನು ಯೋಚಿಸಿ ಹರ್ಷದಿಂದ ರಾಜನಿಗೆ ಇಂತೆಂದನು.

೧೪೬. ರಾಮನು ಕಾಡಿಗೆ ಹೋಗಿ ರಾಕ್ಷಸರೆಲ್ಲರನ್ನೂ ಕೊಲ್ಲುತ್ತಾನೆ. ಅನೇಕ ವಿಧದಲ್ಲಿ ಈಶ್ವರನನ್ನು ಪೂಜಿಸುತ್ತಾನೆ. ಸೀತೆಯ ವಿಯೋಗದಿಂದ ಕೋಪಿಸಿಕೊಂಡು ಕಪಿಸೇನೆಯೊಡನೆ ಸಮುದ್ರವನ್ನು ದಾಟಿ ರಾವಣನನ್ನು ಕೊಲ್ಲುತ್ತಾನೆ.

ಆಗಮ್ಯ ರಾಜ್ಯಂ ರಘುನಂದನೋಽಪಿ
ಬಹೂನಿ ವರ್ಷಾಣಿ ಸಮಾತನೋತಿ ।
ಪ್ರಶಸ್ತಕೀರ್ತಿರ್ನಿಖಿಲೇಽಪಿ ಲೋಕೇ
ಶರ್ವೇಣ ದೇವೇನ ಚಿರಂ ಸ್ವವಾತ್ಸೀತ್ ॥
ಸುಪುತ್ರಯುಕ್ತೋ ಬಹುಯಜ್ಞಯಾಜೀ
ಪರೀವೃಢಃ ಸರ್ವಗುಣಾಧಿಕಶ್ಚ ॥ ೧೪೭ ॥

ಇತಿ ವಸಿಷ್ಠವಚನಂ ಶ್ರುತ್ವಾ ದಶರಥೋ ರಾಮಗುಣಾನನು-
ಸ್ಮರನ್ನಿತ್ಯುವಾಚ ಶ್ರೇಯೋ ಮೇ ಮರಣಂ ರಾಮಸ್ಯ ನಿರ್ಗಮನ
ಇತಿ ॥ ೧೪೮ ॥

ಅಥ ರಾಮೋ ಮಾತರಂ ಪಿತರಂ ಗುರುಂ ಚ ವಸಿಷ್ಠಂ ಪಿತೃ-
ಪತ್ನೀರ್ನತ್ವಾ (ನಮಸ್ಕೃತ್ಯ) ವನಾಯ ಜಗಾಮ ॥ ೧೪೯ ॥

ಅಥೋಪವನೇ ದಿನಮೇಕಂ ಸ್ಥಿತ್ವಾ ಜಟಾಃ ಕಾರಯಿತ್ವಾ
ವಲ್ಕಲಂ ವಾಸಸಂ ಧೃತ್ವೈಕೋಪವೀತೀ ಕೃತದಂತಶುದ್ಧಿ-

---

೧೪೭. ರಾಮನು ಮತ್ತೆ ಬಂದು ರಾಜ್ಯವನ್ನು ಬಹು ವರ್ಷಗಳ ಕಾಲ ಆಳುತ್ತಾನೆ. ಒಳ್ಳೆಯ ಯಶಸ್ಸನ್ನು ಲೋಕದಲ್ಲೆಲ್ಲಾ ಹೊಂದಿ ಈಶ್ವರನ ಪೂಜೆಯನ್ನು ಮಾಡುತ್ತ ಬಹುಕಾಲವಿರುವನು. ಒಳ್ಳೆಯ ಮಕ್ಕಳನ್ನೂ ಪಡೆಯುತ್ತಾನೆ. ಅನೇಕ ಯಾಗಗಳನ್ನು ಮಾಡುತ್ತಾನೆ. ಚಕ್ರವರ್ತಿಯಾಗುತ್ತಾನೆ. ಎಲ್ಲಾ ಗುಣಗಳಿಂದಲೂ ಕೂಡಿರುತ್ತಾನೆ.

೧೪೮. ಈರೀತಿ ವಸಿಷ್ಠನ ಮಾತನ್ನು ಕೇಳಿ ದಶರಥನು ರಾಮನ ಗುಣಗಳನ್ನು ಸ್ಮರಿಸುತ್ತ ರಾಮನು ಹೊರಡಲು ನನಗೆ ಮರಣವು ಒಳ್ಳೆಯದೆಂದನು.

೧೪೯. ಅನಂತರ ರಾಮನು, ತಾಯಿ, ತಂದೆ, ಗುರುವಾದ ವಸಿಷ್ಠ, ತಂದೆಯ ಉಳಿದ ಹೆಂಡಿರು ಇವರಿಗೆ ನಮಸ್ಕರಿಸಿ ಕಾಡಿಗೆ ಹೋದನು.

೧೫೦. ಅನಂತರ ಕೈದೋಟದಲ್ಲಿ ಒಂದು ದಿನವಿದ್ದು ಜಟೆಗಳನ್ನು ಮಾಡಿಕೊಂಡು, ನಾರುಮಡಿಯನ್ನುಟ್ಟು ಒಂದೇ ಜನಿವಾರವನ್ನು ಹಾಕಿಕೊಂಡು, ಹಲ್ಲುಜ್ಜಿಕ್ಕೊಂಡು, ಮತ್ತೊಂದು ಜನಿವಾರದಿಂದ ತಲೆಯ ಜಟೆಗಳನ್ನು ಕಟ್ಟಿಕ್ಕೊಂಡು,

ರೇಕೇನೋಽಪವೀತೇನ ಜಟಾ ಬಧ್ವಾ ಭಸ್ಮೋಽದ್ಧೂಳಿತಸರ್ವಾಂ-
ಗೋ ಭಸಿತನಿಷ್ಠುರಕಾಯೋ ಮುಕ್ತಾಫಲದಾಮಾ ಮಣಿ-
ವ್ಯತ್ಯಸ್ತರುದ್ರಾಕ್ಷಮಾಲಾಮುರಸಿ ದಧಾನೋಽಲ್ಪಭೂಷಣಾಧಿ-
ಭೂಷಿತಸೀತಾಸಹಾಯೋ ಲಕ್ಷ್ಮಣಾನುಚರೋ ವಿವೇಶ
ವನಾಂತರಂ ॥ ೧೫೦ ॥

ಅಥಾನೇಕರಾಕ್ಷಸಾಂಸ್ತಸ್ಮಿನ್ನಿಜಘಾನ ಭವಾನಿವ ನಿಖಿಲಂ
ಚಕಾರ ॥ ೧೫೧ ॥

ಸೀತಾಪಹರಣಾದಿ ನಿಖಿಲಮಪಿ ಭವಂತೋ ಯಥಾ ತಥಾಽ
ಸ್ಯಾಥ ಸುಗ್ರೀವಾಶ್ರಮಮೃಷ್ಯಮೂಕಪರ್ವತಂ ರಾಮೋ
ಜಗಾಮ ॥ ೧೫೨ ॥

ನಿಬಿಡಚ್ಛಾಯಾಚೂತವೃಕ್ಷಮಾಸಾದ್ಯ ಲಕ್ಷ್ಮಣಸಹಾಯಃ
ಪರಿಶ್ರಯಮಕಲ್ಪಯತ್ ॥ ೧೫೩ ॥

---

ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡು, ಆ ಬೂದಿಯಿಂದ ಒರಟಾದ ಶರೀರವುಳ್ಳವನಾಗಿ, ಮುತ್ತಿನಸರವನ್ನು ಹಾಕಿಕೊಂಡು, ಮಾಣಿಕ್ಯವನ್ನೂ ರುದ್ರಾಕ್ಷಿಯನ್ನೂ ಒಂದಾದ ಮೇಲೊಂದರಂತೆ ಪೋಣಿಸಿ ಹಾಕಿಕೊಂಡು, ಸ್ವಲ್ಪ ಅಲಂಕಾರದಿಂದಲೇ ಬಹಳ ಪ್ರಕಾಶಿಸುತ್ತಿರುವ ಸೀತೆಯೊಡನೆಯೂ ಲಕ್ಷ್ಮಣನೊಡನೆಯೂ ಕಾಡಿನೊಳಕ್ಕೆ ಹೋದನು.

೧೫೧. ಆ ಕಾಡಿನಲ್ಲಿ ಅನೇಕ ರಾಕ್ಷಸರನ್ನು ಕೊಂದು ನಿನ್ನಂತೆಯೇ ಎಲ್ಲವನ್ನೂ ಮಾಡಿದನು.

೧೫೨. ಸೀತೆಯನ್ನು ಕಳೆದುಕೊಂಡು ತೊಂದರೆಗಳನ್ನು ನೀನು ಹೇಗೆ ಅನುಭವಿಸಿದೆಯೋ ಅವನೂ ಹಾಗೆಯೇ ಅನುಭವಿಸಿದನು. ಅನಂತರ ರಾಮನು ಸುಗ್ರೀವನ ಆಶ್ರಮವಿರುವ ಋಷ್ಯಮೂಕ ಪರ್ವತವನ್ನು ಹೊಂದಿದನು.

೧೫೩. ಹೆಚ್ಚು ನೆರಳುಳ್ಳ ಮಾವಿನಮರವನ್ನು ಹೊಂದಿ, ಅಲ್ಲಿ ಲಕ್ಷ್ಮಣನೊಡನೆ ಸ್ಥಳವನ್ನು ಮಾಡಿಕೊಂಡನು.

ವೃಕ್ಷೇ ತು ಧನುಷೀ ಆರೋಪ್ಯಾಸೀನಲಕ್ಷ್ಮಣಾಂಕೇ ಶಿರಃ ಕೃತ್ವಾ ಹರಿಚರ್ಮಶಯ್ಯಾಶಯನೋ ಲಕ್ಷಿತಾಂಗೀತಂ ಶೃಣ್ವ-ನ್ವೃಕ್ಷಫಲಂ ನಿರೀಕ್ಷಮಾಣೋ ವಾನರಮೇಕಂ ಮಣಿ-ಕುಂಡಲಂ ಹೇಮಪಿಂಗಳಂ ಸುದೃಢಬದ್ಧಮೌಂಜೀಕೌಪೀನ-ಮುಚ್ಚೋಪವೀತಿನಮತಿಚಂಚಲಂ ಫಲಮಾದಾಯಾತ್ಮನಿ ವಿಕ್ಷಿಪನ್ತಂ ಪುಷ್ಪಮಂಜರೀಶ್ಚ ಕಿರಂತಂ ಗಾನಮನುಕುರ್ವಂತಂ ವ್ಯಜನೇನ ರಾಮಂ ವೀಜಯನ್ತಮಾರುಹ್ಯ ಶಾಖಾಮಪಿ ತಥಾ ವೀಜಯನ್ತಮಾಬದ್ಧಚೂತಫಲಮಾತ್ರಂ ರಾಮೋ ವೀಕ್ಷ್ಯ ಲಕ್ಷ್ಮಣಮಭಾಷತ । ಲಕ್ಷ್ಮಣ ಕೋಽಯಂ ಕಪಿರಿತಿ ॥ ೧೫೪ ॥

ಲಕ್ಷ್ಮಣೋಽಪಿ ನ ಜಾನ ಇತ್ಯುವಾಚ ॥ ೧೫೫ ॥

ಅಥ ರಾಮಸ್ಸಮಾಹೂಯ ಕಸ್ಯ ತ್ವಂ ಕಿಂ ನಾಮೇತ್ಯಪೃಚ್ಛತ್ ॥ ೧೫೬ ॥

---

೧೫೪. ಬಿಲ್ಲುಗಳನ್ನು ಆ ಮರದ ಮೇಲೆ ನೇತುಹಾಕಿ, ಕುಳಿತಿರುವ ಲಕ್ಷ್ಮಣನ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು, ಕೃಷ್ಣಾಜಿನವನ್ನು ಹಾಸಿ ಅದರ ಮೇಲೆ ಮಲಗಿಕೊಂಡು, ಮನಸ್ಸಿಗೆ ಬಂದ ಹಾಡನ್ನು ಹಾಡಿಕೊಂಡು ಕೇಳುತ್ತಾ, ಮರದಲ್ಲಿರುವ ಹಣ್ಣುಗಳನ್ನು ನೋಡುತ್ತ, ಮಣಿಯ ಕರ್ಣಾಭರಣವನ್ನು ಹಾಕಿಕೊಂಡಿರುವ ಚಿನ್ನದ ಬಣ್ಣವುಳ್ಳ, ಭದ್ರವಾಗಿ ಕಟ್ಟಿಕೊಂಡಿರುವ ಮೌಂಜಿದಾರ ಕೌಪೀನಗಳುಳ್ಳ, ಬೆಳಗಿರುವ ಜನಿವಾರವುಳ್ಳ, ಬಹು ಚಪಲಚಿತ್ತವುಳ್ಳ, ಹಣ್ಣನ್ನು ತಿನ್ನುತ್ತಿರುವ, ಹೂವಿನ ಗೊಂಚಲುಗಳನ್ನು ಎಸೆಯುತ್ತಿರುವ, ಹಾಡನ್ನು ಹಾಡಿದಂತೆ ಹಾಡುತ್ತಿರುವ ಕೆಳಗಿಳಿದು ಬಂದು ಬೀಸಣಿಗೆಯಿಂದ ರಾಮನನ್ನು ಬೀಸುತ್ತ ಮತ್ತೆ ಮರಕ್ಕೆ ಹತ್ತಿ ಅಲ್ಲಿಂದಲೇ ಬೀಸುತ್ತಿರುವ, ಮಾವಿನಹಣ್ಣನ್ನು ಹಿಡಿದುಕೊಂಡಿರುವ, ಒಂದು ಕಪಿಯನ್ನು ರಾಮನು ನೋಡಿ, ಲಕ್ಷ್ಮಣನನ್ನು ಕುರಿತು ಎಲೈ ಲಕ್ಷ್ಮಣನೇ, ಈ ಕಪಿ ಯಾವುದು ? ಎಂದು ಕೇಳಿದನು.

೧೫೫. ಲಕ್ಷ್ಮಣನೂ ಕೂಡ ನನಗೆ ಗೊತ್ತಿಲ್ಲವೆಂದನು.

೧೫೬. ಆಗ ರಾಮನು ಆ ಕಪಿಯನ್ನು ಕುರಿತು ನೀನು ಯಾರಕಡೆಯವನು ? ನಿನ್ನ ಹೆಸರೇನು ಎಂದು ಕೇಳಿದನು.

ಸ ಚ ಸುಗ್ರೀವಸ್ಯ ಹನುಮಾನಿತ್ಯುವಾಚ । ರಾಮಂ ನತ್ವಾ ಸುಗ್ರೀವಮೇತ್ಯ ನತ್ವಾ ದೇವ ನಾರಾಯಣ ಇವಾಪರಃ ಪುರುಷೋ ಯುವಾ ಮೇಘಶ್ಯಾಮೋ ಜಟ್ಯಾಜಾನುಬಾಹು ರತೀವ ಯಶಸ್ವೀ ಸೂರ್ಯಸಂಕಾಶೇನ ಸಹಾಪರೇಣ ಕರೇಣೇ-ವಾಸ್ತೇಽಧ್ವರಚೂತಚ್ಛಾಯಾಧಸ್ಸಂಸ್ಥಿತೌ ಸರ್ವಲಕ್ಷಣಸಂಪನ್ನೌ ರಾಜಪುತ್ರೌ ದೃಷ್ಟ್ವಾವುಕ್ತಶ್ಚ ತಾಭ್ಯಾಂ ಸುಗ್ರೀವಾಯ ನಿವೇದ ಯೇತಿ ತತ್ತ್ವಯಿ ನಿವೇದಿತಂ ॥ ೧೫೭ ॥

ಅಥ ಸುಗ್ರೀವಃ ಸತ್ವರಮುತ್ಥಾಯ ಪಾದಸಲಿಲಾರ್ಚನಾದಿ-ದ್ರವ್ಯಮಾದಾಯ ಪಾದಪ್ರಕ್ಷಾಳನಾದಿಕಂ ಕೃತ್ವಾ ಫಲಾನಿ ಸಮರ್ಪ್ಯ ವ್ಯಜ್ಞಾಪಯತ್ಕೌ ಯುವಾಂ ಕಿಮರ್ಥಮಾಗತೌ ರಾಜಪುತ್ರೌ ತಪಸ್ವಿನಾವಿತಿ ॥ ೧೫೮ ॥

ಸುಗ್ರೀವವಚನಮಾಕರ್ಣ್ಯ ಲಕ್ಷ್ಮಣೇನಾಭಾಷಯದ್ರಾಮಃ

---

೧೫೭. ಆ ಕಪಿಯು ನಾನು ಸುಗ್ರೀವನ ಕಡೆಯವನೆಂದು ಹೇಳಿದನು. ರಾಮನಿಗೆ ನಮಸ್ಕರಿಸಿ, ಸುಗ್ರೀವನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಸ್ವಾಮಿ, ಮತ್ತೊಬ್ಬ ನಾರಾಯಣನೋ ಎಂಬಂತೆ ಇರುವ ಒಬ್ಬ ಯುವಕನು ಬಂದಿದ್ದಾನೆ. ಅವನು ಮೇಘವರ್ಣದಂತೆ ಬಣ್ಣವನ್ನು ಹೊಂದಿದ್ದಾನೆ. ಮುಂಡಿಯವರೆಗೂ ಕೈಗಳಿವೆ. ಬಹು ಕೀರ್ತಿಯುಳ್ಳವನು. ಸೂರ್ಯನಂತಿರುವ ಮತ್ತೊಬ್ಬನೊಡನೆ ಬಂದಿದ್ದಾನೆ. ದಾರಿಯಲ್ಲಿರುವ ಮಾವಿನಮರದ ಕೆಳಗೆ ನೆರಳಿನಲ್ಲಿ ಕುಳಿತಿದ್ದಾರೆ. ಸರ್ವಲಕ್ಷಣಗಳಿಂದ ಕೂಡಿದ್ದಾರೆ. ಅವರು ರಾಜಪುತ್ರರು. ಅವರನ್ನು ನೋಡಿದೆನು. ಅವರಿಬ್ಬರೂ ಸುಗ್ರೀವನಿಗೆ ತಿಳಿಸು ಎಂದರು. ಅದನ್ನೇ ನಿನ್ನಲ್ಲಿ ವಿಜ್ಞಾಪಿಸಿದ್ದೇನೆ.

೧೫೮. ಸುಗ್ರೀವನು ಒಡನೆಯೇ ಎದ್ದು, ಕಾಲಿಗೆ ನೀರೇ ಮುಂತಾದ ಪೂಜೆಯ ಪದಾರ್ಥಗಳನ್ನು ತೆಗೆದುಕೊಂಡುಬಂದು ಕಾಲು ತೊಳೆವುದೇ ಮುಂತಾದುವನ್ನು ಮಾಡಿ ಹಣ್ಣುಗಳನ್ನು ಒಪ್ಪಿಸಿ ತಾವಿಬ್ಬರೂ ಯಾರು? ಏತಕ್ಕೆ ಬಂದಿದ್ದೀರಿ? ನೀವಿಬ್ಬರೂ ರಾಜಪುತ್ರರಾದರೂ ದುಃಖಿಗಳಾಗಿರುವಂತಿರುವಿರಲ್ಲ? ಏಕೆ? ಎಂದು ಕೇಳಿದನು.

೧೫೯. ರಾಮನು ಸುಗ್ರೀವನ ಮಾತನ್ನು ಕೇಳಿ ನಾವಿಬ್ಬರೂ ದಶರಥನ ಮಕ್ಕಳು. ನಮ್ಮ ಹೆಸರು ರಾಮಲಕ್ಷ್ಮಣರೆಂದು. ದುಷ್ಟರನ್ನು ದಂಡಿಸುವುದಕ್ಕೂ

ದಶರಥತನಯಾವಾವಾಂ ರಾಮಲಕ್ಷ್ಮಣೌ ದುಷ್ಟನಿಗ್ರಹಶಿಷ್ಟ-
ಪರಿಪಾಲನಾಯ ವನಂ ಗತಾವಿತಿ ॥ ೧೫೯ ॥

ಅಥ ಸುಗ್ರೀವೋ ಯುವಯೋರುಪಕಾರಮುಪಕಾರಂ ಕಾರ್ಯ-
ವಸ್ತೀತಿ ಲಕ್ಷ್ಯತೇ। ಅನ್ಯಥಾ ಸೇನಾಸಮೇತಾವಾಗಮಿಷ್ಯತಃ
॥ ೧೬೦ ॥

ಲಕ್ಷ್ಮಣೋಽಸ್ತಿ ಕಾರ್ಯಾಂತರಂ। ಅಮುಷ್ಯ ಭಾರ್ಯಾ ಕೇನಾಪ-
ಹೃತಾ ನ ಜ್ಞಾತಾ। ತಾಮನ್ವೇಷ್ಟುಮಾಗತೌ। ತದೇವಾ-
ವಯೋಃ ಕಾರ್ಯಮನ್ಯದಾನುಷಂಗಿಕಂ ತದರ್ಥಮಪಿ ಜಲಧಿಂ
ತರಾವಃ ಅಪಿ ಪಾತಾಳಂ ಪ್ರವಿಶಾವಃ। ಅಪಿ ನಾಕಂ ಸಾಧ-
ಯಾವಃ। ಅಪಿ ಮಹೇಂದ್ರಂ ಪಾತಯಾವಃ। ಅಪಿ ಬಲಿಸಂ
ಹನಾವಃ। ಕಿಮಪಿ ಕುರ್ವಹೇ ॥ ೧೬೧ ॥

॥ ಸುಗ್ರೀವ ಉವಾಚ ॥

ರಾವಣೇನಾಪಹೃತಯಾ ಕದಾಚಿದ್ಧ್ರಿಯಮಾಣಾಗತಯಾ
ವಿಭೂಷಣಾನಿ ಕಾನಿಚಿತ್ಪರಿತ್ಯಕ್ತಾನಿ ಗತಾನಿ ಮಯಾ ಸಂಗ್ರ-

---

ಸಜ್ಜನರನ್ನು ಕಾಪಾಡುವುದಕ್ಕೂ ಕಾಡಿಗೆ ಬಂದಿದ್ದೇವೆ ಎಂದು ಲಕ್ಷ್ಮಣನ ಕೈಯಲ್ಲಿ ಹೇಳಿಸಿದನು.

೧೬೦. ಸುಗ್ರೀವನು ನೀವು ಒಳ್ಳೆಯದನ್ನೂ ಕೆಟ್ಟದ್ದನ್ನೂ ಎರಡನ್ನೂ ಮಾಡ ಬೇಕೆಂದಿರುವಂತೆ ಕಾಣುತ್ತದೆ. ಇಲ್ಲದಿದ್ದರೆ ಸೇನೆಯೊಂದಿಗೆ ಬರುತ್ತಿದ್ದಿರಿ ಎಂದನು.

೧೬೧. ಬೇರೆ ಕೆಲಸವೂ ಇದೆ. ಈ ರಾಮನ ಹೆಂಡತಿಯನ್ನು ಯಾರು ಕದ್ದರೆಂಬುದು ಗೊತ್ತಿಲ್ಲ. ಅವಳನ್ನು ಹುಡುಕಲು ಬಂದಿದ್ದೇವೆ. ಅದೇ ನಮಗೆ ಕೆಲಸವು. ಮಿಕ್ಕವು ಮುಖ್ಯವಾದುವಲ್ಲ. ಆ ಸೀತೆಗೋಸ್ಕರ ಸಮುದ್ರವನ್ನು ದಾಟುತ್ತೇವೆ. ಪಾತಾಳಕ್ಕಾದರೂ ನುಗ್ಗುತ್ತೇವೆ. ಸ್ವರ್ಗವನ್ನಾದರೂ ಸೂರೆ ಮಾಡುತ್ತೇವೆ. ಮಹೇಂದ್ರನನ್ನಾದರೂ ನಾಶಮಾಡುತ್ತೇವೆ. ಬಲಿಚಕ್ರವರ್ತಿ ಯನ್ನಾದರೂ ಕೊಲ್ಲುತ್ತೇವೆ. ಏನನ್ನು ಬೇಕಾದರೂ ಮಾಡುತ್ತೇವೆ ಎಂದು ಲಕ್ಷ್ಮ ಣನು ಹೇಳಿದನು.

೧೬೨. ಸುಗ್ರೀವನು ಹೇಳಿದನು:—ಆಕೆಯನ್ನು ರಾವಣನು ಕದ್ದುಕೊಂಡು ಹೋದನು. ಕದ್ದು ಹೊತ್ತುಕೊಂಡು ಹೋಗುತ್ತಿರುವಾಗ ಆಕೆಯು ಕೆಲವು ಒಡವೆ

ಹೀತಾನಿ ತಾನಿ ದರ್ಶಯಿಷ್ಯಾ ಮೀತ್ಯಾಭಾಷ್ಯ ರಾಮಂ ಮಂದಿ-
ರಮಾಗಮಯ್ಯ ದರ್ಶಯಾಮಾಸ ॥ ೧೬೨ ॥

ರಾಮೋ ನಿರೀಕ್ಷ್ಯ ನಿಶ್ಚಿತ್ಯ ಪ್ರರುದ್ಯಕ್ವ ಗತೋಽಸೌ ರಾವಣ
ಇತಿ ಪಪ್ರಚ್ಛ ॥ ೧೬೩ ॥

ಸ ಚ ದಕ್ಷಿಣಾಮಾಶಾಂ ಗತ ಇತಿ ಬಭಾಷೇ ॥ ೧೬೪ ॥

ಅಥ ರಾಮಸ್ತೇನ ಸಖ್ಯಮಕರೋದಪೃಚ್ಛಚ್ಚ ಕಿಮರ್ಥಮಿಹ
ಭಾರ್ಯಾಹೀನಃ ಸ್ಥಿತಿ ಇತಿ ॥ ೧೬೫ ॥

॥ ಕಪಿರುವಾಚ ॥

ಮಮ ಭ್ರಾತಾ ವಾಲೀ ಮಹಾಬಲೋ ಮಮ ಭಾರ್ಯಾಂ ರಾಜ್ಯಂ
ಚಾಪಹೃತ್ಯ ಕಿಷ್ಕಿಂಧಾಯಾಮಾಸ್ತೇ । ಯುದ್ಧೇನ ಚಾಹಂ
ಪರಾಜಿತಃ । ತದ್ವಧಾಯ ಸರ್ವಥಾ ಮಮ ಚಿಂತಾ ಯಥಾಸೌ
ತ್ವಯಾ ನಿಹನ್ಯತೇ ತಥಾ ಮಯಾಪಿ ಸಾಗರಂ ಬದ್ಧ್ವಾ ಪರ-

---

ಗಳು ಇಲ್ಲಿ ಬಿದ್ದುವು. ಹೊರಟುಹೋಗುತ್ತಿದ್ದುವನ್ನು ನಾನು ತೆಗೆದಿಟ್ಟಿದ್ದೇನೆ. ಅವನ್ನು ತೋರಿಸುತ್ತೇನೆ ಎಂದು ಹೇಳಿ ರಾಮನನ್ನು ಮನೆಗೆ ಕರತಂದು ಅವನ್ನು ತೋರಿಸಿದನು.

೧೬೩. ರಾಮನು ಅವನ್ನು ನೋಡಿ ಅವಳದೆಂದೇ ನಿಶ್ಚಯಿಸಿ ಅತ್ತು, ಆ ರಾವಣನು ಎಲ್ಲಿ ಹೋದನೆಂದು ಕೇಳಿದನು.

೧೬೪. ಅವನು ದಕ್ಷಿಣದಿಕ್ಕಿಗೆ ಹೋದನೆಂದು ಹೇಳಿದನು.

೧೬೫. ಆಗ ರಾಮನು ಆ ಸುಗ್ರೀವನೊಡನೆ ಸ್ನೇಹಮಾಡಿಕೊಂಡನು. ಹೆಂಡತಿಯನ್ನು ಬಿಟ್ಟು ಇಲ್ಲೇಕೆ ನೀನಿದ್ದೀಯೆ ಎಂದು ಕೇಳಿದನು.

೧೬೬. ಕಪಿಯು ಹೇಳಿತು:—ನನ್ನ ಸೋದರನಾದ ವಾಲಿಯು ಬಹು ಬಲಿಷ್ಠನು. ನನ್ನ ಹೆಂಡತಿಯನ್ನೂ ರಾಜ್ಯವನ್ನೂ ಅಪಹರಿಸಿಕ್ಕೊಂಡು ಕಿಷ್ಕಿಂಧೆಯಲ್ಲಿದ್ದಾನೆ. ಯುದ್ಧದಲ್ಲಿ ನಾನು ಸೋತೆನು. ಅವನನ್ನು ಕೊಲ್ಲುವುದರಲ್ಲಿ ನಾನು ಬಹುವಾಗಿ ಯೋಚಿಸುತ್ತಿದ್ದೇನೆ. ನೀನು ಅವನನ್ನು ಕೊಂದಪಕ್ಷದಲ್ಲಿ ಹಾಗೆಯೇ

ತತೋ ಲಂಕಾಯಾಂ ಸೀತಾಂ ರಾವಣೇನಾಪಹೃತಾಂ ತವ
ಸಮರ್ಪಯಾಮೀತ್ಯಾಭಾಷ್ಯ ಶಪಥಂ ಕೃತ್ವಾ ಸುಗ್ರೀವೋ
ವಾಲಿನಾತಿಬಲಿನಾ ಯುದ್ಧಾಯಾಹೂತೇನ ಯುಯುಧೇ ॥ ೧೬೬ ॥

ರಾಮೋಽಪ್ಯನಸ್ತ್ರರಮನಿಶ್ಚಯಾದ್ವಾಲಿನಂ ನಾಹರತ್ ॥ ೧೬೭ ॥

ಅಥ ಸುಗ್ರೀವಃ ಪಲಾಯಿತೋ ರಾಮಮಿದಮಭಾಷತ ತವ
ಚಿತ್ತಮವಜ್ಞಾಯ ಪ್ರವೃತ್ತೋ ಮರಣಾಯ ॥ ೧೬೮ ॥

ರಾಮೋಽಪಿ ಯುವಯೋರ್ವಿಶೇಷಾಜ್ಞಾನಾನ್ಮಯಾ ತೂ-
ಷ್ಣೀಂಭೂತಂ ಚಿಹ್ನಿತಂ ತ್ವಾಂ ನಿರೀಕ್ಷ್ಯ ತಂ ಹನ್ಮಿ ॥ ೧೬೯ ॥

ಅಥ ಸುಗ್ರೀವಶ್ಚಿಹ್ನಂ ಕೃತ್ವಾ ವಾಲಿನಂ ಯುದ್ಧಾಯಾಹೂಯ
ಸಮುತಿಷ್ಠತ ॥ ೧೭೦ ॥

---

ನಾನು ಸಮುದ್ರವನ್ನು ಕಟ್ಟಿ ಆಚೆಯ ದಡದಲ್ಲಿ ಲಂಕೆಯಲ್ಲಿರುವ, ರಾವಣನು ಕದ್ದಿರುವ ಸೀತೆಯನ್ನು ತಂದು ನಿನಗೆ ಒಪ್ಪಿಸುತ್ತೇನೆ ಎಂದು ಹೇಳಿ ಪ್ರತಿಜ್ಞೆಯನ್ನು ಮಾಡಿದನು. ಸುಗ್ರೀವನು ಅತಿ ಬಲಿಷ್ಠನಾದ ವಾಲಿಯನ್ನು ಯುದ್ಧಕ್ಕೆ ಕರೆದು ಅವನೊಡನೆ ಯುದ್ಧಮಾಡಿದನು.

೧೬೭. ರಾಮನಾದರೋ ಅವರಿಬ್ಬರ ವ್ಯತ್ಯಾಸವನ್ನೂ ತಿಳಿಯದೆ ವಾಲಿಯನ್ನು ಕೊಲ್ಲಲಿಲ್ಲ.

೧೬೮. ಅನಂತರ ಸುಗ್ರೀವನು ಓಡಿಹೋಗಿ ರಾಮನನ್ನು ಕುರಿತು ನಿನ್ನ ಮನಸ್ಸನ್ನು ತಿಳಿಯದೇ ಸಾವಿಗೋಸ್ಕರ ಪ್ರಯತ್ನಪಟ್ಟೆನು ಎಂದನು.

೧೬೯. ರಾಮನು ನಿಮ್ಮಿಬ್ಬರಲ್ಲಿ ವ್ಯತ್ಯಾಸವು ತಿಳಿಯದುದರಿಂದ ನಾನು ಸುಮ್ಮನಾದೆನು. ನೀನೊಂದು ಗುರುತನ್ನು ಇಟ್ಟುಕೊಂಡರೆ ಅದನ್ನು ನೋಡಿ ಆತನನ್ನು ಕೊಲ್ಲುತ್ತೇನೆ ಎಂದನು.

೧೭೦. ಅನಂತರದಲ್ಲಿ ಸುಗ್ರೀವನು ಗುರುತನ್ನು ಮಾಡಿಕೊಂಡು ವಾಲಿಯನ್ನು ಯುದ್ಧಕ್ಕೆ ಕರೆದು ಎದುರಿಸಿದನು.

ತಾರಾ ಬಭಾಷೇ ವಾಲಿನಂ ಸಹಾಯವಾನಿವ ಲಕ್ಷ್ಯತೇ
ಸುಗ್ರೀವೋ ನೋ ಚೇದೇವಂ ನಾಹ್ವಯತಿ ಜ್ಞಾತಂ ಮಯಾ
ರಾಮಲಕ್ಷ್ಮಣೌ ದಶರಥತನಯೌ ನಾರಾಯಣಾಂಶೌ ಭೂಭಾ-
ರಾವತಾರಾಯ ಸಮಾಗತೌ ತಾವಸ್ಯ ಸಹಾಯಭೂತೌ ॥ ೧೭೧ ॥

॥ ವಾಲ್ಯುವಾಚ ॥

ನೀತಿಮಾನ್ರಾಮ ಇತಿ ಮಯಾ ಶ್ರುತೋ ನ ಹಿ ಬಲವನ್ತಂ
ವಿಹಾಯ ದುರ್ಬಲಂ ಭಜತೇ ತಾದೃಶಃ ಸಮಾಯಾತು ವಾ
ರಾಮಃ ಪ್ರತಿಬಲಮಧಿಕಂ ಕೃತ್ವಾ ಬಿಭೇತಿ ವೀರ ಯದಿ ರಾಮಃ
ಸ್ವಯಂ ಯುದ್ಧಾಯ ಯಾತಸ್ತದಾ ಯುದ್ಧಂ ಕರ್ತವ್ಯಮಿತ್ಯಾ-
ಭಾಷ್ಯ ತಾರಾಂ ಸಂಭಾವ್ಯ ಸುಗ್ರೀವಯುದ್ಧಾಯ ನಿರ್ಗತಃ
॥ ೧೭೨ ॥

ಅಥ ಮುಷ್ಟಿಯುದ್ಧಮನ್ಯೋನ್ಯಮಭೂತ್ ॥ ೨೭೩ ॥

---

೧೭೧. ಆಗ ತಾರೆಯು ವಾಲಿಯನ್ನು ಕುರಿತು ಸುಗ್ರೀವನಿಗೆ ಸಹಾಯವಿರುವಂತೆ ಕಾಣುತ್ತದೆ. ಇಲ್ಲದಿದ್ದರೆ ಹೀಗೆ ಕರೆಯುತ್ತಿರಲಿಲ್ಲ. ದಶರಥನ ಮಕ್ಕಳೂ, ನಾರಾಯಣನ ಅಂಶಭೂತರೂ ಆದ ರಾಮಲಕ್ಷ್ಮಣರು ಭೂಭಾರವನ್ನು ನಾಶಮಾಡುವುದಕ್ಕೆ ಬಂದಿದ್ದಾರೆ ಎಂದು ಕೇಳಿದ್ದೇನೆ. ಅವರೇ ಇವನಿಗೆ ಸಹಾಯಕರು ಎಂದಳು.

೧೭೨. ವಾಲಿಯು ಹೇಳಿದನು :—ರಾಮನು ನೀತಿವಂತನೆಂದು ನಾನು ಕೇಳಿದ್ದೇನೆ. ಅಂತಹವನು ಬಲಿಷ್ಠನನ್ನು ಬಿಟ್ಟು ಬಲಹೀನನನ್ನು ಆಶ್ರಯಿಸುವುದಿಲ್ಲ. ಅಂತಹ ರಾಮನು ಬರಲಿ. ವೀರನು ಎದುರಾಳಿಯನ್ನು ಬಲಿಷ್ಠನನ್ನಾಗಿ ಭಾವಿಸಿ ಹೆದರುತ್ತಾನೇನು? ರಾಮನು ತಾನಾಗಿ ಯುದ್ಧಕ್ಕೆ ಬಂದರೆ ಆಗ ಹೋಗಿ ಯುದ್ಧವನ್ನು ಮಾಡಬೇಕು. ಹೀಗೆಂದು ಹೇಳಿ ತಾರೆಯನ್ನು ಗೌರವಿಸಿ ಸುಗ್ರೀವನೊಡನೆ ಯುದ್ಧಕ್ಕೆ ಹೊರಟನು.

೧೭೩. ಅನಂತರ ಒಬ್ಬರಿಗೊಬ್ಬರಿಗೆ ಮುಷ್ಟಿಯುದ್ಧವು ನಡೆಯಿತು.

ರಾಮೋಽಪಿ ವಾಲಿನಂ ಜಘಾನ ಪಪಾತ ಚ ವಾಲ್ಯಾಹ ಚಾಽ-
ಶಸ್ತ್ರಯುದ್ಧೇ ಬಾಘಾತೋಽಥ ಶೋಣಿತಸರ್ವಾಂಗೋ ಬಭೂವ
॥ ೧೭೪ ॥

ಅಥ ತಾರಾ ಚಾಂಗದಶ್ಚ ಸಮಾಗತ್ಯ ವ್ಯಥಿತೌ ಬಭೂವತುಃ ॥ ೧೭೫ ॥

ಅಥ ರಾಘವಂ ವಾನರಾಸ್ಸಮಾಯಾತಾ ವಾಲ್ಯುಪಾಂತೇ
ನಿಪೇತೂ ರುರುದಶ್ಚ ॥ ೧೭೬ ॥

ಅಥ ತಾರಾ ರಾಮಮಾಬಭಾಷೆ ಶಾಸ್ತ್ರಕುಶಲಾಃ ಶೂರಾ
ಧಾರ್ಮಿಕಾ ರಾಘವಾಃ ಪುರಾ ಚಾಪಿ ರಾಮ ಕಥಂ ಪಾಪಮಕಾರ್ಷೀಃ ।
ನ ಕ್ಷತ್ರಧರ್ಮಂ ಜಾನೀಷೇ ರಾಜಗಣಸೇವಿತಂ ॥ ೧೭೭ ॥

ಅನ್ಯೋನ್ಯಂ ಯುದ್ಧ್ಯತೋರ್ಯುದ್ಧೇ ಜಯೋ ವಾ ಮರಣಂ ಭವೇತ್ ।
ಅನ್ಯೋ ಯದಿ ತಯೋರ್ಹನ್ಯಾದ್ಬ್ರಹ್ಮಹಾ ಸ ನಿಗದ್ಯತೇ ॥ ೧೭೮ ॥

---

೧೭೪. ರಾಮನು ವಾಲಿಯನ್ನು ಹೊಡೆದನು. ವಾಲಿಯು ಬಿದ್ದುಬಿಟ್ಟನು. ಆಗ ವಾಲಿಯು ಇದೇನು, ಶಸ್ತ್ರಯುದ್ಧವನ್ನು ಮಾಡದಿರುವಾಗ ಬಾಣದೇಟು ಬಿದ್ದಿತೆಂದನು ಮತ್ತು ಮೈಯ್ಯೆಲ್ಲಾ ರಕ್ತವುಳ್ಳವನಾಗಿ ಆಗಿದ್ದನು.

೧೭೫. ಆಮೇಲೆ ತಾರೆಯೂ ಅಂಗದನೂ ಬಂದು ದುಃಖಿಸಿದರು.

೧೭೬. ಅನಂತರ ರಾಮನ ಬಳಿಗೆ ಕಪಿಗಳೆಲ್ಲರೂ ಬಂದರು. ವಾಲಿಯ ಹತ್ತಿರ ಬಂದುಬಿದ್ದು ಅತ್ತರು.

೧೭೭. ಆಗ ತಾರೆಯು ರಾಮನನ್ನು ಕುರಿತು ಎಲೈ ರಾಮನೇ, ಪೂರ್ವದಲ್ಲಿಯೂ ರಘುವಂಶದವರು ಶಾಸ್ತ್ರಗಳಲ್ಲಿ ಪಂಡಿತರು, ಶೂರರು, ಧರ್ಮವನ್ನು ಬಲ್ಲವರು. ಅಯೋಗ್ಯಕೆಲಸವನ್ನು ಹೇಗೆ ಮಾಡಿದೆ? ರಾಜರ ಸಮೂಹವು ಅನುಸರಿಸುತ್ತಿರುವ ಕ್ಷತ್ರಿಯ ಧರ್ಮವನ್ನು ತಿಳಿಯೆಯಾ? ಎಂದಳು.

೧೭೮. ಯುದ್ಧದಲ್ಲಿ ಇಬ್ಬರು ಯುದ್ಧಮಾಡುತ್ತಿದ್ದರೆ ಅವರಿಗೆ ಜಯಬೇಕಾದರೂ ಬರಲಿ ಮರಣಬೇಕಾದರೂ ಸಂಭವಿಸಲಿ. ಅವರಿಬ್ಬರಲ್ಲಿ ಒಬ್ಬನನ್ನು ಬೇರೆಯವನು ಕೊಂದಪಕ್ಷದಲ್ಲಿ ಅವನು ಬ್ರಹ್ಮಹತ್ಯೆಮಾಡಿದವನೆನ್ನಿಸಿಕೊಳ್ಳುತ್ತಾನೆ.

ಕಿಂ ವೈರೇಣ ವಾಲಿನಮಾಹನಃ ಕಿಂ ವೈರಂ ? ಯದಿ ಮಾಂಸಾರ್ಥ್ಯಭೋಜ್ಯಂ ವಾನರಮಾಂಸಂ । ಯದ್ಯಾತ್ಮನೋಽಪ್ರಿಯಾತ್ಸುಖಾಭಾವಾದಪರೇಷಾಮಪಿ ತಥಾಭಾವಂ ಮನ್ಯಸೇ । ಅಹೋ ವಿಮೋಹಾದ್ಯದಿ ಮಾಮಾದಾತುಮಿದಂ ಕೃತಮೇಕಪತ್ನೀವ್ರತಂ ತವ । ಯದಿ ರಾವಣಹೃತಾಂ ಸೀತಾಮಾನೇತುಂ ಸುಗ್ರೀವಸಹಾಯಾಯ ಕೃತಮೇವಮತೋ ಮಹದಂತರಂ ಬಲವೃದ್ಧೇನ ಮಹಾಬಲೇನ ವಾಲಿನಾ ಸದ್ಭಾವೇನ ದಿನಕರಾವರ್ತಿತಾಂತರೇ ಸೀತಾಮಾನೇತುಂ ಸಮರ್ಥೇನ ಸ್ಮರಣಾಗತರಾವಣದಾನಸಮರ್ಥೇನ ವಾನರರಾಜೇನ ಪಂಚಾಶತ್ಪರಾರ್ಧವಾನರಭಲ್ಲೂಕಸೇನಾಪತಾತ್ಮಕಾರ್ಯೇಣ ಸಿದ್ಧ್ಯೇತ ಇತಿ ಕಿಂ ಸುಗ್ರೀವೇಣಾಲ್ಪವೀರ್ಯೇಣ ಸಪ್ತಪರಾರ್ಧಸೇನಾಪತಿನಾ ಕಪಿನಾ ಕಿಂ ಸಿದ್ಧ್ಯತಿ ಕಾರ್ಯಂ ವಚನವತಃ । ಅಹೋ ಜ್ಞಾನಂ ಸರ್ವಂ ದೇವ ಭದ್ರಂ ಯದುಕ್ತೋಽಸಿ ॥ ೧೭೯ ॥

---

೧೭೯. ನೀನು ವೈರದಿಂದ ಆ ವಾಲಿಯನ್ನು ಕೊಂದೆಯಾದರೆ ಆ ವೈರ ವಾವುದು ? ಮಾಂಸಕ್ಕೋಸ್ಕರ ಹೊಡೆದನೆಂದರೆ ವಾನರ ಮಾಂಸವನ್ನು ತಿನ್ನಬಾರದಲ್ಲ ? ನಿನಗೆ ಅವನು ಪ್ರೀತಿಯಿಲ್ಲದವನಾದುದರಿಂದ ಮನಸ್ಸಿಗೆ ಶಾಂತಿಯಿಲ್ಲವೆಂದರೆ ಮತ್ತೊಬ್ಬರಿಗೂ ಹೇಗೆ ಎಂದು ತಿಳಿದುಕೊಳ್ಳಲಾರೆಯಾ ? ಒಂದುವೇಳೆ ನನ್ನ ಮೇಲಿನ ಆಸೆಯಿಂದ ಕೊಂದೆನೆಂದರೆ ನಿನ್ನ ಏಕಪತ್ನೀವ್ರತವು ವ್ಯರ್ಥ. ರಾವಣನು ಕದ್ದ ಸೀತೆಯನ್ನು ತರಲು ಸುಗ್ರೀವನನ್ನು ಸಹಾಯಕ್ಕೆ ಕರೆದುಕೊಳ್ಳಲು ಹಾಗೆ ಮಾಡಿದೆನೆಂದರೆ ಅದರಲ್ಲಿ ಬಹು ವ್ಯತ್ಯಾಸವಿದೆ. ಬಲದಲ್ಲಿ ಹೆಮ್ಮೆಪಡುತ್ತಾ ಬಲಶಾಲಿಯಾದ ವಾಲಿಯು ಸರಿಯಾದ ರೀತಿಯಿಂದಲೇ ಸೂರ್ಯನು ಮತ್ತೆ ಹುಟ್ಟುವುದರೊಳಗಾಗಿ ಸೀತೆಯನ್ನು ತರುವಷ್ಟು ಶಕ್ತನಾಗಿದ್ದನು. ಸ್ಮರಣಮಾತ್ರದಿಂದಲೇ ರಾವಣನನ್ನು ತಂದು ನಿನಗೆ ಒಪ್ಪಿಸುತ್ತಿದ್ದನು. ಐವತ್ತು ಪರಾರ್ಧಸಂಖ್ಯೆಯುಳ್ಳ ಕಪಿಗಳಿಗೂ, ಕರಡಿಗಳಿಗೂ ಅವನು ರಾಜನು. ಇಂತಹವನಿಂದ ನಿನ್ನ ಕೆಲಸವು ಸಿದ್ಧಿಸುತ್ತಿತ್ತು. ಸ್ವಲ್ಪವೇ ಬಲವುಳ್ಳ ಏಳು ಪರಾರ್ಧಸಂಖ್ಯೆಯ ಸೇನೆಗೆ ರಾಜನಾದ, ಬರೀಮಾತುಗಾರನಾದ ಆ ಸುಗ್ರೀವನಿಂದೇನು ಸಿದ್ಧಿಸುವುದು ? ನಿನ್ನ ಅಜ್ಞಾನವನ್ನೇನೆಂದು ಹೇಳಲಿ ? ನೀನು ಹೇಳಿದುದೆಲ್ಲವೂ ಬಹು ಚೆನ್ನಾಗಿದೆ.

ವಕ್ತಿ ಚ ರಾಮಃ ಪೃಥಿವೀಪತಿನಾ ಮಯಾ ದುಷ್ಟನಿಗ್ರಹಣಂ ಕಾರ್ಯಂ ಶಿಷ್ಟಪರಿಪಾಲನಂ ಚ ವಾಲಿನಾ ಸುಗ್ರೀವಮಹಿಷೀ ರುಮಾಪಹೃತಾ । ರಾಜ್ಯಂ ಚ । ಅತಶ್ಚ ನ ತಾದೃಗ್ವಧೇ ದೋಷಃ ॥ ೧೮೦ ॥

॥ ತಾರೋವಾಚ ॥

ಸುಗ್ರೀವೋಽಪಿ ತರ್ಹಿ ವಧ್ಯೋ ದುಂದುಭಿನಾ ಯುಧ್ಯತಾ ವಾಲಿನಾ ಬಿಲಂ ಪ್ರವಿಷ್ಟೇನ ವತ್ಸರಂ ತತ್ರೋಷಿತಂ ತದಂತರೇ ಚ ಮಾಮುಪಹೃತ್ಯ ರಾಜ್ಯಂ ಚ ಕೃತಂ ಸುಗ್ರೀವೇಣ ತಂ ಪೂರ್ವಮಪಿ ಪಶ್ಚಾತ್ತಂ ಹಂತುಂ ॥ ೧೮೧ ॥

॥ ರಾಮ ಉವಾಚ ॥

ಕಿಯತ್ಕಾಲಪೂರ್ವಮಿದಂ ಚ ವದ ॥ ೧೮೨ ॥

॥ ತಾರೋವಾಚ ॥

ಷಷ್ಟಿವರ್ಷಸಹಸ್ರಾದರ್ವಾಗಶೀತಮೇ ವರ್ಷೇ ರಕ್ಷೋಯುದ್ಧೇ

---

೧೮೦. ರಾಜನಾದ ನಾನು ದುಷ್ಟನಿಗ್ರಹವನ್ನೂ ಸಜ್ಜನರ ಕಾಪಾಡುವಿಕೆಯನ್ನೂ ಮಾಡಬೇಕು. ವಾಲಿಯು ಸುಗ್ರೀವನ ಹೆಂಡತಿಯಾದ ರುಮೆಯನ್ನೂ ರಾಜ್ಯವನ್ನೂ ಕಿತ್ತುಕೊಂಡಿದ್ದಾನೆ. ಆದ್ದರಿಂದ ಅಂತಹವನ ಕೊಲ್ಲುವಿಕೆಯಲ್ಲಿ ದೋಷವಿಲ್ಲ ಎಂದು ರಾಮನು ಹೇಳಿದನು.

೧೮೧. ತಾರೆಯು ಹೇಳಿದಳು:—ಹಾಗಾದರೆ ಸುಗ್ರೀವನನ್ನೂ ನೀನು ಕೊಲ್ಲಬೇಕು. ದುಂಧುಬಿಯೊಡನೆ ಯುದ್ಧಮಾಡುತ್ತ ಗುಹೆಯೊಳಕ್ಕೆ ಹೋಗಿ ಅದರಲ್ಲಿ ಒಂದುವರ್ಷ ಕಾಲವಿದ್ದನು. ಅಷ್ಟರೊಳಗೆ ಸುಗ್ರೀವನು ನನ್ನನ್ನು ಅಪಹರಿಸಿ ರಾಜ್ಯವನ್ನೂ ಆಳಿದನು. ಆದ್ದರಿಂದ ಸುಗ್ರೀವನನ್ನು ಮೊದಲು ಕೊಂದು ಆಮೇಲೆ ಆ ವಾಲಿಯನ್ನು ಕೊಲ್ಲಬೇಕು ಎಂದಳು.

೧೮೨. ರಾಮನು ಹೇಳಿದನು:—ಇದು ಎಷ್ಟು ಹಿಂದೆ ನಡೆಯಿತೆಂಬುವನ್ನು ಹೇಳು.

೧೮೩. ಈಗ್ಯೆ ಅರವತ್ತುಸಾವಿರ ವರ್ಷಗಳ ಹಿಂದಿನ ಕಾಲದಲ್ಲಿ ಅದರ ಮೊದ

ಸುಗ್ರೀವೇಣ ರಾಜ್ಯಮುಪಹೃತಂ ಪುನಶ್ಚ ವರ್ಷಾನ್ತರೇ ಪ್ರಾಪ್ತೇ ನ ವಾಲಿನಾ ಸುಗ್ರೀವಃ ಪಲಾಯಿತೋಽಪಹೃತಾ ತಸ್ಯ ಭಾರ್ಯಾ ರಾಜ್ಯಂ ಚಾಪಹೃತಂ ತಸ್ಮಿನ್ನೇವ ದಿನೇ ಭವತಃ ಪಿತು-ರ್ದಶರಥಸ್ಯಾಭಿಷೇಕಃ ॥ ೧೮೩ ॥

॥ ರಾಮ ಉವಾಚ ॥

ಮಯಾ ಪಿತುರನುಶಾಸನಾದ್ರಾಜ್ಯಗತದುಷ್ಟನಿಗ್ರಹಣಂ ಕೃತಂ ಗುರುವಚನಸ್ಯಾಲಂಘನೀಯತ್ವಾತ್ತದಪಹರಣವೇಳಾಯಾಂ ಯೋ ರಾಜಾ ಸ ನಾಚರತ್ ॥ ೧೮೪ ॥

ಅಥವಾ ಸ್ವತಂತ್ರೌ ಮೃಗೌ ಮೃಗಯೋರ್ಹತಶ್ಚ ವಾಲೀ ಮೃಗಾಣಾಮನ್ಯೋನ್ಯದಾರಣಾದ್ಯಜುಗುಪ್ಸಾ ಚ ಸತೋ ಮಮ ಮೃಗಯಾವತ್ ಅಥ ವಿಮೃಗಾಣಾಂ ॥ ೧೮೫ ॥

---

ಲಿಂದ ಎಂಭತ್ತನೇ ವರ್ಷದಲ್ಲಿ ದುಂದುಭಿಯೊಡನೆ ವಾಲಿಯು ಯುದ್ಧಮಾಡಿದುದು. ಆಗ ಸುಗ್ರೀವನು ರಾಜ್ಯವನ್ನು ಅಪಹರಿಸಿದನು. ಒಂದುವರ್ಷ ತುಂಬುವುದರೊಳಗೆ ವಾಲಿಯು ಬಂದು ಸುಗ್ರೀವನನ್ನು ಓಡಿಸಿ ಅವನ ರಾಜ್ಯವನ್ನೂ ಉಮೆಯನ್ನೂ ಕಸಿದುಕೊಂಡನು. ಅದೇ ದಿನದಲ್ಲಿ ನಿನ್ನ ತಂದೆಯಾದ ದಶರಥನಿಗೆ ಪಟ್ಟಾಭಿಷೇಕವು.

೧೮೪. ರಾಮನು ಹೇಳಿದನು :—ನಾನು ತಂದೆಯ ಅಪ್ಪಣೆಯಂತೆ ಅವನ ರಾಜ್ಯದಲ್ಲಿರುವ ದುಷ್ಟರನ್ನು ನಾಶಮಾಡಲು ಬಂದಿದ್ದೇನೆ. ನಾಶಮಾಡಿಯೂ ಇದ್ದೇನೆ. ಗುರುವಿನ ಮಾತನ್ನು (ತಂದೆ) ಮಿಾರಕೂಡದು. ಅವನು ರಾಜ್ಯವನ್ನು ಕಸಿದುಕೊಂಡಾಗ ಯಾವನು ರಾಜನೋ ಆತನು ನಿಗ್ರಹಿಸಲಿಲ್ಲ.

೧೮೫. ಒಂದುವೇಳೆ ಮೃಗಗಳು ಸ್ವತಂತ್ರವೆಂದೇ ಇಟ್ಟುಕೊಳ್ಳೋಣ. ಆ ಮೃಗಗಳೊಳಗೆ ವಾಲಿಯನ್ನು ಕೊಂದೆನು. ಆ ಮೃಗಗಳು ಒಂದಕ್ಕೊಂದು ಕಚ್ಚಿ ಯಾಡುವುದರಲ್ಲಿ ನನಗೆ ಅಸಹ್ಯವು. ಹೀಗಿದ್ದುದರಿಂದ ಬೇಟೆಯ ರೀತಿಯಲ್ಲಿ ಕೊಂದೆನು. ಮೃಗವಲ್ಲದಲ್ಲಿ ಹೇಗೆಂದರೆ—

**ಚಲಿತಸ್ಥಿತಬದ್ಧಾನಾಂ ಚಲದ್ಭ್ರಾಂತಪರಾಯಿಣಾಂ ।**
**ಅಥವಾ ಸೃಜತಾಂ ಸಂಗಮುಜ್ಝಿತಾ ಮೃಗಯಾ ತಥಾ ॥ ೧೮೬ ॥**

**ಮೃಗಯಾಶಾಸ್ತ್ರವಿಧಿತೋ ಮೃಗಯೇಯಂ ಮಯಾ ಕೃತಾ ।**
**ದರ್ಶನಾದರ್ಶನಾಭ್ಯಾಂ ಚ ಧಾವನಾಧಾವನಾತ್ತಥಾ ॥ ೧೮೭ ॥**

**ಅವರೋಹಾತ್ಪರಂ ಸ್ಥಾನಂ ಸಾನ್ವಯಾನಾಂ ಪ್ರಭಿದ್ಯತೇ ।**
**ರಾಜ್ಞಾಂ ಚ ಮೃಗಯಾ ಧರ್ಮೋ ವಿನಾ ಆಮಿಷಭೋಜನಂ ॥ ೧೮೮ ॥**

**ಅಥ ರಾಮವಚನಮಾಕರ್ಣ್ಯ ಸರ್ವ ಏವ ಪ್ರಾಕಂಪಯನ್ ಶಿರಾಂಸಿ ॥ ೧೮೯ ॥**

**ವಾಲೀ ಬಭಾಷೇ ರಾಮಮಂಜಲಿಂ ಮಸ್ತಕೇ ನಿಧಾಯ ನಮಸ್ತೇ ರಾಮ ಶೃಣು ವಚನಂ ಮಮ ॥ ೧೯೦ ॥**

---

೧೮೬. ಓಡಿಯಾಡುವ, ಸುಮ್ಮನಿರತಕ್ಕ, ಕಟ್ಟುಪಾಡಿಗೆ ಸಿಕ್ಕಿರುವ, ಬುದ್ಧಿ ಸ್ಥಿಮಿತವಾಗಿಲ್ಲದಿರುವ, ಮತ್ತೊಬ್ಬರನ್ನು ತೊಂದರೆಪಡಿಸುವ, ಸಹವಾಸವನ್ನು ಬಿಟ್ಟು ದೂರವಾಗುವವರಲ್ಲಿಯೂ ಬೇಟೆಯು ಹೇಳಲ್ಪಟ್ಟಿದೆ.

೧೮೭. ಇದು ಶಾಸ್ತ್ರವಿಧಿಯಿಂದ ಬೇಟೆಯಾಯಿತು. ನಾನು ಬೇಟೆಯಾಡಿದ್ದೇನೆ. ಒಂದು ಕಾಣುವುದು, ಮತ್ತೊಂದು ಮರೆಯಾಗುವುದು, ಒಂದು ಓಡುವುದು, ಮತ್ತೊಂದು ನಿಂತಿರುವುದು. ಹೀಗಿದ್ದುದರಿಂದ ವಾಲಿಗೆ ಏಟು ಬಿದ್ದಿತು.

೧೮೮. ಮತ್ತೊಬ್ಬನನ್ನು ಒಂದು ಸ್ಥಾನದಿಂದ ತಳ್ಳುವಾಗಲೂ, ಅವನ ವಂಶವನ್ನೇ ನಾಶಮಾಡಬೇಕು. ಈ ವಿಷಯದಲ್ಲಿ ಮಾಂಸವನ್ನು ತಿನ್ನದಿದ್ದರೂ ಅವರನ್ನು ಕೊಲ್ಲಬೇಕು. ಇಲ್ಲಿಯೂ ಬೇಟೆಯ ಧರ್ಮವನ್ನು ಅನುಸರಿಸಬೇಕು.

೧೮೯. ರಾಮನ ಈ ಮಾತನ್ನು ಕೇಳಿ ಎಲ್ಲರೂ ತಲೆಯನ್ನು ಅಲ್ಲಾಡಿಸಿದರು.

೧೯೦. ಆಗ ವಾಲಿಯು ತಲೆಯ ಮೇಲೆ ಕೈಮುಗಿದುಕೊಂಡು ಎಲೈ ರಾಮನೇ, ನಿನಗೆ ನಮಸ್ಕಾರವು ನನ್ನ ಮಾತನ್ನು ಕೇಳು.

ಶಂಖಚಕ್ರಗದಾಪಾಣಿಃ ಪೀತವಾಸಾ ಜಗದ್ಗುರುಃ ।
ನಾರಾಯಣಸ್ತ್ವಯಂ ಸಾಕ್ಷಾದ್ಭವಾನಿತಿ ಮಯಾ ಶ್ರುತಂ ॥ ೧೯೧ ॥

ತ್ವಾಂ ಯೋಗಿನಶ್ಚಿಂತಯಂತಿ ತ್ವಾಂ ಯಜಂತಿ ಚ ಯಜ್ವಿನಃ ।
ಹವ್ಯಕವ್ಯಭುಗೇಕಸ್ತ್ವಂ ಪಿತೃದೇವಸ್ವರೂಪಧೃತ್ ॥ ೧೯೨ ॥

ಮರಣೇ ಚಿಂತಯಾನಸ್ಯ ತ್ವಾಂ ವಿಮುಕ್ತಿರದೂರತಃ ।
ಸ ತ್ವಂ ಮೇ ದರ್ಶನಂ ಪ್ರಾಪ್ತೋ ರಾಮ ಮೇ ಪಾಪಸಂಕ್ಷಯಃ ।
ಗೃಹಾಣ ಬಾಣಂ ಕಾಕುತ್ಸ್ಥ ವ್ಯಥಿತೋ ಭೃಶಮಸ್ಮ್ಯಹಂ ॥ ೧೯೩ ॥

ಅಥ ರಾಮಸ್ತಥೇತಿ ಬಾಣಮಾದಾಯ ವಾಲಿನಮುವಾಚ
ಕಿಮಿಷ್ಟಂ ದೀಯತಾಂ ವದ ॥ ೧೯೪ ॥

॥ ಕಪಿರುವಾಚ ॥

ಯದಿ ಪ್ರಸನ್ನೋ ಭಗವಾನ್ಮಮ ಸದ್ಗತಿಂ ದೇಹ್ಯಯಂ

---

೧೯೧. ಶಂಖ, ಚಕ್ರ, ಗದೆಗಳನ್ನು ಕೈಯಲ್ಲಿ ಹಿಡಿದಿರುವ, ಹೊಂಬಣ್ಣದ ಬಟ್ಟೆಯನ್ನುಟ್ಟ, ಜಗದ್ಗುರುವಾದ ಆ ನಾರಾಯಣನೇ ನೀನು ಎಂದು ನಾನು ಕೇಳಿದ್ದೇನೆ.

೧೯೨. ನಿನ್ನನ್ನೇ ಯೋಗಿಗಳು ಚಿಂತಿಸುತ್ತಾರೆ. ಯೋಗಮಾಡತಕ್ಕವರು ನಿನಗೆ ಹೋಮಮಾಡುತ್ತಾರೆ. ನೀನೊಬ್ಬನೇ ಹವ್ಯಕವ್ಯಗಳನ್ನು ತಿನ್ನತಕ್ಕ ದೇವ ಪಿತೃಸ್ವರೂಪನು.

೧೯೩. ಸಾಯುವ ಕಾಲದಲ್ಲಿ ನಿನ್ನನ್ನೇ ಸ್ಮರಿಸುತ್ತಿರುವುದರಿಂದ ಪಾಪವು ನಾಶವಾಗಿದೆ. ನೀನು ದರ್ಶನವನ್ನು ಕೊಟ್ಟುದರಿಂದ ಮುಕ್ತಿಯು ಸಮೀಪವಾಯಿತು. ನಿನ್ನ ಬಾಣವನ್ನು ಎಳೆದುಕೋ ನನಗೆ ಬಹಳವಾಗಿ ನೋವಾಗುತ್ತಿರುವುದು.

೧೯೪. ರಾಮನು ಹಾಗೇ ಆಗಲೆಂದು ಬಾಣವನ್ನು ತೆಗೆದುಕೊಂಡು ನಿನಗೇನು ಕೊಡಲಿ ಎಂದು ವಾಲಿಯನ್ನು ಕೇಳಿದನು.

೧೯೫. ಕಪಿಯು ಹೇಳಿತು:—ನೀನು ಪ್ರಸನ್ನನಾಗಿದ್ದರೆ ಉತ್ತಮಗತಿಯನ್ನು

**ಸುಗ್ರೀವಸ್ತಥಾ ರಕ್ಷಣೀಯೋಽಂಗದೋಽಥ ತಾರಾ ಚ ಮಯಾ**
**ಪಾಪಿನಾಽಪರಾಧಃ ಕೃತಸ್ತತ್ಫಲಮನುಭೂತಂ ॥ ೧೯೫ ॥**

**ಅಥ ರಾಮಂ ಪಶ್ಯನ್ನೇವ ವಾಲೀ ಮಮಾರ ಸ್ವರ್ಗಂ ಚ**
**ಗತಃ ॥ ೧೯೬ ॥**

**ಅಥ ಸುಗ್ರೀವಂ ರಾಜ್ಯೇಽಭಿಷಿಚ್ಯ ಸ್ವಯಂ ವನಂ ವಿವೇಶ ॥ ೧೯೭ ॥**

**ಅಥ ತೇನ ಸಹಾಯೇನ ಜಲಧಿಸಮೀಪಂ ಗತ್ವಾ ಕ್ವ ಲಂಕಾ ಕ್ವ**
**ಸೀತಾ ಕ್ವ ಚಾರಾತಿಃ ಸುಗ್ರೀವಮಾಹ ರಾಮಃ ॥ ೧೯೮ ॥**

**ಅಥ ಹನೂಮಾನಾಹ ಪ್ರವಿಶ್ಯ ಲಂಕಾಂ ವಿಚಿತ್ಯ ಸೀತಾಂ ಸರ್ವಂ**
**ತತ್ತ್ವಮವಗತ್ಯ ಯುದ್ಧಂ ಸಂಧಿರ್ವಾ ಕರ್ತವ್ಯಸ್ತದುದಧಿಲಂಘ-**
**ನಾಯ ಕಿಂಚಿತ್ಸಮಾದಿಶತು ಭಗವಾನ್ ॥ ೧೯೯ ॥**

---

ಕೊಡು. ಈ ಸುಗ್ರಿವ, ಅಂಗದ, ತಾರೆಯರನ್ನು ಕಾಪಾಡು. ನಾನು ಮಾಡಿದ ತಪ್ಪಿಗೆ ಸರಿಯಾದ ಫಲವನ್ನು ಅನುಭವಿಸಿದೆನು.

೧೯೬. ರಾಮನನ್ನು ನೋಡುತ್ತಿರುವಂತೆಯೇ ವಾಲಿಯು ಸತ್ತು ಸ್ವರ್ಗವನ್ನು ಹೊಂದಿದನು.

೧೯೭. ಅನಂತರ ಸುಗ್ರೀವನನ್ನು ರಾಜ್ಯದಲ್ಲಿ ಅಭಿಷೇಕಮಾಡಿ ತಾನು ಕಾಡಿಗೆ ಹೋದನು.

೧೯೮. ಸುಗ್ರೀವನ ಸಹಾಯದಿಂದ ಸಮುದ್ರದ ದಡಕ್ಕೆ ಹೋಗಿ ಲಂಕೆಯೆಲ್ಲಿದೆ? ಸೀತೆಯೆಲ್ಲಿದ್ದಾಳೆ? ಶತ್ರುವೆಲ್ಲಿದ್ದಾನೆ? ಎಂದು ರಾಮನು ಸುಗ್ರೀವನನ್ನು ಕೇಳಿದನು.

೧೯೯. ಆಗ ಹನುಮಂತನು ಲಂಕೆಗೆ ಹೋಗಿ ಸೀತೆಯನ್ನು ಹುಡುಕಿ ಅಲ್ಲಿನ ಸ್ಥಿತಿಯನ್ನೆಲ್ಲಾ ತಿಳಿದು, ಯುದ್ಧವನ್ನಾಗಲಿ ಸಂಧಿಯನ್ನಾಗಲಿ ಮಾಡಿಕೊಳ್ಳಬೇಕು. ಸಮುದ್ರವನ್ನು ದಾಟಲು ನೀನು ಸ್ವಲ್ಪ ಅಪ್ಪಣೆಯನ್ನು ಕೊಡು ಎಂದನು.

ಅಥ ಸುಗ್ರೀವಮಾಹ ರಾಮಃ ಕಥಮೇತದ್ಘಟಿತ ಇತಿ ॥ ೨೦೦ ॥

॥ ಕಪಿರುವಾಚ ॥

ಮಮ ವಾನರಾ ಭಲ್ಲಪ್ರಮುಖಾಃ ಕೋಟಿಶಃ ಸಂತ್ಯೇಕಂ ನಿಯುಜ್ಯ ಸರ್ವಮಾಕಲಯ್ಯ ಯಥಾ ಯುಕ್ತಂ ತಥಾ ಕರಣೀಯಂ ॥ ೨೦೧ ॥

ಅಥ ಜಾಂಬವಾನಾಹ ಹನೂಮಾನೇಷ ಗಚ್ಛತು ಬುಧ್ಯತು ಲಂಕಾಂ ॥ ೨೦೨ ॥

ಅಥ ಹನೂಮಾನಗಮಲ್ಲಂಕಾಂ ಪುರಂ ವಿಚಿತ್ಯ ಸೀತಾಮಶೋಕ ವನಿಕಾಯಾಮಾಸೀನಾಂ ತಥಾ ಚ ಸಂಭಾಷ್ಯ ವಿಶ್ವಾಸಂ ಕೃತ್ವಾ ವನಂ ಬಭಂಜ ವನರಕ್ಷಕಾಂಶ್ಚ ॥ ೨೦೩ ॥

ಬದ್ಧೋ ರಕ್ಷಸಾ ಲಂಕಾಂ ದಗ್ಧ್ವೋತ್ತರಕೂಲಂ ಗತ್ವಾ ರಾಮಂ ದೃಷ್ಟ್ವಾ ವೃತ್ತಾಂತಂ ಕಥಯಿತ್ವಾ ತೂಷ್ಣೀಮತಿಷ್ಠತ್ ॥ ೨೦೪ ॥

---

೨೦೦. ಆಗ ಸುಗ್ರೀವನನ್ನು ಕುರಿತು ರಾಮನು, ಈ ಸಮುದ್ರಲಂಘನವು ಹೇಗೆ ಸಾಧ್ಯವೆಂದನು.

೨೦೧. ಕಪಿಯು ಹೇಳಿದನು:—ನನ್ನ ಸೇವಕರಾದ ಕಪಿಗಳೂ, ಕರಡಿಗಳೂ ಕೋಟಿಗಟ್ಟಲೆಯಿದ್ದಾರೆ. ಅವರಲ್ಲಿ ಒಬ್ಬನನ್ನು ನಿಯಮಿಸಿ ಎಲ್ಲವನ್ನೂ ತಿಳಿದು ಕೊಂಡು ಹೇಗೆ ಯುಕ್ತವೋ ಹಾಗೆ ಮಾಡೋಣ.

೨೦೨. ಆಗ ಜಾಂಬವಂತನು, ಹನುಮಂತನು ಲಂಕೆಗೆ ಹೋಗಿ ಎಲ್ಲವನ್ನೂ ತಿಳಿದು ಬರಲಿ ಎಂದನು.

೨೦೩. ಆಗ ಹನುಮಂತನು ಲಂಕೆಗೆ ಹೋಗಿ ಸೀತೆಯನ್ನು ಹುಡುಕಿ ಅಶೋಕವನದಲ್ಲಿದ್ದ ಆಕೆಯನ್ನು ನೋಡಿ ಮಾತನಾಡಿ ಅವಳಲ್ಲಿ ವಿಶ್ವಾಸವನ್ನು ಹೊಂದಿ ಆ ವನವನ್ನೂ ಅಲ್ಲಿನ ಕಾವಲುಗಾರರನ್ನೂ ನಾಶಮಾಡಿದನು.

೨೦೪. ರಾಕ್ಷಸರಿಂದ ಕಟ್ಟಲ್ಪಟ್ಟು ಲಂಕೆಯನ್ನು ಸುಟ್ಟು ಉತ್ತರದ ದಡಕ್ಕೆ ಬಂದು ರಾಮನನ್ನು ನೋಡಿ ಸಮಾಚಾರವನ್ನು ತಿಳಿಸಿ ಸುಮ್ಮನಾದನು.

**ಅಥ ರಾಮಃ ಸರ್ವೈರ್ವಿಚಾರಯಾಮಾಸ** ॥ ೨೦೫ ॥

**ಜಾಂಬವಾನುವಾಚ ರಾಮೇಣ ಲಂಕಾ ಕಪಿಭಿರ್ವಿನಶ್ಯತೀತಿ ನಾರದೇನ ಮಮೋಕ್ತಮಥ ಸಾಗರೋತ್ತರಣೇ ಯತ್ನಂ ತಯಾ ಸ್ಥೇಯಂ** ॥ ೨೦೬ ॥

**ಅಥ ರಾಮಃ ಶಂಕರಮಾರಾಧ್ಯ ಸರ್ವಂ ನಿವೇದ್ಯ ತದುಕ್ತಂ ಕರೋಮೀತಿ ವಚನಮುಕ್ತ್ವಾ ಶಿವಮಭ್ಯರ್ಚ್ಯ ಪ್ರಣತೋ ಭೂತ್ವಾ ವ್ಯಜಿಜ್ಞಪತ್** ॥ ೨೦೭ ॥

**ದೇವ ಮಹಾದೇವ ಮಹಾಭೂತಗ್ರಾಸ ಮಹಾಪ್ರಳಯಕಾರಣ ಮಹಾಹಿಭೂಷಣ ಮಹಾರುದ್ರ ಶಂಕರ ಪರಮೇಶ್ವರ, ವಿರೂಪಾಕ್ಷ, ನಾಗಯಜ್ಞೋಪವೀತ ಕರಿಕೃತ್ತಿವಸನ, ಬ್ರಹ್ಮಶಿರಃಕಪಾಲಮಾಲಾಭರಣ ನರಕಾಸ್ಥಿಭೂಷಣ ಭಸಿತಪರ ನಾರಾಯಣಪ್ರಿಯ ಶುಭಚರಿತ ಪಂಚಬ್ರಹ್ಮಾದಿದೇವ ಪಂಚಾನನ**

---

೨೦೫. ಅನಂತರ ರಾಮನು ಎಲ್ಲರೊಡನೆಯೂ ವಿಚಾರಮಾಡಿದನು.

೨೦೬. ಆಗ ಜಾಂಬವಂತನು ರಾಮನಿಂದಲೂ, ಕಪಿಗಳಿಂದಲೂ, ಲಂಕೆಯು ನಾಶವಾಗುತ್ತದೆಂದು ನಾರದನು ನನಗೆ ಹೇಳಿದ್ದಾನೆ. ಆದ್ದರಿಂದ ಸಮುದ್ರವನ್ನು ದಾಟುವ ಯತ್ನವನ್ನು ಮಾಡಬೇಕು ಎಂದನು.

೨೦೭. ಅನಂತರ ರಾಮನು ಶಂಕರನನ್ನು ಪೂಜಿಸಿ ಎಲ್ಲವನ್ನೂ ಹೇಳಿ ಅವನು ಹೇಳಿದಂತೆ ಮಾಡುತ್ತೇನೆಂದು ಹೇಳಿ ಶಿವನನ್ನು ಪೂಜಿಸಿ ನಮಸ್ಕರಿಸಿ ವಿಜ್ಞಾಪಿಸಿಕೊಂಡನು.

೨೦೮. ದೇವನೆ, ಮಹಾದೇವನೆ, ಮಹಾಭೂತಗಳನ್ನು ನಾಶಮಾಡುವವನೇ, ಮಹಾಸರ್ಪಗಳೇ ಅಲಂಕಾರವಾಗಿ ಉಳ್ಳವನೇ, ಮಹಾರುದ್ರನೇ. ಸೌಖ್ಯವನ್ನುಂಟು ಮಾಡುವವನೇ, ಪರಮೇಶ್ವರನೇ, ಬೆಸವಾದ ಕಣ್ಣುಳ್ಳವನೇ, ಸರ್ಪವೇ ಜನಿವಾರ ವಾಗಿ ಉಳ್ಳವನೇ, ಆನೆಯ ಚರ್ಮವನ್ನು ಹೊದ್ದಿರುವವನೇ, ಬ್ರಹ್ಮನ ತಲೆಯ ಕಪಾಲವನ್ನೇ ಮಾಲೆಯಲ್ಲಿ ಸೇರಿಸಿಕೊಂಡು ಹಾಕಿಕೊಂಡಿರುವವನೇ, ನರಕಾಸುರನ ಮೂಳೆಯನ್ನು ಅಲಂಕಾರವಾಗಿ ಉಳ್ಳವನೇ, ವಿಭೂತಿಯಲ್ಲಿ ಆಸಕ್ತನೇ, ನಾರಾಯಣ

ಚತುರ್ವರ್ದನ ವೇದವೇದ್ಯ ಭಕ್ತಸುಲಭ್ಯಾಭಕ್ತದುರ್ಲಭ ಪರ-ಮಾನಂದವಿಜ್ಞಾನಪರ, ಪೂಷದಂತಪಾತನ, ದಕ್ಷಶಿರಚ್ಛೇದನ, ಬ್ರಹ್ಮಪಂಚಮಶಿರೋಹರಣ, ಪಾರ್ವತೀವಲ್ಲಭ ನಾರದೋಪ-ಗೀಯಮಾನಶುಭಚರಿತ ಶರ್ವ ತ್ರಿನೇತ್ರ ತ್ರಿಶೂಲಧರ, ಪಿನಾಕ-ಪಾಣೇ, ಕಪರ್ದಿನ್ನೇಕರೂಪ ವೃಷವಾಹನ, ಶುದ್ಧಸ್ಫಟಿಕ-ಸಂಕಾಶ, ಚತುರ್ಭುಜ ನಾನಾಯುಧ ದಕ್ಷಿಣಾಮೂರ್ತೆ ಈಶ್ವರ, ದೇವಪತೇ, ಗಂಗಾಧರ, ತ್ರಿಪುರಹರ ಶ್ರೀಶೈಲನಿವಾಸ, ಕಾಶೀನಾಥ ಕೇದಾರೇಶ್ವರ, ಭೂಷಣಸಿದ್ಧೇಶ್ವರ ಪಟಹಕರ್ಣೇ-ಶ್ವರ ಕನಖಲೇಶ್ವರ ಪರ್ವತೇಶ್ವರ, ಚಕ್ರಪ್ರದ, ಬಾಣಚಿಂತಾ-ಪಾದಕ, ಮುರಹರಪೂಜಿತಚರಣಕಮಲ ಸೋಮ, ಸೋಮ-ಭೂಷಣ, ಸರ್ವಜ್ಞ ಜ್ಯೋತಿರ್ಮಯ ಜಗನ್ಮಯ ನಮಸ್ತೇ ನಮಸ್ತೇ ॥ ೨೦೮ ॥

---

ನಿಗೆ ಪ್ರೀತಿಪಾತ್ರನೇ, ಒಳ್ಳೆಯ ಚರಿತ್ರೆಯುಳ್ಳವನೇ, ಪಂಚಬ್ರಹ್ಮನೇ, ಆದಿದೇವನೇ, (ಐದು ಮುಖವುಳ್ಳವನೇ) ನಾಲ್ಕು ಮುಖವುಳ್ಳವನೇ, ವೇದದಲ್ಲಿ ತಿಳಿಯತಕ್ಕವನೇ, ಭಕ್ತರಿಗೆ ಸುಲಭವಾಗಿ ಸಿಕ್ಕುವವನೇ, ಭಕ್ತರಲ್ಲದವರಿಗೆ ಸಿಕ್ಕದವನೆ, ಆನಂದ, ಒಳ್ಳೆಯ ಜ್ಞಾನಗಳುಳ್ಳವನೇ, ಸೂರ್ಯನ ಹಲ್ಲನ್ನು ಕೆಡಗಿದವನೇ, ದಕ್ಷನ ತಲೆಯನ್ನು ಕಡಿದವನೇ, ಬ್ರಹ್ಮನ ಐದನೆಯ ತಲೆಯನ್ನು ಕಡಿದವನೇ, ಪಾರ್ವತಿಗೆ ಪ್ರಿಯನೇ, ನಾರದನಿಂದ ಹೊಗಳಲ್ಪಡುವ ಒಳ್ಳೆಯ ಚರಿತ್ರೆಯುಳ್ಳವನೇ, ಶರ್ವನೇ, ಮುಕ್ಕಣ್ಣನೇ, ತ್ರಿಶೂಲವನ್ನು ಧರಿಸಿರುವವನೇ, ಪಿನಾಕವನ್ನು ಕೈಯ್ಯಲ್ಲುಳ್ಳವನೇ, ಕಪರ್ದನೆಂಬ ಜಟೆಯುಳ್ಳವನೇ, ಒಂದೇರೂಪವುಳ್ಳವನೇ, ಎತ್ತೆ ವಾಹನವಾಗಿ ಉಳ್ಳವನೇ, ಬೆಳ್ಳಗಿರುವ ಸ್ಫಟಿಕದಂತೆ ಇರತಕ್ಕವನೇ, ನಾಲ್ಕು ಭುಜವುಳ್ಳವನೇ, ಬಗೆಬಗೆಯ ಆಯುಧಗಳುಳ್ಳವನೇ, ದಕ್ಷಿಣಾಮೂರ್ತಿಯೇ, ಈಶ್ವರನೇ, ದೇವತೆಗಳಿಗೆ ಪತಿಯೇ, ಗಂಗೆಯನ್ನು ಧರಿಸಿರುವವನೇ, ತ್ರಿಪುರಗಳನ್ನು ನಾಶಮಾಡಿದವನೇ, ಶ್ರೀಶೈಲಪರ್ವತದಲ್ಲಿ ಇರುವವನೇ, ಕಾಶಿಗೆ ಒಡೆಯನೇ, ಕೇದಾರದಲ್ಲಿರುವವನೇ, ಭೂಷಣಸಿದ್ಧೇಶ್ವರನೇ, ಪಟಹಕರ್ಣೇಶ್ವರನೇ, ಕನಖಲೇಶ್ವರನೇ, ಪರ್ವತೇಶ್ವರನೇ, ಚಕ್ರವನ್ನು ಕೊಟ್ಟವನೇ, ಬಾಣನಿಗೆ ವ್ಯಥೆಯನ್ನುಂಟುಮಾಡಿದವನೇ, ವಿಷ್ಣುವಿನಿಂದ ಪೂಜಿತವಾದ ಪಾದಗಳುಳ್ಳವನೇ, ಉಮೆಯಿಂದ ಕೂಡಿದವನೇ, ಚಂದ್ರನೇ ಒಡವೆಯಾಗಿ ಉಳ್ಳವನೇ, ಎಲ್ಲವನ್ನೂ ತಿಳಿದವನೇ, ಜ್ಯೋತಿಸ್ಸ್ವರೂಪನೇ, ನಿನಗೆ ನಮಸ್ಕಾರವು, ನಮಸ್ಕಾರವು.

ಏವಂ ಸ್ತುವತೋ ರಾಮಸ್ಯ ಪುರತೋ ಲಿಂಗಮಧ್ಯತೋ-
ಽತೇತಸ್ತೇಜೋಮಯಮೂರ್ತಿರಾವಿರ್ಬಭೂವ ॥ ೨೦೯ ॥

ಅಭಯವಾನಥ ಪುನಃ ಪದ್ಮಾಸೀನಮುಮಾಧಿಷ್ಠಿತಾಂಕಮಾಶ-
ಮಾಯುಕ್ತಸರ್ವಾಭರಣಂ ಸುಕಾಂತಿಕಿರೀಟಿನಂ ಹೈಮವತೀ-
ಕಟೀಸ್ಪರ್ಶಂ ಕರದ್ವಯೇನಾಭಯವರಪ್ರದಂ ತರಂಗೀತಾನೇ-
ಕದಿಶಾಭಿಃ ಪೂರ್ಣಂ ತೇಜಸ್ವಿನಂ ಹಾಸಮುಖಂ ಪ್ರಸನ್ನ-
ವದನಂ, ದದರ್ಶ ರಾಮಃ ಪರಮೇಶಿತಾರಂ ನನಾಮ ಬದ್ಧಾಂ-
ಜಲಿಃ ಪುನಶ್ಚ ದಂಡವತ್ಪಪಾತ ॥ ೨೧೦ ॥

ಅಥ ರಾಮಂ ಪರಮೇಶ್ವರೋಽಪಿ ವರಂ ವೃಣು ತ್ವಂ ವರ-
ದೋಽಹಮಿತ್ಯುಕ್ತವಾನ್ ॥ ೨೧೧ ॥

ಲಂಕಾಂ ಗಮಿಷ್ಯಾಮಿ ಸಮುದ್ರತರಣ ಉಪಾಯಮೇಕಂ
ಮಮ ದೇಹಿ ಶಂಭೋ ॥ ೨೧೨ ॥

---

೨೦೯. ಹೀಗೆ ಸ್ತೋತ್ರಮಾಡುತ್ತಲಿರುವ ರಾಮನ ಎದುರಿಗೆ ಲಿಂಗಮಧ್ಯ ದಿಂದ ಕೂಡಿರುವ ತೇಜೋಮೂರ್ತಿಯು ಕಾಣಿಸಿಕೊಂಡಿತು.

೨೧೦. ರಾಮನು ಭಯವನ್ನು ಬಿಟ್ಟು ಮತ್ತೆ ಪದ್ಮಾಸನದಲ್ಲಿ ಕುಳಿತಿರುವ, ತೊಡೆಯ ಮೇಲೆ ಉಮೆಯನ್ನು ಕುಳ್ಳಿರಿಸಿಕೊಂಡಿರುವ, ಈಶ್ವರನಾದ ಎಲ್ಲಾ ಆಭರಣಗಳನ್ನೂ ತೊಟ್ಟಿರುವ, ಒಳ್ಳೆಯ ಕಾಂತಿಯಿಂದ ಕೂಡಿರುವ ಕಿರೀಟವುಳ್ಳ, ಹಿಮವಂತನ ಮಗಳ ನಡುವನ್ನು ಹಿಡಿದುಕೊಂಡಿರುವ, ಒಂದು ಕೈಯ್ಯಲ್ಲಿ ಅಭಯ ಚಿನ್ಹೆಯನ್ನೂ, ಮತ್ತೊಂದು ಕೈಯ್ಯಲ್ಲಿ ವರದ ಚಿನ್ಹೆಯನ್ನೂ ಧರಿಸಿರುವ, ಹೆಚ್ಚು ತ್ತಿರುವ, ಅನೇಕ ದಿಕ್ಕುಗಳಿಂದ ಪೂರ್ಣವಾದ ಕಾಂತಿಯುಳ್ಳ, ನಗುಮುಖವುಳ್ಳ, ಇಷ್ಟವಾದುದನ್ನು ಕೊಡುವ ಸ್ವಾಮಿಯನ್ನು ರಾಮನು ನೋಡಿದನು, ನಮಸ್ಕರಿ ಸಿದನು. ತಲೆಯ ಮೇಲೆ ಕೈಮುಗಿದುಕೊಂಡು ದಂಡನಮಸ್ಕಾರ ಮಾಡಿದನು.

೨೧೧. ಅನಂತರ ರಾಮನನ್ನು ಈಶ್ವರನು ವರವನ್ನು ಕೇಳು, ಕೊಡುತ್ತೇನೆ ಎಂದನು.

೨೧೨. ಲಂಕೆಗೆ ಹೋಗಬೇಕು. ಸಮುದ್ರವನ್ನು ದಾಟುವುದಕ್ಕೆ ಒಂದು ಉಪಾಯವನ್ನು ತೋರಿಸು.

॥ ಶಂಭುರುವಾಚ ॥

ಮಮಾಜಗವಂ ಧನುರಸ್ತಿ ತತ್ಕಾಲರೂಪಮವಿಕಲ್ಪಂ ವಾ ಭವತಿ । ತದಾರುಹ್ಯ ಸಮುದ್ರಂ ತೀರ್ತ್ವಾ ಲಂಕಾಮಾಪ್ನುಹಿ ॥ ೨೧೩ ॥

ರಾಮೋಽಪಿ ತಥೇತಿ ನಿಶ್ಚಿತ್ಯ ಸ ಸಸ್ಮಾರಾಜಗವಂ ॥ ೨೧೪ ॥

ಆಗತಂ ಧನುಸ್ತತಶ್ಚ ರಾಮೋಽಪ್ಯೂಜಯತ್ ॥ ೨೧೫ ॥

ಅಥ ಹರೋ ಧನುರಾದಾಯ ರಾಮಾಯ ದತ್ತವಾನ್ ॥ ೨೧೬ ॥

ರಾಮೋಽಪಿ ಜಲಧಾವಪಾತಯತ್ ॥ ೨೧೭ ॥

ಆರುರುಹುಸ್ಸರ್ವೇ ವಾನರಾ ರಾಮಲಕ್ಷ್ಮಣೌ ಚ ಷಷ್ಟಿ-ಪರಾರ್ಧಂ ತೇಷಾಮಸಂಖ್ಯೇಷು ವಾನರೇಷು ಧನುರಾರೂ-

---

೨೧೩. ಶಂಭುವು ಹೇಳಿದನು :—ನನ್ನ ಅಜಗವೆಂಬ ಧನುಸ್ಸಿದೆ. ಆ ಕಾಲಕ್ಕೆ ತಕ್ಕಂತೆ ಹೆಚ್ಚುಕಡಿಮೆಯಾಗುತ್ತದೆ. ಅದನ್ನು ಹತ್ತಿ ಸಮುದ್ರವನ್ನು ದಾಟಿ ಲಂಕೆಯನ್ನು ಹೊಂದು.

೨೧೪. ರಾಮನು ಹಾಗೆಯೇ ಆಗಲೆಂದು ನಿಶ್ಚಯಿಸಿ ಅಜಗವಧನುಸ್ಸನ್ನು ಸ್ಮರಿಸಿದನು.

೨೧೫. ಧನಸ್ಸು ಬಂದಿತು. ಅನಂತರ ರಾಮನು ಅದನ್ನು ಪೂಜಿಸಿದನು.

೨೧೬. ಆಗ ಈಶ್ವರನು ಆ ಧನುಸ್ಸನ್ನು ತೆಗೆದು ರಾಮನಿಗೆ ಕೊಟ್ಟನು.

೨೧೭: ರಾಮನು ಅದನ್ನು ಸಮುದ್ರಕ್ಕೆಸೆದನು.

೨೧೮. ಅರವತ್ತು ಪರಾರ್ಧಸಂಖ್ಯೆಯುಳ್ಳ ಕಪಿಗಳು, ರಾಮಲಕ್ಷ್ಮಣರೂ, ಆ ಧನುಸ್ಸಿನ ಮೇಲೆ ಹತ್ತಿದರು. ಅವರೆಲ್ಲರೂ ಹತ್ತಲು ಆ ಬಿಲ್ಲು ತನ್ನ ಇಷ್ಟದಂತೆ

ಥೇಷು ನಿಕಾಮಂ ಯಯೌ ಧನುಸ್ತಟಂ ವಾನರಾಶ್ಚ ತತ-
ಸ್ತತೋ ಗತ್ವಾ ನಿರೀಕ್ಷಯಾಮಾಸುಃ ॥ ೨೧೮ ॥

ಅಥಾತಿಕಾಯೋ ನಾಮ ರಕ್ಷಃ ಕಪಿಬಲಮಾಲೋಕ್ಯ ರಾವಣಾ-
ಯೋಕ್ತವತ್ ॥ ೨೧೯ ॥

ರಾವಣೋಽಪಿ ಕಿಂ ಕಪಿಭಿಃ ಶಾಖಾಮೃಗೈಃ ಕಿಂ ವಾ ಮಾನು
ಷಾಭ್ಯಾಂ ರಾಮಲಕ್ಷ್ಮಣಾಭ್ಯಾಂ ಕಿಮಾಯಾತಂ ದೈವಾಗತಮ-
ಸ್ಮಾಕಂ ಭೋಜನಮಿತ್ಯುವಾಚ ॥ ೨೨೦ ॥

ಅಥ ಸುಗ್ರೀವಃ ಪಶ್ಚಿಮಾವಲಂಬಿನಿ ಭಾಸ್ವತಿ ಹನುಮಜ್ಜಾಂ-
ಬವದಾದಿಮಹಾಬಲೈಶ್ಚಾತಿಕಾಯೈರಸಂಖ್ಯಾತೈರ್ಲಂಕಾಪಾ-
ರ್ಶ್ವಂ ಗತ್ವೋಪವನಂ ಪ್ರವಿಶ್ಯ ನಾನಾಫಲಾನಿ ಖಾದಿತ್ವಾ
ಪಯಃ ಪೀತ್ವೋಪವನರಕ್ಷಿರಾಕ್ಷಸಾನ್ವಿದ್ರಾವ್ಯ ಸರ್ವವಿಪಿನ-
ಮೇಕೈಕಶೋ ಗೃಹೀತ್ವಾ ಪ್ರಾದ್ರವಲ್ಲಂಕಾಂ ಗೋಪುರಂ ಚ

---

ಆಚೆಯ ದಡವನ್ನು ಸೇರಿತು. ಕಪಿಗಳೂ ಸೇರಿದುವು. ಮುಂದೆ ಹೋಗಿ ಲಂಕೆಯನ್ನು ಸೇರಿದರು. (ನೋಡಿದರು.)

೨೧೯. ಅತಿಕಾಯನೆಂಬುವನು ಹೋಗಿ ಸೈನ್ಯವನ್ನು ನೋಡಿ ರಾವಣನಿಗೆ ಹೇಳಿದನು.

೨೨೦. ರಾವಣನು ಇದನ್ನು ಕೇಳಿ ಏನು ಶಾಖಾಮೃಗಗಳಾದ ಕಪಿಗಳು, ಇಬ್ಬರು ಮನುಷ್ಯರೊಡನೆ ಬಂದಿವೆಯೆ? ಅದೃಷ್ಟದ ದೆಸೆಯಿಂದಲೇ ನಮಗೆ ಭೋಜನವು ಬಂದಿರುವಂತಿದೆ ಎಂದನು.

೨೨೧. ಅನಂತರ ಸುಗ್ರೀವನು ಸಾಯಂಕಾಲದ ಸಮಯದಲ್ಲಿ ಹನುಮಂತ ಜಾಂಬವಂತ ಮೊದಲಾದ ಮಹಾಬಲಿಷ್ಠರೂ, ದೊಡ್ಡದೇಹವುಳ್ಳವರೂ ಆದ ಬಹಳ ಕಪಿಗಳೊಂದಿಗೆ ಲಂಕೆಯ ಹತ್ತಿರಕ್ಕೆ ಹೋಗಿ ಉಪವನಕ್ಕೆ ನುಗ್ಗಿ ಬಗೆಬಗೆಯ ಹಣ್ಣುಗಳನ್ನು ತಿಂದು ನೀರನ್ನು ಕುಡಿದು ಆ ವನವನ್ನು ಕಾಪಾಡುತ್ತಿದ್ದ ರಾಕ್ಷಸರನ್ನು ಓಡಿಸಿ ಎಲ್ಲಾ ಕಾಡುಗಳನ್ನೂ ಒಂದಾಗುತ್ತಲೋಂದರಂತೆ ಆಕ್ರಮಿಸಿಕೊಂಡು ಲಂಕೆಗೂ ನುಗ್ಗಿದರು. ಊರು ಬಾಗಲಿಗೆ ಹೋಗಿ ಮಹಡಿಯ ಮನೆಗಳ ಮೇಲೆ

ಗತ್ವಾ ಸಮಾರುಹ್ಯ ಪ್ರಾಸಾದಂ ಚ ವಿಶೀರ್ಣೈಕೈಕಶಃ ಕೇಚಿ-
ತ್ಸ್ತಂಭಮಾದಾಯ ರಕ್ಷೋಭಿರ್ಯುಯುಧುಃ ॥ ೨೨೦ ॥

ಏಕೇ ಚ ಶಾಲಾಂ ಬಭಂಜುರ್ಗೃಹಾಣಿ ಚೂರ್ಣಯಾಮಾಸು-
ರ್ಬಾಲವೃದ್ಧಸ್ತ್ರೀಜನಾದಿಕಂ ಸರ್ವಮೇವ ನಿಜಘ್ನುಃ ॥ ೨೨೧ ॥

ಅಥೈಕಂ ಪ್ರಾಕಾರಂ ನಿರ್ಜಿತಮಾಜ್ಞಾಯ ರಾವಣ ಇಂದ್ರ-
ಜಿತಂ ಸಂದಿದೇಶ ॥ ೨೨೩ ॥

ಇಂದ್ರಜಿತಾ ಚ ಯುದ್ಧಂ ವಾನರಾಃ ಕೃತ್ವಾ ಭೀತಾಃ ಪಲಾ-
ಯಿತಾಶ್ಚ ॥ ೨೨೪ ॥

ಅಥ ಹನುಮಾನರಿಬಲಂ ನಿರ್ಗತಮಾಜ್ಞಾಯ ರಾವಣಂ ಜ್ಞಾತ್ವಾ ವಾನರಾನಾಹೂಯ ನಿರ್ಭರ್ತ್ಸ್ಯ ಸೇನಾಂ ಮಹತೀಂ ಕಾರಯಿತ್ವಾ ದಶಮುಖಂ ಕಲ್ಪಯಿತ್ವಾ ಮೋದಯಾಮಾಸ ॥ ೨೨೫ ॥

---

ಹತ್ತಿ ಒಂದೊಂದನ್ನಾಗಿ ಕೆಡವುತ್ತ, ಅವರಲ್ಲಿ ಕೆಲವರು ಕಂಬಗಳನ್ನು ತೆಗೆದುಕೊಂಡು ರಾಕ್ಷಸರೊಡನೆ ಯುದ್ಧಮಾಡಿದರು.

೨೨೨. ಕೆಲವರು ಸಾರ್ವತ್ರಿಕ ಶಾಲೆಗಳನ್ನೂ ನಾಶಮಾಡಿದರು. ಮತ್ತೆ ಕೆಲವರು ಮನೆಗಳನ್ನು ಮುರಿದರು. ಮತ್ತೆ ಕೆಲವರು ಹುಡುಗರು ಮುದುಕರು ಹೆಂಗಸರು ಎಲ್ಲರನ್ನೂ ಕೊಂದರು.

೨೨೩. ಅವರು ಒಂದುಸುತ್ತು ಕೋಟೆಯನ್ನು ಜಯಿಸಿರುವುದನ್ನು ಕೇಳಿ ರಾವಣನು ಇಂದ್ರಜಿತ್ತಿಗೆ ಅಪ್ಪಣೆಮಾಡಿದನು.

೨೨೪. ಆ ಕಪಿಗಳು ಇಂದ್ರಜಿತ್ತಿನೊಡನೆ ಯುದ್ಧಮಾಡಿ ಹೆದರಿ ಓಡಿದರು.

೨೨೫. ಅನಂತರ ಹನುಮಂತನು ಶತ್ರುಬಲವು ಹೊರಟುಹೋದುದನ್ನು ತಿಳಿದು ಕಪಿಗಳನ್ನು ಕೂಗಿ ಹೆದರಿಸಿ, ಸೇನೆಯನ್ನು ಬಹುವಾಗಿ ಸೇರಿಸಿ, ಆ ಸೇನೆಯನ್ನು ಹತ್ತುದಿಕ್ಕಿಗೂ ನಿಲ್ಲಿಸಿ ರಾವಣನೊಡನೆ ಬಹುವಾಗಿ ಯುದ್ಧಮಾಡಿದನು.

ಅಥ ಸ್ವಸ್ಥ ಏವೇಂದ್ರಜಿದ್ಯುಯುಧೇ ನ ಚ ವಾನರಾಸ್ತಂ ದೃ-
ಷ್ಟವಂತಃ ॥ ೨೨೬ ॥

ಅಥ ಹನುಮಜ್ಜಾಂಬವನ್ತೌ ಖಮುತ್ಪ್ಲುತ್ಯ ಪರ್ವತಶಿಖ-
ರಾಭ್ಯಾಮಿಂದ್ರಜಿತಂ ನಿಜಘ್ನತುಃ ॥ ೨೨೭ ॥

ಅಥ ಭುವಿ ಪಪಾತ ತಂ ಲಕ್ಷ್ಮಣಶ್ಚ ಯಮಲೋಕಗಾಮಿನಂ
ಚಕಾರ ॥ ೨೨೮ ॥

ಅಥಾತಿಕಾಯಮಹಾಕಾಯೌ ವಾನರಸೈನ್ಯಂ ಬಹುಶೋ ಹತ್ವಾ
ಲಕ್ಷ್ಮಣಂ ಪೀಡಯಿತ್ವಾ ರಾಮೇಣ ಸಂಯುಧ್ಯ ಸುಗ್ರೀವಂ
ಕೃತ್ತ್ವಾ ಹನುಮಜ್ಜಾಂಬವದ್ಭ್ಯಾಂ ಯುಯುಧಾತೇ ಪರಾಜಿತೌ
ಗೃಹೀತ್ವಾ । ತೌ ಚ ಯೋದ್ಧಾರಾವಾದಾಯ ರಾಮಸಮೀಪಂ
ಗತ್ವಾ ರಾಮಾಯ ನ್ಯವೇದಯತಾಂ ॥ ೨೨೯ ॥

---

೨೨೬. ಇಂದ್ರಜಿತ್ತು ಸುಖವಾಗಿ ಯುದ್ಧಮಾಡಿದನು. ಕಪಿಗಳಿಗೆ ಅವನು ಗೋಚರವಾಗಲಿಲ್ಲ.

೨೨೭. ಅನಂತರ ಹನುಮಂತ ಜಾಂಬವಂತರು ಆಕಾಶಕ್ಕೆ ಹಾರಿ ಪರ್ವತದ ಶಿಖರದಿಂದ ಇಂದ್ರಜಿತ್ತನ್ನು ಹೊಡೆದರು.

೨೨೮. ಅನಂತರ ಅವನು ನೆಲದ ಮೇಲೆ ಬೀಳಲು ಲಕ್ಷ್ಮಣನು ಕೊಂದು ಹಾಕಿದನು.

೨೨೯. ಅತಿಕಾಯಮಹಾಕಾಯರು ಕಪಿಸೈನ್ಯವನ್ನು ಬಹುವಾಗಿ ಕೊಂದು ಲಕ್ಷ್ಮಣನನ್ನು ನೋಯಿಸಿ ರಾಮನೊಡನೆ ಯುದ್ಧಮಾಡಿ ಸುಗ್ರೀವನನ್ನು ಗಾಯಗೊಳಿಸಿ ಹನುಮಂತ ಜಾಂಬವಂತರೊಡನೆ ಯುದ್ಧಮಾಡಿದರು. ಅಲ್ಲಿ ಆ ಅತಿಕಾಯ ಮಹಾಕಾಯರು ಸೋತುಹೋಗಲು ಅವರನ್ನು ಹಿಡಿದುಕೊಂಡು ರಾಮನ ಸಮೀಪಕ್ಕೆ ಕರೆದುಕ್ಕೊಂಡು ಹೋಗಿ ರಾಮನಿಗೆ ಒಪ್ಪಿಸಿದರು.

ಅತಿಕಾಯಮಭಾಷತ ರಾಮೋ ರಾವಣಸ್ಯ ಮಮ ಬ್ರೂಹಿ
ಸಚಿವಾನಾಮನ್ಯೇಷಾಂ ಮಹಾಭಯಾನಾಂ ಚ ॥ ೨೩೦ ॥

॥ ಅತಿಕಾಯ ಉವಾಚ ॥

ನಿಶ್ಚಿತಮಿದಂ ಪುರಾಸ್ಮಾಭಿಃ ಕಾರ್ಯಂ ಸೇನಾವಿಭಾಗಶಃ ಕೃತ್ವಾ
ವಿದ್ಯುನ್ಮಾಲೀ ನಾಮ ರಾಕ್ಷಸೋ ಮಹಾಬಲೋ ವಿಚಿತ್ರ-
ಯೋಧೀ ದರ್ಶನಾದರ್ಶನಯೋಧೀ ವಾನರೈಃ ಸರ್ವೈರೇಕ
ಏವ ಯುಧ್ಯತೇಽಪರೇ ಚ ಬಲಿನೋ ಮಹಾನ್ತಃ ಶಿಕ್ಷಿತಾಶ್ತ್ರಾ-
ಶ್ತ್ವಾವಾಂ ಯುವಾಭ್ಯಾಂ ಯುದ್ಧ್ಯಾವೋ ರಾವಣಃ ಪುಷ್ಪಕ-
ಮಾರುಹ್ಯಾಪರಭಾಗೇನ ತ್ವಾಮೇವ ನಿಹನಿಷ್ಯತ್ಯನ್ಯೇ ಚ
ರಾಕ್ಷಸಾಃ ಕುಂಭಕರ್ಣಮುಖಾಶ್ತ್ವಾತ್ಮಾನುರೂಪಂ ಕೃತ್ವಾ
ತ್ವಾಂ ಪರಿವಾರ್ಯ ಗೃಹೀತ್ವಾ ಸೀತಾಯೈ ದರ್ಶಯಿತ್ವಾ ತತ್ಸನ್ನಿ-
ಧಾವೇವ ಹನಿಷ್ಯತಿ ॥ ೨೩೧ ॥

ರಾಮಃ ಪ್ರಾಹಾಹೋ ಬಲವತಾಂ ಕಿಮಸಾಧ್ಯಮೇವಂ ಭವತಿ
ವೋ ದೈವಗತಿಃ ಕುಟಿಲಾ ॥ ೨೩೨ ॥

---

೨೩೦. ರಾಮನು ಆ ಅತಿಕಾಯನನ್ನು ಕುರಿತು ರಾವಣನ ಮಿಕ್ಕ ಮಂತ್ರಿಗಳ ಮತ್ತು ವೀರರ ವಿಷಯವನ್ನು ಹೇಳು ಎಂದನು.

೨೩೧. ಅತಿಕಾಯನು ಹೇಳಿದನು :—ನಾನು ಮಾಡುವ ಕೆಲಸವು ನಿರ್ಧಾರ ವಾಗಿದೆ. ಸೇನೆಯನ್ನು ಭಾಗವಾಗಿ ಮಾಡಿಕೊಂಡು ಮಹಾಬಲಿಷ್ಠನೂ, ವಿಚಿತ್ರವಾಗಿ ಕಾಣುವ ಹಾಗೆ, ಕಾಣದ ಹಾಗೆ ನಾನಾಬಗೆಯಾಗಿ ಯುದ್ಧಮಾಡುವ ವಿದ್ಯುನ್ಮಾಲಿ ಎಂಬ ರಾಕ್ಷಸನು ಎಲ್ಲಾ ಕಪಿಗಳೊಡನೆಯೂ ಒಬ್ಬನೇ ಯುದ್ಧಮಾಡುತ್ತಾನೆ. ಉಳಿದವರೂ ಕೂಡ ಮಹಾಬಲಶಾಲಿಗಳು, ಅಸ್ತ್ರದಲ್ಲಿ ನಿಪುಣರು. ನಾವಿಬ್ಬರೂ ನಿಮ್ಮೊಡನೆ ಯುದ್ಧಮಾಡುತ್ತೇವೆ. ರಾವಣನು ಪುಷ್ಪಕವನ್ನು ಹತ್ತಿಕೊಂಡು ಹಿಂದಿನಿಂದ ಬಂದು ನಿನ್ನನ್ನೇ ಕೊಲ್ಲುತ್ತಾನೆ. ಕುಂಭಕರ್ಣನೇ ಮುಂತಾದ ಮಿಕ್ಕ ರಾಕ್ಷಸರು ತಮಗೆ ಯೋಗ್ಯರೀತಿಯಲ್ಲಿ ಯುದ್ಧಮಾಡುತ್ತ ನಿನ್ನನ್ನೇ ಸುತ್ತುಗಟ್ಟಿ ಹಿಡಿದುಕೊಂಡು ಸೀತೆಗೆ ತೋರಿಸಿ ಅವಳ ಎದುರಿಗೆ ಕೊಲ್ಲುತ್ತಾರೆ.

೨೩೨. ಆಗ ರಾಮನು ಬಲಿಷ್ಠರಿಗೆ ಏನುತಾನೆ ಅಸಾಧ್ಯವು? ಹಾಗಾದರೆ ನಮಗೆ ದೈವಸಹಾಯವು ವಕ್ರವಾಗಿದೆ ಎಂದನು.

ಸುಗ್ರೀವೋಽತಿಕೋಪನಃ ಸಕ್ರೋಧಂ ದೃಷ್ಟ್ವಾ ರಾಮ-
ಮುವಾಚ ವಧ್ಯಾವೇತೌ ನ ಮೋಚನೀಯೌ ॥ ೨೩೩ ॥

ರಾಮಃ ಪ್ರಾಹಾವಧ್ಯೌ ಮೋಚನೀಯಾವೇತೌ ವಸನಾನಿ
ಭೂಷಣಾನ್ಯಾನಯೇತ್ಯುಕ್ತಮಾತ್ರೇ ಹನುಮತಾ ತಾನ್ಯಾನೀ-
ತಾನಿ ರಾಮಸ್ತಾಭ್ಯಾಂ ದತ್ತವಾನ್ ॥ ೨೩೪ ॥

ನತ್ವಾ ಯದೇತಲ್ಲಂಕಾದ್ವಾರೇ ದೃಶ್ಯತೇ ದಾರು ಪಂಚವಕ್ತ್ರಂ
ಶುಕ್ರೇಣೋಕ್ತಮೇತೇನ ಛಿನ್ನೇನ ರಾವಣೋ ಹನ್ಯತೇಽಥ ಚ
ದಾರುಚ್ಛೇದನಸಮನಂತರಂ ಪಾತಾಳಂ ಗನ್ತವ್ಯಮಿತಿ ಭಾರ್ಗವ
ಭಾಷಿತಂ ಶಾಸನಂ ಲಿಖಿತಂ ತಸ್ಮಾತ್ತ್ವಮಿದಂ ದಾರ್ವೇಕ-
ಪ್ರಯುಕ್ತೇನೈಕಬಾಣನಿಪಾತೇನ ಪಂಚಧಾ ಛಿಂಧಿ ತತ ಸ್ತವ
ಶಕ್ತಿಂ ಜ್ಞಾತ್ವಾ ಯುದ್ಧಮತಿದೃಢಂ ಕುರ್ಮಹೇ ॥ ೨೩೫ ॥

ಅಥ ಭಾರ್ಗವವಚೋ ವಿಜ್ಞಾಯ ರಾಮಃ ಪೂರ್ವಕೋಟ್ಯಾಂ

---

೨೩೩. ಆಗ ಸುಗ್ರೀವನು ಬಹು ಕೋಪಗೊಂಡು ನೋಡುತ್ತಾ ರಾಮನನ್ನು ಕುರಿತು ಇವರಿಬ್ಬರನ್ನೂ ಕೊಲ್ಲಬೇಕು. ಬಿಡಕೂಡದು ಎಂದನು.

೨೩೪. ಆಗ ರಾಮನು ಇವರನ್ನು ಕೊಲ್ಲಬಾರದು. ಬಿಟ್ಟುಬಿಡಬೇಕು. ಒಟ್ಟೆಗಳನ್ನೂ ಒಡವೆಗಳನ್ನೂ ತನ್ನಿ ಎನ್ನಲು, ಹನುಮಂತನು ತಂದನು. ಅವನ್ನು ಅವರಿಗೆ ಕೊಟ್ಟು ಬಹುಮಾನಿಸಿದನು.

೨೩೫. ಆಗ ಅವರು ರಾಮನಿಗೆ ನಮಸ್ಕರಿಸಿ, ಈ ಲಂಕೆಯ ಬಾಗಿಲಿನಲ್ಲಿ ಐದು ಮುಖದ ಒಂದು ಮರವಿದೆ. ಇದನ್ನು ಕತ್ತರಿಸುವವನು ರಾವಣನನ್ನು ಕೊಲ್ಲುತ್ತಾನೆ ಎಂದು ಶುಕ್ರನು ಹೇಳಿರುವನು. ಆ ಮರವನ್ನು ಕಡಿದಕೂಡಲೆ ಪಾತಾಳಕ್ಕೆ ಹೋಗಬೇಕು ಎಂದು ಶುಕ್ರನು ಹೇಳಿರುವುದನ್ನು ಶಾಸನವಾಗಿ ಬರೆದಿದ್ದಾನೆ. ಆದ್ದರಿಂದ ನೀನು ಈ ಮರವನ್ನು ಒಂದೇ ಬಾಣದ ಏಟಿನಿಂದ ಐದು ಭಾಗವಾಗಿ ಕತ್ತರಿಸು. ಅನಂತರ ನಿನ್ನ ಶಕ್ತಿಯನ್ನು ತಿಳಿದು ಭಯಂಕರವಾಗಿ ಯುದ್ಧಮಾಡುತ್ತೇವೆ.

೨೩೬. ರಾಮನು ಶುಕ್ರನ ಮಾತನ್ನು ಕೇಳುತ್ತಲೇ ಧನುಸ್ಸಿನ ಮತ್ತೊಂದು

ಸ್ಪರ್ಶಮಾತ್ರೇಣ ಸಜ್ಜಂ ಕೃತ್ವಾ ಧನುಷಿ ಬಾಣಂ ಸಂಯೋಜ್ಯ
ರಕ್ಷೋಭ್ಯಾಂ ಹನುಮತಾ ಶ್ರಾವಯನ್ನೇವ ಬಾಣಂ ಮುಮೋಚ
॥ ೨೩೬ ॥

ಬಾಣಂ ಧನುಷಶ್ಚಲಿತಂ ತೌ ರಾಕ್ಷಸೌ ಬಾಣಮಾರ್ಗೇ ನಿರೀಕ್ಷ
ಮಾಣೌ ದಾರು ಬಾಣೇನ ಪಂಚಧಾ ಛಿನ್ನಂ ನಿರೀಕ್ಷ್ಯ ರಾಮಂ
ವ್ಯಜ್ಞಾಪಯತಾಮಾವಯೋಃ ಶಿಶವೋ ರಕ್ಷಣೀಯಾಸ್ತ್ವ-
ಯೇತಿ ॥ ೨೩೭ ॥

ತಥೇತ್ಯಾಹ ರಾಮಃ ॥ ೨೩೮ ॥

ರಾಕ್ಷಸೌ ಲಂಕಾಂ ಪ್ರವಿಷ್ಟಾವಥ ಪ್ರಾಕಾರಯುದ್ಧಂ ಕರ್ತುಂ
ವಾನರಾ ಗತ್ವಾ ಸರ್ವತೋ ವರಣಮಾತ್ರಂ ಪಾರ್ಷ್ಣಿಭಿಃ ಪಾದೈ-
ರ್ಜಾನುಭಿಃ ಕರೈಃ ಪೃಷ್ಠೈಶ್ಚ ತಲಸಮಂ ಕೃತ್ವಾ ದ್ವಿತೀಯ
ಪ್ರಾಕಾರಂ ಗತಾಸ್ತದಾ ಚ ರಾವಣಃ ಸಮಾಗತ್ಯ ಸರ್ವಾ-

---

ಭಾಗಕ್ಕೆ ಮುಟ್ಟಿದ ಮಾತ್ರದಿಂದಲೇ ಹೆದೆಯೇರಿಸಿ ಬಾಣವನ್ನು ಹೂಡಿ ರಾಕ್ಷಸರಿಗೆ ಹನುಮಂತನು ಹೇಳುತ್ತಿರಲು ಬಾಣವನ್ನು ಬಿಟ್ಟನು.

೨೩೭. ಬಾಣವು ಧನುಸ್ಸಿನಿಂದ ಹೊರಬಿದ್ದಿತು. ಆ ರಾಕ್ಷಸರಿಬ್ಬರೂ ದಾರಿಯನ್ನೇ ನೋಡುತ್ತಿದ್ದರು. ಆ ಮರವು ಆ ಬಾಣದಿಂದ ಐದು ಪಾಲಾಗಿ ಒಡೆಯಿತು. ಆದನ್ನು ನೋಡಿ ಈ ರಾಕ್ಷಸರು ಭಯದಿಂದ ನಮ್ಮ ಮಕ್ಕಳನ್ನು ಕಾಪಾಡು ಎಂದು ಕೇಳಿಕೊಂಡರು.

೨೩೮. ರಾಮನು ಹಾಗೇ ಆಗಲಿ ಎಂದನು.

೨೩೯. ಆ ರಾಕ್ಷಸರು ಲಂಕೆಗೆ ಹೋದರು. ಅನಂತರ ಕೋಟೆಯ ಹೊರಗೆ ಯುದ್ಧವನ್ನು ಮಾಡಲು ಕಪಿಗಳೆಲ್ಲರೂ ಹೋದರು. ಕೋಟೆಯನ್ನೆಲ್ಲಾ ಎಲ್ಲಾ ಕಡೆಯಲ್ಲಿಯೂ ಮೊಳಕಾಲು, ಹೆಜ್ಜೆ, ಮೈ, ಮಂಡಿ, ಕೈ, ಬೆನ್ನುಗಳಿಂದ ತಳ್ಳಿ ಹಳ್ಳ ತಿಟ್ಟುಗಳನ್ನು ಸರಿಮಾಡಿಕೊಳ್ಳುತ್ತಾ ಎರಡನೆಯ ಸಾಲಿನ ಕೋಟೆಗೆ ಹೋದರು. ಆಗ

**ಸೇವೇಷುಭಿರ್ದ್ರಾವಯಿತ್ವಾ ತದನು ಗಚ್ಛನ್ರಾಮಮಗಾತ್**
**॥ ೨೩೯ ॥**

**ಅಥ ರಾಮಮಪಿ ಪಂಚಭಿರ್ಬಾಣೈರ್ವಿವ್ಯಾಧ ॥ ೨೪೦ ॥**

**ಅಥ ರಾಮೋ ದಶಭಿರ್ಬಾಣೈ ರಾವಣಂ ಸವ್ರಣಂ ಚಕಾರ**
**ಅನಯೋರತಿದಾರುಣಮನ್ಯೋನ್ಯಂ ಯುದ್ಧಂ ಬಭೂವ ॥ ೨೪೧ ॥**

**ರಾವಣೋ ದಶಭಿರ್ಬಾಣೈರ್ವಿವ್ಯಾಧ ॥ ೨೪೨ ॥**

**ಅಥ ರಾಮಬಾಣೈಶ್ಚ ಕ್ಷತಜಶರೀರೋ ರಾಕ್ಷಸಃ ಪಲಾಯನ-**
**ಪರೋಽಭವತ್ ॥ ೨೪೩ ॥**

**ವಾನರಾ ಲಕ್ಷ್ಮಣಶ್ಚ ಕೋಟಿಕೋಟಿರಾಕ್ಷಸಾನಘ್ನನ್ ॥ ೨೪೪ ॥**

---

ರಾವಣನು ಬಂದು ಎಲ್ಲರನ್ನೂ ಬಾಣದಿಂದ ಹೊಡೆದು ಓಡಿಸಿ ಅನಂತರ ಹೋಗುತ್ತಾ ರಾಮನನ್ನು ಎದುರಿಸಿದನು.

೨೪೦. ರಾಮನನ್ನೂ ಕೂಡ ಐದು ಬಾಣಗಳಿಂದ ಹೊಡೆದನು. ರಾಮನು ಹತ್ತು ಬಾಣಗಳಿಂದ ರಾವಣನನ್ನು ಗಾಯಗೊಳಿಸಿದನು

೨೪೧. ಇವರಿಬ್ಬರಿಗೂ ಬಹು ಕ್ರೂರವಾದ ಯುದ್ಧವು ನಡೆಯಿತು.

೨೪೨. ರಾವಣನು ಹತ್ತು ಬಾಣಗಳಿಂದ ರಾಮನನ್ನು ಹೊಡೆದನು.

೨೪೩. ರಾಮಬಾಣದಿಂದ ರಕ್ತಸೋರುತ್ತಿರುವ ಶರೀರವುಳ್ಳವನಾಗಿ ರಾವಣನು ಓಡಿಹೋದನು.

೨೪೪. ಕಪಿಗಳೂ, ಲಕ್ಷ್ಮಣನೂ, ಕೋಟಿಕೋಟಿಗಟ್ಟಲೆ ರಾಕ್ಷಸರನ್ನು ಕೊಂದರು.

೨೪೫. ಅನಂತರ ಮಾರನೆಯ ದಿನ ಬೆಳಗ್ಗೆ ವಿಭೀಷಣನು ರಾವಣನನ್ನು ಮನಸ್ಸು ತಿರುಗಿಸಿ ಇಂತೆಂದನು.

**ಅಥ ಪರಸ್ಮಿನ್ನಹನಿ ವಿಭೀಷಣೋ ರಾವಣಂ ವಿವಾರ್ಯೇದ-**
**ಮುವಾಚ** ॥ ೨೪೫ ॥

**ತೃತೀಯೋಪಾಯಕಾಲೋಽಯಂ ಚತುರ್ಥಂ ನ ವಿಚಾರಯ ।**
**ಚತುರ್ಥೋ ವಿಪರೀತೋ ನ ಶಸ್ತಃ ಶಸ್ತ್ರಾಧಿಕಾರಿಣಃ** ॥ ೨೪೬ ॥

**ಪರಸ್ಯ ಚಾತ್ಮನಶ್ಶಕ್ತಿಂ ವಿದಿತ್ವಾ ಚಾತ್ಮನೋಽಧಿಕಂ ।**
**ತದಾ ಯುದ್ಧಂ ಪ್ರಶಸ್ತಂ ಸ್ಯಾದ್ವಿಪರೀತಂ ವಿನಾಶಕಂ** ॥ ೨೪೭ ॥

**ರಾಮೇಣ ಬಲಿನಾ ನೈವ ಯುದ್ಧಂ ತೇ ದುರ್ಬಲಸ್ಯ ಚ ।**
**ವಿಶೇಷುವಾಲಿಹನ್ತಾಸೌ ವಾಲಿಜ್ಞಾತಸ್ತ್ವಯಾ ಪುರಾ** ॥ ೨೪೮ ॥

**ಮಾರೀಚಮೇಕಬಾಣೇನ ಭವನಾಪಿ ಪಲಾಯಿತಃ ।**
**ನಿಹತಾ ರಾಕ್ಷಸಾಶ್ಶೂರಾಃ ಇಂದ್ರಜಿಚ್ಚ ಸುತೋ ಹತಃ** ॥ ೨೪೯ ॥

---

೨೪೬. ಈಗ ಸಾಮ, ದಾನ, ಭೇದ, ದಂಡಗಳಲ್ಲಿ ಮೂರನೆಯದಾದ ಭೇದೋಪಾಯದ ಕಾಲವು ಈಗ ಒದಗಿದೆ. ದಂಡೋಪಾಯಕ್ಕೆ ಹೋಗಲೇ ಬೇಡ. ನಾಲ್ಕನೆಯದಾದ ದಂಡವು ಕೆಲಸಮಾಡುವವನಿಗೆ ಯೋಗ್ಯವಾದರೂ ಈಗ ಅದು ವ್ಯತ್ಯಾಸವಾಗಿದೆ. ಯೋಗ್ಯವಲ್ಲ.

೨೪೭. ಶತ್ರುವಿನ ಶಕ್ತಿಯನ್ನು ನೋಡಿ ತನ್ನ ಶಕ್ತಿ ಹೆಚ್ಚೆಂದು ತಿಳಿದು ಬಂದರೆ ಆಗ ಯುದ್ಧವು ಯೋಗ್ಯವಾಗುತ್ತದೆ. ಹಾಗಿಲ್ಲದೆ ವ್ಯತ್ಯಾಸವಾಗಿದ್ದರೆ ವಿನಾಶವಾಗುತ್ತದೆ.

೨೪೮. ಬಲಿಷ್ಠನಾದ ರಾಮನೊಡನೆ ದುರ್ಬಲನಾದ ನಿನಗೆ ಯುದ್ಧವು ಯುಕ್ತವಲ್ಲ. ಇವನು ಒಂದೇ ಬಾಣದಿಂದ ವಾಲಿಯನ್ನು ಕೊಂದಿರುವನು. ವಾಲಿಯನ್ನು ನೀನು ಮೊದಲೇ ಬಲ್ಲೆಯಷ್ಟೆ.

೨೪೯. ಮಾರೀಚನನ್ನು ಒಂದೇ ಬಾಣದಿಂದ ದೂರಕ್ಕೆ ಎಸೆದುಬಿಟ್ಟನು. ನೀನು ಕೂಡ ಓಡಿಹೋಗಿದ್ದೀಯೆ. ಶೂರರಾದ ರಾಕ್ಷಸರೆಲ್ಲರನ್ನೂ ಕೊಂದಿದ್ದಾನೆ. ನಿನ್ನ ಮಗನಾದ ಇಂದ್ರಜಿತ್ತನ್ನೂ ಕೊಂದಿದ್ದಾನೆ.

**ವರೇಣ್ಯತ್ರಿತಯಂ ಭಗ್ನಂ ತೇನ ಯುದ್ಧಂ ಚ ಸ್ನೈವ ತೇ ।**
**ದಾಸಭಾವಮಥೋ ವಾಪಿ ದತ್ತ್ವಾ ಸೀತಾಮಥಾಪ್ನುಹಿ ॥ ೨೫೦ ॥**

**ಗೋಪುರಸ್ಥಂ ತಥಾ ದಾರು ಪಂಚವಕ್ತ್ರಮಥೇಷುಣಾ ।**
**ಚಿಚ್ಛೇದ ಪಂಚಧಾ ತೇನ ರಾಮಸ್ತ್ವಾಂ ಮಾರಯಿಷ್ಯತಿ ॥ ೨೫೧ ॥**

**ತ್ವದರ್ಥಂ ಬಹವೋ ನಷ್ಟಾ ನಾಶಮೇಷ್ಯಂತಿ ಚಾಪರೇ ।**
**ಏಕೋ ನ್ಯಾಯಃ ಸುಖಾರ್ಥಾಯ ನ ಚ ಮೌಢ್ಯಂ ಸಹೋದರ ॥ ೨೫೨ ॥**

**ಮಾನುಷೀಂ ಮೃತ್ಯುಸಂಯುಕ್ತಾಮನಿಚ್ಛಂತೀಂ ಪತಿವ್ರತಾಂ ।**
**ಪತ್ನೀಂ ಬಲವತಶ್ಚಾಪಿ ಪೂಜಯಿತ್ವಾ ವಿಸರ್ಜಯ ॥ ೨೫೩ ॥**

**ಅನಿಚ್ಛನ್ತ್ಯಾಸ್ಸಮಾಯೋಗೇ ಭವೇದ್ದುಃಖಪರಂಪರಾ ।**
**ದುರ್ಗಂಧಮಲಸಂಯುಕ್ತೋ ನಾರೀಸಂಗೋ ಜುಗುಪ್ಸಿತಃ ॥ ೨೫೪ ॥**

---

೨೫೦. ಶ್ರೇಷ್ಠರಾದ ಮೂವರು ಮಕ್ಕಳುಗಳನ್ನು ಕೊಂದನು. ಅವನೊಡನೆ ನಿನಗೆ ಯುದ್ಧವು ಬೇಡ. ಸೀತೆಯನ್ನು ಒಪ್ಪಿಸಿ ಬಿಟ್ಟು, ಶರಣಾಗತನಾಗು.

೨೫೧. ಗೋಪುರದಲ್ಲಿದ್ದ ಪಂಚವಕ್ತ್ರದಾರುವನ್ನು ಒಂದೇ ಬಾಣದಿಂದ ಐದು ಭಾಗವಾಗಿ ಚೂರುಮಾಡಿದನು. ಅಂತಹ ರಾಮನು ನಿನ್ನನ್ನು ಕೊಲ್ಲುತ್ತಾನೆ.

೨೫೨. ನಿನಗೋಸ್ಕರ ಬಹಳ ಜನ ನಾಶವಾದರು. ಉಳಿದವರೂ ನಾಶ ಹೊಂದುತ್ತಾರೆ. ನ್ಯಾಯವೊಂದೇ ಸುಖವನ್ನು ಕೊಡತಕ್ಕದ್ದು. ಅಣ್ಣಾ, ಮೂಢತನ ಬೇಡ.

೨೫೩. ಮೃತ್ಯುವಿನಿಂದ ಕೂಡಿದ, ಮನುಷ್ಯಳಾದ, ಇಚ್ಛಿಸದಿರುವ, ಪತಿವ್ರತೆಯಾದ, ಬಲಿಷ್ಠನ ಹೆಂಡತಿಯಾದ ಸೀತೆಯನ್ನು ಗೌರವಿಸಿ ಕಳುಹಿಸು.

೨೫೪. ಇಚ್ಛಿಸದಿರುವವಳನ್ನು ರಮಿಸಿದರೆ ಉಪದ್ರಕಷ್ಟ ದುಃಖಗಳೇ ಬರುತ್ತವೆ. ಕೆಟ್ಟನಾತವುಳ್ಳ ಹೆಂಗಸಿನ ಸಹವಾಸವು ಅಸಹ್ಯವಾದುದು.

ವಿರಕ್ತಿರಥ ಚೇಜ್ಜಾತಾ ದುಃಖಾಯಾಕಾರ್ಯವರ್ತನಂ ।
ಅನುರಾಗೋ ಯದಿ ಭವೇನ್ಮರಣಂ ನರಕಂ ತತಃ ॥ ೨೫೫ ॥

ಆತ್ಮನೋ ಮರಣಂ ವ್ಯರ್ಥಂ ತಸ್ಯಾಶ್ಚಾದ್ಯ ಸಮಾಗಮೇ ।
ತ್ಯಾಗೋ ವಾ ಮರಣಂ ತಾತ ಧರ್ಮಪತ್ನ್ಯಾಸ್ತತೋ ಭವೇತ್ ॥ ೨೫೬ ॥

ಏವಮಾದಿ ತಥಾನ್ಯಚ್ಚ ಕಶ್ಮಲಂ ಸಂಭವಿಷ್ಯತಿ ।
ಅನ್ಯದಾಖ್ಯಾಮಿ ತೇ ವಾಕ್ಯಂ ಸರ್ವೇಷಾಂ ಚ ಪ್ರಿಯಂ ಹಿತಂ ॥ ೨೫೭ ॥

ಗತ್ವಾ ರಾಮಾಂತಿಕಂ ನತ್ವಾ ಸ್ತುತ್ವಾ ವಿಜ್ಞಾಪ್ಯ ರಾಘವಂ ।
ಕ್ಷಮ ರಾಮ ಮಹಾವೀರ ಶರಣಾಗತವತ್ಸಲ ॥ ೨೫೮ ॥

ತಾಮಸಾ ರಾಕ್ಷಸಾಸ್ಸರ್ವೇ ವಯಮೇತೇ ಸುಪಾಪಿನಃ ।
ಸೀತಾಪಹಾರಜಂ ದೋಷಂ ತ್ಯಕ್ತ್ವಾ ಪುತ್ರಾನವೇಹಿ ನಃ ॥ ೨೫೯ ॥

ತ್ವದಧೀನಾ ವಯಂ ರಾಮ ರಕ್ಷ ವಾ ಮಾರಯೇಚ್ಛಯಾ ।
ಇತ್ಯುದೀರ್ಯ ಪುರಸ್ತಸ್ಯ ರಾಘವಸ್ಯ ಸ್ಥಿತಾ ವಯಂ ॥ ೨೬೦ ॥

---

೨೫೫. ವೈರಾಗ್ಯ ಬಂದರೆ ಬಲಾತ್ಕಾರದ ಅಕಾರ್ಯವು ದುಃಖವನ್ನುಂಟು ಮಾಡುತ್ತದೆ. ಒಂದುವೇಳೆ ಪ್ರೀತಿ ಹುಟ್ಟಿದರೆ ನರಕಪ್ರಾಪ್ತಿಯಾಗುತ್ತದೆ.

೨೫೬. ಈಗ ಆಕೆಯ ಸಮಾಗವು ಉಂಟಾದರೆ ಮರಣವು ವ್ಯರ್ಥವು. ಆದರೆ ಧರ್ಮಪತ್ನಿಯು ಸಾಯುತ್ತಾಳೆ. ಇಲ್ಲವೇ ತ್ಯಕ್ತಳಾಗುತ್ತಾಳೆ.

೨೫೭. ಇವೇ ಮೊದಲಾದ ಪಾಪಗಳು ಉಂಟಾಗುತ್ತವೆ. ಎಲ್ಲರಿಗೂ ಪ್ರಿಯವಾದ ಹಿತವಾದ ಮತ್ತೊಂದು ವಿಷಯವನ್ನು ಹೇಳುತ್ತೇನೆ.

೨೫೮. ರಾಮನ ಬಳಿಗೆ ಹೋಗಿ ನಮಸ್ಕರಿಸಿ ಸ್ತೋತ್ರಮಾಡಿ ವಿಜ್ಞಾಪಿಸಿಕೊ. ರಾಮ, ಮಹಾವೀರ, ಶರಣಾಗತವತ್ಸಲ, ಕ್ಷಮಿಸು ಎಂದು ಕೇಳಿಕೋ.

೨೫೯. ರಾಕ್ಷಸರೆಲ್ಲರೂ ಕ್ರೂರಿಗಳು. ನಾವಂತು ಮಹಾಪಾಪಿಗಳು. ಸೀತೆಯನ್ನು ಕದ್ದುತಂದ ದೋಷವನ್ನು ಬಿಟ್ಟು ನಮ್ಮನ್ನು ಮಕ್ಕಳೆಂದು ತಿಳಿ.

೨೬೦. ಎಲೈ ರಾಮನೇ, ನಾವು ನಿನ್ನ ಅಧೀನರು. ಕಾಪಾಡುವುದೋ ಕೊಲ್ಲುವುದೋ ನಿನ್ನ ಇಷ್ಟದಂತೆ ಮಾಡು. ಹೀಗೆಂದು ಹೇಳಿ ರಾಮನ ಮುಂದೆ ನಾವು ನಿಂತರೆ ಪೂರ್ಣಾಯುಸ್ಸುಳ್ಳವರಾಗಿ ಬಹುವಾಗಿ ರಾಜ್ಯವಾಳುವವರಾಗುತ್ತೇವೆ.

ಸ್ಥಿರಾಯುಷೋ ಭವಿಷ್ಯಾಮಃ ಸ್ಥಿರರಾಜ್ಯಾ ದಶಾನನ ।
ಅಥಾಹ ರಾವಣೋ ವಾಕ್ಯಮಹೋ ಸೋ ರಾಕ್ಷಸೋ ಭವಾನ್ ॥ ೨೬೧ ॥

ನ ಶೂರೋ ರಾಜ್ಯಧರ್ಮಂ ಚ ನ ಚ ಜಾನಾಸಿ ಶಾಶ್ವತಂ ।
ಪರನಾರೀಪರದ್ರವ್ಯಪರರಾಜ್ಯನಿಷೇವಯಾ ॥ ೨೬೨ ॥

ಶೂರಾಣಾಮುತ್ತಮೋ ಧರ್ಮೋ ನ ಷಂಡಾನಾಂ ಭವಾದೃಶಾಂ ।
ಶತ್ರುಪಕ್ಷಂ ಸಮಾಲಿಂಗ್ಯ ನಿರ್ಗಚ್ಛೇಚ್ಛಾ ಹಿ ಚೇನ್ನೃಪಂ ॥ ೨೬೩ ॥

ಅಥ ವಿಭೀಷಣೋ ಮಂದಿರಂ ಗತ್ವಾ ರಾಮಾಂತಿಕಂ ಗತ್ವಾ ತಂ ಶರಣಮಭಜತ್ ॥ ೨೬೪ ॥

ಅಥ ರಾವಣಃ ಪುರಾನ್ನಿರ್ಗತ್ಯ ರಾಮೇಣ ಲಕ್ಷ್ಮಣವಾನರೈ ರಾಕ್ಷಸಾ ಅಪಿ ಯುಯುಧೇ ॥ ೨೬೫ ॥

ಅಥ ರಾವಣಂ ಮಹಾಬಲಂ ಹಂತುಮಶಕ್ತೋ ರಾಮೋ ವಿಭೀಷಣಮುಖಮವಲೋಕ್ಯ ತದುಕ್ತಚಿಹ್ನಪದಂ ಬಾಣೇನ ನಿರ್ಭಿದ್ಯಾಮಾರಯತ್ ॥ ೨೬೬ ॥

---

೨೬೧-೨೬೩. ಆಗ ರಾವಣನು ವಿಭೀಷಣನನ್ನು ಕುರಿತು ನೀನು ರಾಕ್ಷಸನಲ್ಲ. ಶೂರನೂ ಅಲ್ಲ. ರಾಜ್ಯಧರ್ಮವು ನಿನಗೆ ಗೊತ್ತಿಲ್ಲ. ಪರರಹೆಂಡಿರು, ಪರರ ಹಣ, ಪರರ ರಾಜ್ಯ ಇವನ್ನು ಸೇವಿಸತಕ್ಕುದೇ ಶೂರರಿಗೆ ಉತ್ತಮವಾದ ಧರ್ಮವು. ನಪುಂಸಕರಾದ ನಿನ್ನಂತಹವರಿಗಲ್ಲ. ನೀನು ಶತ್ರುವಿನಲ್ಲಿ ಆಸೆಯುಳ್ಳವನಾಗಿದ್ದೀಯೆ ಇಷ್ಟವಿದ್ದರೆ ಅವನ ಹತ್ತಿರಕ್ಕೆ ಹೋಗು ಎಂದನು.

೨೬೪. ಅನಂತರ ವಿಭೀಷಣನು ಮನೆಗೆ ಹೋಗಿ ಅಲ್ಲಿಂದ ರಾಮನಬಳಿಗೆ ಹೋಗಿ ಆತನನ್ನು ಶರಣುಹೊಂದಿದನು.

೨೬೫. ಅನಂತರ ರಾವಣನು ಪಟ್ಟಣದಿಂದ ಹೊರಟು ರಾಮನೊಡನೆಯೂ, ರಾಕ್ಷಸರು ಲಕ್ಷ್ಮಣ ಕಪಿಗಳೊಡನೆಯೂ ಯುದ್ಧಮಾಡಿದರು.

೨೬೬. ಅನಂತರ ರಾಮನು ಮಹಾಬಲಿಷ್ಠನಾದ ರಾವಣನನ್ನು ಕೊಲ್ಲಲಾರದೆ ವಿಭೀಷಣನ ಮುಖವನ್ನು ನೋಡಿದನು. ಆಗ ಅವನು ಹೇಳಿದ ಗುರುತಿನಿಂದ ಬಾಣದಿಂದ ಹೊಡೆದು ಕೊಂದನು.

ಅಥ ಕುಂಭಕರ್ಣೋ ಮಹಾಗದಾಮಾದಾಯ ಸರ್ವಂ ನಿಷ್ಪಾದ್ಯ ವಾನರಾನನೇಕಶೋ ಭಕ್ಷಯಿತ್ವಾ ರಾಮೋತ್ತಮಾಂಗಂ ಗದಯಾಽಹನ್ ॥ ೨೬೭ ॥

ಅಥ ರಾಮೋ ನಿಶಿತಬಾಣಶತೇನ ತಮಹನ್ಮಾರ ಕುಂಭ ಕರ್ಣಃ ॥ ೨೬೮ ॥

ಅಥ ವಿಭೀಷಣೇನ ರಾವಣಾದೇಃ ಶ್ರಾದ್ಧಾದಿಕಂ ಕಾರಯಿತ್ವಾ ಶಿವಾಲಯಂ ತನ್ನಾಮ್ನಾ ಕಾರಯಿತ್ವಾ ತಮೇವ ಲಂಕಾರಾಜ್ಯೇ ವಿಭೀಷಣಮಭಿಷಿಚ್ಯ ಸೀತಾಮಗ್ನಿಪ್ರವೇಶಶುದ್ಧಾಮುಮಾ-ಮಹೇಶ್ವರಾಭ್ಯಾಂ ನಮಯಿತ್ವಾ ಪುರಹರೇಣ ದತ್ತಾಖಿಲಮೃತ-ಬಲಾಯುಷ್ಯಃ ಸುಪುಷ್ಪಕಮಾರುಹ್ಯ ಜಲಧಿಮುತ್ತೀರ್ಯ ಪಾರಾ-ವಾರತಟೇ ಸೇನಾಂ ಸಮವಸ್ಥಾಪ್ಯ ಶಿವಪ್ರತಿಷ್ಠಾಂ ತತ್ರ ಕೃತ್ವಾ ಮುನಿಭಿರ್ದೇವೈರಭ್ಯರ್ಚಿತೋಽಯೋಧ್ಯಾಮಗಮತ್ ॥ ೨೬೯ ॥

---

೨೬೭. ಅನಂತರ ಕುಂಭಕರ್ಣನು ದೊಡ್ಡಗದೆಯನ್ನು ತೆಗೆದುಕೊಂಡು ಎಲ್ಲರನ್ನೂ ಹೊಡೆಯುತ್ತ ಕಪಿಗಳನ್ನು ಒಂದೊಂದನ್ನಾಗಿ ತಿನ್ನುತ್ತಾ ರಾಮನಿಗೆ ತಲೆಯ ಮೇಲೆ ಗದೆಯಿಂದ ಹೊಡೆದನು.

೨೬೮. ರಾಮನು ಚೂಪಾದ ಬಾಣದಿಂದ ಹೊಡೆದು ಕುಂಭಕರ್ಣನನ್ನು ಕೊಂದನು.

೨೬೯. ಅನಂತರ ವಿಭೀಷಣನಿಂದ ರಾವಣನೇ ಮುಂತಾದವರಿಗೆ ತಿಥಿಗಳನ್ನು ಮಾಡಿಸಿ, ಅವನ ಹೆಸರಿನಿಂದ ಅಲ್ಲೊಂದು ಶಿವಲಿಂಗವನ್ನು ಸ್ಥಾಪಿಸಿ, ಅದಕ್ಕೆ ದೇವಸ್ಥಾನವನ್ನು ಕಟ್ಟಿಸಿ, ಲಂಕೆಯಲ್ಲಿ ಆ ವಿಭೀಷಣನಿಗೆ ಪಟ್ಟಕಟ್ಟಿ, ಅಗ್ನಿಪ್ರವೇಶದಿಂದ ಶುದ್ಧಳಾದ ಸೀತೆಯನ್ನು ಉಮಾಮಹೇಶ್ವರರಿಗೆ ನಮಸ್ಕಾರಮಾಡುವಂತೆ ಹೇಳಿ, ಈಶ್ವರನು ಸತ್ತಿರತಕ್ಕ ತನ್ನ ಕಡೆಯುವರೆಲ್ಲರನ್ನೂ ಬದುಕಿಸಲು ರಾಮನು ಪುಷ್ಪಕವಿಮಾನವನ್ನೇರಿ ಸಮುದ್ರವನ್ನು ದಾಟಿ, ಅದರ ದಡದಲ್ಲಿ ಸೇನೆಯನ್ನು ನಿಲ್ಲಿಸಿ, ಅಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠೆಮಾಡಿ ದೇವತೆಗಳಿಂದಲೂ, ಋಷಿಗಳಿಂದಲೂ ಪೂಜಿತನಾಗಿ ಅಯೋಧ್ಯೆಗೆ ಹೋದನು.

**ಅಥ ಭರತಾದಿಸಮುಪೇತೋ ನಾಗರೈರ್ವಸಿಷ್ಠೇನ ಮುನಿಭಿ
ಶ್ಚಾಭ್ಯರ್ಚಿತಃ ಸ್ವಗೃಹಮುಗಮತ್ ॥ ೨೭೦ ॥**

**ಆತ್ಮನಾಽಽಗತಾನಿಂದ್ರಾದಿದೇವಾನಾಸನಾದಿನಾಭ್ಯರ್ಚ್ಯ ವಾನ-
ರಾನ್ಸಂಪೂಜ್ಯ ಮುಕ್ತಜಟೋಽಭಿಷಿಕ್ತೋ ರಾಜ್ಯೇ ॥ ೨೭೧ ॥**

**ರಾವಣವಧಹರ್ಷಿತಾ ದೇವಾ ರಾಮಮೂಚುಃ ॥ ೨೭೨ ॥**

**ತ್ವಯಾತ್ಮರಾಜ್ಯೇ ಸ್ಥಾಪಿತಾ ವಯಂ ನಸ್ಸರ್ವದಾ ಪರಿಪಾಲಯ
ತ್ವಮಾದಿನಾರಾಯಣೋ ದೇವೋ ನಿಖಿಲದುಷ್ಟನಿಗ್ರಹಾರ್ಥ-
ಮವತೀರ್ಣೋ ರಾವಣಂ ಸಬಾನ್ಧವಂ ಹತ್ವಾ ಲೋಕತ್ರಯ
ರಕ್ಷಕೋಽಸಿ ಶ್ರಿಯಾ ಸಹ ಸುಖೀ ಭವೇತ್ಯುದೀರ್ಯ ಸ್ವರ್ಗಂ ಗತಾಃ
॥ ೨೭೩ ॥**

---

೨೭೦. ಅನಂತರ ಭರತನೇ ಮುಂತಾದವರಿಂದ ಕೂಡಿಕೊಂಡು ಪಟ್ಟಣಿಗರಿಂದಲೂ, ವಸಿಷ್ಠನಿಂದಲೂ, ಮುನಿಗಳಿಂದಲೂ, ಗೌರವಿಸಲ್ಪಟ್ಟು ತನ್ನ ಮನೆಗೆ ಹೋದನು.

೨೭೧. ತನ್ನೊಡನೆ ಬಂದ ಇಂದ್ರನೇ ಮೊದಲಾದ ದೇವತೆಗಳನ್ನೂ ಆಸನ ಉಪಚಾರಗಳಿಂದ ಗೌರವಿಸಿ, ಕಪಿಗಳನ್ನು ಯಥಾಯೋಗ್ಯವಾಗಿ ಪುರಸ್ಕರಿಸಿ, ಜಟೆಯನ್ನು ತೆಗೆದುಹಾಕಿ ರಾಜ್ಯಾಭಿಷಿಕ್ತನಾದನು.

೨೭೨. ರಾವಣನನ್ನು ಕೊಂದುದರಿಂದ ಸಂತೋಷಪಟ್ಟ ದೇವತೆಗಳು ರಾಮನನ್ನು ಕುರಿತು ಇಂತೆಂದರು.

೨೭೩. ನಿನ್ನಿಂದ ನಾವು ನಮ್ಮ ರಾಜ್ಯಗಳಲ್ಲಿ ನಿಂತೆವು. ನಮ್ಮನ್ನು ಯಾವಾಗಲೂ ಕಾಪಾಡು. ನೀನು ಆದಿದೇವನಾದ ನಾರಾಯಣನು. ದುಷ್ಟರನ್ನೆಲ್ಲಾ ನಾಶ ಮಾಡಲು ಅವತರಿಸಿದ್ದೀಯೆ. ರಾವಣನನ್ನೂ ಅವನ ಕಡೆಯವರನ್ನೂ ಕೊಂದು ಮೂರು ಲೋಕವನ್ನೂ ಕಾಪಾಡಿದ್ದೀಯೆ. ಲಕ್ಷ್ಮಿಯೊಡನೆ ಸುಖವಾಗಿರು. ಎಂದು ಹೇಳಿ ಸ್ವರ್ಗಕ್ಕೆ ಹೋದರು.

ಅಥಾಯೋಧ್ಯಾವಾಸಿನೋ ರಾಮಂ ಪ್ರಹರ್ಷಿತಾ ಊಚುಃ
॥ ೨೭೪ ॥

ಹತ್ವಾ ಶತ್ರೂನ್ಸಮಾಯಾತೋ ದಿಷ್ಟ್ಯಾ ಪ್ರಾಪ್ತೋಽಸಿ ವೈ ಶಿವಂ ।
ದಿಷ್ಟ್ಯಾ ತ್ವಂ ರಾಜಸೇ ರಾಮ ದಿಷ್ಟ್ಯಾ ಪಾಲಯಸೇ ಪ್ರಜಾಃ ॥ ೨೭೫ ॥

ತ್ವಯಾ ಯಜ್ಞಾಃ ಕರಿಷ್ಯಂತೇ ತ್ವಯಾ ಧರ್ಮೋ ವಿವರ್ಧತೇ ।
ಇತಿ ಪೌರವಚಶ್ಶ್ರುತ್ವಾ ರಾಮೋ ರಾಜೀವಲೋಚನಃ ॥ ೨೭೬ ॥

ವಸ್ತ್ರಾದಿಭಿರಥೋ ಸರ್ವಾನ್ನಾಗರಾನ್ಸಮಪೂಜಯತ್ ।
ಮುನೀನುವಾಚ ಧರ್ಮಾತ್ಮಾ ಪೂಜಯಿತ್ವಾಖಿಲೈರ್ಜನೈಃ ॥ ೨೭೭ ॥

ಕಚ್ಚಿತ್ತಪಸ್ಸಮೃದ್ಧಿಂ ವಃ ಕಚ್ಚಿದ್ಯಜ್ಞಸ್ಸ್ವನುಷ್ಠಿತಃ ।
ಕಚ್ಚಿತ್ಸ್ವದಾರನಿರತಾಃ ಕಚ್ಚಿದೀಶೋಽಭಿಪೂಜ್ಯತೇ ॥ ೨೭೮ ॥

ಕಚ್ಚಿತ್ಸಪ್ರಜಸೋ ಭಾರ್ಯಾಃ ಕಚ್ಚಿತ್ಸರ್ವಂ ಸುಖೋತ್ತರಂ ॥ ೨೭೯ ॥

---

೨೭೪. ಅಯೋಧ್ಯೆಯಲ್ಲಿರುವವರು ಸಂತೋಷಗೊಂಡು ರಾಮನಿಗೆ ಇಂತೆಂದರು.

೨೭೫. ಎಲೈ ರಾಮನೇ, ನೀನು ಶತ್ರುಗಳನ್ನು ಕೊಂದು ಬಂದುದು ಸಂತೋಷವು. ನಿನಗೆ ಒಳ್ಳೆಯದಾದುದು ಬಹುಸಂತೋಷವು. ಈ ರೀತಿ ಸುಖವಾಗಿರುವುದೂ ಸಂತೋಷ. ನೀನು ಪ್ರಜೆಗಳನ್ನು ಪಾಲಿಸುತ್ತಿರುವುದೂ ಸಂತೋಷ.

೨೭೬. ನೀನು ಯಜ್ಞಗಳನ್ನು ಮಾಡುತ್ತೀಯೆ. ನೀನು ಧರ್ಮವನ್ನು ವೃದ್ಧಿ ಹೊಂದಿಸುತ್ತೀಯೆ. ಹೀಗೆಂಬ ಪಟ್ಟಣಿಗರ ಮಾತನ್ನು ಕೇಳಿ ಕಮಲಲೋಚನನಾದ ರಾಮನು ಅವರೆಲ್ಲರಿಗೂ ಬಟ್ಟೆಬರೆಗಳನ್ನು ಕೊಟ್ಟು ಗೌರವಿಸಿದನು.

೨೭೭-೨೭೯. ಹೀಗೆ ಎಲ್ಲಾ ಜನಗಳಿಂದಲೂ ಗೌರವವನ್ನು ಪಡೆದ ರಾಮನು ಋಷಿಗಳನ್ನು ಕುರಿತು, ನಿಮ್ಮ ತಪಸ್ಸು ವೃದ್ಧಿಹೊಂದುತ್ತಿರುವುದೇ? ಯಜ್ಞಗಳೆಲ್ಲವೂ ಸರಿಯಾಗಿ ನಡೆಯುತ್ತಿವೆಯೇ? ನಿಮ್ಮ ನಿಮ್ಮ ಹೆಂಡಿರಲ್ಲೇ ನಿರತರಾಗಿರುವಿರಾ? ಈಶ್ವರನನ್ನು ಪೂಜಿಸುತ್ತಿರುವಿರಾ? ನಿಮ್ಮ ಹೆಂಡಿರಲ್ಲಿ ಒಳ್ಳೆಯಮಕ್ಕಳು ಹುಟ್ಟಿರುವರೆ? ನಿಮಗೆಲ್ಲವೂ ಮುಂದು ಮುಂದಕ್ಕೂ ಒಳ್ಳೆಯದಾಗುವಂತೆ ಕಾಣುತ್ತಿವೆಯೆ? ಎಂದು ಕೇಳಿದನು.

॥ ಮುನಯ ಊಚುಃ ॥

ತ್ವಯಿ ರಾಜನಿ ಕಾಕುತ್ಸ್ಥ ಸರ್ವಂ ಸ್ವಸ್ಥಂ ತಪಸ್ವಿನಾಂ ।
ಗಚ್ಛಾಮಹೇ ಪದಮಿತಃ ಕಿಂ ವಾ ತ್ವಂ ಮನ್ಯಸೇ ನೃಪ ॥ ೨೮೦ ॥

॥ ಶ್ರೀರಾಮ ಉವಾಚ ॥

ಯಸ್ಯ ವಿಪ್ರಾಃ ಪ್ರಸೀದಂತಿ ತಸ್ಯ ಶಂಭುಃ ಪ್ರಸೀದತಿ ।
ಯಸ್ಯ ಪ್ರಸೀದತೀಶಾನಸ್ತಸ್ಯ ಭದ್ರಂ ಭವಿಷ್ಯತಿ ॥ ೨೮೧ ॥

ತತ್ಕೃತ್ವಾ ಭೋಜನಮಿಹ ಗನ್ತುಮರ್ಹಾ ಅನಂತರಂ ।
ತಥೇತ್ಯುಕ್ತ್ವಾ ಮುನಿಗಣಾಃ ಕೃತ್ವಾ ಭೋಜನಮುತ್ತಮಂ ॥ ೨೮೨ ॥

ರಾಮೋಽಪಿ ಪರಮಪ್ರೀತಃ ಸಭಾರ್ಯಶ್ಚ ಸಹಾನುಜಃ ॥ ೨೮೩ ॥

ಅಕಂಟಕಂ ಸ ಕೃತವಾನ್ರಾಜ್ಯಂ ಸರ್ವಜನಪ್ರಿಯಃ ।
ಶೃಣೋತ್ಯೇತದುಪಾಖ್ಯಾನಂ ಯಃ ಕಶ್ಚಿದಪಿ ಪಾತಕೀ ॥ ೨೮೪ ॥

---

೨೮೦. ಋಷಿಗಳು ಹೇಳಿದರು:—ಎಲೈ ಕಾಕುತ್ಸ್ಥನೇ, ನೀನು ರಾಜನಾಗಿರುವುದರಿಂದ ಎಲ್ಲವೂ ಸರಿಯಾಗಿವೆ. ನಮ್ಮ ಆಶ್ರಮಗಳಿಗೆ ನಾವು ಹೋಗುತ್ತೇವೆ. ಹೋಗಿ ಬರೋಣವೇ ನೀನು ಏನನ್ನುವಿಯೋ? ಎಂದರು

೨೮೧. ರಾಮನು ಹೇಳಿದನು:—ಬ್ರಾಹ್ಮಣರು ಪ್ರಸನ್ನರಾದರೆ ಶಿವನು ಅವನಿಗೆ ಪ್ರಸನ್ನನಾಗುತ್ತಾನೆ ಅವನಿಗೆ ಐಶ್ವರ್ಯಗಳೆಲ್ಲವೂ ಬರುತ್ತವೆ. ಅವನಿಗೆ ಮಂಗಳವೂ ಆಗುತ್ತವೆ.

೨೮೨. ಆದ್ದರಿಂದ ಊಟಮಾಡಿಕೊಂಡು ಆ ಮೇಲೆ ಹೋಗಿರಿ ಎನ್ನಲು ಅವರೆಲ್ಲರೂ ಹಾಗೇ ಆಗಲೆಂದು ಮೃಷ್ಟಾನ್ನವನ್ನು ಊಟಮಾಡಿಕೊಂಡು ಆ ರಾಮನನ್ನು ಆಶೀರ್ವದಿಸಿ ಸಂತೋಷಪಟ್ಟುಕೊಂಡು ತಮ್ಮ ಆಶ್ರಮಕ್ಕೆ ಹೋದರು.

೨೮೩. ರಾಮನು ಸುಖವಾಗಿ ಹೆಂಡತಿಯೊಡನೆಯೂ, ತಮ್ಮಂದಿರೊಡನೆಯೂ ರಾಜ್ಯದಲ್ಲಿ ಶತ್ರುಗಳ ಸುಳುವಿಲ್ಲದಂತೆ ಮಾಡಿ ಎಲ್ಲರಿಗೂ ಪ್ರಿಯನಾಗಿದ್ದನು.

೨೮೪. ಪಾಪಿಯಾದವನು ಯಾವನಾದರೂ ಈ ಕಥೆಯನ್ನು ಕೇಳಿದರೆ ಅವನಿಗೆ ಎಲ್ಲ ಪಾಪಗಳೂ ಹೋಗಿ ಪರಬ್ರಹ್ಮನಲ್ಲಿ ಐಕ್ಯನಾಗುತ್ತಾನೆ.

**ಸರ್ವಪಾಪವಿನಿರ್ಮುಕ್ತಃ ಪರಂ ಬ್ರಹ್ಮಾಧಿಗಚ್ಛತಿ ।**
**ನ ದುರ್ಗತಿರ್ಭವೇತ್ತಸ್ಯ ಯಶ್ಚೇದಂ ಸ್ಮರತೇ ನರಃ ।**
**ಯಶ್ಚಾಪಿಕೀರ್ತಯೇತ್ತಸ್ಯ ಹ್ಯೇವಮೇತದುದೀರಿತಂ ॥ ೨೮೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ ಪುರಾಕಲ್ಪೀಯರಾಮಾಯಣಕಥನಂ ನಾಮ ದ್ವಾದಶಾಧಿಕಶತತಮೋಽಧ್ಯಾಯಃ**



---

೨೮೫. ಇದನ್ನು ಕೇಳಿದರೆ ಅವನಿಗೆ ನರಕಪ್ರಾಪ್ತಿಯಾಗುವುದಿಲ್ಲ. ಇದನ್ನು ಹೇಳಿದವನೂ ನರಕವನ್ನು ಹೊಂದುವುದಿಲ್ಲ ಈರೀತಿ ಹೇಳಲ್ಪಟ್ಟಿದೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ, ಹಿಂದಿನ ಕಲ್ಪದ ರಾಮಾಯಣಕಥನವೆಂಬ ನೂರ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ತ್ರಯೋದಶಾಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಭಾರದ್ವಾಜಗೃಹೇ ಭುಕ್ತ್ವಾ ರಾಮಚಂದ್ರಃ ಪ್ರಸನ್ನಧೀಃ ।
ಮುನೀಂದ್ರವಿಷ್ಣುಸಹಿತೋ ವಾನರರ್ಕ್ಷಸಮನ್ವಿತಃ ॥ ೧ ॥

ಮೇಘಚ್ಛನ್ನೇ ತಥಾಕಾಶೇ ಮಂದಂ ಚರತಿ ಮಾರುತೇ ।
ತದ್ವನಾಭ್ಯಂತರೇ ಕ್ವಾಪಿ ಸುದೇವಗೃಹಮುತ್ತಮಂ ॥ ೨ ॥

ಅಷ್ಟಾಪದಸ್ತಂಭಯುತಂ ಹೇಮಪಟ್ಟಿಕಕಲ್ಪಿತಂ ।
ಮಣಿಮೌಕ್ತಿಕಸಂಯುಕ್ತಂ ರಾಜತೈಃ ಕಲಶೈರ್ಯುತಂ ॥ ೩ ॥

---

## ನೂರಹದಿಮೂರನೆಯ ಅಧ್ಯಾಯವು

೧-೨. ಸೂತನು ಹೇಳಿದನು :—ರಾಮನು, ಮುನಿಗಳು, ವಿಷ್ಣು. ಕಪಿ. ಕರಡಿಗಳೊಡನೆ ಆಭರದ್ವಾಜನ ಮನೆಯಲ್ಲಿ ಊಟಮಾಡಿ, ಆಕಾಶವು ಮೇಘದಿಂದ ಕೂಡಿಕೊಂಡು ಗಾಳಿಯು ಮೆತ್ತಗೆ ಬೀಸುತ್ತಿರಲು ಆ ವನದ ಮಧ್ಯದಲ್ಲಿದ್ದ ಒಂದು ಉತ್ತಮವಾದ ಮನೆಯನ್ನು ಹೊಂದಿದನು.

೩. ಆ ಮನೆಯು ಚಿನ್ನದಕಂಭಗಳಿಂದ ಕೂಡಿದ್ದಿತು. ಚಿನ್ನದ ಪಟ್ಟಿಗಳನ್ನು ಹಾಕಿದ್ದರು. ಮುತ್ತಿನ ಮಣಿಗಳಿಂದಲೂ ಬೆಳ್ಳಿಯ ಕಳಶದಿಂದಲೂ ಕೂಡಿದ್ದಿತು.

ಪಟೀರಚಂದ್ರಕಸ್ತೂರೀಕುಂಕುಮೈಸ್ಸುರಭೀಕೃತಂ ।
ಕರ್ದಮೈರ್ಜಾಲಕಯುತಂ ಶಕಲೋಪರಿಸಂವೃತಿ ॥ ೪ ॥

ಚಂದ್ರಜ್ಯೋತ್ಸ್ನಾಗಮುಂ ಸೂರ್ಯಾನಿರೀಕ್ಷ್ಯಮಧ್ಯಭಿತ್ತಿಕಂ ।
ಗೃಹಾನ್ತರ್ಭೂತಲಂ ಕೃತ್ಸ್ನಂ ಚಂದ್ರಪುಷ್ಪರಸೋಕ್ಷಿತಂ ॥ ೫ ॥

ದಿಗುದೀಚೀ ತಥಾ ಕೃತ್ಸ್ನಾ ಭಿತ್ತಿಕಲ್ಪನವರ್ಜಿತಾ ।
ಸ್ತಂಭೇ ಸ್ತಂಭೇ ಚಿತ್ರಕಾರೀಸ್ವಪಾದೀಪರಿಕಲ್ಪಿತಂ ॥ ೬ ॥

ಶತಹಸ್ತಾಂಗಣಂ ತಸ್ಯ ಸ್ಫಟಿಕೋಪರಿಕಲ್ಪಿತಂ ।
ಗೃಹಾಂಗಣಾಧಿಕಚ್ಛಾಯಃ ಪಾರಿಜಾತಮಹೀರುಹಃ ॥ ೭ ॥

ಕೃತ್ಸ್ನಪ್ರಾವೃತಿಕಂ ತತ್ರ ನಿಬಿಡಂ ಕದಳೀವನಂ ।
ಕದಳೀವನಸಂಯುಕ್ತಂ ಕೇತಕೀವನಸಂವೃತಂ ॥ ೮ ॥

---

೪. ಚಂದನ, ಪಚ್ಚಕರ್ಪೂರ, ಕಸ್ತೂರಿ, ಕುಂಕುಮಕೇಸರಿಗಳ ಗಂಧದಿಂದ ವಾಸನೆಯಾಗಿ ಮಾಡಲ್ಪಟ್ಟಿದ್ದಿತು. ಜಾಲಂಧ್ರಗಳು ನೇತಾಡುತ್ತಿದ್ದುವು. ಅವುಗಳ ಮೇಲುಗಡೆ ಹೊದ್ದಿಕೆಗಳಿದ್ದುವು.

೫. ಚಂದ್ರನ ಬೆಳದಿಂಗಳು ಬರುತ್ತಿದ್ದಿತು. ಸೂರ್ಯನು ಕಾಣದಂತೆ ಮಧ್ಯಪಲ್ಲಿಗೋಡೆಯಿದ್ದಿತು. ಎಂದರೆ ಬಿಸಿಲು ಬಾರದಂತಿದ್ದಿತು. ಮನೆಯೊಳಗಿರುವ ನೆಲವೆಲ್ಲವನ್ನು ಪಚ್ಚಕರ್ಪೂರದಿಂದಲೂ ಸಹ ಚುಮುಕಿಸಿದ್ದರು.

೬. ಉತ್ತರ ದಿಕ್ಕಿಗೆ ಗೋಡೆಯನ್ನೇ ಹಾಕಿರಲಿಲ್ಲ. ಕಂಬಕಂಬಕ್ಕೂ ಸುಣ್ಣಪಾದದ ಕಲ್ಲುಗಳನ್ನು ಅನೇಕಬಗೆಯಲ್ಲಿ ಚಿತ್ರಿಸಿ ಇಟ್ಟಿದ್ದರು.

೭. ಆ ಮನೆಯೊಳಗೆ ನೂರು ಮೊಳಗಳಷ್ಟು ಚಚ್ಚೌಕದಗಲವನ್ನು ಸ್ಫಟಿಕ ಮಣಿಯಿಂದ ಮೆಟ್ಟಿಸಿದ್ದರು. ಮನೆಯ ಅಂಗಳದಲ್ಲಿ ಬಹುನೆರಳುಳ್ಳ ಪಾರಿಜಾತ ಮರವಿದ್ದಿತು

೮. ಮನೆಯ ಸುತ್ತಲೂ ಬೇಲಿಯಂತೆ ದಟ್ಟವಾಗಿ ಬಾಳೆಯಮರಗಳಿದ್ದುವು. ಆ ಬಾಳೆಯ ಜೊತೆಯಲ್ಲಿ ದಟ್ಟವಾದ ತಾಳೆಯಗಿಡಗಳೂ ಇದ್ದುವು

**ಮಯೂರನಾದಬಹುಳಂ ಮಂಜುಕೂಜನ್ಮಧುವ್ರತಂ ।**
**ಪಾರಾವತಗಣಧ್ವಾನಂ ನಾನೋಪವನಶೋಭಿತಂ ॥ ೯ ॥**

**ಪ್ರಾಸಾದಶತಸಂಬಾಧಂ ಮತ್ತಕೋಕಿಲನಾದಿತಂ ।**
**ಶಾಖಾಲಂಬಮಹಾರತ್ನಶೋಭಿತಾನೇಕಪಾದಪಂ ॥ ೧೦ ॥**

**ಕಿನ್ನರೀವನಿತಾಗೀತನಾದಪೂರಿತದಿಙ್ಮುಖಂ ।**
**ಅನೇಕಾರಾಮಸುಭಗಂ ಗೌತಮೀತಟಮುತ್ತಮಂ ॥ ೧೧ ॥**

**ಭಾರದ್ವಾಜಗೃಹಂ ಪುಣ್ಯಮನನ್ತಗುಣಸೇವಿತಂ ।**
**ರತಿಕಂದರ್ಪಸಂಕಾಶದಾಸೀದಾಸಶತಾನ್ವಿತಂ ॥ ೧೨ ॥**

**ನಾನೋಪಕರಣೋಪೇತಂ ಭಾರದ್ವಾಜಗೃಹಂ ಶುಭಂ ।**
**ತಸ್ಯ ಚಾನ್ತರ್ಗತಸ್ಸೌಧಸ್ತತ್ರಾನ್ತರ್ಗೃಹವಾಟಿಕಾಃ ॥ ೧೩ ॥**

---

೯. ಅಲ್ಲಿ ನವಿಲುಗಳು ಕೇಕೆಹಾಕುತ್ತಿದ್ದುವು. ದುಂಬಿಗಳು ಝೇಂಕರಿಸುತ್ತಿದ್ದುವು. ಪಾರಿವಾಳದ ಹಕ್ಕಿಗಳು ಧ್ವನಿಮಾಡುತ್ತಿದ್ದುವು. ಬಗೆಬಗೆಯಾದ ಉಪವನಗಳಿದ್ದುವು.

೧೦. ಅನೇಕವಾದ ಮಹಡಿಗಳಿದ್ದುವು ಕೋಕಿಲೆಗಳು ಧ್ವನಿಮಾಡುತ್ತಿದ್ದುವು. ಕೊಂಬೆಗಳಲ್ಲಿ ರತ್ನಗಳನ್ನು ಪ್ರಕಾಶಪಡಿಸುತ್ತ ಅನೇಕ ಮರಗಳಿದ್ದುವು.

೧೧. ಕಿನ್ನರಸ್ತ್ರೀಯರ ಹಾಡುಗಳಿಂದ ಧ್ವನಿತವಾಗಿದ್ದಿತು. ಬಹುವಾದ ತೋಟಗಳಿದ್ದುವು. ಇಂತಹದಾಗಿರುವ ಗೌತಮೀನದಿಯ ದಡವಿದ್ದಿತು.

೧೨. ಅಲ್ಲಿ ಭರದ್ವಾಜರಮನೆಯಿದ್ದಿತು. ಅದು ಬಹುಗುಣಗಳಿಂದ ಕೂಡಿದ್ದಿತು. ರತೀದೇವಿ ಮನ್ಮಥರಂತಿರುವ ಅನೇಕಜನ ದಾಸದಾಸಿಯರಿಂದ ಕೂಡಿದ್ದಿತು.

೧೩. ಅನೇಕವಾದ ಉಪಯುಕ್ತವಾದ ಸಾಮಾನುಗಳಿಂದ ಆ ಮನೆಯು ಕೂಡಿದ್ದಿತು. ಮಂಗಳವಾಗಿದ್ದಿತು. ಆ ಮನೆಯ ಒಳಗೂ, ಒಂದು ಮಹಡಿಮನೆ ಅದರೊಳಗೆ ಸಣ್ಣ ಸಣ್ಣ ಉದ್ಯಾನಗಳಿದ್ದುವು.

ಅಷ್ಟೌ ತನ್ಮಧ್ಯತೋಽಹ್ಯೇಕಂ ಗೃಹಂ ಪರಮಶೋಭನಂ ।
ಚತುರ್ದಿಕ್ಷು ಮಹಾದೇವಗೃಹಪ್ರಸಾದಶೋಭಿತಂ ॥ ೧೪ ॥

ಪ್ರತಿದೇವಗೃಹಂ ಶ್ಯಾಮಾತೌರ್ಯತ್ರಿಕಸುಶೋಭಿತಂ ।
ಸ್ವರ್ಗಸ್ಥಿತವರಸ್ತ್ರೀಣಾಂ ವಿಶ್ರಾಮಾಯೈವ ಕಲ್ಪಿತಂ ॥ ೧೫ ॥

ಭಾರದ್ವಾಜಗೃಹಾದ್ರಾಮೋ ನಿರ್ಗತ್ಯಾಶೇಷಸಂಯುತಃ ।
ತಸ್ಯೈವ ಚ ಮಹಾಗೇಹಂ ವನಮಧ್ಯಗತಂ ತ್ವಗಾತ್ ॥ ೧೬ ॥

ತದಂತರಾಚ್ಛಾದಿತಕಂಬಳಂ ತದಾ
ಪೃಥಕ್ಪೃಥಗ್ವಸ್ತ್ರಾಸನಸಂಯುತಂ ಚ ।
ಸಿಂಹಾಸನಂ ಮಧ್ಯಗತಂ ತಥೈಕಂ
ಮುನ್ಯಾಸನಾನೇಕಗತಂ ವಿವೇಶ ॥ ೧೭ ॥

ಪೌರಾಣಿಕಸ್ಯಾಸುಪಮಾಸನಾಂತರಂ
ಭೂಪಾಲಹರ್ಯಕ್ಷವರಾಸನಂ ಚ ।

---

೧೪. ಅಲ್ಲಿ ಎಂಟು ಮನೆಗಳಿದ್ದುವು. ಅವುಗಳಲ್ಲೊಂದು ಬಹುಚೆನ್ನಾಗಿದ್ದಿತು. ಆ ಮನೆಗೆ ನಾಲ್ಕು ಕಡೆಯಲ್ಲಿಯೂ ಶಿವಗೃಹಗಳಿದ್ದುವು.

೧೫. ಒಂದೊಂದು ದೇವರ ಮನೆಯಲ್ಲಿಯೂ ಯುವತಿಯರ ನೃತ್ತಗೀತ ವಾದ್ಯಗಳು ನಡೆಯುತ್ತಿದ್ದುವು. ಇದು ಸ್ವರ್ಗದಲ್ಲಿರುವ ಅಪ್ಸರಸ್ತ್ರೀಯರಿಗೆ ವಿಶ್ರಾಂತಿಗೆ ಕಲ್ಪಿಸಿದುದಾಗಿತ್ತು.

೧೬. ಇಲ್ಲಿರುವ ಭರದ್ವಾಜನ ಮನೆಯನ್ನು ಬಿಟ್ಟು ರಾಮನು ಎಲ್ಲರೊಡನೆಯೂ ಆ ಭರದ್ವಾಜನದೇ ಆಗಿರುವ ಕಾಡಿನ ಮಧ್ಯದ ಮನೆಯನ್ನು ಹೊಂದಿದನು.

೧೭. ಆ ಮನೆಯ ಮಧ್ಯದಲ್ಲಿ ರತ್ನಕಂಬಳಿಯನ್ನು ಹಾಸಿದ್ದಿತು. ಅಲ್ಲದೆ ಬೇರೆ ಬೇರೆಯಾಗಿ ಒಟ್ಟಿಯ ಆಸನಗಳನ್ನು ಹಾಕಿದ್ದರು. ಅದರ ಮಧ್ಯದಲ್ಲಿ ಒಂದು ಸಿಂಹಾಸನ ವಿದ್ದಿತು. ಪಕ್ಕದಲ್ಲಿ ಮುನಿಗಳ ಅನೇಕ ಆಸನಗಳಿದ್ದುವು. ಅಲ್ಲಿಗೆ ಹೋದನು.

೧೮-೧೯. ಉತ್ತಮವಾದ ಆಸನವನ್ನು ಪೌರಾಣಿಕನಿಗೆ ಹಾಕಿ, ಅದರ ಬಳಿ ಯಲ್ಲಿಯೇ ರಾಜನಾದ ರಾಮ ವಿಷ್ಣು ಕಪಿ ಕರಡಿಗಳಿಗೆ ಉತ್ತಮವಾದ ಆಸನವನ್ನು

ಪೌರಾಣಿಕಂ ಪೂರ್ವಮಥೋಪವೇಶ್ಯ
ತತೋ ವಸಿಷ್ಠಂ ಮುನಿಪುಂಗವಾಂಶ್ಚ ॥ ೧೮ ॥

ನಾರಾಯಣಂ ಭೂಮಿಯತೀನ್ಕಪೀಂಶ್ಚ
ನೀಚಾಸನಂ ಚ ಸ್ವಯಮಾಸಸಾದ ।
ಮೇಘಾವೃತಂ ವ್ಯೋಮ ದಿಶಃ ಪ್ರಸನ್ನಾಃ
ಸಶಿಷ್ಯಮುರ್ವೀತಲಮುಪ್ತಬೀಜಂ ॥ ೧೯ ॥

ತದಂಗಣಂ ನೋಷ್ಣಮಹೋ ನ ಶೀತಳಂ
ಸಂತಾನಪುಷ್ಪಂ ಮದಪುಷ್ಪಗಂಧಿ ।
ಶಂಭುಂ ವಿಲೋಕ್ಯಾಥ ವಚೋ ಬಭಾಷೇ
ರಾಮಃ ಕಥಾಂ ಕೀರ್ತಯ ಶಂಕರಸ್ಯ ॥ ೨೦ ॥

ತೃಪ್ತಿರ್ನ ಜಾತಾ ಮುನಿವರ್ಯ ಶೃಣ್ವತೋ
ಮಾಹೇಶಮಾಖ್ಯಾನಮಘೌಘನಾಶನಂ ।
ಚಕಾರ ಕಿಂ ವಾ ಸನು ಗೌತಮಾಶ್ರಮೇ
ಮಹೇಶ್ವರೋ ದೇವಗಣಾಧಿಸಂವೃತಃ ॥ ೨೧ ॥

---

ಹಾಕಿದ್ದರು. ಮೊದಲು ಪೌರಾಣಿಕನನ್ನು ಕೂರಿಸಿ ಅನಂತರ ವಸಿಷ್ಠ ಉಳಿದ ಋಷಿಗಳು ಇವರನ್ನು ಕೂರಿಸಿದರು. ನಾರಾಯಣನನ್ನೂ ಭೂಲೋಕದ ಯತಿಗಳನ್ನೂ ಕಪಿಗಳನ್ನೂ ಕೂರಿಸಿದರು ಕೆಳಗಿರುವ ಆಸನದಲ್ಲಿ ರಾಮನು ಕುಳಿತುಕೊಂಡನು. ಅಂತರಿಕ್ಷವು ಮೇಘದಿಂದ ಮುಚ್ಚಲ್ಪಟ್ಟಿದ್ದಿತು. ದಿಕ್ಕುಗಳು ನಿಷ್ಕಲ್ಮಷವಾಗಿದ್ದುವು. ಭೂಮಿಯು ಶಿಷ್ಯರಿಂದ ಕೂಡಿದ್ದುದಲ್ಲದೆ ಬೀಜವನ್ನು ಬಿತ್ತಿದ್ದರು.

೨೦. ಆ ಮನೆಯ ಅಂಗಳವು ಹೆಚ್ಚು ಉಷ್ಣವಾಗಿಯೂ, ಹೆಚ್ಚು ಶೀತವಾಗಿಯೂ ಇಲ್ಲದೆ ಇದ್ದಿತು. ಅಲ್ಲಿಯೇ ಸುಗಂಧಪುಷ್ಪ ಕಲ್ಪವೃಕ್ಷವಿದ್ದಿತು. ಆಗ ರಾಮನು ಶಂಭುವನ್ನು ನೋಡಿ ಶಂಕರನ ಕಥೆಯನ್ನು ಹೇಳು ಎಂದನು.

೨೧. ಪಾಪಹಾರಕವಾದ ಈಶ್ವರನ ಕಥೆಯನ್ನು ಕೇಳುತ್ತಿದ್ದರೆ ತೃಪ್ತಿಯೇ ಉಂಟಾಗುವುದಿಲ್ಲ. ಆ ಶಂಕರನು ಗೌತಮಾಶ್ರಮದಲ್ಲಿ ದೇವತೆಗಳೊಂದಿಗೆ ಏನು ಮಾಡಿದನು? ಹೇಳು

॥ ಶಿವ ಉವಾಚ ॥

ಮಹಾವಿಪಂಚೀಮವಲಂಬ್ಯ ನಿಶ್ಚಿತಃ
ಸ ವಾಯುಸೂನುಃ ಶಿವಮನ್ವಪೃಚ್ಛತ ।
ನ್ಯಾಯಾರ್ಜಿತೈರೇವ ಹಿ ಪೂಜನೇ ವಿಭೋಃ
ಕೀದೃಗ್ಭವೇಚ್ಛಾನಯುಜ್ಯೈಃ ಫಲಂ ವದ ॥ ೨೨ ॥

ಚೌರ್ಯೈರಥೋ ಕಿಂ ಫಲಮರ್ಪಿತಾರ್ಪಣೇ
ಉಪಾಹತದ್ರವ್ಯಸಮರ್ಪಣೇನ ।
ಏಕೈಕಶೋ ಮೇ ಭಗವನ್ವದೇಶ
ಪ್ರಶ್ನೋತ್ತರಂ ಕಿಂ ಕಥಯಾಶು ಶಂಭೋ ॥ ೨೩ ॥

ಅಥೇಶ್ವರೋ ವಾನರಮಾಬಭಾಷೇ
ವದಾಮಿ ಸರ್ವಂ ತವ ಧ್ಯಾನತಃ ಶೃಣು ।
ನ್ಯಾಯಾರ್ಜಿತೈಃ ಪೂಜ್ಯ ಸದಾಶಿವಂ ತ್ವಜಂ
ಸಂಪ್ರಾಪ ಚೈಶ್ವರ್ಯಮಿದಂ ಹಿ ಗೌತಮಃ ॥ ೨೪ ॥

---

೨೨. ಶಿವನು ಹೇಳಿದನು:—ಹನುಮಂತನು ದೊಡ್ಡವೀಣೆಯನ್ನು ಹಿಡಿದುಕೊಂಡು ಶಿವನನ್ನು ಕುರಿತು ನ್ಯಾಯವಾಗಿ ತಂದ ಪದಾರ್ಥಗಳಿಂದ ಪೂಜಿಸಿದರೆ ಯಾವ ಪುಣ್ಯಬರುತ್ತದೆ? ಹಾಗೆ ತಂದುದರಿಂದ ಮಾಡಿದ ಫಲವನ್ನು ಹೇಳು.

೨೩. ಕಳ್ಳತನದಿಂದ ತಂದ ಪದಾರ್ಥಗಳನ್ನು ದೇವರಿಗೆ ಅರ್ಪಿಸುವುದರಿಂದ ಬರುವ ಫಲವು ಯಾವರೀತಿಯಾದುದು? ಕೆಟ್ಟುಹೋಗಿರುವ ಫಲಗಳನ್ನು ಒಪ್ಪಿಸಿದರೆ ಬರುವ ಫಲವು ಎಂತಹದು? ಎಲೈ ಶಂಭುವೇ, ಒಂದೊಂದದ್ದಾಗಿ ನನಗೆ ತಿಳಿಸು. ಈ ಪ್ರಶ್ನೆಗಳಿಗೆ ಉತ್ತರವೇನು? ಬೇಗಹೇಳು.

೨೪. ಆಗ ಶಂಭುವು ಹನುಮಂತನನ್ನು ಕುರಿತು ಎಲ್ಲವನ್ನೂ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. ನ್ಯಾಯದಿಂದ ಸಂಪಾದಿಸಿದ ಪದಾರ್ಥಗಳಿಂದ ಸದಾಶಿವನನ್ನು ಪೂಜಿಸಿ ಗೌತಮನು ಈ ರೀತಿಯಾದ ಐಶ್ವರ್ಯವನ್ನು ಹೊಂದಿದ್ದಾನೆ.

**ಪುರಾ ದ್ವಿಜೋ ಮಂಕಣಸೂನುರಾಕಥಃ**
**ಸುಶೋಭನಾಮಾಪ ಸತೀಂ ದ್ವಿಜಾತ್ಮಜಾಂ ।**
**ದರಿದ್ರ ಏಕಃ ಕರುಣಾಸಮನ್ವಿತಃ**
**ಷಷ್ಠಾಹಭೋಜೀ ಪಿತೃವರ್ಜಿತಶ್ಚ** ॥ ೨೫ ॥

**ಉಪೋಷ್ಯ ಪಂಚಾಹಮಥಾಪಿ ಭೋಕ್ತುಂ**
**ಪ್ರವೃತ್ತ ಏವಾಥ ಸಮಾಪತದ್ಯತಿಃ ।**
**ಯತಿರ್ಬಭಾಷೇ ಮಧುರಂ ತದಾ ಕಥಂ**
**ಮಾಸೋಪವಾಸೀ ತವ ಭೋಕ್ತುಮಾಗತಾಃ** ॥ ೨೬ ॥

**ತಿಷ್ಠಾಮಿ ಭೋಕ್ಷ್ಯೇ ಯದಿ ವಾಸ್ತಿ ತೇ ಮುನೇ**
**ನ ವೈ ಬುಭುಕ್ಷಾನ್ಯಗೃಹಾದ್ವಿಭೋಕ್ತುಂ** ॥ ೨೭ ॥

**॥ ಆಕಥ ಉವಾಚ ॥**

**ನ ಮೇ ಭುಜಿಃ ಪಂಚದಿನಂ ದ್ವಿಜೇಂದ್ರ**
**ಷಷ್ಠೇ ದಿನೇ ಮೇ ಭುಜಿರಾಗತಶ್ಚ ।**

---

೨೫. ಪೂರ್ವಕಾಲದಲ್ಲಿ ಮಂಕಣನಮಗನಾದ ಆಕಥನು ಈ ಪ್ರಜೆಯಿಂದ ಉತ್ತಮಳಾದ ಹೆಂಡತಿಯನ್ನು ಹೊಂದಿದನು. ಅವನು ಒಬ್ಬ ದರಿದ್ರನೂ ಕರುಣೆಯುಳ್ಳವನೂ ಆಗಿದ್ದನು. ಆರನೆಯ ದಿನ ಊಟ ಮಾಡುತ್ತಿದ್ದನು. ತಂದೆಯಿರಲಿಲ್ಲ.

೨೬. ಈ ಆಕಥನು ಐದು ದಿವಸಗಳು ಉಪವಾಸಮಾಡಿ ಆರನೆಯ ದಿನ ಪಾರಣೆಮಾಡುವ ಹೊತ್ತಿಗೆ ಸರಿಯಾಗಿ ಒಬ್ಬ ಯತಿಯು ಬಂದನು. ಆ ಯತಿಯು ಆಕಥನನ್ನು ಕುರಿತು ಅಯ್ಯಾ, ನಾನು ಮಾಸೋಪವಾಸಿಯು. ತಿಂಗಳಿಂದಲೂ ಉಪವಾಸವಿದ್ದು ಈ ದಿನ ನಿನ್ನ ಮನೆಗೆ ಊಟಕ್ಕೆ (ಪಾರಣೆಗೆ) ಬಂದಿದ್ದೇನೆ.

೨೭. ಎಲೈ ಮುನಿಯೇ, ಇಲ್ಲಿಯೇ ಇದ್ದು ಊಟಮಾಡುತ್ತೇನೆ. ನಿನ್ನ ಮನೆಯಲ್ಲೇನಾದರೂ ಊಟಕ್ಕಿದೆಯೇ? ಮತ್ತೊಬ್ಬರ ಮನೆಯಲ್ಲಿ ಊಟಮಾಡಲು ಇಚ್ಛೆಯಿಲ್ಲ ಎಂದನು.

೨೮. ಆಕಥನು ಹೇಳಿದನು:—ಎಲೈ ಯತಿಯೇ, ನನಗೆ ಐದು ದಿವಸ ದಿಂದಲೂ ಊಟವಿಲ್ಲ. ಇಂದು ಆರನೆಯ ದಿನವು. ಪಾರಣೆಯು ಪ್ರಾಪ್ತವಾಗಿದೆ

ತದಾ ಮಯಾ ಕಾರ್ಯಮಚಿಂತನೀಯಂ
ಪ್ರಕ್ಷಾಳಯಾಮ್ಯೇಹಿ ತವಾದ್ಯ ಪಾದೌ ॥ ೨೮ ॥

ಓಮಿತ್ಯಥ ಕ್ಷಾಳಿತಪಾದಯುಗ್ಮಃ
ಸ ಭೋಜನಂ ಕರ್ತುಮಿಯೇಷ ಯೋಗೀ ।
ರಂಭಾದಳಾಂಶೇ ಬುಭುಜೇ ತದನ್ನಂ
ವಿಪಾಚ್ಯ ಸಂಪಾದಿತಮಾಜ್ಯಯುಕ್ತಂ ॥ ೨೯ ॥

ವನ್ಯೈಸ್ಸುಸಂಯುಕ್ತಮಥಾದರೇಣ
ನ ಕಿಂಚಿದುಚ್ಛೇಷಿತಮನ್ನಮಸ್ಯ ।
ಅಥಾಕಥೋ ವೀಕ್ಷ್ಯ ಮುನಿಂ ಸುತುಷ್ಟಂ
ತುತೋಷ ಭಾರ್ಯ್ಯಾಸಹಿತಸ್ತಪಸ್ವೀ ॥ ೩೦ ॥

ಗತೋಽಥ ಭುಕ್ತ್ವಾಪಿ ಯತಿ ಸ ಚಾಕಥಃ
ಸುತುಷ್ಟಚಿತ್ತೋಽಥ ಜಪಂ ಚಕಾರ ।
ಕಪೋತವೃತ್ತಿಂ ಸ ಚಕಾರ ಪತ್ನ್ಯಾ
ತಪೋವಿತಾನಾಯ ಸ ಸಜ್ಜನೋ ಮುನಿಃ ॥ ೩೧ ॥

---

ಆದರೂ ನಾನು ಅತಿಥಿಸತ್ಕಾರವನ್ನು ಮಾಡಬೇಕು. ಯೋಚನೆಯಿಲ್ಲ. ಬಾ, ಕಾಲುಗಳನ್ನು ತೊಳೆಯುತ್ತೇನೆ.

೨೯. ಆ ಯೋಗಿಯು ಹಾಗೇ ಆಗಲೆಂದು ಕಾಲನ್ನು ತೊಳಸಿಕೊಂಡು ಊಟ ಮಾಡಲಿಚ್ಛಿಸಿ ಬಾಳೆಯ ಎಲೆಯಲ್ಲಿ ಆ ಆಕಥನು ಸಂಪಾದಿಸಿದ್ದ ಅನ್ನವನ್ನು ತುಪ್ಪದೊಡನೆ ಊಟಮಾಡಿದನು.

೩೦. ಕಾಡಿನ ಗೆಡ್ಡೆಗೆಣಸುಗಳನ್ನು ಜೊತೆಗೆ ಪಾಕಮಾಡಿ ಆದರದಿಂದ ಬಡಿಸಿದ್ದನು. ಇವನಿಗೆ ಅನ್ನವು ಸ್ವಲ್ಪವೂ ಉಳಿಯಲೇ ಇಲ್ಲ. ಇದನ್ನು ನೋಡಿದ ಆಕಥನು ಸಂತೋಷಗೊಂಡನು. ಈತನ ಹೆಂಡತಿಯೂ ಸಂತೋಷಗೊಂಡಳು.

೩೧. ಆ ಯತಿಯು ಊಟಮಾಡಿಕೊಂಡು ಹೊರಟುಹೋಗಲು ಆಕಥನು ಸಂತುಷ್ಟನಾಗಿ ಜಪವನ್ನು ಮಾಡಿದನು. ಮತ್ತು ತಪಸ್ಸನ್ನು ಹೆಚ್ಚಿಸಿಕೊಳ್ಳಲು ಆ ಮುನಿಯು ಕಪೋತವೃತ್ತಿಯನ್ನು ಎಂದರೆ ಆಹಾರಪದಾರ್ಥಗಳನ್ನು ಆಯ್ದು ತರುವುದನ್ನು ಮಾಡಿದನು.

ಪೀಠೇಽಥ ಕೃತ್ವಾ ತನುಮಾಪತಿಂ ಶಿವಂ
ಲಿಂಗೇ ಸಮಾರಾಧ್ಯ ಸಮನ್ವಿತಂ ಗಣೈಃ ।
ಲಿಂಗಂ ನಿಧಾಯಾಥ ನಿರೀಕ್ಷಮಾಣೋ
ದದರ್ಶ ಚಾಜ್ಞಾತಕೃಶಾಕೃತಿಂ ದ್ವಿಜಂ ॥ ३೨ ॥

ದಿಗಂಬರಂ ಪಾದವಿಹೀನಮೇತಂ
ಕಾಣಂ ಕುಣಿಂ ಕರ್ಣವಿಹೀನಕಂ ಪ್ರಭುಂ ।
ಸಾಮೋದ್ಗಿರಂತಂ ಬಹುಶಾಸ್ತ್ರಪಾರಗಂ
ಗೃಹಂ ಸಮಾಯಾಂತಮಥೋ ದದರ್ಶ ॥ ೩೩ ॥

ಅಥಾಕಥೋ ಭಾರ್ಯಾಂ ಸುಶೋಭನಾಮಿದಮುವಾಚಾಯಂ ಹಿ ವಿಕೃತವೇಷೋ ಬ್ರಾಹ್ಮಣಸ್ಸಮಾಯಾತಿ । ಅರ್ಧಂ ದೇಯಮೇತಸ್ಮೈ ಭೋಜನಂ ರಕ್ಷಾರ್ಧಮನ್ನಂ ಚಾಸ್ಮಿನ್ನಪಿ ದಿನೇ ಗತೇ ಷಷ್ಠೇಽಹ್ನಿ ಭೋಜನಾಭಾವಾತ್ತವ ಜೀವಿತಂ ನ ತಿಷ್ಠತೀತಿ ಮಮ ಪ್ರತೀಯತೇ ಕಿಂ ತು ತ್ವಂ ಮನ್ಯಸೇ ವದ ॥ ೩೪ ॥

---

೩೨. ಈಶ್ವರಲಿಂಗವನ್ನು ಪೀಠದಲ್ಲಿಟ್ಟು, ಗಣಗಳನ್ನು ಯಥಾಸ್ಥಾನಗಳಲ್ಲಿಟ್ಟು ಆ ಲಿಂಗದಲ್ಲಿ ಈಶ್ವರನನ್ನು ಆರಾಧಿಸುತ್ತಿರುವಾಗ ಒಬ್ಬ ಬಡಕಲಾದ ಬ್ರಾಹ್ಮಣನನ್ನು ಕಂಡನು.

೩೩. ಆ ಬ್ರಾಹ್ಮಣನು ಬಟ್ಟೆಯಿಲ್ಲದವನಾಗಿದ್ದನು. ಕುರುಡನು, ಕೈಮೋಟಾಗಿದ್ದಿತು. ಕಿವಿ ಕೇಳಿಸುತ್ತಿರಲಿಲ್ಲ. ಸಾಮವೇದವನ್ನು ಹೇಳುತ್ತಿದ್ದನು. ಬಹಳ ಶಾಸ್ತ್ರಗಳನ್ನು ಓದಿ ಪಂಡಿತನಾಗಿದ್ದನು. ಇಂತಹವನು ಮನೆಗೆ ಬರುತ್ತಿರುವುದನ್ನು ಕಂಡನು.

೩೪. ಆಗ ಆಕಥನು ಹೆಂಡತಿಯಾದ ಸುಶೋಭನೆಯನ್ನು ಕುರಿತು ಈ ವಿಕಾರದ ವೇಷವುಳ್ಳ ಬ್ರಾಹ್ಮಣನು ಬರುತ್ತಿದ್ದಾನೆ. ಇವನಿಗೆ ಅರ್ಧ ಅನ್ನವನ್ನು ಕೊಡು. ಉಳಿದ ಅರ್ಧ ಅನ್ನವನ್ನು ಇಟ್ಟುಕೋ. ಈ ದಿನವೂ ಆಗಿಹೋಪರೆ ಆರನೆಯ ದಿನ ಊಟವಿಲ್ಲದುದರಿಂದ ಪ್ರಾಣವು ನಿಲ್ಲುವುದಿಲ್ಲವೆಂದು ನನಗೆ ತೋರುತ್ತದೆ. ನಿನ್ನ ಇಷ್ಟವೇನು? ಹೇಳು.

ಸಾ ತೋಭನೋನಾಚಾಯುರ್ಲಲಾಟೇ ಲಿಖಿತಂ ನಾನ್ತರಾ
ನಶ್ಯತಿ ॥ ೩೫ ॥

ಆಕಥ ಆಹ ಯಥಾ ಬದ್ಧಾಯುಷೋಽಪಿ ದಕ್ಷಸ್ಯ ವೀರಭದ್ರೇಣ
ಚ್ಛಿನ್ನಂ ಶಿರೋಽಜಸ್ರಾತ್ಮನಃ ಕಿಮುತ ಮನುಷ್ಯಾಣಾಂ ಪಾಪಾ-
ತ್ಮನಾಮಿತಿ । ತದೇನಂ ಪರಿಹೃತ್ಯ ತ್ವಯಾ ಭುಜ್ಯತೇ ಯದಿ
ತ್ವೇತಸ್ಮೈ ಮಯಾ ಅನ್ನಂ ದೀಯತೇ ತವೇಚ್ಛಾನುಸಾರತೋ
ಮಮ ಕರ್ತವ್ಯಂ ॥ ೩೬ ॥

ಭಾರ್ಯಾ ಪ್ರಾಹ ಕಥಮಹಂ ಭೋಕ್ಷ್ಯೇ ತ್ವಯ್ಯಭುಕ್ತೇ ಮಯಾ
ಕಿಂ ಪೂರ್ವಂ ಭುಕ್ತಮಿದಮಪರಂ ಶೃಣು ॥ ೩೭ ॥

ಅನ್ನಂ ಹಿ ಪ್ರಾಣಿನಾಂ ಪ್ರಾಣಾಃ ಪ್ರತ್ಯಕ್ಷಂ ಸರ್ವದೇಹಿನಾಂ ।
ತಸ್ಮಾದನ್ನಪ್ರದೋ ಯಸ್ತು ಪ್ರಾಣದಃ ಸ ನಿಗದ್ಯತೇ ॥ ೩೮ ॥

---

೩೫. ಹಣೆಯಲ್ಲಿ ಬರೆದಿರುವ ಆಯುಸ್ಸು ಮುಗಿದಲ್ಲದೆ ಸಾಯುವುದಿಲ್ಲವೆಂದು ಆ ಸುಶೋಭನೆಯು ಹೇಳಿದಳು.

೩೬. ಅದಕ್ಕೆ ಆಕಥನು, ದಕ್ಷನ ಆಯುಸ್ಸು ನಿಯಮಿತವಾಗಿದ್ದರೂ, ನಾಶವಾಗದ ಪ್ರಾಣವುಳ್ಳವನಾದರೂ, ಅವನ ತಲೆಯನ್ನು ವೀರಭದ್ರನು ಕತ್ತರಿಸಿದನು. ಪಾಪಿಗಳಾದ ಮನುಷ್ಯರ ವಿಷಯವನ್ನು ಹೇಳತಕ್ಕದ್ದೇನಿದೆ? ಅವನು ಹೋದ ನಂತರ ನೀನು ಊಟಮಾಡು. ನನ್ನ ಅನ್ನವನ್ನು ಕೊಟ್ಟುಬಿಡುತ್ತೇನೆ. ನೀನು ಹೇಳಿದಂತೆ ನಾನು ಮಾಡುತ್ತೇನೆ.

೩೭. ಅದಕ್ಕೆ ಹೆಂಡತಿಯು ನಾನು ಹೇಗೆ ಊಟಮಾಡಲಿ? ನೀನು ಊಟ ಮಾಡುವುದಕ್ಕೆ ಮುಂಚೆ ನಾನಾವಾಗಲಾದರೂ ಊಟಮಾಡಿದ್ದೇನೆಯೇ? ಅಲ್ಲದೆ ಮತ್ತೂ ಕೇಳು.

೩೮. ಅನ್ನವೇ ಜೀವಿಗಳಿಗೆ ಪ್ರಾಣವಲ್ಲವೆ? ಎಲ್ಲಾ ಪ್ರಾಣಿಗಳೂ ಅನ್ನದಿಂದ ಜೀವಿಸುತ್ತಿರುವುದನ್ನು ನೋಡಿಯೇ ಇದ್ದೇವೆ. ಆದ್ದರಿಂದ ಅನ್ನಹಾಕಿದವನು ಪ್ರಾಣವನ್ನು ಕೊಟ್ಟವನೆಂದು ಭಾವಿಸಲ್ಪಡುತ್ತಾನೆ.

**ಅನ್ನಾದ್ಭೂತಾನಿ ಜಾಯನ್ತೇ ವರ್ಧನ್ತೇ ತಾನಿ ವೈ ಯತಃ ।**
**ತಸ್ಮಾದನ್ನಾಧಿಕಂ ಕಿಂಚಿನ್ನಾಸ್ಯದಾನಂ ಮಹಾ ಫಲಂ ॥ ೩೯ ॥**

**ಅಶ್ವತ್ಥಚಲಪತ್ರಾಗ್ರಲೀನತೋಯದ್ರವಾಸ್ತಿಕೇ ।**
**ಜೀವಿತೇ ನ ಹಿ ಯೋ ದದ್ಯಾತ್ತಸ್ಯ ಜನ್ಮ ನಿರರ್ಥಕಂ ॥ ೪೦ ॥**

**ಪರಲೋಕಸಹಾಯೋ ಹಿ ಧರ್ಮೋ ನ ಭಾರ್ಯಾ ನ ಬಾಂಧವಾಃ ।**
**ಭಾರ್ಯಾ ವಾ ಪಿತರೌ ಪುತ್ರಾ ಯಾವದಾಯುರ್ನ ಬಾಂಧವಾಃ ॥ ೪೧ ॥**

**ಸಂಪದ್ವಯಸ್ಸುಹೃದಿಹ ಇಹಾಮುತ್ರ ಹಿತಂ ಸ್ಥಿತಂ ।**
**ಧರ್ಮಂ ಧರ್ಮಭೃತಾಂ ಶ್ರೇಷ್ಠಂ ಭುಕ್ತೇ ಚಾನ್ನೇ ಕಿಮಾವಯೋಃ ॥೪೨॥**

**ಇತಿ ಭಾರ್ಯಾವಚಶ್ಶ್ರುತ್ವಾ ಆಕಥಃ ಕರುಣಾನಿಧಿಃ ।**
**ಅವಿಶಂಕಿತಮೇವಾಸ್ಮೈ ದತ್ತವಾನನ್ನಮೂರ್ಜಿತಂ ॥ ೪೩ ॥**

---

೩೯. ಅನ್ನದಿಂದಲೇ ಪ್ರಾಣಿಗಳು ಹುಟ್ಟುತ್ತವೆ. ಅದರಿಂದಲೇ ಬೆಳೆಯುತ್ತವೆ. ಆದ್ದರಿಂದ ಅನ್ನಕ್ಕಿಂತಲೂ ಅಧಿಕವಾದುದೇ ಇಲ್ಲ. ಇದನ್ನು ದಾನಮಾಡಿದರೆ ಮಹಾಫಲವುಂಟು.

೪೦. ಅರಳಿಯಮರದ ಅಲ್ಲಾಡುತ್ತಿರುವ ಎಲೆಯ ತುದಿಯಲ್ಲಿರುವ ನೀರಿನ ತುಂತುರಿನಂತೆ ಚಂಚಲವಾದ ಜೀವಿತದಲ್ಲಿ ಯಾವನು ದಾನಮಾಡುವುದಿಲ್ಲವೋ ಅವನ ಜನ್ಮವು ನಿರರ್ಥಕವು.

೪೧. ಪರಲೋಕಕ್ಕೆ ಸಹಾಯವಾಗಿರುವುದು ಧರ್ಮವು. ಹೆಂಡತಿ ನೆಂಟರುಗಳಲ್ಲ. ಹೆಂಡತಿ, ತಾಯಿತಂದೆಗಳು, ಬಾಂಧವರು, ಇವರು ಆಯುಸ್ಸು ಇರುವವರೆಗೆ ಕೂಡ ಇರುವುದಿಲ್ಲ.

೪೨. ಸಂಪತ್ತು, ವಯಸ್ಸು, ಸ್ನೇಹಿತರು, ಇವರು ಈ ಲೋಕಕ್ಕೆ ಮಾತ್ರವೇ ಇರತಕ್ಕವರು. ಈ ಲೋಕಕ್ಕೂ, ಪರಲೋಕಕ್ಕೂ ಹಿತವಾಗಿರುವುದು ಧರ್ಮವೊಂದೇ. ಆ ಧರ್ಮವು ಧರ್ಮಕ್ಕೆಲ್ಲಾ ಶ್ರೇಷ್ಠವಾದುದು. ಆ ಅನ್ನವನ್ನು ಊಟಮಾಡಿದರೆ ನಮಗೆ ಅದರಿಂದ ತೊಂದರೆಯೇನು ?

೪೩. ಕರುಣಾನಿಧಿಯಾದ ಆಕಥನು ಈರೀತಿಯಾದ ಹೆಂಡತಿಯ ಮಾತನ್ನು ಕೇಳಿ ಸಂಕೋಚವಿಲ್ಲದೆ ಆ ಬ್ರಾಹ್ಮಣನಿಗೆ ಉತ್ತಮರೀತಿಯಿಂದ ಅನ್ನವನ್ನು ಬಡಿಸಿದನು.

ಅಯಂ ಸ ಶಂಕರೋ ದೇವೋ ನಾನಾಕರಣಮಾಗತಃ ।
ಇತಿ ನಿಶ್ಚಿತ್ಯ ಮನಸಾ ತಸ್ಯಾಂಗಂ ಪಾಪನಾಶನಂ ॥ ೪೪ ॥

ಆಜಾನುಪಾದಂ ಪ್ರಕ್ಷಾಳ್ಯ ಪರಾಜಂಘಮತಃಪರಂ ।
ಗುಲ್ಫಂ ಚ ತದಧಸ್ತಸ್ಯ ಪ್ರಕ್ಷಾಳ್ಯಾಚಮಯದ್ದ್ವಿಜಂ ॥ ೪೫ ॥

ಅಥಾಕಥೋಽಪಿ ಪತ್ಸಂಧಿಂ ಗೃಹಾಂಗಣಮುಪಾನಯತ್ ।
ಉನ್ಮೃಜ್ಯ ಪಾದಸಂಧಿಂ ಸ ನಿಷಸಾದಾರ್ಪಿತಾಸನೇ ॥ ೪೬ ॥

ಸಮಭ್ಯರ್ಚ್ಯಾಕಥಸ್ಸಮ್ಯಗ್ಭೋಜಯಾಮಾಸ ತಂ ಮುನಿಂ ।
ಏತಸ್ಮಿನ್ನಂತರೇ ಕಶ್ಚಿದುನ್ಮತ್ತೋ ಗೃಹಮಾಗತಃ ॥ ೪೭ ॥

ಪಾದಸಂಧಿಮಥಾದಾಯ ಗೃಹಬಾಹ್ಯಮುಪಾನಯತ್ ।
ಅಥಾದಹಚ್ಚ ತದ್ಗೇಹಂ ದಂಪತೀ ಚಾಪ್ಯತಾಡಯತ್ ॥ ೪೮ ॥

ಅಶಕ್ತಸ್ತಾಡಿತೋ ವಿಪ್ರೋ ದಹ್ಯಮಾನಂ ಗೃಹಂ ತದಾ ।
ವಿವೇಶ ದೇವಮೀಶಾನಮಾದಾತುಂ ತೂರ್ಣಮೇವ ವಾ ॥ ೪೯ ॥

---

೪೪-೪೫. ಶಂಕರನಾದ ಸ್ವಾಮಿಯು ನಾನಾಬಗೆಯಲ್ಲಿ ಬರುವನೆಂದು ನಿಶ್ಚಯಿಸಿಕೊಂಡು, ಅವನ ಅವಯವವು ಪಾಪನಾಶಕವು ಎಂದು ತಿಳಿದು, ಕಾಲನ್ನು ಮಂಡಿಯವರೆಗೂ ತೊಳೆದು, ಮೊಳಕಾಲನ್ನೂ ತೊಳೆದು ಆ ಬ್ರಾಹ್ಮಣನಿಗೆ ಆಚಮನವನ್ನು ಮಾಡಿಸಿದನು.

೪೬. ಆಗ ಆ ಹೆಳವನನ್ನು ಮನೆಯೊಳಕ್ಕೆ ಆ ಅಕಥನು ತೆಗೆದುಕೊಂಡು ಹೋದನು. ಅಲ್ಲಿ ಆ ಹೆಳವನು ಕಾಲನ್ನು ಸರಿಮಾಡಿಕೊಂಡು ಕೊಟ್ಟ ಪೀಠದಲ್ಲಿ ಕುಳಿತುಕೊಂಡನು.

೪೭. ಆ ಅಕಥನು ಅವನಿಗೆ ಪೂಜೆಮಾಡಿ ಊಟಮಾಡಿಸಿದನು. ಇಷ್ಟರೊಳಗೆ ಒಬ್ಬ ಹುಚ್ಚನು ಮನೆಗೆ ಬಂದನು.

೪೮. ಆ ಹುಚ್ಚನು ಆ ಹೆಳವನನ್ನು ತೆಗೆದುಕೊಂಡು ಹೊರಗೆ ಬಿಟ್ಟು ಆ ಮನೆಗೆ ಬೆಂಕಿಹಾಕಿ ಆ ದಂಪತಿಗಳನ್ನು ಹೊಡೆದನು.

೪೯. ಆ ಹುಚ್ಚನನ್ನು ಪುನಃ ಹೊಡೆಯಲು ಶಕ್ತಿಸಾಲದೆ ಆ ಬ್ರಾಹ್ಮಣನು ಒಳಗಿರುವ ಶಿವಲಿಂಗವನ್ನು ತರಲು ಆ ಉರಿಯುತ್ತಿರುವ ಮನೆಗೆ ನುಗ್ಗಿದನು.

ಅಥಾದಾಯ ಮಹೇಶಾನಂ ದಗ್ಧಪೂಜಂ ದ್ವಿಜೋತ್ತಮಃ ।
ನಿರ್ಗತ್ಯ ಚ ತತೋ ದೃಷ್ಟ್ವಾ ಮುಖಸಂತಾಪಮೇವ ಚ ॥ ೫೦ ॥

ದಗ್ಧಪೂಜಾಂ ತಿರಸ್ಕೃತ್ಯ ವೀಕ್ಷ್ಯ ದಗ್ಧಾಂಗಮುಪ್ಯುತ ।
ಭಾರ್ಯಾಮುವಾಚ ಧರ್ಮಾತ್ಮಾ ಯಥಾ ಪೂಜಾ ಮಹೇಶಿತುಃ ॥
ತಥಾ ಮಮ ಸಮಸ್ತಾಂಗಂ ಕರ್ತವ್ಯಮವಿಶಂಕಿತಂ ॥ ೫೧ ॥

॥ ವ್ಯಂಗ ಉವಾಚ ॥

ಪಶ್ಚಾದಪಿ ಕೃತಾ ಪೂಜಾ ಸಫಲಾ ತೇ ಭವಿಷ್ಯತಿ ।
ಯಥಾನ್ಯದ್ರವ್ಯದಹನೇ ತಾದೃಶಂ ದೀಯತೇ ಜನೈಃ ॥ ೫೨ ॥

ಪೂಜಾಯಾ ದಹನೇ ತದ್ವತ್ಪೂಜಾಸ್ಯ ಕ್ರಿಯತಾಮಿತಿ ॥ ೫೩ ॥

---

೫೦. ಪೂಜೆಯೆಲ್ಲವೂ ಸುಟ್ಟು ಹೋಗಿರುವ ಆ ಶಿವಲಿಂಗವನ್ನು ಈಚೆಗೆ ತಂದನು. ಹೊರಗೆ ಬಂದು ಆ ಮನುಷ್ಯನನ್ನು ನೋಡಲು ಮುಖದಲ್ಲಿ ದುಃಖವು ಕಾಣುತ್ತಿದ್ದಿತು.

೫೧. ಆ ಪೂಜೆಯು ಸುಟ್ಟುಹೋದುದನ್ನು ಲಕ್ಷಿಸದೆ ತನ್ನ ಒಂದು ಅಂಗವು ಸುಟ್ಟಿರುವುದನ್ನು ನೋಡಿದನು. ಆಗ ಆತನು ಹೆಂಡತಿಯನ್ನು ಕುರಿತು ಈಶ್ವರನಿಗೆ ಮಾಡಿದ ಪೂಜೆಯು ದಗ್ಧವಾಯಿತು. ಅದರಂತೆ ನನ್ನ ಒಂದು ಅವಯವ ಸುಟ್ಟಿದೆ. ಅದರಂತೆಯೇ ಮಿಕ್ಕ ಅಂಗಗಳನ್ನು ಸಂದೇಹವಿಲ್ಲದೆ ಸುಟ್ಟುಕೊಳ್ಳುತ್ತೇನೆ ಎಂದು ಹೆಂಡತಿಗೆ ಹೇಳಿದನು.

೫೨-೫೩. ಊನನು ಹೇಳಿದನು:—ಈ ಪೂಜೆಯು ಹೋದರೆ ಹೋಗಲಿ. ಆಮೇಲೆ ಪೂಜೆಮಾಡಿದರೂ ಆ ಪೂಜೆಯು ಸಫಲವಾಗುತ್ತದೆ. ಜನರು ಒಂದು ಪದಾರ್ಥವು ಸುಟ್ಟುಹೋದರೆ ಮತ್ತೊಂದು ಅಂತಹ ಪದಾರ್ಥವನ್ನೇ ಕೊಡುವುದಿಲ್ಲವೇ? ಅದರಂತೆ ಪೂಜೆಯು ನಾಶವಾದರೆ ಅಂತಹದೆ ಮತ್ತೊಂದು ಪೂಜೆಯನ್ನು ಮಾಡಿದರಾಯಿತು. ಹಾಗೆ ಮಾಡು ಎಂದನು.

॥ ಆಕಥ ಉವಾಚ ॥

ಚೌರ್ಯೇಣಾಪ್ಯರ್ಜಿತೈರ್ದ್ರವ್ಯೈಃ ಪೂಜಯಾ ನ ಹಿತಂ ಭವೇತ್ ।
ನ ಚಾನ್ಯಾಯಾರ್ಜಿತೈರ್ವಿಪ್ರ ಶಂಭೋಃ ಪೂಜಾ ಶುಭಪ್ರದಾ ॥ ೫೪ ॥

ಇತ್ಯುಕ್ತ್ವಾ ಚಾಕಥಸ್ತೂರ್ಣಂ ಸ್ವಾಂಗಂ ದಗ್ಧುಮುಪಾಕ್ರಮತ್ ।
ದಗ್ಧಂ ಲಿಂಗಂ ತದೋನ್ಮತ್ತೋ ಗೃಹೀತ್ವಾನ್ತರ್ದಧೇ ಕ್ಷಣಾತ್ ॥ ೫೫ ॥

ಅಥ ವ್ಯಂಗೋ ಹರೋ ಭೂತ್ವಾ ವಾರಯಾಮಾಸ ಚಾಕಥಂ ।
ಕಿಮರ್ಥಂ ಖಿದ್ಯತೇ ವಿಪ್ರ ವರದೋಽಹಂ ವರಂ ವೃಣು ॥
ಆಕಥೋಽಪಿ ವಿಭೋಃ ಪಾದಭಕ್ತಿಂ ವವ್ರೇ ಸುನಿಶ್ಚಲಾಂ ॥ ೫೬ ॥

॥ ಸೂತ ಉವಾಚ ॥

ಏತಾಂ ಶ್ರುತ್ವಾ ಕಥಾಂ ರಾಮಃ ಪ್ರಹೃಷ್ಟೋ ಮುನಿಭಿರ್ವೃತಃ ।
ಭಾರದ್ವಾಜಂ ನಮಸ್ಕೃತ್ಯ ಪ್ರಯಾಣಾಜ್ಞಾಮಯಾಚತ ॥ ೫೭ ॥

---

೫೪. ಆಕಥನು ಹೇಳಿದನು :—ಕಳ್ಳತನದಿಂದ ತಂದ ಪದಾರ್ಥಗಳಿಂದ ಪೂಜೆಮಾಡಿದರೆ ಹಿತವಾಗುವುದಿಲ್ಲ. ಅನ್ಯಾಯದಿಂದ ತಂದ ಪದಾರ್ಥಗಳಿಂದ ಶಂಭುವನ್ನು ಪೂಜಿಸಿದರೆ ಶುಭವಾಗುವುದಿಲ್ಲ.

೫೫. ಹೀಗೆಂದು ಹೇಳಿ ಆಕಥನು ಜಾಗ್ರತೆ ತನ್ನನ್ನು ಸುಟ್ಟುಕೊಳ್ಳಲು ಪ್ರಾರಂಭಿಸಿದನು. ಸುಟ್ಟುಹೋದ ಲಿಂಗವನ್ನು ಆ ಹುಚ್ಚನು ತೆಗೆದುಕೊಂಡು ಒಡನೆಯೇ ಅಂತರ್ಧಾನವನ್ನು ಹೊಂದಿದನು.

೫೬. ಅನಂತರ ಆ ಊನನು ಹರನಾಗಿ, ಆಕಥನನ್ನು ಬೆಂಕಿಗೆ ಬೀಳದಂತೆ ತಡೆದನು. ಎಲೈ ಬ್ರಾಹ್ಮಣನೇ, ಏತಕ್ಕೋಸ್ಕರ ಕಷ್ಟಪಡುತ್ತಿದ್ದೀಯೆ? ನಾನು ವರವನ್ನು ಕೊಡುತ್ತೇನೆ. ವರವನ್ನು ಕೇಳಿಕೋ ಎಂದನು. ಆಕಥನು ಆ ಸ್ವಾಮಿಯಲ್ಲಿ ಪಾದಭಕ್ತಿ ಸ್ಥಿರವಾಗಿರುವಂತೆ ಕೇಳಿಕೊಂಡನು.

೫೭. ಸೂತನು ಹೇಳಿದನು :—ಈ ಕಥೆಯನ್ನು ರಾಮನು ಕೇಳಿ ಸಂತೋಷಗೊಂಡು ಋಷಿಗಳೊಡನೆ ಕೂಡಿಕೊಂಡು ಭಾರದ್ವಾಜನಿಗೆ ನಮಸ್ಕರಿಸಿ ಪ್ರಯಾಣಕ್ಕೆ ಅಪ್ಪಣೆಯನ್ನು ಕೇಳಿದನು.

ಅಥೋ ಭಾರದ್ವಾಜಮುನಿಃ ಪ್ರಸನ್ನಂ
ಶಂಭುಂ ವಸಿಷ್ಠಂ ಮುನಿಪುಂಗವಂ ಚ ।
ನಾರಾಯಣಂ ಚರ್ಷಿಗಣಾಂಶ್ಚ ನತ್ವಾ
ವ್ಯಸರ್ಜಯತ್ತೇಽಪಿ ಯಯುಃ ಪ್ರಣಮ್ಯ ॥ ೫೮ ॥

॥ ನೈಮಿಷೀಯಾ ಊಚುಃ ॥

ಗತ್ವಾಯೋಧ್ಯಾಂ ಮಹಾತೇಜಾಃ ಸಮಸ್ತಮುನಿಸಂಯುತಃ ।
ಕಿಂ ಚಕಾರ ತತೋ ರಾಮಃ ಸ ಚ ಶಂಭುರ್ಮಹಾಯಶಾಃ ॥ ೫೯ ॥

॥ ಸೂತ ಉವಾಚ ॥

ಕೌಸಲ್ಯಾಮಾಸಿಕಶ್ರಾದ್ಧಮಪರೇಽಹನಿ ರಾಘವಃ ।
ವಿಚಿಕೀರ್ಷುರ್ದ್ವಿಜವರಾನೃಷಿಕಲ್ಪಾನಕಲ್ಪಯತ್ ॥ ೬೦ ॥

ಶಂಭುಂ ಸಮಸ್ತತತ್ತ್ವಜ್ಞಂ ನಾರದಂ ರೋಮಶಂ ಭೃಗುಂ ।
ವಿಶ್ವಾಮಿತ್ರಮಥೋ ರಾಮ ಏಕಭಕ್ತವ್ರತೀ ತತಃ ॥ ೬೧ ॥

---

೫೮. ಆಗ ಭಾರದ್ವಾಜನೂ ಕೂಡ ಶಂಭು, ವಸಿಷ್ಠ, ಮುನಿಶ್ರೇಷ್ಠರು, ನಾರಾಯಣ ಮತ್ತು ಋಷಿಗಳು ಇವರನ್ನು ನಮಸ್ಕರಿಸಿ ಕಳುಹಿಸಿದನು. ಅವರು ನಮಸ್ಕರಿಸಿ ಹೊರಟರು.

೫೯. ನೈಮಿಷೀಯರು ಹೇಳಿದರು :—ಆ ರಾಮನು ಮುನಿಗಳೊಡನೆ ಅಯೋಧ್ಯೆಗೆ ಹೋಗಿ ಏನುಮಾಡಿದನು? ಆ ಯಶಸ್ವಿಯಾದ ಶಂಭುವೂ ಕೂಡ ಏನು ಮಾಡಿದನು?

೬೦. ಸೂತನು ಹೇಳಿದನು :—ರಾಮನು ಮಾರನೆಯ ದಿನ ಕೌಶಲ್ಯೆಯ ಮಾಸಿಕಶ್ರಾದ್ಧವನ್ನು ಮಾಡಬೇಕಾಗಿದ್ದುದರಿಂದ ಋಷಿಗಳನ್ನು ಬ್ರಾಹ್ಮಣರನ್ನಾಗಿ ವರಿಸಿದನು.

೬೧. ಎಲ್ಲವನ್ನೂ ಬಲ್ಲ ಶಂಭುವನ್ನೂ, ನಾರದನನ್ನೂ, ರೋಮಶನನ್ನೂ, ಭೃಗುವನ್ನೂ, ವಿಶ್ವಾಮಿತ್ರನನ್ನೂ ಬ್ರಾಹ್ಮಣರನ್ನಾಗಿ ವರಿಸಿ ತಾನು ಒಪ್ಪತ್ತು ಊಟ ಮಾಡಿದನು.

ಭೂಮೌ ಸುಖಾಸ್ತೃತಾಯಾಂ ಚ ಸುಷ್ವಾಪಾವ್ಯಾಕುಲೇಂದ್ರಿಯಃ ।
ಪರೇದ್ಯುರಥ ಸಂಪ್ರಾಪ್ತೇ ಪ್ರಾತಸ್ಸ್ನಾತ್ವಾ ವಿಧಾನವಿತ್ ॥ ೬೨ ॥

ಅನ್ನಂ ಶಾಕಾದಿಕಂ ಶುದ್ಧಂ ಜನ್ಯೈರೇವ ತ್ವಕಾರಯತ್ ।
ನಾನಾನ್ನಾನಿ ವಿಚಿತ್ರಾಣಿ ಚೋಷ್ಯಾದ್ಯಾನಿ ತಥೈವ ಚ ॥ ೬೩ ॥

ವಟಿಕಾದೀಂಸ್ತಥಾ ಭಕ್ಷ್ಯಾನಷ್ಟಾತ್ರಿಂಶದಕಲ್ಪಯತ್ ।
ಪಾಯಸಂ ಷಡ್ವಿಧಂ ಚೈವ ಪಕ್ವಶಾಕಶತದ್ವಯಂ ॥ ೬೪ ॥

ಅಪಕ್ವಮಿಶ್ರಕಾಣಾಂ ಚ ಶತತ್ರಯಮಕಲ್ಪಯತ್ ।
ಕಾಲಶಾಕಾದಿಕಂ ಶಾಕಂ ಫಲಾನಿ ವಿವಿಧಾನಿ ಚ ॥ ೬೫ ॥

ಮೂಲಾನಿ ಚೈವ ಕಂದಾನಿ ವಲ್ಕಲಾನಿ ಚ ರಾಘವಃ ।
ಕಾರಯಿತ್ವಾ ನದೀಂ ಗತ್ವಾ ಸಹಭ್ರಾತೃಪುರೋಹಿತಃ ॥ ೬೬ ॥

ಸರಯೂಸಲಿಲೇ ಸ್ನಾತ್ವಾ ಹುತ್ವಾಗ್ನೀಂಸ್ತ್ವಾಗತಾನ್ದ್ವಿಜಾನ್ ।
ಉಕ್ತ್ವಾತು ಸ್ವಾಗತಂ ತಾಂಸ್ತು ಕೃತದೇವಾರ್ಚನೋ ನೃಪಃ ॥ ೬೭ ॥

---

೬೨. ಹಾಸಿಗೆಯನ್ನು ಹಾಕಿಕ್ಕೊಂಡು ನೆಲದ ಮೇಲೆ ಸುಖವಾಗಿ ಮಲಗಿಕೊಂಡನು. ಮಾರನೆಯ ದಿನವೆದ್ದು ವಿಧಿವತ್ತಾಗಿ ಸ್ನಾನಮಾಡಿದನು.

೬೩. ಅನ್ನವನ್ನೂ, ಪಲ್ಯಗಳನ್ನೂ ಬಗೆಬಗೆಯಾದ ಗೊಜ್ಜು ಮುಂತಾದುವುಗಳನ್ನೂ ಪರಿಚಾರಕರಿಂದ ಮಾಡಿಸಿದನು.

೬೪-೬೫. ವಡೆಯೇ ಮುಂತಾದ ಭಕ್ಷ್ಯಗಳನ್ನು ಮೂವತ್ತೆಂಟು ಬಗೆಯನ್ನು ಮಾಡಿಸಿದನು. ಆರುಬಗೆಯ ಪಾಯಸಗಳನ್ನೂ, ಇನ್ನೂರುಬಗೆಯ ಪಲ್ಯಗಳನ್ನೂ ಮಾಡಿಸಿದನು. ಬೇಯಿಸದೆ ಇರತಕ್ಕ ಪದಾರ್ಥಗಳನ್ನು ಮಿಶ್ರಮಾಡಿ ಮುನ್ನೂರು ಬಗೆಯನ್ನು ಮಾಡಿಸಿದನು. ಕಾಲಶಾಕವೇ ಮುಂತಾದ ಶಾಕಗಳನ್ನು ಬೇಯಿಸಿ ಹುಳಿ ಮುಂತಾದುವನ್ನು ಮಾಡಿದರು. ಗೆಡ್ಡೆಗಳು, ಗೆಣಸುಗಳು, ಚಕ್ಕೆಗಳು ಇವುಗಳನ್ನು ಅವುಗಳಿಗನುಸಾರವಾಗಿ ಪದಾರ್ಥಗಳನ್ನು ಮಾಡಿದರು. ಇವನ್ನೆಲ್ಲಾ ಮಾಡಿಸಿ ರಾಮನು ತಮ್ಮಂದಿರು ಪುರೋಹಿತರೊಡನೆ ನದಿಗೆ ಸ್ನಾನಕ್ಕೆ ಹೋದನು.

೬೭-೬೮. ರಾಮನು ಸರಯೂ ನದಿಯಲ್ಲಿ ಸ್ನಾನಮಾಡಿ ಅಗ್ನಿಪ್ರತಿಷ್ಠೆಮಾಡಿ, ಹೇಳಿದ್ದ ಬ್ರಾಹ್ಮಣರಿಗೆ ಸ್ವಾಗತವನ್ನು ಹೇಳಿ ದೇವತಾರ್ಚನೆಯನ್ನು ಮಾಡಿದನು.

ಪ್ರಾಣಾನಾಯಮ್ಯ ಸಂಕಲ್ಪ್ಯ ಕ್ಷಣಂ ಚೈವ ಪ್ರದತ್ತವಾನ್ ।
ರೋಮಶಂ ನಾರದಂ ರಾಮೋ ವೈಶ್ವದೇವೇ ಸ್ಯಮಂತ್ರಯತ್ ॥ ೬೮ ॥

ಶಂಭುಂ ಭೃಗುಂ ಕೌಶಿಕಂ ಚ ಮಾತೃಸ್ಥಾನೇ ಸ್ಯಮಂತ್ರಯತ್ ।
ಗೋಮಯೇನ ತತಃ ಕೃತ್ವಾ ಮಂಡಲಂ ಪೂಜ್ಯ ಚಾರ್ಹತಃ ॥ ೬೯ ॥

ಪಾದಪ್ರಕ್ಷಾಳನಂ ಚಕ್ರೇ ಸೀತಾದತ್ತೋದಕೇನ ಚ ।
ಆಚಾಮಯಿತ್ವಾ ತಾನ್ವಿಪ್ರಾನ್ಗೃಹಂ ಗನ್ತುಮಥೋದ್ಯತಃ ॥ ೭೦ ॥

ಅಭ್ಯಾಗತಸ್ಸಮಾಯಾತಃ ಸ್ಥವಿರೋ ವಿಕೃತಾಕೃತಿಃ ।
ಕೃಶಸ್ಸಂಪ್ರಚಲದ್ಗಾತ್ರೋ ವೇಪಿತಾಂಘ್ರಿಶಿರಾಸ್ತಥಾ ॥ ೭೧ ॥

ಲಂಬಮಾನತ್ವಗುತ್ಕರ್ಷಚ್ಛ್ವಾಸಕಾಸಾದಿಪೀಡಿತಃ ।
ದೂಷಿತಾಕ್ಲಿನ್ನಗಂಡಶ್ಚ ಲಾಲಾಸಂಪೃಕ್ತಕೂರ್ಚಕಃ ॥ ೭೨ ॥

ಉವಾಚ ರಾಮಂ ರಾಜಾನಮಹಮೇಕೋ ದ್ವಿಜಸ್ಥಿತಃ ।
ಮಮಾಪಿ ಭೋಜನಂ ದೇಯಂ ಸ್ಥವಿರಸ್ಯ ಕೃಶಸ್ಯ ಚ ॥ ೭೩ ॥

---

ಅನಂತರ ಪ್ರಾಣಾಯಾಮಮಾಡಿ ಸಂಕಲ್ಪಮಾಡಿ ಬ್ರಾಹ್ಮಣರಿಗೆ ಕ್ಷಣವನ್ನು ಕೊಟ್ಟನು. ರೋಮಶನನ್ನೂ, ನಾರದನನ್ನೂ, ವಿಶ್ವೇದೇವರ ಸ್ಥಾನಕ್ಕೆ ವರಿಸಿದನು.

೬೯. ಶಂಭು, ಭೃಗು, ಕೌಶಿಕರನ್ನು ಮಾತೃಸ್ಥಾನಕ್ಕೆ ವರಿಸಿದನು. ಅನಂತರ ಹಸುವಿನ ಸಗಣಿಯಿಂದ ಮಂಡಲವನ್ನು ಮಾಡಿ ಯೋಗ್ಯರೀತಿಯಿಂದ ಪೂಜಿಸಿದನು.

೭೦. ಸೀತೆಯು ಕೊಟ್ಟ ನೀರಿನಿಂದ ಅವರಿಗೆ ಕಾಲನ್ನು ತೊಳೆದು, ಆಚಮನ ಮಾಡಿಸಿ ಮನೆಯ ಒಳಕ್ಕೆ ಹೋಗಲು ಸಿದ್ಧನಾದನು.

೭೧—೭೩. ಆಗ ಒಬ್ಬ ಅಭ್ಯಾಗತನು ಬಂದನು, ಅವನು ಮುದುಕನು. ವಿಕಾರವಾದ ಆಕಾರವುಳ್ಳವನು, ಕೃಶನಾಗಿದ್ದನು, ದೇಹದ ಅವಯವವೆಲ್ಲಾ ಬಿಗಿ ತಪ್ಪಿದ್ದುವು, ಕಾಲು ತಲೆಗಳು ನಡುಗುತ್ತಿದ್ದುವು, ಚರ್ಮವು ಇಳಿಬಿದ್ದಿದ್ದಿತು, ಕೆಮ್ಮು ಕಫಗಳು ಬಹು ಹೆಚ್ಚಾಗಿ ತೊಂದರೆಪಡಿಸುತ್ತಿದ್ದುವು, ಕಣ್ಣಿನ ಜಿಬರು ಕಪಾಲದಲ್ಲೆಲ್ಲಾ ಅಂಟಿಕೊಂಡಿದ್ದಿತು, ಜೊಲ್ಲಿನಿಂದ ಗಡ್ಡವ ಕೂದಲೆಲ್ಲವೂ ನೆನೆದಿದ್ದಿತು. ಇಂತಹ ಬ್ರಾಹ್ಮಣನು ರಾಮನನ್ನು ಕುರಿತು, ನಾನು ಒಬ್ಬ ಬ್ರಾಹ್ಮಣನು ಬಂದಿದ್ದೇನೆ. ಮುದುಕನೂ ಬಡಕಲೂ ಆದ ನನಗೆ ಊಟಹಾಕಬೇಕೆಂದು ರಾಮನನ್ನು ಕೇಳಿದನು.

ರಾಮೋಽಪಿ ತದ್ವಚಶ್ಶ್ರುತ್ವಾ ಲಕ್ಷ್ಮಣಂ ವಾಕ್ಯಮುಕ್ತವಾನ್ ।
ಪಾದೌ ಪ್ರಕ್ಷಾಳಯಾಸ್ಯ ತ್ವಮಹಮಭ್ಯರ್ಚಯೇ ದ್ವಿಜಂ ॥ ೭೪ ॥

ಅಭ್ಯಾಗತೋಽಪಿ ವಚನಮಾಹ ರಾಮಮಥಾಕುಲಂ ।
ತ್ವಯಾ ಪ್ರಕ್ಷಾಳಿತೇ ಪಾದೇ ಮಮ ಭೋಜನಮಿಷ್ಯತೇ ॥ ೭೫ ॥

ಮತ್ತೋಽಧಿಕಾ ದ್ವಿಜಾಃ ಕಿಂ ತೇ ಯೇನ ಮಾಮವಮನ್ಯಸೇ ।
ಶ್ರಾದ್ಧಧರ್ಮಂ ನ ಜಾನೀಷೇ ಮಹರ್ಷಿಗಣಸೇವಿತಂ ॥ ೭೬ ॥

ಮಮಾವಮಾನತಸ್ಸರ್ವವಿಪ್ರಾಣಾಮವಮಾನನಂ ।
ಶ್ರಾದ್ಧಂ ವಿಹನ್ಯತೇ ಚಾಪಿ ನರಕಂ ಚ ಗಮಿಷ್ಯಸಿ ॥ ೭೭ ॥

ಅಥ ರಾಮಸ್ಸ್ವಯಂ ವಿಪ್ರಪಾದೌ ಪ್ರಾಕ್ಷಾಳಯತ್ತದಾ ।
ಆಚಾಮಯಿತ್ವಾ ತಂ ವಿಪ್ರಂ ಗೃಹಂ ಪ್ರಾವೇಶಯತ್ತತಃ ॥ ೭೮ ॥

---

೭೪. ರಾಮನು ಆ ಮಾತನ್ನು ಕೇಳಿ ಎಲೈ ಲಕ್ಷ್ಮಣನೇ, ಆ ಬ್ರಾಹ್ಮಣನಿಗೆ ಕಾಲುಗಳನ್ನು ತೊಳಿ. ನಾನು ಪೂಜೆಮಾಡುತ್ತೇನೆ ಎಂದು ಹೇಳಿದನು.

೭೫. ಅಭ್ಯಾಗತಬ್ರಾಹ್ಮಣನು ಮನಸ್ಸಿನಲ್ಲಿ ಖೇದಹೊಂದಿ ಎಲೈ ರಾಮನೇ, ನೀನೇ ಕಾಲು ತೊಳೆದರೆ ನನಗೆ ಊಟಮಾಡಲು ಇಷ್ಟ ಎಂದನು.

೭೬. ನನ್ನನ್ನು ತಿರಸ್ಕಾರವಾಗಿ ಕಾಣುತ್ತೀದ್ದೀಯಲ್ಲಾ. ಆ ಬ್ರಾಹ್ಮಣರು ನನಗಿಂತಲೂ ಹೆಚ್ಚಿನವರೇನು? ಋಷಿಗಳ ಸಮೂಹವೇ ಆಚರಿಸುವ ಶ್ರಾದ್ಧ ಧರ್ಮವೇ ನಿನಗೆ ಗೊತ್ತಿಲ್ಲವಲ್ಲ.

೭೭. ನನಗೆ ಅವಮಾನಮಾಡಿದರೆ ಎಲ್ಲ ಬ್ರಾಹ್ಮಣರನ್ನೂ ಅವಮಾನಮಾಡಿದಂತೆಯೇ ಆಗುತ್ತದೆ. ಶ್ರಾದ್ಧವೂ ಕೂಡ ಕೆಟ್ಟುಹೋಗುತ್ತದೆ. ನೀನು ನರಕವನ್ನೂ ಹೊಂದುತ್ತೀಯೆ.

೭೮. ಆಗ ರಾಮನು ತಾನೇ ಆ ಬ್ರಾಹ್ಮಣನ ಕಾಲುಗಳನ್ನು ತೊಳೆದು ಆಚಮನಮಾಡಿಸಿ ಆತನನ್ನು ಮನೆಗೆ ಕರೆತಂದನು.

ಆಚಾನ್ತಶ್ಚ ಸ್ವಯಂ ರಾಮೋ ವಿಷ್ಟರಂ ದತ್ತವಾನಥ ।
ಆಸೀನೇಷು ಚ ವಿಪ್ರೇಷು ಪ್ರಾಣಾಯಾಮಂ ನಿರುಧ್ಯ ಚ ॥ ೭೯ ॥

ಸ್ವಕರ್ಮಕರಣಾನುಜ್ಞಾಂ ಲಬ್ಧ್ವಾಥ ಸತಿಲಂ ಜಲಂ ।
ಅಪಹತೇತಿ ಮಂತ್ರೇಣ ದ್ವಾರದೇಶೇ ವಿನಿಕ್ಷಿಪೇತ್ ॥ ೮೦ ॥

ಉದೀರತಾಮಿತಿ ತಥಾ ಪಿತೃಪಾತ್ರಸ್ಥಳೇ ಕ್ಷಿಪೇತ್ ।
ಗಾಯತ್ರ್ಯಾ ಚಾಕ್ಷತಜಲಂ ದೇವಪಾತ್ರಸ್ಥಳೇ ಕ್ಷಿಪೇತ್ ॥
ಪಾಕಜಾತಂ ತಥಾಭ್ಯುಕ್ಷ್ಯ ಮಂತ್ರಮೇತದುದೀರಯೇತ್ ॥ ೮೧ ॥

ಶ್ರಾದ್ಧಭೂಮಿಂ ಗಯಾಂ ಧ್ಯಾತ್ವಾ ಧ್ಯಾತ್ವಾ ದೇವಂ ಜನಾರ್ದನಂ ।
ವಸ್ವಾದೀಂಶ್ಚ ಪಿತೄನ್ಧ್ಯಾತ್ವಾ ತತಶ್ಶ್ರಾದ್ಧಂ ಪ್ರವರ್ತಯ ॥ ೮೨ ॥

ವಿಶ್ವೇದೇವಾರ್ಚನಂ ಕುರ್ಯಾದ್ಯವೈರ್ವಾ ತಂಡುಲೈರಥ ।
ಮೂಲಾಗ್ರಯೋರ್ಜಿತೌ ದರ್ಭೌ ಗೃಹೀತ್ವಾ ಸಾಕ್ಷತಾವಥ ॥ ೮೩ ॥

---

೭೯. ರಾಮನೂ ಆಚಮನಮಾಡಿ ಆ ಬ್ರಾಹ್ಮಣನಿಗೆ ಆಸನವನ್ನು ಕೊಟ್ಟನು. ಬ್ರಾಹ್ಮಣರೆಲ್ಲರೂ ಕುಳಿತಿರಲಾಗಿ ರಾಮನು ಪ್ರಾಣಾಯಾಮಮಾಡಿದನು.

೮೦. ರಾಮನು ತನ್ನ ಕೆಲಸಕ್ಕೆ ಅನುಜ್ಞೆಯನ್ನು ತೆಗೆದುಕೊಂಡು ಅಪಹತ ವೆಂಬ ಮಂತ್ರದಿಂದ ಬಾಗಿಲಿನಲ್ಲಿ ಎಳ್ಳನ್ನು ಇಟ್ಟನು.

೮೧. ಉದೀರತಾ ಎಂಬ ಮಂತ್ರದಿಂದ ಪಿತೃಗಳಿಗೆ ಎಲೆ ಹಾಕತಕ್ಕ ಜಾಗದಲ್ಲಿ ಎಳ್ಳನ್ನು ಹಾಕಬೇಕು. ಗಾಯತ್ರಿಯನ್ನು ಹೇಳಿ ವಿಶ್ವದೇವರು ಕುಳಿತುಕೊಳ್ಳುವ ಪಾತ್ರದ ಸ್ಥಳದಲ್ಲಿ ಅಕ್ಷತೆ ನೀರನ್ನು ಹಾಕಬೇಕು. ಅನಂತರ ಅಡಿಗೆಯನ್ನೆಲ್ಲಾ ಪ್ರೋಕ್ಷಿಸಬೇಕು. ಆಮೇಲೆ ಈ ಮಂತ್ರವನ್ನು ಹೇಳಬೇಕು.

೮೨. ಶ್ರಾದ್ಧಭೂಮಿಯನ್ನು ಗಯೆಯನ್ನಾಗಿ ಧ್ಯಾನಿಸಬೇಕು. ಜನಾರ್ದನ ಸ್ವಾಮಿಯನ್ನು ಧ್ಯಾನಿಸಿಕೊಳ್ಳಬೇಕು. ವಸು, ರುದ್ರ, ಆದಿತ್ಯರೂಪ ಪಿತೃಗಳನ್ನು ಧ್ಯಾನಿಸಬೇಕು. ಅನಂತರ ಶ್ರಾದ್ಧವನ್ನು ಉಪಕ್ರಮಿಸಬೇಕು.

೮೩. ವಿಶ್ವೇದೇವರನ್ನು ಯವದಿಂದಲಾಗಲಿ, ಅಕ್ಕಿಯಿಂದಾಗಲಿ, ಪೂಜಿಸ ಬೇಕು. ಬುಡತುದಿಗಳಿಂದ ಎರಡು ದರ್ಭೆಯನ್ನು ಸೇರಿಸಿ ಅದನ್ನು ಇಟ್ಟುಕೊಂಡು,

ಭೂಸ್ಪೃಷ್ಟದಕ್ಷಜಾನುಸ್ತು ದ್ವಿಜಹಸ್ತೇ ಜಲಾರ್ಪಣಂ ।
ಪುರೂರವಾದ್ರ್ರವಾಣಾಂ ವೈ ದೇವಾನಾಮಿದಮಾಸನಂ ॥ ೮೪ ॥

ಇತಿ ದತ್ವಾಸನಂ ತೇಷಾಂ ಶ್ರಾದ್ಧದಃ ಪ್ರಾರ್ಥಯೇತ್ಕ್ಷಣಂ ॥ ೮೫ ॥

ಅರ್ಘ್ಯಂ ಕೃತ್ವಾ ತತಃ ಪಶ್ಚಾದುತ್ತರಾಗ್ರ್ರಕುಶೇಷ್ವಥ ।
ನ್ಯುಬ್ಜಂ ಪಾತ್ರಂ ತತಃ ಕೃತ್ವಾ ಕುಶಗ್ರಂಥಿಮಥೋಪರಿ ॥ ೮೬ ॥

ಉತ್ತಾನಂ ತು ತತಃ ಕೃತ್ವಾ ಜಲೈರಭ್ಯುಕ್ಷ್ಯ ರೌಕ್ಮಕೈಃ ।
ಪವಿತ್ರಾನ್ತರ್ಹಿತೇ ಪಾತ್ರೇ ಶನ್ನೋದೇವ್ಯಾ ಜಲಂ ಕ್ಷಿಪೇತ್ ॥ ೮೭ ॥

ವೈಶ್ವದೇವ್ಯಾಖಿಲಂ ಕರ್ಮ ಯಾವತ್ತದ್ವಿಧಿಚೋದಿತಂ ।
ಯವೋಽಸಿ ಧಾನ್ಯರಾಜೋ ವಾ ಇತಿ ಪಾತ್ರೇ ಕ್ಷಿಪೇದ್ಯವಾನ್ ॥ ೮೮ ॥

---

ಅಕ್ಷತೆಯನ್ನು ತೆಗೆದುಕೊಂಡು ಬಲಗಾಲನ್ನು ಮುಂಡಿಹಾಕಿಕೊಂಡು, ವಿಶ್ವೇದೇವ ಸ್ಥಾನದ ಬ್ರಾಹ್ಮಣ ಕೈಯ್ಯಲ್ಲಿ ನೀರನ್ನು ಬಿಡಬೇಕು

೮೪-೮೫. ಪುರೂರವಾದ್ರ್ರವ ವಿಶ್ವೇದೇವರಿಗೆ ಈ ಪೀಠವೆಂದು ಆಸನವನ್ನು ಕೊಡಬೇಕು. ಈರೀತಿ ಆಸನವನ್ನು ಕೊಟ್ಟು, ಮಾಡತಕ್ಕವನು ಆ ವಿಷಯದಲ್ಲಿ ನಿಯಮವನ್ನು ಕೇಳಬೇಕು.

೮೬. ಉತ್ತರಕ್ಕೆ ಅಗ್ರಗಳನ್ನು ಮಾಡಿ ದರ್ಭೆಯನ್ನು ಹಾಕಬೇಕು. ಅದರ ಮೇಲೆ ಪಾತ್ರೆಯನ್ನು ಕವುಚಿ ಇಡಬೇಕು. ಅದರ ಮೇಲೆ ಒಂದು ಕೂರ್ಚವನ್ನಿಡಬೇಕು.

೮೭. ಪ್ರೋಕ್ಷಿಸಲು ಸಂಸ್ಕಾರಮಾಡಿ ನೀರನ್ನಿಟ್ಟಿರುವ ಪಾತ್ರೆಗೆ ರೌಕ್ಮವೆಂದು ಹೆಸರು. ಆ ಪಾತ್ರೆಯ ನೀರಿನಿಂದ ಪ್ರೋಕ್ಷಿಸಿ ಸರಿಯಾಗಿಡಬೇಕು. ಕೂರ್ಚವು ಅದರೊಳಗೆ ಇರುವಂತೆ ಇಡಬೇಕು. ಅನಂತರ ಶನ್ನೋದೇವೀ ಮಂತ್ರದಿಂದ ನೀರನ್ನು ಹಾಕಬೇಕು.

೮೮. ವಿಶ್ವೇದೇವವಿಧಿಯಿಂದ ಎಲ್ಲಾ ಕರ್ಮಗಳನ್ನೂ ಮಾಡಬೇಕು. ಯವೋಸಿಧಾನ್ಯರಾಜೋ ಎಂಬ ಮಂತ್ರದಿಂದ ಯವಗಳನ್ನು ಹಾಕಬೇಕು.

ಮಧುಮಿಶ್ರಾಂಸ್ತು ಕರಕಾನ್ಗಂಧಪುಷ್ಪೈಸ್ತತೋ ದದೇತ್ ।
ದ್ವಿಜ ತೇಽಸ್ತ್ವರ್ಘ್ಯ ಇತ್ಯುಕ್ತ್ವಾ ತ್ವಸ್ತ್ವರ್ಘೋತ್ತರತಸ್ತತಃ ॥ ೮೯ ॥

ಆವಾಹಯಿಷ್ಯೇ ತಾನ್ದೇವಾನಿತಿ ಪೃಷ್ಟ್ವಾ ತದುತ್ತರಂ ।
ವಿಶ್ವೇದೇವಾಸ ಇತ್ಯುಕ್ತ್ವಾ ವಿಪ್ರಮೂರ್ಧ್ನಿ ಕುಶಾನ್ ಕ್ಷಿಪೇತ್ ॥ ೯೦ ॥

ವಿಶ್ವೇದೇವಾಃ ಶೃಣುತೇಮಮಾಗಚ್ಛನ್ತ್ವಿತಿ ಸಂಜಪೇತ್ ।
ಸಮಾಗತೋ ನಿಷಣ್ಣೋಽಥ ಸದರ್ಭಂ ಪಾತ್ರಮಾಹರೇತ್ ॥ ೯೧ ॥

ದಕ್ಷಿಣೇ ಚರಣೇ ಕ್ಷಿಪ್ತ್ವಾ ಮುಖ್ಯಪಾತ್ರೋದಕಂ ತತಃ ।
ವಿಪ್ರಸ್ಯ ದಕ್ಷಿಣೇ ಹಸ್ತೇ ಪ್ರಾಗಗ್ರೇಽಥ ಪವಿತ್ರಕೇ ॥ ೯೨ ॥

ಯಾ ದಿವ್ಯಾ ಇತಿ ಮಂತ್ರೇಣ ನಿಕ್ಷಿಪೇತ್ಪಾತ್ರವಾರಿ ತತ್ ।
ಇದಂ ಭೋ ಅರ್ಘ್ಯಮಿತ್ಯುಕ್ತ್ವಾ ಹ್ಯಸ್ತ್ವರ್ಘ್ಯೋತ್ತರತಸ್ತತಃ ॥ ೯೩ ॥

---

೮೯. ಅನಂತರ ಜೇನಿನಿಂದ ಕೂಡಿದ ಮಂಜಿನಗೆಡ್ಡೆಯನ್ನೂ ಗಂಧ ಹೂಗಳನ್ನೂ ಹಾಕಬೇಕು. ಎಲೈ ದ್ವಿಜನೇ, ನಿನಗೆ ಅರ್ಘ್ಯವು ಎಂದು ಅರ್ಘ್ಯವನ್ನು ಕೊಡಬೇಕು.

೯೦. ಆ ವಿಶ್ವೇದೇವರನ್ನು ನಿನ್ನಲ್ಲಿ ಆವಾಹನೆಮಾಡುತ್ತೇನೆಂದು ಬ್ರಾಹ್ಮಣನನ್ನು ಕೇಳಿ ಆಗಲೆಂದು ಉತ್ತರ ಬಂದಮೇಲೆ ವಿಶ್ವೇದೇವರಿಗೋಸ್ಕರವೆಂದು ಆ ಬ್ರಾಹ್ಮಣನ ತಲೆಯ ಮೇಲೆ ದರ್ಭೆಯನ್ನು ಹಾಕಬೇಕು.

೯೧. ವಿಶ್ವೇದೇವಾಶ್ಶೃಣುತೇಮಂ, ಆಗಚ್ಛನ್ತು ಮಹಾಭಾಗಾಃ ಎಂಬ ಮಂತ್ರಗಳನ್ನು ಜಪಿಸಬೇಕು. ಆವಾಹನೆಯಾಗಿ ಕುಳಿತನಂತರ ದರ್ಭೆಯೊಡಗೂಡಿದ ಪಾತ್ರೆಯನ್ನು ತರಬೇಕು.

೯೨. ಆ ನೀರನ್ನೂ ದರ್ಭೆಯನ್ನೂ ಬಲಗಾಲ ಮೇಲೆ ಹಾಕಬೇಕು. ಅನಂತರ ವಿಶ್ವೇದೇವರಿಗಿಟ್ಟ ಪಾತ್ರೆಯನ್ನು ಅದರೊಳಗಿನ ಪವಿತ್ರವನ್ನೂ ತಂದು ಆ ಪವಿತ್ರವನ್ನು ಪೂರ್ವಾಗ್ರಮಾಡಿ ಆ ಬ್ರಾಹ್ಮಣನ ಕೈಯಲ್ಲಿಡಬೇಕು.

೯೩. ಯಾದಿವ್ಯಾಆಪಃ ಎಂಬ ಮಂತ್ರದಿಂದ ಆ ಪಾತ್ರೆಯ ನೀರನ್ನು ಕೈಯಲ್ಲಿ ಹಾಕಬೇಕು. ಎಲೈ, ಇದು ಅರ್ಘ್ಯವು ಎಂದು ಹೇಳಿ ಅವನಿಂದ ಅರ್ಘ್ಯವು ಹೌದು ಆಗಲಿ ಎಂದು ಉತ್ತರವನ್ನು ಹೊಂದಬೇಕು.

ಪಾತ್ರೇ ಧೃತ್ವಾರ್ಘ್ಯತೋಯಂ ಚ ತತ್ಪಾತ್ರಂ ಸ್ಥಾಪಯೇತ್ಕ್ವಚಿತ್ ।
ಅಥ ದತ್ವಾ ಕರೇ ತೋಯಂ ಯವೈರೇತಾನಥಾರ್ಚಯೇತ್ ॥ ೯೪ ॥

ಅರ್ಚಿತಸ್ವಾರ್ಚಿತ ಇತಿ ಪೃಷ್ಟ್ವಾ ಚೋತ್ತರತಸ್ತತಃ ।
ಪಾದಾದಿಮೂರ್ಧಪರ್ಯನ್ತಮಭ್ಯರ್ಚ್ಯ ಜಲದಸ್ತತಃ ॥ ೯೫ ॥

ಗಂಧದ್ವಾರೇತಿ ಮಂತ್ರೇಣ ತಥೇತ್ಯುಕ್ತೋತ್ತರಸ್ತತಃ ।
ಪಿತ್ರ್ಯಾಣಾಮರ್ಚನಂ ಕುರ್ಯಾದೇವಮೇವಾಪಸವ್ಯಕಂ ॥ ೯೬ ॥

ಉಪವೀತಂ ದ್ವಿಜಂ ಕೃತ್ವಾ ಕುಶಾನ್ಸಗ್ನಾಂಸ್ತಿಲಾನ್ವಿತಾನ್ ।
ವಾಮಜಾನುಂ ಭೂಮಿಗತಂ ಕೃತ್ವಾ ದದ್ಯಾತ್ತದಾಸನಂ ॥ ೯೭ ॥

ದಕ್ಷಿಣಾಭಿಮುಖೋ ಭೂತ್ವಾ ಕ್ಷಣಪ್ರಶ್ನಮುಖೋ ವದೇತ್ ।
ದಕ್ಷಿಣಾಗ್ರೇಷು ದರ್ಭೇಷು ನ್ಯುಬ್ಜಂ ಪಾತ್ರತ್ರಯಂ ನ್ಯಸೇತ್ ॥ ೯೮ ॥

---

೯೪. ಆ ಅರ್ಘ್ಯದ ನೀರನ್ನು ಒಂದು ಪಾತ್ರೆಯಲ್ಲಿ ಹಿಡಿದಿರಬೇಕು. ಅನಂತರ ಕೈಗೆ ಶುದ್ಧೋದಕವನ್ನು ಕೊಡಬೇಕು. ಮತ್ತು ಆ ವಿಶ್ವೇದೇವರನ್ನು ಅಕ್ಷತೆಯಿಂದ ಪೂಜಿಸಬೇಕು.

೯೫. ಪೂಜೆಯನ್ನು ಮಾಡುತ್ತೇನೆ ಎಂದು ಕೇಳಿ ಉತ್ತರ ಬಂದನಂತರ ಕಾಲಿನಿಂದ ಮೊದಲು ಮಾಡಿ ತಲೆಯವರೆಗೂ ಪೂಜಿಸಿ ನೀರನ್ನು ಕೈಗೆ ಕೊಡಬೇಕು.

೯೬. ಗಂಧದ್ವಾರಾಂ ಎಂಬ ಮಂತ್ರದಿಂದ ಗಂಧವನ್ನು ಕೊಡಬೇಕು. ಅವರ ಅನುಜ್ಞೆಯನ್ನು ಪಡೆದು ಪಿತೃಗಳ ಅರ್ಚನೆಯನ್ನು ಜನಿವಾರವನ್ನು ಎಡಗಡೆಗೆ ಹಾಕಿಕೊಂಡು ಮಾಡಬೇಕು.

೯೭. ಆ ಬ್ರಾಹ್ಮಣನು ಉಪವೀತಿಯನ್ನು ಹಾಕಿಕೊಂಡಿರಬೇಕು. ತುಂಡು ದರ್ಭೆಗಳನ್ನೂ ನೀರನ್ನೂ ಎಳ್ಳನ್ನೂ ಸೇರಿಸಿಕೊಂಡು, ಬಲಮಂಡಿಯನ್ನು ನೆಲಕ್ಕೆ ಊರಿಕೊಂಡು, ಆಸನವನ್ನು ಆ ಪಿತೃಸ್ಥಾನದ ಬ್ರಾಹ್ಮಣನಿಗೆ ಕೊಡಬೇಕು.

೯೮. ದಕ್ಷಿಣಕ್ಕೆ ಮುಖಹಾಕಿಕೊಂಡು ಕ್ಷಣವನ್ನು ಕೇಳಬೇಕು. ದಕ್ಷಿಣಾಗ್ರವಾಗಿ ದರ್ಭೆಗಳನ್ನು ಹಾಕಿ ಮೂರು ಪಾತ್ರೆಗಳನ್ನು ತಲೆಕೆಳಗಾಗಿ ಇಡಬೇಕು.

ತ್ರಿಕುಶಗ್ರಂಥಿಸಂಯುಕ್ತಮುತ್ತಾನಮಥ ಕಲ್ಪಯೇತ್ ।
ತತಸ್ಸಂಪ್ರೋಕ್ಷ್ಯ ಪಾತ್ರೇಷು ಸಪವಿತ್ರತಿಲೇಷು ಚ ॥ ೯೯ ॥

ಶಂ ನೋ ದೇವ್ಯಾ ಜಲಂ ಕ್ಷಿಪ್ತ್ವಾ ತಿಲೋಽಸೀತಿ ತಿಲಾನ್ಕ್ಷಿಪೇತ್ ।
ಗಂಧಪುಷ್ಪಮಥೋ ದತ್ವಾ ಸ್ವಧಾರ್ಘ್ಯ ಇತಿ ಪೃಚ್ಛತಿ ॥ ೧೦೦ ॥

ದತ್ತೋತ್ತರೋಽಸ್ತ್ವರ್ಘ್ಯ ಇತಿ ಪಿತ್ರ್ನಾವಾಹಯೇತ್ತತಃ ।
ತಿಲಪುಷ್ಪಕುಶೈಸ್ತ್ರಿಷ್ಟ್ವಕ್ಲಪ್ತಾರ್ಘ್ಯಂ ಕರೇ ದಧತ್ ॥ ೧೦೧ ॥

ಉಶನ್ತಸ್ತ್ವೇತಿ ಮಂತ್ರೇಣ ತ್ರಿರರ್ಘ್ಯೋದಕಮರ್ಪಯೇತ್ ।
ಅರ್ಚನಂ ತು ತದಾ ತೇಷಾಮುಪಸವ್ಯಂ ತು ಪೂರ್ವವತ್ ॥ ೧೦೨ ॥

ಪ್ರಕ್ಷಾಳ್ಯ ಭಾಜನಂ ಸ್ವರ್ಣಂ ದೇವಾನಾಂ ಪರಿಕಲ್ಪಯೇತ್ ।
ಪಿತ್ರ್ಣಾಂ ರಾಜತಂ ಕುರ್ಯಾದ್ಯಥಾಸಂಭವಮೇವ ವಾ ॥ ೧೦೩ ॥

---

೯೯. ಮೂರು ದರ್ಭೆಗಳಿಂದ ಕೂಡಿದ ಪವಿತ್ರಗಳನ್ನು (ಕೂರ್ಚ) ಅದರ ಮೇಲಿಡಬೇಕು. ಅದನ್ನು ಪ್ರೋಕ್ಷಿಸಿ ಸರಿಯಾಗಿಟ್ಟು ಅದರೊಳಕ್ಕೆ ಆ ಪವಿತ್ರಗಳನ್ನೂ ಇಟ್ಟು ಎಳ್ಳನ್ನು ಹಾಕಬೇಕು.

೧೦೦. ಶಂನೋದೇವೀ ಎಂಬ ಮಂತ್ರದಿಂದ ನೀರನ್ನು ಹಾಕಬೇಕು. ತಿಲೋಽಸಿ ಸೋಮದೇವತ್ಯ ಎಂಬ ಮಂತ್ರದಿಂದ ಎಳ್ಳನ್ನು ಹಾಕಬೇಕು. ಗಂಧ ಹೂಗಳನ್ನು ಹಾಕಬೇಕು. ಇದು ಸ್ವಧಾರ್ಘ (ಪಿತೃಗಳ ಅರ್ಘ್ಯ) ಎಂದು ಕೇಳಬೇಕು

೧೦೧. ಅರ್ಘ್ಯವಾಗಲೆಂದು ಉತ್ತರ ಬಂದಮೇಲೆ ಪಿತೃಗಳನ್ನು ಆವಾಹನೆ ಮಾಡಬೇಕು. ಎಳ್ಳು, ಹೂ, ದರ್ಭೆಗಳನ್ನು ಹಾಕಿರುವ ಅರ್ಘ್ಯವನ್ನು ಕೈಗೆ ತೆಗೆದು ಕೊಳ್ಳಬೇಕು. ಅದರಲ್ಲಿರುವ ಕೂರ್ಚನ್ನು ದಕ್ಷಿಣಾಗ್ರವಾಗಿ ಬ್ರಾಹ್ಮಣನ ಕೈಯಲ್ಲಿಡ ಬೇಕು.

೧೦೨. ಉಶನ್ತಸ್ತ್ವಾ ಎಂಬ ಮಂತ್ರದಿಂದ ಅರ್ಘ್ಯವನ್ನು ಕೈಗೆ ಕೊಡಬೇಕು. ಅರ್ಚನೆಯನ್ನೂ ಕೂಡ ಎಡಗಡೆಗೆ ಜನಿವಾರವನ್ನು ಹಾಕಿಕೊಂಡೇ ಮಾಡಬೇಕು.

೧೦೩. ಚಿನ್ನದ ಪಾತ್ರೆಯನ್ನು ವಿಶ್ವೇದೇವರಿಗೂ, ಬೆಳ್ಳಿಯ ಪಾತ್ರೆಯನ್ನು ಪಿತೃಗಳಿಗೂ ತೊಳೆದು ಇಡಬೇಕು. ಸೌಕರ್ಯವೂ, ಐಶ್ವರ್ಯವೂ ಇದ್ದಂತೆ ಮಾಡಿ ಕೊಳ್ಳಬೇಕು.

ತದಭಾವೇ ತು ಕಾಂಸ್ಯಂ ಸ್ಯಾದನಸ್ಯಾಶಿತಮುತ್ತಮಂ ।
ಪಾತ್ರಾಣಿ ತದಭಾವೇ ಸ್ಯುಃ ಪಾಲಾಶಾನಿ ನ ಮಧ್ಯಮಂ ॥ ೧೦೪ ॥

ರಂಭಾಣಿ ಚೂತಪತ್ರಾಣಿ ಜಂಬೂಪುನ್ನಾಗಕಾನಿ ಚ।
ಪರಾಕಾನ್ಯಥ ಚಾಂಪಾನಿ ಮಧೂಕಕುಟಜಾನ್ಯಪಿ ॥ ೧೦೫ ॥

ಮಾತುಲುಂಗಸ್ಯ ಪತ್ರಾಣಿ ಶ್ರಾದ್ಧೇ ದೇಯಾನಿ ವೈ ನೃಭಿಃ ।
ದರ್ವ್ಯಾಮನ್ನಮಥಾದಾಯ ಕರಾಭ್ಯಾಮಾಜ್ಯಮೇವ ಚ ॥ ೧೦೬ ॥

ಪ್ರವೇಷಣಂ ತತಃ ಪೃಚ್ಛೇತ್ಪ್ರಾಚೀನಾವೀತವಾನ್ದ್ವಿಜಂ ।
ಕರಿಷ್ಯೇಽಗ್ನೌಕರಣಮಿತಿ ಕುರುಷ್ವೇತಿ ತದುತ್ತರಂ ॥ ೧೦೭ ॥

ಪರಿವಿಷ್ಯೋಪವೀತೀ ಸ್ಯಾದಭಿಘಾರ್ಯ ಸಮಾಹರೇತ್ ।
ಪುನೇತ್ಸೋಮಾಯ ಪಿತೃಮತೇ ಸ್ವಧಾ ನಮ ಇತೀರಯನ್ ॥ ೧೦೮ ॥

---

೧೦೪. ಅವುಗಳಿಲ್ಲದಿದ್ದರೆ ಕಂಚಿನ ಪಾತ್ರೆಯಾಗಬಹುದು. ಮತ್ತಾರೂ ಊಟಮಾಡದಿದ್ದುದಾದರೆ ಉತ್ತಮವು. ಎಂದರೆ ಹೊಸದಾದರೆ ಉತ್ತಮವು. ಅದೂ ಇಲ್ಲದಿದ್ದರೆ ಮುತ್ತುಗದ ಎಲೆಯಾಗಬಹುದು. ಅವುಗಳಲ್ಲಿ ಮಧ್ಯಮಪರ್ಣ ವಿರಬಾರದು.

೧೦೫. ಬಾಳೆಲೆ, ಮಾವಿನೆಲೆ, ನೇರಳೇ ಎಲೆ, ಸುರಹೊನ್ನೆ ಎಲೆ, ಕಾಡುಮಲ್ಲಿಗೆ ಎಲೆ, ಸಂಪಿಗೆ ಎಲೆ, ಮಾತುಲಂಗದ ಎಲೆ (ಮಾವಳ) ಇವುಗಳನ್ನು ಶ್ರಾದ್ಧದಲ್ಲಿ ಹಾಕಬಹುದು.

೧೦೬-೧೦೭. ಒಂದು ಸಣ್ಣಪಾತ್ರೆಯಲ್ಲಿ ಅನ್ನವನ್ನು ತೆಗೆದುಕೊಂಡು ಮತ್ತೊಂದರಲ್ಲಿ ತುಪ್ಪವನ್ನು ತೆಗೆದುಕೊಂಡು ಎರಡು ಕೈಯಲ್ಲೂ ಹಿಡಿದುಕೊಂಡು ಪ್ರಾಚೀನಾವಿತಿಯನ್ನು ಹಾಕಿಕೊಂಡು ಪಿತೃಗಳಿಗೆ ಕೊಡುವಿಕೆಯನ್ನೂ ಅಗ್ನಿಯಲ್ಲಿ ಹೋಮಮಾಡುವಿಕೆಯನ್ನೂ ಮಾಡಲು, ಆ ಪಿತೃಸ್ಥಾನದ ಬ್ರಾಹ್ಮಣನನ್ನು ಕೇಳಬೇಕು. ಅವನು ಆಗಲಿ ಎಂದು ಉತ್ತರಕೊಡಬೇಕು.

೧೦೮. ಆ ಅನ್ನವನ್ನು ಕೆಳಗಿಟ್ಟುಕೊಳ್ಳಬೇಕು. ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳಬೇಕು. ತುಪ್ಪವನ್ನು ಅದರ ಮೇಲೆ ಹುಯಿದುಕೊಳ್ಳಬೇಕು. ಸ್ವಲ್ಪ

ಯಮಾಯಾಂಗಿರಸೇ ಪಿತೃಮತೇ ಸ್ವಧಾ ನಮ ಇತಿ ।
ದ್ವಿತೀಯಾಮಾಹುತಿಂ ಹುತ್ವಾ ಚಾಭಿಘಾರ್ಯಾಕ್ಷತಂ ತತಃ ॥ ೧೦೯ ॥

ಅಗ್ನಯೇ ಕವ್ಯವಾಹನಾಯ ಸ್ವಧಾ ನಮಸ್ತತಃ ಪರಂ ।
ಹುತ್ವಾಪಸವ್ಯಂ ಕೃತ್ವಾ ತು ಪರಿಷಿಚ್ಯ ದ್ವಿಜಾನ್ವ್ರಜೇತ್ ॥ ೧೧೦ ॥

ಮೇಕ್ಷಣೇನ ತತೋಽಭೀಕ್ಷ್ಣಂ ಪಾತಯೇತ್ಪಿತೃಪಾತ್ರಕೇ ।
ಪಿಂಡಪಾತ್ರಮತಶ್ಶೇಷಂ ದರ್ವೀಪ್ರಕ್ಷಾಳನಂ ತತಃ ॥ ೧೧೧ ॥

ಮೇಕ್ಷಣಸ್ಯಾಗ್ನಿನಿಕ್ಷೇಪಂ ತತಃ ಪಾತ್ರಾಣ್ಯುಪಸ್ತರೇತ್ ।
ಪಾತ್ರದಕ್ಷಿಣಭಾಗೇ ತು ದದ್ಯಾದನ್ನಮನಂತರಂ ॥ ೧೧೨ ॥

---

ವನ್ನು ತೆಗೆದುಕೊಂಡು ಪಿತೃಗಳನ್ನೊಳಗೊಂಡಿರುವ ಸೋಮನಿಗೆ ಈ ಅನ್ನವೆಂದು ಹೋಮಮಾಡಬೇಕು.

೧೦೯. ಪಿತೃಗಳಿಂದ ಕೂಡಿದ ಆಂಗೀರಸನಾದ ಯಮನಿಗೆ ಈ ಅನ್ನವೆಂದು ಎರಡನೆಯ ಬಾರಿ ಅಗ್ನಿಯಲ್ಲಿ ಹೋಮಮಾಡಬೇಕು. ಮತ್ತೆ ಆ ತುಪ್ಪವನ್ನು ಹಾಕಿಕೊಳ್ಳಬೇಕು.

೧೧೦. ಕವ್ಯವೆಂಬ ಅನ್ನವನ್ನು ಹೊತ್ತುಕೊಂಡು ಹೋಗುವ ಅಗ್ನಿಗೆ ಇದು ಎಂದು ಹೋಮಮಾಡಬೇಕು. ಈರೀತಿ ಮೂರು ಹೋಮಗಳನ್ನು ಮಾಡಿ ಜನಿವಾರ ವನ್ನು ಎಡಕ್ಕೆ ಹಾಕಿಕೊಳ್ಳಬೇಕು. ಉಳಿದನ್ನವನ್ನು ಪರಿಷೇಚನಮಾಡಬೇಕು. ಅನಂತರ ಬ್ರಾಹ್ಮಣರ ಬಳಿಗೆ ಹೋಗಬೇಕು.

೧೧೧. ಮೇಕ್ಷಣವೆಂದರೆ ಹೋಮಮಾಡುವಾಗ ಕೈಗೆ ಸಿಕ್ಕಿಸಿಕೊಂಡಿರುವ ದರ್ಭೆ. ಅದರಿಂದ ಪ್ರಿತೃಪಾತ್ರಕ್ಕೆ ಮೂರು ಬಾರಿ ಅನ್ನವನ್ನು ಹಾಕಬೇಕು. ಶೇಷವನ್ನು ಪಿಂಡಪಾತ್ರಕ್ಕೆ ಹಾಕಬೇಕು. ಅನಂತರ ದರ್ವಿಯನ್ನು ತೊಳೆಯಬೇಕು.

೧೧೨. ಅನಂತರ ಮೇಕ್ಷಣವನ್ನು ಬೆಂಕಿಯಲ್ಲಿ ಹಾಕಬೇಕು. ಅನಂತರ ಪಾತ್ರೆಗಳನ್ನು ಹಾಕಬೇಕು. ಪಾತ್ರೆಯ ಬಲಭಾಗದಲ್ಲಿ ಅನ್ನವನ್ನು ಬಡಿಸಬೇಕು.

ಭಕ್ಷ್ಯಾಣಿ ಭೋಜ್ಯಶಾಕಾನಿ ಸರ್ವಾಣ್ಯೇವ ಸ ದತ್ತವಾನ್ ।
ಅಥಾತಿಥಿರ್ಮಹಾನ್ವೃದ್ಧೋ ವೀಕ್ಷಮಾಣಸ್ತತಸ್ತತಃ ॥ ೧೧೩ ॥

ಉವಾಚ ರಾಘವಂ ಶಾನ್ತಂ ಶ್ರೀಘ್ರಮೇವ ನಮಸ್ಕುರು ।
ಬುಭುಕ್ಷಾ ವರ್ತತೇಽಸ್ಮಾಕಂ ಭೋಕ್ಷ್ಯೇಽಹಂ ತ್ವಾ ತವಾಜ್ಞಯಾ ॥ ೧೧೪ ॥

ರಾಮೋ ಬಭಾಷೇ ವಚನಂ ವಿಲಂಬಯ ಕ್ಷಣಂ ಮುನೇ ।
ದೇವತಾಃ ಪಿತರೋ ಮಂಕ್ಷು ನಮಸ್ಯನ್ತೇಽಧುನಾ ಮಯಾ ॥ ೧೧೫ ॥

ಇತ್ಯುಕ್ತ್ವಾ ರಾಘವಃ ಪ್ರಾದಾದನ್ನಂ ಪಾತ್ರಗತಂ ತದಾ ।
ಪ್ರಾಕ್ಸೌಮ್ಯಾಗ್ರಾನ್ ಕುಶಾನ್ದೈವೇ ಪ್ರತೀಚೀದಕ್ಷಿಣಾಗ್ರಕಾನ್ ॥ ೧೧೬ ॥

ಪಿತ್ರೇ ಪವಿತ್ರೇ ಯೇ ದರ್ಭಾ ಯವಾನಥ ತಿಲಾನಪಿ ।
ಅನ್ನಪ್ರದಾನಂ ಕುರ್ವನ್ತಿ ಪೃಥಿವೀ ಇತಿ ಮಂತ್ರತಃ ॥ ೧೧೭ ॥

---

೧೧೩. ಭಕ್ಷ್ಯಗಳನ್ನೂ, ಭೋಜ್ಯಗಳನ್ನೂ, ಪಲ್ಯ ಮುಂತಾದ ಎಲ್ಲಾ ಪದಾರ್ಥಗಳನ್ನೂ ಬಡಿಸಿದನು. ಅನಂತರ ಆ ವೃದ್ಧನಾದ ಅತಿಥಿಯು ಇತ್ತತ್ತ ಎಲ್ಲವನ್ನೂ ನೋಡುತ್ತಿದ್ದನು.

೧೧೪. ಸಮಾಧಾನದಿಂದಿರುವ ರಾಮನನ್ನು ಕುರಿತು ರಾಮನೇ, ಬೇಗ ನಮಸ್ಕಾರಮಾಡು. ನನಗೆ ಬಹಳ ಹಸಿವಾಗುತ್ತದೆ. ನಿನ್ನ ಅಪ್ಪಣೆಯಾದರೆ ಊಟ ಮಾಡುತ್ತೇನೆ.

೧೧೫. ಆಗ ರಾಮನು ಎಲೈ ಮುನಿಯೇ, ಕ್ಷಣಕಾಲ ತಾಳು. ದೇವತೆಗಳೂ ಪಿತೃಗಳೂ ಈಗಲೇ ನಮಸ್ಕರಿಸಲ್ಪಡುತ್ತಾರೆ.

೧೧೬. ಹೀಗೆಂದು ಹೇಳಿ ರಾಮನು ಪಾತ್ರದಲ್ಲಿದ್ದ ಅನ್ನವನ್ನು ಪೂರ್ವದ ಕಡೆಗೆ ಅಗ್ರವಿರುವಂತೆ ದರ್ಭೆಹಾಕಿದ್ದನ್ನವನ್ನು ವಿಶ್ವೇದೇವರಿಗೂ, ಪಶ್ಚಿಮದ ಕಡೆಗೆ ದಕ್ಷಿಣಾಗ್ರವಾಗಿ ದರ್ಭೆಹಾಕಿದ್ದುದನ್ನು ಪಿತೃಗಳಿಗೂ ಕೊಟ್ಟನು.

೧೧೭. ಪಿತೃಪಾತ್ರದಲ್ಲಿರುವ ಪವಿತ್ರವನ್ನೂ ದರ್ಭೆಯನ್ನೂ ಅಕ್ಕಿ ಎಳ್ಳುಗಳನ್ನೂ ತೆಗೆದುಕೊಂಡು ಪೃಥಿವೀತೇ ಪಾತ್ರಂ ಎಂಬ ಮಂತ್ರದಿಂದ ಅನ್ನವನ್ನು ಕೊಡುತ್ತಾರೆ.

ಇದಂ ವಿಷ್ಣುರಿತಿ ಸ್ಪೃಷ್ಟಮಂಗುಷ್ಠೇನ ದ್ವಿಜಸ್ಯ ತು ।
ದೇವೇಭ್ಯಃ ಪ್ರಥಮಂ ದದ್ಯಾದ್ಯೇ ದೇವಾ ಇತಿ ವೈ ಪಠನ್ ॥ ೧೧೮ ॥

ಪಿತೄಣಾಂ ಚ ತತೋ ದದ್ಯಾದ್ದದ್ಯಾದತಿಥಯೇ ತತಃ ।
ದೇವತಾಭ್ಯ ಇತಿ ಮುಖಾನುಚ್ಚಾರ್ಯಾಪೋಶನಂ ದದೇತ್ ॥ ೧೧೯ ॥

ತ್ರಿರ್ಜಪಿತ್ವಾ ತು ಗಾಯತ್ರೀಮುಪವೀತೀ ಪುರೋಮುಖಃ ।
ಪ್ರಾಚೀನಾವೀತವಾನ್ಸ್ತ್ರೀಯಾನ್ಮಧುತ್ರಯಮತಃ ಪರಂ ॥ ೧೨೦ ॥

ಭುಂಜಧ್ವಮಿತಿ ತಾನುಕ್ತ್ವಾ ಭುಂಜಾನೇಷು ದ್ವಿಜಾತಿಷು ।
ರಕ್ಷೋಘ್ನಮಂತ್ರಪಠನಂ ಭಕ್ಷ್ಯಭೋಜಾದಿ ದಾಪಯನ್ ॥ ೧೨೧ ॥

ಏತಸ್ಮಿನ್ನಂತರೇ ವಿಪ್ರೋ ಯೋಽತಿಥಿಸ್ತದಿದಂ ತಥಾ ।
ಕೃತವಾನ್ಮಹದಾಶ್ಚರ್ಯಂ ತದ್ವದಾಮಿ ಸಮಾಸತಃ ॥ ೧೨೨ ॥

---

೧೧೮. ಇದಂ ವಿಷ್ಣುರ್ವಿಚಕ್ರಮೇ ಎಂಬ ಮಂತ್ರವನ್ನು ಹೇಳಿ ಬ್ರಾಹ್ಮಣನ ಅಂಗುಷ್ಠದಿಂದ ಅನ್ನವನ್ನು ಮುಟ್ಟಿಸಬೇಕು. ಯೇದೇವಾದಿವಿ ಎಂಬ ಮಂತ್ರವನ್ನು ಹೇಳಿ ವಿಶ್ವೇದೇವರಿಗೆ ಮೊದಲು ಕೊಡಬೇಕು.

೧೧೯. ಅನಂತರ ಪಿತೃಗಳಿಗೂ ಆಮೇಲೆ ಅತಿಥಿಗಳಿಗೂ ಕೊಡಬೇಕು. ದೇವತಾಭ್ಯಃ ಪಿತೃಭ್ಯಶ್ಚ ಎಂಬ ಮಂತ್ರವನ್ನು ಹೇಳಿಕೊಂಡು ಆಪೋಶನವನ್ನು ಹಾಕಬೇಕು.

೧೨೦. ಉಪವೀತವನ್ನು ಹಾಕಿಕೊಂಡು ಪೂರ್ವಮುಖವಾಗಿ ಕುಳಿತು ಮೂರು ಬಾರಿ ಗಾಯತ್ರಿಯನ್ನು ಜಪಿಸಬೇಕು. ಅನಂತರ ಪ್ರಾಚೀನಾವೀತಿಯನ್ನು ಹಾಕಿಕೊಂಡು ಮಧುವಾತಾ ಋತಾಯತೇ ಎಂದು ಮೊದಲುಮಾಡಿಕೊಂಡು ಮೂರು ಮಂತ್ರಗಳನ್ನು ಹೇಳಬೇಕು.

೧೨೧. ಊಟಮಾಡಿರೆಂದು ಅವರಿಗೆ ಹೇಳಬೇಕು. ಆ ಬ್ರಾಹ್ಮಣರು ಊಟಮಾಡುತ್ತಿರುವಾಗ ರಕ್ಷೋಘ್ನಸೂಕ್ತವನ್ನು ಹೇಳುತ್ತ ಭಕ್ಷ್ಯಭೋಜ್ಯಗಳನ್ನು ಬಡಿಸುತ್ತಿರಬೇಕು.

೧೨೨. ಅಷ್ಟರೊಳಗೆ ಅತಿಥಿಯಾಗಿ ಬಂದಿದ್ದ ಬ್ರಾಹ್ಮಣನು ಇದರ ವಿಷಯದಲ್ಲಿ ಒಂದು ಆಶ್ಚರ್ಯವನ್ನು ಮಾಡಿದನು. ಅದನ್ನು ಸೂಕ್ಷ್ಮವಾಗಿ ಹೇಳುತ್ತೇನೆ.

ಪಾತ್ರಸ್ಥಿತಮಶೇಷಂ ಚ ಗ್ರಾಸೇನೈಕೇನ ಚಾಗ್ರಸತ್ ।
ಪ್ರಾಣಾಹುತೀನಾಂ ಪರ್ಯಾಪ್ತಂ ದೀಯತಾಮಿತಿ ಚಾಬ್ರವೀತ್ ॥ ೧೨೩ ॥

ಏತಾವದ್ದಾತುಮಶಕ್ತಃ ಕಥಂ ಶ್ರಾದ್ಧಕ್ರಿಯೋದ್ಯತಃ ।
ಮಮೈಕಸ್ಯ ಪ್ರದಾನೇ ತ್ವಮಶಕ್ತೋ ರಾಮ ಕಿಂ ವೃಥಾ ॥ ೧೨೪ ॥

ಬಹೂನಾಂ ಭೋಜನಂ ದಾತುಮುದ್ಯುಕ್ತೋ ರಾಮ ಕಿಂ ವೃಥಾ ।
ಸಹಸಾ ಕೃತಕರ್ಮಾಣಿ ನ ಸಮಾಪ್ತಿಂ ಪ್ರಯಾಂತಿ ಚ ॥ ೧೨೫ ॥

ತ್ವಯಾ ಕೃತಮಶೇಷಾಣಾಂ ನಾಲಂ ಪ್ರಾಣಾಹುತಿರ್ಮಮ ।
ಕಥಂ ಮೇ ದೀಯತೇ ಭುಕ್ತಿಃ ಕಥಮೇಷಾಂ ತಥಾ ವದ ॥ ೧೨೬ ॥

ರಾಮಸ್ತಮಬ್ರವೀದ್ವೀರೋ ಭುಂಕ್ಷ್ವ ತ್ವಂ ಹಿ ಯಥಾಸುಖಂ ।
ಇತ್ಯುದೀರ್ಯ ನಿರೀಕ್ಷ್ಯಾಸ್ಯ ಕರ್ಮ ತತ್ಪರಮಾದ್ಭುತಂ ॥ ೧೨೭ ॥

---

೧೨೩. ತನಗೆ ಹಾಕಿದ್ದ ಪಾತ್ರದಲ್ಲಿದ್ದ ಪದಾರ್ಥಗಳನ್ನೆಲ್ಲಾ ಒಂದೇತುತ್ತಿಗೆ ತಿಂದುಬಿಟ್ಟನು. ಮತ್ತು ರಾಮ, ನೀನು ಬಡಿಸಿದ್ದು ಪ್ರಾಣಾಹುತಿಗೆ ಸಾಕಾಯಿತು. ಮತ್ತೆ ಬಡಿಸು ತೆಗೆದುಕೊಂಡು ಬಾ ಎಂದನು.

೧೨೪. ಇಷ್ಟನ್ನು ಕೊಡಲು ಅಶಕ್ತನಾದವನು ಶ್ರಾದ್ಧಮಾಡಲು ಏಕೆ ಪ್ರಯತ್ನಪಟ್ಟೆ? ನನ್ನೊಬ್ಬನಿಗೇ ಕೊಡದವನು ವ್ಯರ್ಥವಾಗಿ ಏಕೆ ಶ್ರಾದ್ಧಮಾಡಿದೆ?

೧೨೫. ಅಯ್ಯಾ ರಾಮ, ಬಹಳ ಜನಕ್ಕೆ ಊಟಹಾಕಲು ವ್ಯರ್ಥವಾಗಿ ಪ್ರಯತ್ನಪಟ್ಟಿರುವೆಯಲ್ಲಾ? ಯೋಚನೆ ಮಾಡದೆ ಮಾಡಿದ ಕೆಲಸಗಳು ಪೂರ್ಣವಾಗುವುದಿಲ್ಲ.

೧೨೬. ನೀನು ಎಲ್ಲರಿಗೂ ಮಾಡಿರುವ ಅಡಿಗೆಯು ನನಗೊಬ್ಬನಿಗೆ ಪ್ರಾಣಾಹುತಿಗೆ ಸಾಲದು. ನನಗೆ ಹೊಟ್ಟೆತುಂಬ ಹೇಗೆ ಅನ್ನವನ್ನು ಹಾಕುತ್ತೀಯೆ? ಇವರಿಗೆ ಹೇಗೆ ಹೊಟ್ಟೆ ತುಂಬಿಸುತ್ತೀಯೆ? ಹೇಳು.

೧೨೭. ಆಗ ವೀರನಾದ ರಾಮನು, ಅಪ್ಪ, ನೀನು ಇಷ್ಟಬಂದಷ್ಟು ಊಟ ಮಾಡು. ಎಂದು ಹೇಳಿ ಅವನ ಅದ್ಭುತಕರ್ಮವನ್ನು ನೋಡಿದನು.

ಅಥ ಶಂಭುಂ ಸಮಾಹೂಯ ಪ್ರಾಹ ತ್ವಂ ಪರಿವೇಷಯ ।
ತ್ವಂ ಪಿತಾ ಪಾರ್ವತೀ ಮಾತಾ ಶಿವಾ ದೇವೀತಿ ಮೇ ಮತಿಃ ॥ ೧೨೮ ॥

ಅನ್ನಪೂರ್ಣೇಶ್ವರೀ ದೇವೀ ಭವಾನ್ಯೇವೇತಿ ಮೇ ಮತಿಃ ।
ಸಾ ಶಾಂಭವೀ ವಚಃ ಪ್ರಾಹ ತತ್ಪರ್ಯಾಪ್ತಂ ದದಾಮ್ಯಹಂ ॥ ೧೨೯ ॥

ಅಥೋಮಾ ಕಾಂಸ್ಯಮಾದಾಯ ಭಿಸ್ಸಾಪೂರ್ಣಮಲಂಕೃತಂ ।
ಸ್ವರ್ಣದರ್ವ್ಯಾ ಸಮಾದಾಯ ಪಾಯಸಂ ಗಂಧಕಾಂತಿಮತ್ ॥ ೧೩೦ ॥

ಅಸ್ಯಾಕ್ಷಯಮಿದಂ ಭೂಯಾದಿತಿ ಪ್ರಾದಾತ್ತು ಪಾಯಸಂ ।
ದ್ವಿಜಸ್ಯ ದಕ್ಷಿಣೇ ಹಸ್ತೆ ಸಾದದಾತ್ಸತ್ಕೃತಂ ಮುದಾ ॥ ೧೩೧ ॥

ಸ ಶಿರಃ ಕಂಪಮಾನಸ್ತು ಊರ್ಧ್ವದೃಷ್ಟಿರಥಾಭವತ್ ।
ಪ್ರಸಾರಿತಕರಶ್ಚಾಸೀದ್ಗೃಹೀತ್ವಾ ಪಾಯಸಂ ಕರೇ ॥ ೧೩೨ ॥

---

೧೨೮. ಆಗ ಶಂಭುವನ್ನು ಕರೆದು ಅಯ್ಯಾ, ನೀನು ಬಡಿಸು. ನೀನು ತಂದೆ ಎಂದೂ, ಮಂಗಳರೂಪೆಯಾದ ಪಾರ್ವತಿಯು ತಾಯಿಯೆಂದೂ ನಾನು ತಿಳಿದು ಕೊಂಡಿದ್ದೇನೆ.

೧೨೯. ಅನ್ನಪೂರ್ಣೇಶ್ವರಿಯು ಭವಾನಿ ಎಂದೇ ತಿಳಿದಿದ್ದೇನೆ. ಆಗ ಆ ಶಂಭುವಿನ ಹೆಂಡತಿಯು ಅವನಿಗೆ ಸಾಕಾದಷ್ಟನ್ನೂ ನಾನು ಬಡಿಸುತ್ತೇನೆ ಎಂದಳು.

೧೩೦. ಅನಂತರ ಆ ಶಂಭುವಿನ ಹೆಂಡತಿಯಾದ ಉಮೆಯು ಅನ್ನದಿಂದ ತುಂಬಿ ಅಲಂಕರಿಸಲ್ಪಟ್ಟ ಕಂಚಿನ ಪಾತ್ರೆಯನ್ನೂ, ಒಂದು ಚಿನ್ನದ ಸವುಟಿನಲ್ಲಿ ಸುವಾಸನೆಯೂ ಕಾಂತಿಯೂ ಉಳ್ಳ ಪಾಯಸವನ್ನೂ ತಂದಳು.

೧೩೧. ಇವನಿಗೆ ಇದು ಅಕ್ಷಯವಾಗಲಿ ಎಂದು ಪಾಯಸವನ್ನು ಬಡಿಸಿದಳು. ಆ ಬ್ರಾಹ್ಮಣನ ಬಲಗೈಗೇನೇ ಆ ಸಂಸ್ಕೃತವಾದ ಪಾಯಸವನ್ನು ಸಂತೋಷದಿಂದ ಹಾಕಿದಳು.

೧೩೨. ನಡುಗುತ್ತಿದ್ದ ಆ ತಲೆಯನ್ನು ಮೇಲಕ್ಕೆತ್ತಿ ಮೇಲುನೋಟವಾಗಿ ನೋಡಿದನು. ಕೈಯಲ್ಲಿ ಪಾಯಸವನ್ನು ಹಿಡಿದುಕೊಂಡು ಅಂಗೈಯನ್ನು ಅಗಲ ಮಾಡಿದನು.

ದೀಯತಾಂ ಪಾಯಸಂ ಸ್ವಾದು ಸುಷ್ಟು ಪಕ್ವಮಿದಂ ತು ಕಿಂ ।
ಶಂಭುಪತ್ನೀ ಬಭಾಷೇ ತಂ ಕರೇ ಭುಂಕ್ಷ್ವ ತತೋ ದದೇ ॥ ೧೩೩ ॥

ಅಭಕ್ಷಯತ್ತತೋ ವಿಪ್ರಃ ಪುನಃ ಕರತಳೇ ಸ್ಥಿತಂ ।
ತದಕ್ಷಯಮಥ ಜ್ಞಾತ್ವಾ ಪ್ರಾಸಾರಯದಥೇತರಂ ॥ ೧೩೪ ॥

ತಸ್ಮಿನ್ಕರತಳೇ ದೇವೀ ಪಾಯಸಂ ಪತ್ರವತ್ಯುತ ।
ಅನ್ಯೇಷಾಮಪಿ ವಿಪ್ರಾಣಾಂ ಪಕ್ವಾಕ್ಷಯ್ಯಮದಾತ್ಸತೀ ॥ ೧೩೫ ॥

ಅಥ ಪಾಣಿದ್ವಯಗತಂ ವಿಜ್ಞಾಯಾಕ್ಷಯ್ಯಪಾಯಸಂ ।
ದೃಷ್ಟ್ವಾ ಕರಾನ್ತರಮಥೋ ಪ್ರಾಸಾರಯತ ಸ ದ್ವಿಜಃ ॥ ೧೩೬ ॥

ಉಪಾಚಾನ್ನಂ ಪ್ರದಾತವ್ಯಂ ಸಸೂಪಸ್ಪೃತಮುತ್ತಮಂ ।
ಶಿವಾ ದೇವೀ ತಥಾ ಪ್ರಾದಾದಕ್ಷಯ್ಯಂ ಶಂಭುವಲ್ಲಭಾ ॥ ೧೩೭ ॥

---

೧೩೩. ಈ ಪಾಯಸವನ್ನು ಚೆನ್ನಾಗಿ ಕುದಿಸಿ ಪರಿಕರಗಳನ್ನು ಹಾಕಿ ಮಾಡಿದ್ದೀರೇನು ? ಚೆನ್ನಾಗಿದೆ ಹಾಕು ಎಂದನು. ಅದಕ್ಕೆ ಶಂಭುವಿನ ಹೆಂಡತಿಯು ಕೈಯಲ್ಲಿರುವುದನ್ನು ಕುಡಿ ಆಮೇಲೆ ಮತ್ತೆ ಹಾಕುತ್ತೇನೆ ಎಂದಳು.

೧೩೪. ಅದನ್ನು ಆ ಬ್ರಾಹ್ಮಣನು ಕುಡಿದನು. ಮತ್ತೆ ಕೈಯಲ್ಲಿದ್ದಿತು. ಇದು ಅಕ್ಷಯವಾಗಿದೆಯೆಂದು ತಿಳಿದನು. ಆಗ ಇನ್ನೂ ಪಾಯಸಬೇಕೆಂಬಾಸೆಯಿಂದ ಮತ್ತೊಂದು ಕೈಯನ್ನು ಹಿಡಿದನು.

೧೩೫. ಆ ಕೈಯಿಗೂ ಆಕೆಯು ಪಾಯಸವನ್ನು ಹಾಕಿದಳು. ಉಳಿದ ಬ್ರಾಹ್ಮಣರಿಗೂ ಪಾಕದ ಪದಾರ್ಥವನ್ನು ಅಕ್ಷಯವಾಗಲೆಂದು ಬಡಿಸಿದರು.

೧೩೬. ಎರಡು ಕೈಯಲ್ಲಿರುವುದೂ ಅಕ್ಷಯವಾದ ಪಾಯಸವಾಯಿತೆಂದು ತಿಳಿದು ಆ ಬ್ರಾಹ್ಮಣನು ಮತ್ತೂ ಒಂದು ಕೈಯನ್ನು ನೀಡಿದನು.

೧೩೭. ಅದನ್ನು ನೋಡಿ ತೊವ್ವೆ ತುಪ್ಪ ಅನ್ನಗಳನ್ನು ಇದಕ್ಕೆ ಹಾಕೆಂದನು. ಆ ಶಂಕರನ ಪತ್ನಿಯಾದ ಶಿವೆಯು ಅಕ್ಷಯವಾದ ಅವುಗಳನ್ನು ಹಾಕಿದಳು.

ಯದ್ಯತ್ಪ್ರದಾತ್ತದಾ ಸಾಧ್ವೀ ಸರ್ವಮೇವ ತದಕ್ಷಯಂ ।
ಕರಾಂತರಮಥೋ ಸೃಷ್ಟಂ ಪರಿಪೂರ್ಣಂ ಪುನಃ ಪುನಃ ॥ ೧೩೮ ॥

ಏವಂ ಕರಸಹಸ್ರಂ ತು ಕೃತ್ವಾ ಸ ವಿರರಾಮ ಹ ।
ಉವಾಚ ವಚನಂ ವಿಪ್ರೋ ದೇಹಿ ಗಂಡೂಷವಾರಿ ಮೇ ।
ತರ್ಪಿತೋಽಸ್ಮಿ ತ್ವಯಾ ಭದ್ರೇ ನ ರಾಮೇಣ ನ ಸೀತಯಾ ॥ ೧೩೯ ॥

॥ ಶಂಭುರುವಾಚ ॥

ರಾಮೇಣ ಸೀತಯಾ ದತ್ತಂ ಮಯಾ ದತ್ತಂ ಹಿ ಯತ್ರ ಚ ।
ಇತಃ ಪರಂ ಹಿ ಕಿಂ ದೇಯಂ ಪೂರ್ಣಂ ವಾ ತ್ವಂ ವದಸ್ವ ಮೇ ॥ ೧೪೦ ॥

॥ ದ್ವಿಜ ಉವಾಚ ॥

ತೃಪ್ತೋಽಸ್ಮಿ ನ ಚ ಮೇ ದೇಯಮಧಿಕಂ ಚ ಕರಸ್ಥಿತಂ ।
ವಿದ್ವನ್ನತಃ ಕರಗತಂ ನ ಪಪಾತ ಕಥಂಚನ ॥ ೧೪೧ ॥

---

೧೩೮. ಆಕೆಯು ಕೊಟ್ಟದ್ದೆಲ್ಲವೂ ಅಕ್ಷಯವಾಗುತ್ತ ಬಂದಿತು. ಆ ಬ್ರಾಹ್ಮಣನೂ ಬೇರೆ ಕೈಯನ್ನು ಸೃಷ್ಟಿಸಿಕೊಂಡನು. ಅದೂ ಪೂರ್ಣವಾಯಿತು.

೧೩೯. ಈರೀತಿಯಾಗಿ ಸಾವಿರ ಕೈಗಳನ್ನು ಸೃಷ್ಟಿಸಿಕೊಂಡು ಕೊನೆಗೆ ಸುಮ್ಮನಾದನು. ಆಗ ಆತನು ನನಗೆ ಬಾಯಿ ಮುಕ್ಕಳಿಸಲು ನೀರನ್ನು ಕೊಡು. ನೀನು ನನ್ನನ್ನು ತೃಪ್ತಿಪಡಿಸಿದೆ. ರಾಮನಾಗಲಿ ಸೀತೆಯಾಗಲಿ ತೃಪ್ತಿಪಡಿಸದೇ ಹೋದರು.

೧೪೦. ಶಂಭುವು ಹೇಳಿದನು :—ರಾಮನೂ, ಸೀತೆಯೂ, ನಾನೂ ಯಾವನಿಗೆ ಬಡಿಸಿದೆವೋ ಆ ನಿನಗೆ ಇನ್ನೂ ಏನು ಬೇಕು? ಅದನ್ನು ಹೇಳು. ತೃಪ್ತಿಯಾಯಿತೆ? ನೀನು ಅದನ್ನು ನನಗೆ ಹೇಳು.

೧೪೧. ಬ್ರಾಹ್ಮಣನು ಹೇಳಿದನು :—ತೃಪ್ತನಾಗಿದ್ದೇನೆ. ನನಗೇನೂ ಬೇಕಾಗಿಲ್ಲ. ಕೈಯ್ಯಲ್ಲಿರುವುದೇ ಹೆಚ್ಚಾಗಿದೆ ಎಂದನು. ಆದರೂ ಕೈಯಲ್ಲಿರುವುದು ಬೀಳಲೇ ಇಲ್ಲ.

ನಿಷಣ್ಣೋ ಹಿ ಚಿರಂ ಪಶ್ಚಾತ್ ಕಥಂ ಮೇ ಕೇವಲಃ ಕರಃ ।
ಭುಕ್ತ್ಯೈ ಕೃತಮಿದಂ ಸರ್ವಂ ನಾನ್ಯಸ್ಮೈ ಕರ್ಮಣೇ ಮಮ ॥ ೧೪೨ ॥

ತಸ್ಮಾದನ್ಯಕೃತೇರೇತತ್ಸರ್ವಂ ರಿಕ್ತಂ ಭವಿಷ್ಯತಿ ।
ಇತಿ ನಿಶ್ಚಿತ್ಯ ಮನಸಾ ಲಿಪ್ತಾಂಗೋಽಥಿರಾಭವತ್ ॥ ೧೪೩ ॥

ಪಶ್ಯತ್ಸು ಸರ್ವದೇವೇಷು ತದದ್ಭುತಮಿವಾಭವತ್ ।
ತೃಪ್ತಾನಥ ದ್ವಿಜಾನ್ಜ್ಞಾತ್ವಾ ರಾಘವಃ ಪರಮಾರ್ಥವಿತ್ ॥ ೧೪೪ ॥

ದರ್ವೀಕರೋಽಥ ತೃಪ್ತಾಃ ಸ್ಥಃ ಇತಿ ಪೃಷ್ಟ್ವಾ ಯಥಾವಿಧಿ ।
ತೃಪ್ತಾಸ್ಮ ಇತಿ ವಿಪ್ರೇಂದ್ರಾ ವಿಕೀರ್ಯಾನ್ನಂ ಸಮಂತ್ರಕಂ ॥ ೧೪೫ ॥

ಪಾತ್ರಸ್ಯ ಯಾಮ್ಯಾಭಿಮುಖಃ ಸನ್ನಿಧೌ ಪಿಂಡಮರ್ಪಯೇತ್ ।
ಗಂಡೂಷಮಪಿ ವಿಪ್ರಾಣಾಂ ತತ್ರೈವ ಪರಿಕಲ್ಪಯೇತ್ ॥ ೧೪೬ ॥

---

೧೪೨. ನನ್ನ ಕೈ ಬರಿದಾಗುವುದು ಹೇಗೆಂದು ಕುಳಿತುಕೊಂಡು ಯೋಚಿಸಿದನು. ನಾನು ಊಟಕೋಸ್ಕರ ಕೇಳಿದೆನು. ಮತ್ತಾವುದಕ್ಕೂ ಅಲ್ಲ. ಇವೆಲ್ಲವೂ ಊಟದ ವಿಷಯವು.

೧೪೩. ಆದುದರಿಂದ ಈ ಪದಾರ್ಥಗಳನ್ನು ಬೇರೆಯ ವಿಷಯಕ್ಕೆ ಉಪಯೋಗಿಸಿದರೆ ಆಗ ಕೈ ಬರಿದಾಗುವುದು ಎಂದು ನಿಶ್ಚಯಿಸಿಕೊಂಡು ಮೈಗೆ ಬಳಿದುಕೊಂಡನು.

೧೪೪. ಎಲ್ಲಾ ದೇವತೆಗಳೂ ನೋಡುತ್ತಿರುವಲ್ಲಿ ಅದು ಬಹು ಆಶ್ಚರ್ಯವಾಗಿ ಕಂಡಿತು. ಆಗ ರಾಮನು ಬ್ರಾಹ್ಮಣರು ತೃಪ್ತಿಹೊಂದಿದರರೆಂಬುದನ್ನು ತಿಳಿದುಕೊಂಡನು.

೧೪೫. ಆಗ ರಾಮನು ಕೈಯಲ್ಲಿ ಅನ್ನದ ಪಾತ್ರೆಯನ್ನು ಹಿಡಿದುಕೊಂಡು ತೃಪ್ತಿಹೊಂದಿದಿರಾ ಎಂದು ಶಾಸ್ತ್ರಾನುಸಾರವಾಗಿ ಕೇಳಿದನು. ಅವರು ತೃಪ್ತಿಹೊಂದಿದೆವು ಎಂದರು. ಅನಂತರ ಮಂತ್ರ ಹೇಳಿ ವಿಕಿರವನ್ನು ಹಾಕಿದನು.

೧೪೬. ಬಡಿಸಿರುವ ಎಲೆಗಳಿದ್ದಲ್ಲಿ ದಕ್ಷಿಣಾಭಿಮುಖನಾಗಿ ಪಿಂಡವನ್ನು ಹಾಕಬೇಕು. ಬಾಯಿಮುಕ್ಕಳಿಸುವುಕ್ಕೆ ನೀರನ್ನೂ ಬ್ರಾಹ್ಮಣರಿಗೆ ಅಲ್ಲಿಯೇ ಕೊಡಬೇಕು (ಕೈಯ್ಯನ್ನು ಅಲ್ಲಿಯೇ ತೊಳೆಸಬೇಕು).

**ಉಚ್ಛಿಷ್ಟಪರ್ಣಪಾತ್ರೇಷು ತೇ ಗಂಡೂಷಮಕುರ್ವತ ।**
**ಗೃಹಾಂತರೇ ಚ ತೇ ವಿಪ್ರಾ ವಿವಿಶುಸ್ತ್ವತಿಥಿಂ ವಿನಾ ॥ ೧೪೭ ॥**

**ಆಹಾತಿಥಿರ್ಬಹಿಃ ಕಾರ್ಯಂ ಮಯಾಚಮನಂ ವಿದ್ಯತೇ ।**
**ಉತ್ಥಾತುಂ ನೈವ ಶಕ್ನೋಮಿ ಕರಂ ಮೇ ದೇಹಿ ರಾಘವ ॥ ೧೪೮ ॥**

**ಅಥ ರಾಮಃ ಕರಂ ಪ್ರಾದಾನ್ನೋತ್ತಿಷ್ಠತೇಸ್ತು ದ್ವಿಜೋತ್ತಮಃ ।**
**ಹನುಮಾನಥ ಚಾಪ್ಯಸ್ಯ ದತ್ತವಾನ್ಬಲವತ್ಕರಂ ॥ ೧೪೯ ॥**

**ಇತರೇಣ ಗೃಹೀತ್ವಾ ತು ಕರೇಣ ದ್ವಿಜಪುಂಗವಂ ।**
**ಆಚಕರ್ಷ ಕಪೀಂದ್ರಸ್ತು ದ್ವಿಜಸ್ಸಾಕ್ರೋಶಮುಕ್ತವಾನ್ ॥ ೧೫೦ ॥**

॥ ದ್ವಿಜ ಉವಾಚ ॥

**ಛಿದ್ಯತೇ ಮೇ ಕರೋ ವ್ಯಕ್ತಮುತ್ಥಾಪಯ ತತೋಽನ್ಯತಃ ।**
**ಲಾಂಗೂಲೇನ ಸಪೀಠಂ ತಮಾವ್ಯತ್ಯಾಽಽಮಸ್ತಕಂ ಬಲಾತ್ ॥ ೧೫೧ ॥**

---

೧೪೭. ಊಟಮಾಡಿದ ಎಲೆಯಲ್ಲಿಯೇ ಅವರು ಕೈತೊಳೆದುಕೊಂಡರು. ಮತ್ತು ಬೇರೆಯ ಕೋಣೆಗೂ ಹೋದರು. ಅತಿಥಿಯು ಮಾತ್ರ ಹೋಗಲಿಲ್ಲ.

೧೪೮. ಆಗ ಅತಿಥಿಯು ರಾಮನನ್ನು ಕುರಿತು ನಾನು ಈ ಸ್ಥಳವನ್ನು ಬಿಟ್ಟು ಬೇರೆ ಕಡೆಯಲ್ಲಿ ಆಚಮನವನ್ನು ಮಾಡಬೇಕು. ಏಳುವುದಕ್ಕಾಗುವುದಿಲ್ಲ. ಕೈ ಹಿಡಿದೆಬ್ಬಿಸು ಎಂದನು.

೧೪೯. ಹಾಗೆಯೇ ರಾಮನು ಕೈಹಿಡಿದೆಬ್ಬಿಸಲು ಆ ಬ್ರಾಹ್ಮಣನು ಏಳಲಾರದೆ ಹೋದನು. ಆಗ ಹನುಮಂತನು ತನ್ನ ಬಲವಾದ ಕೈಯನ್ನು ಕೊಟ್ಟನು.

೧೫೦. ಆಗ ಹನುಮಂತನು ಒಂದು ಕೈಯನ್ನು ಕೊಟ್ಟುದಲ್ಲದೆ ಮತ್ತೊಂದು ಕೈಯನ್ನೂ ಹಾಕಿ ಎಳೆದನು. ಆಗ ಆ ಬ್ರಾಹ್ಮಣನು ಕೋಪದಿಂದ ಇಂತೆಂದನು.

೧೫೧. ಬ್ರಾಹ್ಮಣನು ಹೇಳಿದನು :—ನೀನು ಹೀಗೆ ಕೈಯನ್ನು ಹಿಡಿದು ಎಳೆದರೆ ನನ್ನ ಕೈ ಕಿತ್ತುಹೋಗುವುದು ನಿಜ. ಆದ್ದರಿಂದ ಬೇರೆರೀತಿಯಾಗಿ ಎಬ್ಬಿಸು ಎನ್ನಲು, ಹನುಮಂತನು ಬಾಲದಿಂದ ಮಣೆಯ ಜೊತೆಯಲ್ಲಿಯೇ ಅವನನ್ನ ತಲೆಯವರೆಗೂ ಸುತ್ತಿಕೊಂಡು ಬಲದಿಂದ ಎಳೆದನು.

ಅಥಾಧಾವತ್ತತಃ ಪೃಥ್ವೀಂ ದ್ವಿಜಸ್ತು ನ ಚಚಾಲ ಹ ।
ಅಥ ವಾನರವೀರಸ್ತು ಪದ್ಭ್ಯಾಂ ಚಕೃನ್ತ ತಾಂ ಮಹೀಂ ॥ ೧೫೨ ॥

ಪಾದೌ ವಿನ್ಯಸ್ಯ ಸುದೃಢೌ ದ್ವಿಜಮೂರ್ಧಾನಮಾಕ್ಷಿಪತ್ ।
ವಿಶೀರ್ಣಮಭವದ್ವೇಶ್ಮ ದ್ವಿಜಾಸ್ಸರ್ವೇ ಬಹಿಸ್ತಥಾ ॥ ೧೫೩ ॥

ಸಹವೃದ್ಧದ್ವಿಜಸ್ತೋಽಥ ಹನೂಮಾನ್ಬಹಿರಭ್ಯಗಾತ್ ।
ಪೀಠೇ ಚ ಸ್ಥಾಪಯಾಮಾಸ ಬ್ರಾಹ್ಮಣಂ ಸ್ಥವಿರಂ ಕೃಶಂ ॥ ೧೫೪ ॥

ದ್ವಿಜಾಯ ಜಲಮಾದಾಯ ಜಾಂಬವಾನ್ಮೃಣ್ಮಯೇ ಘಟೇ ।
ಆಹ ಸ್ವಚ್ಛಂ ಜಲಂ ವಿಪ್ರ ತ್ವಯಾದೇಯಂ ಸಭಾಜನಂ ॥ ೧೫೫ ॥

ಸೀತಾ ಪ್ರಕ್ಷಾಳಯೇದಂಗಂ ಲಕ್ಷ್ಮಣೋ ಜಲದೋ ಭವೇತ್ ।
ಜಾಂಬವಾನಾಹ ತಂ ರಾಮಂ ಬ್ರಾಹ್ಮಣೋಕ್ತಮಶೇಷತಃ ॥ ೧೫೬ ॥

---

೧೫೨. ಭೂಮಿಕಡೆಗೆ ಬಗ್ಗಿ ಎಷ್ಟು ಬಲವಾಗಿ ಎಳೆದರೂ ಆ ಬ್ರಾಹ್ಮಣನು ಅಲ್ಲಾಡಲೇಯಿಲ್ಲ. ಆಗ ಆ ಮಹಾವೀರಕಪಿಯು ಕಾಲುಗಳಿಂದ ಭೂಮಿಯನ್ನು ಪರಚಿ ಜಾಗವನ್ನು ಬಿಡಿಸಿದನು.

೧೫೩. ಪಾದಗಳನ್ನು (ಕಾಲುಗಳನ್ನು) ಬಲವಾಗಿ ನೆಲಕ್ಕೆ ಊರುತ್ತಾ ಆ ಬ್ರಾಹ್ಮಣನ ತಲೆಯನ್ನು ಹಿಡಿದೆಳೆದನು. ಆಗ ಮನೆಯಲ್ಲವೂ ಅಲ್ಲಾಡಿತು. ಬ್ರಾಹ್ಮಣರೆಲ್ಲರೂ ಮನೆಯ ಹೊರಗೆ ಹೋದರು.

೧೫೪. ಆಗ ಹನುಮಂತನು ಆ ಬ್ರಾಹ್ಮಣನನ್ನು ಹೊರಕ್ಕೆ ತಂದು ಆ ಮುದುಕನನ್ನು ಮಣೆಯಮೇಲೆ ಕೂರಿಸಿದನು.

೧೫೫. ಆಗ ಜಾಂಬವಂತನು ನೀರನ್ನು ಒಂದು ಗಡಿಗೆಯಲ್ಲಿ ತಂದು ಎಲೈ ಬ್ರಾಹ್ಮಣನೇ, ಇದು ಶುದ್ಧವಾದ ನೀರು. ಪಾತ್ರೆಯೊಡನೆಯೇ ತೆಗೆದುಕೋ ಎಂದನು.

೧೫೬. ಆಗ ಆ ಬ್ರಾಹ್ಮಣನು, ಸೀತೆಯೇ ಎಂಜಲನ್ನು ತೊಳೆಯಬೇಕು. ಲಕ್ಷ್ಮಣನೇ ನೀರನ್ನು ಹಾಕಬೇಕು ಎನ್ನಲು, ಇದನ್ನೆಲ್ಲಾ ಜಾಂಬವನು ರಾಮನಿಗೆ ಹೇಳಿದನು.

ದ್ವಿಜಪ್ರಕ್ಷಾಳನೇ ರಾಮೋ ವ್ಯಾದಿದೇಶಾನುಜಂ ಪ್ರಿಯಾಂ ।
ಸೌಮಿತ್ರಿರ್ಜಲಮಾದಾಯ ದ್ವಿಜಾಂಗಕ್ಷಾಳನೇ ತಥಾ ॥ ೧೫೭ ॥

ಪ್ರಾಕ್ಷಾಳಯದಶೇಷಾಂಗಂ ಪ್ರತಿಮಾಮಿವ ಭೂಭುಜಃ ।
ಅಥ ರಾಮೋಪದೇಶೇನ ಚಕ್ರತುಸ್ತೌ ತಥೈವ ಚ ॥ ೧೫೮ ॥

ಅಥಾತಿಥಿಃ ಸ್ವಗಂಡೂಷಂ ಸೀತಾವಕ್ತ್ರೇ ವ್ಯಮುಂಚತ ।
ಸಾಲಂಕಾರಾಂಬುಭಿರ್ವ್ಯಾಪ್ತಾ ಪ್ರಾಕ್ಷಾಳಯದಥೋ ಸತೀ ॥ ೧೫೯ ॥

ಶ್ಲೇಷ್ಮಲಾಲಾಸುಪ್ರಚುರಂ ಮುಖಂ ವಿಪ್ರಸ್ಯ ಸಾ ಸತೀ ।
ಪ್ರಮಮಾರ್ಜ ಪುನಃ ಕ್ಷಾಳ್ಯ ನಾಸಾಶ್ಲೇಷ್ಮಾಣಮುತ್ಯಜತ್ ॥ ೧೬೦ ॥

ಆಚಾಮಯಿತ್ವಾ ಸೌಮಿತ್ರಿರುತ್ತಿಷ್ಠೇತ್ಯಬ್ರವೀದ್ದ್ವಿಜಂ ।
ದ್ವಿಜೋ ನ ಶಕ್ಯಮಿತ್ಯಾಹ ಹನೂಮಾನಪ್ಯಥಾಗತಃ ॥ ೧೬೧ ॥

ಅತಿಥಿಃ ಪ್ರಾಹ ತಂ ವಿಪ್ರಃ ಪೀಡಿತೋಽಹಂ ಹನೂಮತಾ ।
ಗೃಹೀತ್ವೋದ್ಧರತಾ ಪೂರ್ವಂ ವ್ಯಥಿತೋ ವಾನರೇಣ ಚ ॥ ೧೬೨ ॥

---

೧೫೭-೧೫೮. ಆಗ ರಾಮನು ಆ ಬ್ರಾಹ್ಮಣನ ಅವಯವವನ್ನು ತೊಳೆಯಲು ಲಕ್ಷ್ಮಣನಿಗೂ ಸೀತೆಗೂ ಹೇಳಿದನು. ಲಕ್ಷ್ಮಣನು ನೀರನ್ನು ತೆಗೆದುಕೊಂಡನು. ಅವರಿಬ್ಬರೂ ರಾಮನು ಹೇಳಿದಂತೆ ಆ ಬ್ರಾಹ್ಮಣನನ್ನು ರಾಜನಾದ ದಶರಥನ ಪ್ರತಿಮೆಯನ್ನು ತೊಳೆಯುವಂತೆ ತೊಳೆದರು.

೧೫೯. ಅನಂತರ ಆ ಬ್ರಾಹ್ಮಣನು ತನ್ನ ಬಾಯಿಮುಕ್ಕಳಿಸುವ ನೀರನ್ನು ಸೀತೆಯ ಮುಖದ ಮೇಲೆ ಉಗುಳಿದನು. ಅಲಂಕಾರಮಾಡಿಕೊಂಡಿದ್ದ ಅವಳ ಮುಖದ ಮೇಲೆಲ್ಲಾ ಬೀಳಲು ಅನಂತರ ಆಕೆಯು ತೊಳೆದುಕೊಂಡಳು.

೧೬೦. ಶ್ಲೇಷ್ಮದಿಂದಲೂ ಜೊಲ್ಲಿನಿಂದಲೂ ಕೂಡಿದ ಅವನ ಮುಖವನ್ನು ಆಕೆಯು ತೊಳೆದಳು ಮತ್ತೆ ತೊಳೆದು ಮೂಗಿನ ಶಿಂಬಳವನ್ನೆಲ್ಲಾ ತೆಗೆದಳು.

೧೬೧. ಲಕ್ಷ್ಮಣನು ಆಚಮನಮಾಡಿಸಿ ಆತನನ್ನು ಏಳೆನ್ನಲು, ಬ್ರಾಹ್ಮಣನು ಆಗುವುದಿಲ್ಲವೆಂದನು. ಆಗ ಹನುಮಂತನು ಬಂದನು.

೧೬೨. ಆಗ ಆ ಬ್ರಾಹ್ಮಣನು ನನ್ನನ್ನು ಹನುಮಂತನು ಮೊದಲು ಎತ್ತಿದಾಗ ಬಹು ನೋವು ಮಾಡಿದನು ಎಂದನು.

ಜಾಂಬವಾನಥ ತಂ ಪ್ರಾಹ ಲೋಮಾಂಗಂ ಮಮ ವೈ ಮೃದು ।
ಮಯಾಥೋ ಧ್ರಿಯಸೇ ವಿಪ್ರ ನ ಚ ಪೀಡಾ ಭವಿಷ್ಯತಿ ॥ ೧೬೩ ॥

ಇತ್ಯುಕ್ತ್ವಾ ಜಾಂಬವಾನ್ವಿಪ್ರಂ ದೋರ್ಭ್ಯಾಮಾಲಂಬ್ಯ ಚೋದ್ಧರನ್ ।
ದ್ವಿಜಸ್ತ್ರಾಂತಮಥಾದಾಯ ಸ್ಥಾಪಯಾಮಾಸ ತಂ ಮುನಿಂ ॥ ೧೬೪ ॥

ಅಥ ರಾಮೋ ದ್ವಿಜೇಂದ್ರಾಣಾಂ ಪ್ರದಕ್ಷಿಣಮವರ್ತತ ।
ದತ್ತಾಶೀರಪಿ ವಿಪ್ರೇಂದ್ರೈರ್ದತ್ವಾ ತಾಂಬೂಲಮಗ್ರತಃ ॥ ೧೬೫ ॥

ಪಾದಾವಲಂಬಕೃದ್ರಾಮೋ ಭ್ರಾತೃಭಿಸ್ಸಹ ಚಾಬ್ರವೀತ್ ।
ಅಯಿ ಸೀತೇಽತಿಥೇರಸ್ಯ ತ್ವಯಾ ನ ಕ್ಷಾಳಿತಂ ವಪುಃ ॥ ೧೬೬ ॥

ಜಂಘಾಯುಗತಿಥೇರಸ್ಯ ಕರಂ ಚಾಸ್ಯ ಮಲಾನ್ವಿತಂ ।
ಸಮ್ಯಕ್ಪ್ರಕ್ಷಾಳಯ ಮುಖಂ ದ್ವಿಜೋ ನ ಸಹತೇ ಮಲಂ ॥ ೧೬೭ ॥

---

೧೬೩. ಆಗ ಜಾಂಬವನು ನನ್ನ ಮೈ ಕೂದಲುಗಳಿಂದ ಕೂಡಿರುವುದರಿಂದ ಮೃದುವಾಗಿದೆ. ನಾನು ಹಿಡಿದುಕೊಳ್ಳುತ್ತೇನೆ, ನೋವಾಗುವುದಿಲ್ಲ ಏಳಬಹುದು ಎಂದನು.

೧೬೪. ಹೀಗೆಂದು ಹೇಳಿ ಜಾಂಬವಂತನು ಆ ಬ್ರಾಹ್ಮಣನ ಭುಜವನ್ನು ಹಿಡಿದೆತ್ತಿ ಆಮೇಲೆ ರಟ್ಟೆಯನ್ನು ಹಿಡಿದು ಆ ಬ್ರಾಹ್ಮಣನನ್ನು ಕರೆದುಕೊಂಡು ಹೋಗಿ ಕೂರಿಸಿದನು.

೧೬೫. ಆಮೇಲೆ ರಾಮನು ಬ್ರಾಹ್ಮಣರ ಪ್ರದಕ್ಷಿಣೆಯನ್ನು ಮಾಡಿದನು. ಅವರು ಆಶೀರ್ವಾದಮಾಡಲು ತಾಂಬೂಲವನ್ನು ಕೊಟ್ಟನು.

೧೬೬. ರಾಮನು ಕಾಲುಗಳನ್ನು ತಮ್ಮಂದಿರೊಡನೆ ಒತ್ತುತ್ತಾ ಎಲೈ ಸೀತೆಯೇ, ಈ ಅತಿಥಿಯ ಮೈಯನ್ನು ನೀನು ಚೆನ್ನಾಗಿ ತೊಳೆಯಲಿಲ್ಲವೆಂದನು.

೧೬೭. ಈತನ ಮೊಣಕಾಲುಗಳೂ ಕೈಯೂ ಕೊಳೆಯಿಂದ ಕೂಡಿದೆ. ಮುಖವನ್ನು ಚೆನ್ನಾಗಿ ತೊಳೆ. ಈ ಬ್ರಾಹ್ಮಣನು ಕೊಳೆಯನ್ನು ಸಹಿಸುವುದಿಲ್ಲ. ಸೀತೆಯು ಹೇಳಿದಳು ಬಹಳ ಚೆನ್ನಾಗಿ ತೊಳೆದಿದ್ದೆನು. ಈಗ ಮತ್ತೆ ಹೊರಟಿದೆ.

॥ ಸೀತೋವಾಚ ॥

ತಥಾ ಪ್ರಕ್ಷಾಳಿತಂ ಸಮ್ಯಗಿದಾನೀಂ ನಿರ್ಗತಂ ಪುನಃ ।

॥ ರಾಮ ಉವಾಚ ॥

ಪುನಃ ಪ್ರಕ್ಷಾಳಯ ಮಲಂ ದೋಷಃಸ್ಯಾದನ್ಯಥಾ ಮಮ ।
ಅಥ ಸೀತಾ ತಥಾ ಕೃತ್ವಾ ತೂಷ್ಣೀಮೇವ ಬಭೂವ ಹ ॥ ೧೬೮ ॥

ಆಹ ರಾಮಂ ಚ ಸೀತಾಂ ಚ ದ್ವಿಜಃ ಪರಮಕಾರ್ಯವಾನ್ ।
ಪಾದೌ ಯೌ ಮಮ ರಾಜೇಂದ್ರ ತೌ ಸೀತಾಲಂಬಯೇದಿತಿ ॥ ೧೬೯ ॥

ಭವಾನ್ಕರೌ ಚ ಭರತೋ ಮಮ ವೀಜಂ ಪ್ರಯಚ್ಛತು ।
ಲಕ್ಷ್ಮಣಃ ಕೇಶನಿಚಯಪ್ರಸಾಧನಕರೋ ಭವೇತ್ ।
ಶತ್ರುಘ್ನಶ್ಶ್ಲೇಷ್ಮನಿರ್ಮುಕ್ತಂ ಸ್ವವಸ್ತ್ರೇಣ ಕರೋತು ಮಾಂ ॥ ೧೭೦ ॥

॥ ಸೂತ ಉವಾಚ ॥

ಅಥ ತೇ ಚಕ್ರುರಥಿತೇರಶೇಷಮುದಿತಂ ತಥಾ ।
ತಥಾಽಪುರ್ವಿಸ್ಮಯಂ ವಿಪ್ರಾ ನರವಾನರರಾಕ್ಷಸಾಃ ॥ ೧೭೧ ॥

---

೧೬೮. ರಾಮನು ಹೇಳಿದನು:—ಮತ್ತೆ ಆ ಕೊಳೆಯನ್ನು ತೊಳೆ. ಇಲ್ಲದಿದ್ದರೆ ನನಗೆ ದೋಷಬರುತ್ತದೆ ಎನ್ನಲು, ಸೀತೆಯು ಹಾಗೆಯೇ ತೊಳೆದು ಸುಮ್ಮನಾದಳು.

೧೬೯. ಆಗ ಆ ಮುದುಕನು ರಾಮನನ್ನೂ, ಸೀತೆಯನ್ನೂ ಕುರಿತು ಇಂತೆಂದನು. ಎಲೈ ರಾಮನೇ, ನನ್ನ ಕಾಲುಗಳನ್ನು ಸೀತೆಯು ಒತ್ತಲಿ ಎಂದನು.

೧೭೦. ನೀನು ಕೈಗಳನ್ನು ಒತ್ತು. ಭರತನು ಬೀಸಣಿಗೆಯಿಂದ ಬೀಸಲಿ. ಲಕ್ಷ್ಮಣನು ತಲೆಯನ್ನು ಬಾಚಲಿ ಶತ್ರುಘ್ನನು ತನ್ನ ಬಟ್ಟೆಯಿಂದ ಶ್ಲೇಷ್ಮವನ್ನು ತೆಗೆಯಲಿ ಎಂದನು.

೧೭೧. ಸೂತನು ಹೇಳಿದನು:—ಅತಿಥಿಯು ಹೇಳಿದಂತೆಯೇ ಅವರು ಎಲ್ಲವನ್ನೂ ಮಾಡಿದರು. ಅದನ್ನು ನೋಡಿ ಬ್ರಾಹ್ಮಣರೂ, ಮನುಷ್ಯರೂ, ಕಪಿಗಳೂ, ರಾಕ್ಷಸರೂ ಆಶ್ಚರ್ಯಪಟ್ಟರು.

ಶಿವಾ ದೇವೀ ಚ ಶಂಭುಶ್ಚ ಸಭ್ರೂಭಂಗಮುದೈಕ್ಷತಾಂ ।
ಮನಸಾ ಚಾಪ್ಯಭಾಷೇತಾಮತಿಥಿಶ್ಶಂಭುರೇವ ಚ ॥ ೧೭೨ ॥

ಅತಿಥಿಶ್ಚ ಪ್ರಸನ್ನೋಽಭೂಚ್ಛಂಖಚಕ್ರಗದಾಧರಃ ।
ಪೀತಾಂಬರಸಮುಸ್ತಾಂಗಭೂಷಿತೋಽತೀವ ದೀಪ್ತಿಮಾನ್ ॥ ೧೭೩ ॥

ಯಃ ಪುರಾರಾಧಿತಶ್ಶಂಭುಃ ಪ್ರಸನ್ನೋಽಭೂತ್ತ್ರಿಲೋಚನಃ ।
ಶುದ್ಧಸ್ಫಟಿಕಸಂಕಾಶಃ ಸರ್ವಾಭರಣಭೂಷಿತಃ ॥ ೧೭೪ ॥

ಕೋಟಿಸೂರ್ಯಪ್ರತೀಕಾಶಃ ಕಿರೀಟೀ ಕರುಣಾನಿಧಿಃ ।
ಆಲಂಬ್ಯ ಚಕ್ರಿಣಃ ಪಾಣಿಮತಿಷ್ಠತ ಸದಾಶಿವಃ ॥ ೧೭೫ ॥

ರಾಮಃ ಪರಮಧರ್ಮಾತ್ಮಾ ಪುಲಕಾಂಚಿತವಿಗ್ರಹಃ ।
ದಂಡವನ್ನಿಪಪಾತೋರ್ವ್ಯಾಮಾನಂದಪ್ಲಾವಿತೇಕ್ಷಣಃ ॥ ೧೭೬ ॥

---

೧೭೨. ಆ ಶಿವಾದೇವಿಯೂ, ಅವಳ ಗಂಡನಾದ ಶಂಭುವೂ ಹುಬ್ಬನ್ನೂ ಗಂಟಿಕ್ಕಿಕೊಂಡು ನೋಡಿದರು. ಒಬ್ಬರಿಗೊಬ್ಬರು ಮನಸ್ಸಿನಿಂದಲೇ ಅತಿಥಿಯೂ, ಶಂಭುವೂ ಮಾತನಾಡಿಕೊಂಡರು.

೧೭೩. ಅತಿಥಿಯು ಸಂತೋಷಪಟ್ಟು, ಶಂಖ ಚಕ್ರಗ ದೆಗಳನ್ನು ಧರಿಸಿ ಪೀತಾಂಬರವನ್ನು ಹೊದ್ದು, ಭೂಷಣಗಳಿಂದ ಅಲಂಕೃತನಾಗಿ ಕಾಂತಿಮಂತನಾದ ವಿಷ್ಣುವಾಗಿ ನಿಂತುಕೊಂಡನು.

೧೭೪-೧೭೫. ಈ ರಾಮನ ಬಳಿಯಲ್ಲಿದ್ದ ಶಂಭುವು ತಾನು ಅವನಿಂದ ಇಷ್ಟರವರೆಗೂ ಉಪಚಾರ ಹೊಂದಿದುದರಿಂದ ಸಂತೋಷಗೊಂಡವನಾಗಿ, ಮುಕ್ಕಣ್ಣನೂ, ಬೆಳ್ಳಗಿರುವ ಮೈಯುಳ್ಳವನೂ ಆಗಿ, ಸರ್ವಾಭರಣಗಳಿಂದ ಭೂಷಿತನಾಗಿ ಕೋಟಿ ಸೂರ್ಯರಂತೆ ಪ್ರಕಾಶಿಸುತ್ತಾ ಕಿರೀಟವನ್ನು ಧರಿಸಿ ಆ ವಿಷ್ಣುವಿನ ಕೈಯನ್ನು ಹಿಡಿದು ಕೊಂಡು ನಿಂತನು.

೧೭೬. ಪರಮಧರ್ಮಿಷ್ಠನಾದ ರಾಮನು ರೋಮಾಂಚವುಳ್ಳವನಾಗಿ ಭೂಮಿಯಲ್ಲಿ ದಂಡನಮಸ್ಕಾರಮಾಡಿದನು. ಆನಂದದಿಂದ ಕಣ್ಣೀರು ತುಂಬಿಕೊಂಡಿದ್ದಿತು.

ಅನಮನ್ಭ್ರಾತರಸ್ತಸ್ಯ ದಂಡವದ್ಭೂತಳೇ ಸ್ಥಿತಾಃ ।
ಶಿವ ಉತ್ಥಾಪ್ಯ ಕಾಕುತ್ಸ್ಥಮಾಲಿಂಗ್ಯಾಘ್ರಾಯ ಮಸ್ತಕಂ ॥ ೧೭೭ ॥

ಉವಾಚ ಮಧುರಂ ವಾಕ್ಯಂ ರಾಮಂ ರಾಜೀವಲೋಚನಂ ॥ ೧೭೮ ॥

॥ ಶಿವ ಉವಾಚ ॥

ವರಂ ವೃಣು ಪ್ರಸನ್ನೋಽಸ್ಮಿ ಬ್ರಹ್ಮಾದೇರಪಿ ದುರ್ಲಭಂ ।
ತವಾದೇಯಂ ನ ಮೇ ಕಿಂಚಿದ್ವೃಣು ತ್ವಂ ನ ಚಿರಾಯ ವೈ ॥ ೧೭೯ ॥

॥ ಶ್ರೀ ರಾಮ ಉವಾಚ ॥

ನ ಯಾಚ್ಯಂ ಮೇ ಜಗನ್ನಾಥ ಭೂರಾಜ್ಯಂ ಮಮ ಸಾಂಪ್ರತಂ ।
ಸ್ವರ್ಗಶ್ಚ ಕರ್ಮಭಿಃ ಪ್ರಾಪ್ತೋ ಭಕ್ತಿಸ್ತ್ವತ್ಪಾದದರ್ಶನಾತ್ ॥ ೧೮೦ ॥

ಆರೋಗ್ಯಂ ಮೇ ಪಶ್ಯ ಭುಂಜೇ ಸಾ ಸೀತಾ ಯೋಷಿತಾಂ ವರಾ ।
ವಶೀಕೃತಾಸ್ಸರ್ವನೃಪಾಃ ಪ್ರಜಾ ಧರ್ಮಸಮನ್ವಿತಾಃ ॥ ೧೮೧ ॥

---

೧೭೭-೧೭೮. ಆ ರಾಮನ ತಮ್ಮಂದಿರೂ ಭೂಮಿಯಲ್ಲಿ ದಂಡವಂತೆ ನಮಸ್ಕಾರ ಮಾಡಿದರು. ಆಗ ಶಿವನು ರಾಮನನ್ನು ಎಬ್ಬಿಸಿ ಆಲಿಂಗಿಸಿ, ತಲೆಯನ್ನು ಮೂಸಿನೋಡಿ ಆ ರಾಜೀವಲೋಚನನಾದ ರಾಮನನ್ನು ಕುರಿತು ಮಧುರವಾಗಿ ಇಂತೆಂದನು.

೧೭೯. ಶಿವನು ಹೇಳಿದನು :—ಬ್ರಹ್ಮಾದಿಗಳಿಗೂ ದುರ್ಲಭವಾದ ವರವನ್ನು ಕೇಳಿಕೋ. ಪ್ರಸನ್ನನಾಗಿದ್ದೇನೆ. ನಿನಗೆ ಕೊಡದಿರುವುದೇ ಯಾವುದೂ ಇಲ್ಲ ಬೇಗ ಕೇಳು.

೧೮೦. ಶ್ರೀ ರಾಮನು ಹೇಳಿದನು :—ಎಲೈ ಜಗನ್ನಾಥನೇ, ಕೇಳತಕ್ಕದ್ದೇ ಯಾವುದೂ ಇಲ್ಲ. ಈಗ ನನಗೆ ಭೂಮಿಯು ಏಕಚ್ಛತ್ರಾಧಿಪತ್ಯವಾಗಿದೆ. ಕರ್ಮದಿಂದ ಸ್ವರ್ಗವು ಸಿಕ್ಕುತ್ತದೆ. ನಿನ್ನ ಪಾದದರ್ಶನದಿಂದ ಭಕ್ತಿಯು ಹುಟ್ಟಿದೆ.

೧೮೧. ನನ್ನ ಆರೋಗ್ಯವೂ ಚೆನ್ನಾಗಿದೆ ನೋಡು. ಹೆಂಗಸರಲ್ಲಿ ಶ್ರೇಷ್ಠಳಾದ ಈ ಸೀತೆಯಿರುವಳು. ಈಕೆಯನ್ನು ಅನುಭವಿಸುತ್ತಿದ್ದೇನೆ. ಎಲ್ಲಾ ರಾಜರೂ ಅಧೀನದಲ್ಲಿದ್ದಾರೆ. ಪ್ರಜೆಗಳೆಲ್ಲರೂ ಧರ್ಮದಿಂದ ಕೂಡಿದ್ದಾರೆ.

ವರ್ಷ ಏವ ಮಮಾಪನ್ನಸ್ತ್ವದಾಗಮನತೋಽಚ್ಯುತ ।
ತಥಾಪಿ ವರಯೇ ಕಿಂಚಿದ್ಭಕ್ತಿರಸ್ತು ಸ್ಥಿರಾ ತ್ವಯಿ ॥ ೧೮೨ ॥

ತಥಾ ಮಮ ಗೃಹೇ ದೇವ ತ್ರಿವರ್ಷಂ ತಿಷ್ಠ ಮೇ ಪ್ರಭೋ ।
ಬ್ರುವನ್ನಮಸ್ತ್ರಧರ್ಮಾಂಶ್ಚ ರೂಪೇಣಾನೇನ ಶಂಕರ ॥ ೧೮೩ ॥

॥ ಶಿವ ಉವಾಚ ॥

ಏವಮಸ್ತು ತಥಾ ರಾಮ ಸರ್ವಂ ತೇ ಸಂಭವಿಷ್ಯತಿ ।
ಅಥಾಹ ಚಕ್ರೀ ರಾಜಾನಂ ರಾಮಂ ರಾಜೀವಲೋಚನಂ ॥ ೧೮೪ ॥

॥ ವಿಷ್ಣುರುವಾಚ ॥

ವರಂ ವೃಣು ಮಹಾಭಾಗ ಪ್ರಸನ್ನೋಽಹಂ ಯಮಿಚ್ಛಸಿ ॥ ೧೮೫ ॥

ಯತ್ಪ್ರಾಪ್ಯಂ ಶಂಭುತಃ ಪ್ರಾಪ್ತಮನ್ಯತ್ಸರ್ವಮುದೀರಿತಂ ।
ಕಿಂ ಚೈಕಂ ವರಯೇ ವಿಷ್ಣೋ ಪ್ರಸನ್ನಃ ಸರ್ವದಾ ಭವ ॥ ೧೮೬ ॥

---

೧೮೨. ಎಲೈ ಅಚ್ಯುತನೇ, ನೀನು ಬಂದುದರಿಂದ ನನಗೆ ಸಂತೋಷವಾಯಿತು. ಆದರೂ ಕೂಡ ಒಂದನ್ನು ಕೇಳಿಕೊಳ್ಳುತ್ತೇನೆ. ನಿನ್ನಲ್ಲಿ ಯಾವಾಗಲೂ ನನಗೆ ಭಕ್ತಿಯಿರಲಿ.

೧೮೩. ಹಾಗೆಯೇ ನನ್ನ ಮನೆಯಲ್ಲಿ ಎಲ್ಲಾ ಧರ್ಮಗಳನ್ನೂ ಬೋಧಿಸುತ್ತ ಈ ರೂಪಿನಿಂದಲೇ ಮೂರುವರ್ಷಗಳ ಕಾಲವಿರು.

೧೮೪. ಶಿವನು ಹೇಳಿದನು :—ಎಲೈ ರಾಮನೇ, ಹಾಗೇ ಆಗಲಿ. ಎಲ್ಲವೂ ನಿನಗೆ ಉಂಟಾಗುತ್ತದೆ ಎಂದನು. ಆ ಮೇಲೆ ವಿಷ್ಣುವು ರಾಜೀವಲೋಚನನಾದ ರಾಮನನ್ನು ಕುರಿತು ಇಂತೆಂದನು.

೧೮೫. ವಿಷ್ಣುವು ಹೇಳಿದನು :—ಎಲೈ ರಾಮನೇ, ನಾನು ಪ್ರಸನ್ನನಾಗಿದ್ದೇನೆ. ಏನುಬೇಕು ವರವನ್ನು, ಕೇಳಿಕೋ ಎಂದನು. ಅದಕ್ಕೆ ರಾಮನು ನಾನು ಕೇಳಿಕೊಳ್ಳತಕ್ಕದ್ದೇ ಇಲ್ಲವೆಂದನು.

೧೮೬. ನನಗೆ ಬೇಕಾದುದನ್ನು ಶಂಭುವು ಕೊಟ್ಟುಬಿಟ್ಟನು. ಮಿಕ್ಕದ್ದೆಲ್ಲವನ್ನೂ ಹೇಳಿಯೇ ಇದ್ದೇನೆ. ಆದರೆ ಒಂದನ್ನು ಕೇಳಿಕೊಳ್ಳುತ್ತೇನೆ. ನೀನು ಯಾವಾಗಲೂ ನನಗೆ ಪ್ರಸನ್ನನಾಗಿರು.

ಅಥ ಸೀತಾಂ ಹರಿಃ ಪ್ರಾಹ ಪ್ರಸನ್ನೋಽಹಂ ತವಾಧುನಾ ।
ವರಂ ವೃಣು ಪ್ರಯಚ್ಛಾಮಿ ತಥಾ ಸೀತಾಬ್ರವೀದಿದಂ ॥ ೧೮೭ ॥

॥ ಸೀತೋವಾಚ ॥

ವರೋ ವೃತಃ ಪುರಾ ಭರ್ತ್ರಾ ನ ಚಾನ್ಯೋ ಮೇ ವರೋ ವರಃ ।
ಯದಿ ಕಾಮಂ ಪ್ರಯಚ್ಛೇಥಾ ಮನಶ್ಚ ಪರಪೂರುಷಾತ್ ॥ ೧೮೮ ॥

ಸನ್ನಿವೃತ್ತಂ ಚ ಭವನ್ನಮಸ್ತೇಽಸ್ತು ದ್ವಿಜ ಪ್ರಭೋ ।
ಅಥ ತೇ ಮುನಯಸ್ಸರ್ವೇ ಪ್ರಣೇಮುರ್ದೇವಸತ್ತಮೌ ॥ ೧೮೯ ॥

ಅಥಾಸೌ ರಾಘವಂ ಪ್ರಾಹ ಭುಂಕ್ಷ್ವ ತ್ವಂ ಬಂಧುಭಿಸ್ಸಹ ।
ಏಕಾಂತಮಂದಿರೇ ಚಾಹಂ ದೇವ್ಯಾಸಹ ವಸಾಮಿ ತೇ ॥ ೧೯೦ ॥

ವಿಷ್ಣುಸ್ಸಮಸ್ತಕರಣಃ ಸಮುದ್ರತನಯಾನ್ವಿತಃ ।
ಏಕಸ್ಮಿನ್ಮಂದಿರೇ ರಾಮ ತಿಷ್ಠತಾಂ ಲೋಲುಪೋ ಹಿ ಸಃ ॥ ೧೯೧ ॥

---

೧೮೭. ಅನಂತರ ಹರಿಯು ಸೀತೆಯನ್ನು ಕುರಿತು ನಿನಗೆ ಪ್ರಸನ್ನನಾಗಿದ್ದೇನೆ. ವರವನ್ನು ಕೇಳಿಕೋ, ಕೊಡುತ್ತೇನೆಂದನು. ಆಗ ಸೀತೆಯು ಇಂತೆಂದಳು.

೧೮೮-೧೮೯. ಸೀತೆಯು ಹೇಳಿದಳು :— ನನ್ನ ಗಂಡನು ಮೊದಲೇ ವರವನ್ನು ಕೇಳಿಕೊಂಡಿದ್ದಾನೆ. ಬೇರೆ ವರವನ್ನು ನಾನು ಕೇಳುವುದು ಯೋಗ್ಯವಲ್ಲ. ನೀನು ವರವನ್ನು ಕೊಡಬೇಕಾಗಿದ್ದರೆ ನನ್ನ ಮನಸ್ಸು ಪರಪುರುಷರನ್ನು ಅಪೇಕ್ಷಿಸದಿರಲಿ. ಸ್ವಾಮಿ, ನಿನಗೆ ನಮಸ್ಕಾರವು ಎಂದಳು. ಅನಂತರ ಆ ಋಷಿಗಳೂ ಅಲ್ಲಿದ್ದವರೂ ಆ ಶಿವನಾರಾಯಣರನ್ನು ನಮಸ್ಕರಿಸಿದರು.

೧೯೦. ಆಗ ಶಿವನು ರಾಮನನ್ನು ಕುರಿತು ನೀನು ಬಂಧುಗಳೊಡನೆ ಊಟ ಮಾಡು. ನಾನು ನನ್ನ ಹೆಂಡತಿಯೊಡನೆ ನಿನ್ನ ಏಕಾಂತದ ಮನೆಯಲ್ಲಿರುತ್ತೇನೆ ಎಂದನು.

೧೯೧. ವಿಷ್ಣುವು ಸಕಲ ಪದಾರ್ಥಗಳಿಂದಲೂ ಕೂಡಿ ಲಕ್ಷ್ಮಿಯೊಡನೆ ಬೇರೆ ಮನೆಯಲ್ಲಿರಲಿ. ಅವನು ಯಾವಾಗಲು ಲೋಲುಪನು.

ಅಥ ಶುದ್ಧಮಹಾಗಾರೇ ಪೀಠಾಢ್ಯೇ ಬಹುಭಾಜನೇ ।
ಅಗ್ರೇ ವಸಿಷ್ಠೋ ಭಗವಾನುಪವಿಷ್ಟಸ್ತಯೋರ್ಮುನಿಃ ॥ ೧೯೨ ॥

ಅಪರೇ ಋಷಯಸ್ಸರ್ವೇ ಯಥಾವೃದ್ಧಂ ನೃಪಾಸ್ತಥಾ ।
ತೇಷಾಮಭಿಮುಖೋ ರಾಮೋ ಭ್ರಾತೃಭಿಸ್ಸಹಿತೋ ನೃಪಃ ॥ ೧೯೩ ॥

ತರುಣೇ ಸಮಭಾಗೇ ಚ ಹ್ಯಾಸನೇ ತಾನವೇಶಯತ್ ।
ಹನುಮತ್ಪ್ರಮುಖಾನ್ಭೃತ್ಯಾನಾಹ ರಾಮೋಽನುಸಾಂತ್ವಯನ್ ॥ ೧೯೪ ॥

॥ ಶ್ರೀರಾಮ ಉವಾಚ ॥

ಭವಂತಃ ಪರಿತಿಷ್ಠಂತು ಪಶ್ಚಾದ್ಭುಂಜತ ನಾನ್ಯಥಾ ।
ತಥೇತಿ ಪ್ರವದುಸ್ಸರ್ವೇ ಪಾದಾರ್ಘ್ಯಾನನುಪೂರ್ವಶಃ ॥ ೧೯೫ ॥

---

೧೯೨. ಅನಂತರ ಒಂದು ಶುದ್ಧವಾದ ದೊಡ್ಡಮನೆಯಲ್ಲಿ ಪೀಠಗಳು ಬಹಳವಾಗಿದ್ದವು. ಅನೇಕವಾದ ಭೋಗಪದಾರ್ಥಗಳೂ ಇದ್ದವು. ಅಲ್ಲಿ ಅನೇಕ ತಟ್ಟೆಗಳೂ ಇದ್ದವು. ಅಲ್ಲಿ ಶಿವ ವಿಷ್ಣುಗಳು ಒಂದು ಜಾಗದಲ್ಲಿ ಕುಳಿತರು. ಅವರ ಎದುರಿಗೆ ವಸಿಷ್ಠನು ಕುಳಿತನು.

೧೯೩. ಉಳಿದ ಋಷಿಗಳೂ, ರಾಜರೂ ವಯಸ್ಸಿಗೆ ಅನುಗುಣವಾಗಿ ಒಬ್ಬರಾಗುತ್ತಲೊಬ್ಬರು ಕುಳಿತುಕೊಂಡರು. ಅವರೆದುರಿಗೆ ರಾಮನು ತಮ್ಮಂದಿರೊಡನೆ ಕುಳಿತುಕೊಂಡನು.

೧೯೪. ವಯಸ್ಸಿನಲ್ಲಿ ಸಮರಾಗಿದ್ದ ಯುವಕರನ್ನು ಸಮವಾಗಿ ಆಸನವನ್ನು ಕೊಟ್ಟು ಕುಳ್ಳಿರಿಸಿದನು.

೧೯೫. ಶ್ರೀರಾಮನು ಹೇಳಿದನು :—ನೀವುಗಳು ಕೊಂಚ ಸೇವೆಮಾಡುತ್ತಿರಿ. ಆಮೇಲೆ ಊಟಮಾಡಿರಿ. ಬೇರೇನೂ ತಿಳಿದುಕೊಳ್ಳಬೇಡಿ ಎನ್ನಲು, ಅವರು ಹಾಗೇ ಆಗಲೆಂದು ಅಲ್ಲಿ ಊಟಮಾಡುವವರಿಗೆ ಕಾಲು ಕೈಗಳಿಗೆ ನೀರು ಮುಂತಾದುವನ್ನು ಕ್ರಮವಾಗಿ ಕೊಡುತ್ತಾ ಬಂದರು.

ಭೂಭುಜಶ್ಚಾಪಿ ತೇ ಸರ್ವೇ ಯೇ ರಾಮಸ್ಯೋಪಸೇವಿನಃ ।
ತೇಷಾಂ ದತ್ವಾಥ ತಾಂಬೂಲಂ ಕಪೀಂದ್ರಾದೀನಭೋಜಯತ್ ॥ ೧೯೬ ॥

ಭುಕ್ತವತ್ಸು ಸಮಸ್ತೇಷು ರಾಮೋ ರಾಜೀವಲೋಚನಃ ।
ದೀನಾಂಧಕೃಪಣಾದೀನಾಂ ಪಶುಪಕ್ಷಿಮೃಗಸ್ಯ ಚ ॥ ೧೯೭ ॥

ದತ್ವಾ ಹಿ ಭೋಜನಂ ಸಂಧ್ಯಾಂ ವಂದಿತುಂ ಹಿ ಸಮಾರಭತ್ ।
ಸಂಧ್ಯಾಜಪಾದಿಕಂ ಕೃತ್ವಾ ನತ್ವಾ ತೇಷಾಂ ನೃಪಸ್ತತಃ ॥ ೧೯೮ ॥

ಸಿಂಹಾಸನಗತೋ ರಾಮಃ ಪೌರಜಾನಪದಾದಿಭಿಃ ।
ಸೇವ್ಯಮಾನಸ್ಸಭಾಸ್ಥಾನಗತೋ ರೇಜೇ ಸ ರಾಘವಃ ॥ ೧೯೯ ॥

ಸರ್ವದೇವಪರೀವಾರೋ ಯಥಾ ದೇವಶ್ಶಚೀಪತಿಃ ।
ರಾಜಕಾರ್ಯಮಶೇಷಂ ಚ ಕೃತವಾನ್ಭ್ರಾತೃಭಿಸ್ಸಹ ॥ ೨೦೦ ॥

---

೧೯೬. ರಾಮನ ಹಿಂದುಮುಂದೆ ಅನುಸರಿಸುತ್ತಿರುವ ಆ ರಾಜರಿಗೆಲ್ಲಾ ತಾಂಬೂಲವನ್ನು ಕೊಟ್ಟು, ಅನಂತರ ಹನುಮಂತನೇ ಮುಂತಾದವರಿಗೆ ಊಟ ಮಾಡಿಸಿದನು.

೧೯೭. ಎಲ್ಲರೂ ಊಟಮಾಡಿದ ಮೇಲೆ ಆ ರಾಮನು ದೀನರು, ಕುರುಡರು, ಕೃಪಣರು, ಪಶು, ಪಕ್ಷಿ, ಮೃಗಗಳಿಗೂ, ಊಟಮಾಡಿಸಿ ಸಂಧ್ಯಾವಂದನೆಯನ್ನು ಮಾಡಲು ಮೊದಲು ಮಾಡಿದನು.

೧೯೮. ಸಂಧ್ಯಾಕಾಲದ ಜಪವನ್ನು ಮಾಡಿ ಅವರೆಲ್ಲರಿಗೂ ನಮಸ್ಕಾರ ಮಾಡಿದನು.

೧೯೯. ಅನಂತರ ಸಿಂಹಾಸನದಲ್ಲಿ ಕುಳಿತು, ರಾಮನು ಪಟ್ಟಣದವರು ದೇಶದವರು ಇವರೇ ಮೊದಲಾದವರಿಂದ ಸೇವೆಯನ್ನು ಹೊಂದುತ್ತಾ ಸಂಸ್ಥಾನದಲ್ಲಿ ಪ್ರಕಾಶಿಸಿದನು.

೨೦೦. ದೇವತೆಗಳ ಪರಿವಾರದಿಂದ ದೇವೇಂದ್ರನು ಹೇಗೆ ಪ್ರಕಾಶಿಸುವನೋ ಹಾಗೆ ರಾಮನು ಪ್ರಕಾಶಿಸಿದನು. ತಮ್ಮಂದಿರೊಡನೆ ರಾಜಕಾರ್ಯವೆಲ್ಲವನ್ನೂ ಮಾಡಿದನು.

ನಾಮ್ನಾ ಚೈಕೈಕಶಸ್ಸರ್ವಾನ್ವಿಸಸರ್ಜ ಸ ರಾಘವಃ ।
ಭ್ರಾತೄನ್ವಿಸರ್ಜಯಾಮಾಸ ವಾನರಾದೀಂಸ್ತಥಾಪರಾನ್ ॥ ೨೦೧ ॥

ಅಥ ರಾಮಂ ಮಹಾತೇಜಾ ವಸಿಷ್ಠೋ ವಾಕ್ಯಮುಕ್ತವಾನ್ ॥ ೨೦೨ ॥

॥ ವಸಿಷ್ಠ ಉವಾಚ ॥

ತವ ಪ್ರಾತರ್ಹಿ ಯತ್ಕಾರ್ಯಂ ನ ಚ ವಿಸ್ಮರ ರಾಘವ ॥ ೨೦೩ ॥

ಆಸ್ತೇ ಶಂಭುರ್ಜಗನ್ನಾಥೋ ಭಗವಾನಂಬಿಕಾಪತಿಃ । ॥ ೨೦೪ ॥
ಸ್ಮರ್ತವ್ಯೋ ವಂದನೀಯಶ್ಚ ಭಗವಾನಥ ಯತ್ನತಃ

ತಥೇತ್ಯುಕ್ತ್ವಾ ಗುರುಂ ರಾಜಾ ನತ್ವಾ ತಂ ಚ ವ್ಯಸರ್ಜಯತ್ ।
ಸ್ವಯಂ ಚ ಭಾರ್ಯಾಮಭಜದ್ದೇವದೇವಂ ವಿಚಿಂತಯನ್ ॥ ೨೦೫ ॥

॥ ಋಷಯ ಊಚುಃ ॥

ಪ್ರಾತಸ್ಸಮುತ್ಥಾಯ ಗುರೋ ರಾಮೋ ಮತಿಮತಾಂ ವರಃ ।
ಕಿಂ ಚಕಾರ ತದಾಖ್ಯಾಹಿ ಶ್ರೋತುಂ ಕೌತೂಹಲಂ ಹಿ ನಃ ॥ ೨೦೬ ॥

---

೨೦೧-೨೦೨. ಹೆಸರು ಹಿಡಿದು ಒಬ್ಬೊಬ್ಬರನ್ನೂ ಕೂಗುತ್ತಾ ಆ ರಾಮನು ಎಲ್ಲರನ್ನೂ ಕಳುಹಿಸಿದನು. ಕೊನೆಗೆ ತಮ್ಮಂದಿರನ್ನೂ ಹನುಮದಾದಿಗಳನ್ನೂ ಕೂಡ ಕಳುಹಿಸಿದನು. ಅನಂತರ ಮಹಾತೇಜಸ್ವಿಯಾದ ವಸಿಷ್ಠನು ರಾಮನನ್ನು ಕುರಿತು ಇಂತೆಂದನು.

೨೦೩. ವಸಿಷ್ಠನು ಹೇಳಿದನು :—ಎಲೈ ರಾಮನೇ, ನಾಳೆ ಬೆಳಗ್ಗೆ ಮಾಡಬೇಕಾದ ಕೆಲಸವನ್ನು ಮರೆಯಬೇಡ.

೨೦೪. ಅಂಬಿಕಾಪತಿಯೂ ಜಗನ್ನಾಥನೂ ಆದ ಶಂಭುವು ನಿನ್ನ ಮನೆಯಲ್ಲಿಯೇ ಇದ್ದಾನೆ. ಆ ಭಗವಂತನನ್ನು ಸ್ಮರಿಸಬೇಕು, ವಂದಿಸಬೇಕು.

೨೦೫. ಹಾಗೇ ಆಗಲೆಂದು ಹೇಳಿ ಆ ಗುರುವನ್ನು ನಮಸ್ಕರಿಸಿ ಕಳುಹಿಸಿದನು. ತಾನೂ ಕೂಡ ದೇವದೇವನ ಸ್ಮರಣೆಮಾಡುತ್ತಾ ಹೆಂಡತಿಯ ಬಳಿಗೆ ಹೋದನು.

೨೦೬. ಋಷಿಗಳು ಹೇಳಿದರು :—ಎಲೈ ಗುರುವೇ, ರಾಮನು ಬೆಳಗ್ಗೆ ಎದ್ದು ಏನುಮಾಡಿದನು? ಅದನ್ನು ಹೇಳು, ನಮಗೆ ಬಹು ಕುತೂಹಲವಾಗಿದೆ.

॥ ಸೂತ ಉವಾಚ ॥

ಶಂಭುಂ ವಿ ಲೋಕ್ಯಾಥ ತತೋ ಬಭಾಷೇ
ರಾಮಃ ಕಥಾಂ ಕೀರ್ತಯ ಶಂಕರಸ್ಯ ।
ತೃಪ್ತಿರ್ನ ಜಾತಾ ಮುನಿವರ್ಯ ಶೃಣ್ವತೋ
ಮಹೇಶಮಾಹಾತ್ಮ್ಯಮಘೌಘನಾಶನಂ ॥ ೨೦೭ ॥

॥ ಶಂಭುರುವಾಚ ॥

ಅಥ ಪ್ರಶ್ನಶೇಷಸ್ಯೋತ್ತರಮೀಶಭಾಷಿತಂ ತೇ ಕೀರ್ತಯಿಷ್ಯಾಮಿ । ಅನ್ಯಾಯಾರ್ಜಿತದ್ರವ್ಯೈರೀಶ್ವರಂ ಯ ಉಪಾಸತೇ ತೇ ವ್ಯಂಗಾ ಜಾಯನ್ತೇ ॥ ೨೦೮ ॥

ತದ್ಯಥಾ ಕಶ್ಚಿದ್ರೂಪಕೋ ನಾಮ ರಾಕ್ಷಸೋಽನ್ಯಾಯಾರ್ಜಿತೇನ ದ್ರವ್ಯೇಣ ಶಂಕರಮಾರಾಧ್ಯ ತೇನೈವ ದ್ರವ್ಯೇಣ ಘಂಟಾಮೀಶ್ವರಪ್ರೀತಯೇ ಕೃತವಾನ್ ॥ ೨೦೯ ॥

ತಸ್ಯ ಪುತ್ರಸ್ಸಂಪಾತಿರಿತಿ ಖ್ಯಾತಶ್ಚೌರ್ಯಾರ್ಜಿತೈಃ ಶಂಕರಂ ಪೂಜಯಾಮಾಸ ॥ ೨೧೦ ॥

---

೨೦೭. ಸೂತನು ಹೇಳಿದನು :—ರಾಮನು ಶಂಭುವನ್ನು ನೋಡಿ, ಶಂಕರನ ಕಥೆಯನ್ನು ಹೇಳು. ಅದನ್ನು ಕೇಳುತ್ತಿದ್ದರೂ ತೃಪ್ತಿಯೇ ಉಂಟಾಗುವುದಿಲ್ಲ. ಅವನ ಮಹಿಮೆಯು ಪಾಪನಾಶಕವಾದುದು.

೨೦೮. ಶಂಭುವು ಹೇಳಿದನು :—ನಿನ್ನ ಪ್ರಶ್ನೆಗೆ ಉತ್ತರವಾಗಿ ಈಶ್ವರನು ಹೇಳಿದುದನ್ನೇ ಹೇಳುತ್ತೇನೆ ಕೇಳು. ಅನ್ಯಾಯದಿಂದ ತಂದ ಪದಾರ್ಥಗಳಿಂದ ಈಶನ ಪೂಜೆಯನ್ನು ಮಾಡಿದರೆ ಅವರು ಅಂಗಹೀನರಾಗಿ ಹುಟ್ಟುತ್ತಾರೆ.

೨೦೯. ಅದು ಹೇಗೆಂದರೆ ಒಬ್ಬ ರೂಪಕನೆಂಬ ರಾಕ್ಷಸನು, ಅನ್ಯಾಯದಿಂದ ಸಂಪಾದಿಸಿದ ಪದಾರ್ಥಗಳಿಂದ ಶಂಕರನನ್ನೂ ಪೂಜಿಸಿ ಆ ಹಣದಿಂದಲೇ ಈಶ್ವರ ಪ್ರೀತಿಗೋಸ್ಕರ ಒಂದು ಘಂಟೆಯನ್ನೂ ಮಾಡಿಸಿದನು.

೨೧೦. ಅವನ ಮಗ ಸಂಪಾತಿಯೆಂಬುವನು ಪ್ರಸಿದ್ಧನಾಗಿ ಕಳ್ಳತನದಿಂದ ತಂದ ಪದಾರ್ಥಗಳಿಂದಲೇ ಶಂಕರನನ್ನು ಪೂಜಿಸಿದನು.

ತಾವ್ರುಭಾವೇಕಸ್ಮಿನ್ದಿವಸೇ ಮಮರತುಃ ॥ ೨೧೧ ॥

ಗತೌ ಶಿವಲೋಕಂ ವೀರಭದ್ರೇಣ ಭಾಷಿತೌ ಚ ಭೋ ರೂಪ-
ಕಾನ್ಯಾಯಾರ್ಜಿತದ್ರವ್ಯೇಣ ಪೂಜಾ ಕೃತಾ ಘಂಟಾದಿಕಂ ಚ
ತೇನ ಭಾವೇನ ವ್ಯಂಗಾ ಭೂತ್ವಾ ಚೋರಗಣೋ ಭವಿಷ್ಯಸಿ ॥ ೨೧೨ ॥

ಶಿವಪದವಚನಾದ್ವ್ಯಕ್ತಂ ನಾಮಾಶ್ರವಣಾಚ್ಛ್ರೋತ್ರಂ ತಸ್ಯ
ಸ್ವನೇನ ಧ್ವಸ್ತಂ ಭವತಿ ನೋ ದರ್ಶನಮೇತಾವದೇವ ತ್ವಯೇ-
ಶ್ವರಪೂಜಾ ಸಮ್ಯಕ್ಕೃತಾsತೋ ಭಕ್ತಿಶ್ಚ ಭವಿಷ್ಯತಿ ವೀರಭದ್ರ-
ಸ್ತ್ವನಶನಂ ನಾಮ ಗಣಂ ಕ್ವಚಿದ್ವಿಚರನ್ತಮಿತ್ಯಾದಿದೇಶ ॥ ೨೧೩ ॥

ತೌ ಚ ತಥಾಭೂತೌ ಶಿವಲೋಕೇ ತಿಷ್ಠತಃ ॥ ೨೧೪ ॥

॥ ಶಂಭುರುವಾಚ ॥

ಅಥೋಪಹತದ್ರವ್ಯಪೂಜಾಕಥಾಂ ಹನುಮತೇ ಮಹೇಶ-

---

೨೧೧. ಅವರಿಬ್ಬರೂ ಒಂದೇ ದಿವಸ ಸತ್ತುಹೋದರು.

೨೧೨. ಅವರಿಬ್ಬರೂ ಶಿವಲೋಕಕ್ಕೆ ಹೋದರು. ಅಲ್ಲಿ ವೀರಭದ್ರನು ಎಲೈ ರೂಪಕನೇ, ಅನ್ಯಾಯದಿಂದ ಸಂಪಾದಿಸಿದ ಹಣದಿಂದ ಪೂಜೆಯನ್ನು ಮಾಡಿದ್ದೀಯೆ. ಘಂಟೆಯನ್ನೂ ಮಾಡಿಸಿದ್ದೀಯೆ. ಆ ಕಾರಣದಿಂದ ಅಂಗಹೀನನಾಗಿ ಚೋರಗಣನಾಗಿ ಆಗು ಎಂದನು.

೨೧೩. ಶಿವನೆಂಬ ಪದವನ್ನು ಉಚ್ಚರಿಸಿದರೆ ಆ ಘಂಟೆಯ ಧ್ವನಿಯಿಂದ ಆ ಪದವು ಕೇಳಿಸದಿರುವುದರಿಂದ ಇತರರ ಕಿವಿಯು ಹಾಳಾಗಿ ಕಿವುಡಾಗುತ್ತಾರೆ. ಕಣ್ಣಿಗೇ ಕಾಣಿಸದೇ ಹೋಗುತ್ತದೆ. ಇಷ್ಟೇನೆ. ಇವರು ಈಶ್ವರನ ಪೂಜೆಯನ್ನು ಚೆನ್ನಾಗಿ ಮಾಡಿದ್ದಾರೆ. ಆದ್ದರಿಂದ ಈಶ್ವರನಲ್ಲಿ ಭಕ್ತಿಯು ಉಂಟಾಗುತ್ತದೆ ಎಂದು ವೀರಭದ್ರನು ಅನಶನವೆಂಬ ಗಣನಿಗೆ ಸಂಚರಿಸುವಾಗ ಹೇಳಿದನು.

೨೧೪. ಅವರಿಬ್ಬರೂ ಹಾಗೇ ಆಗಿದ್ದಾರೆ.

೨೧೫. ಶಂಭುವು ಹೇಳಿದನು :—ಇನ್ನು ಕೆಟ್ಟುಹೋದ ದ್ರವ್ಯಗಳಿಂದ ಪೂಜೆ

ಭಾಷಿತಾಂ ಕಥಯಿಷ್ಯಾಮಿ । ಶೃಣು ರಾಘವ ಪ್ರಮಥಾನಾಂ ಚರಿತಂ
ಏಕೈಕಸ್ಯ ಕರ್ಮವಿಪಾಕಂ ಕಥಯಿಷ್ಯಾಮಿ ॥ ೨೧೪ ॥

ಉಪಹತಾಂಗಗಣವ್ಯಾಖ್ಯಾ ಕ್ರಿಯತಾಮಿತಿ ಪಸುಮತ್ಪೃಷ್ಟಃ ॥ ೨೧೬ ॥

॥ ಶಿವ ಉವಾಚ ॥

ತದುಪಹತದ್ರವ್ಯಂ ಜ್ಞಾನತೋ ಯ ಈಶ್ವರೇಽರ್ಪಯಿಷ್ಯತಿ ।
ಏತದುಕ್ತಂ ಜ್ಞಾನಿನೋಽತಃ ಶೃಣು ॥ ೨೧೭ ॥

ಏಷ ಸರ್ವಾಂಗಸ್ವೇದಿಲಃ ಸರ್ವಕಾಲಂ ಸರ್ವಾಂಗಸ್ವೇದಿಲಃ ಸ್ವೇ-
ದಾರ್ದ್ರವಸನಃ ಸ್ವೇದಸಂಪಾದಿತಾಲ್ಪಪ್ರವಾಹಶರೀರೋ ನಾಸಾ-
ಗ್ರನಿಪತಿತಸ್ವೇದಬಿಂದುಃ ಸ್ಪರ್ಶಾಯೋಗ್ಯೋ ದೃಶ್ಯತೇ ಸ
ಪುರಾ ಸ್ವೇದಕರಣೇಶ್ವರಾರ್ಚನಂ ಕೃತವಾನ್ ॥ ೨೧೮ ॥

ಅತ್ರೇತಿಹಾಸಂ ಕಥಯಿಷ್ಯಾಮಿ ॥ ೨೧೯ ॥

---

ಮಾಡಿದರೆ ಏನಾಗುವುದೆಂಬುದನ್ನೂ ಹನುಮಂತನಿಗೆ ಮಹೇಶನು ಹೇಳಿದುದನ್ನೇ ಹೇಳುತ್ತೇನೆ. ಎಲೈ ರಾಘವನೇ, ಪ್ರಮಥರ ಚರಿತ್ರೆಯನ್ನೂ ಕೇಳು. ಒಬ್ಬೊಬ್ಬನ ಕರ್ಮವಿಪಾಕವನ್ನೂ ಹೇಳುತ್ತೇನೆ.

೨೧೬. ಅವಯವಗಳು ನಾಶವಾಗಿರುವ ಗಣಗಳ ವಿಷಯವನ್ನು ಹೇಳೆಂದು ಹನುಮಂತನು ಕೇಳಲು, ಶಿವನು ಹೇಳಿದನು.

೨೧೭. ಶಿವನು ಹೇಳಿದನು :—ಕೆಟ್ಟುಹೋದ ಪದಾರ್ಥಗಳನ್ನು ತಿಳಿದು ಕೊಂಡೂ ಕೂಡ ಯಾವನು ಈಶ್ವರನಿಗೆ ಸಮರ್ಪಿಸುತ್ತಾನೆಯೋ ಅದಕ್ಕೆ ಜ್ಞಾನಿಗಳು ಹೀಗೆಂದು ಹೇಳುತ್ತಾರೆ ಕೇಳು.

೨೧೮. ಇವನು ಸರ್ವಾಂಗಸ್ವೇದಿಲನೆಂಬುವನು. ಇವನಿಗೆ ಯಾವಾಗಲೂ ಮೈಯೆಲ್ಲಾ ಬೆವರುತ್ತದೆ. ಬೆವರಿನಿಂದ ಬಟ್ಟೆಯು ಒದ್ದೆಯಾಗಿರುತ್ತದೆ. ಬೆವರಿ ನಿಂದಲೇ ಮೈಯಲ್ಲಿ ಧಾರಾಕಾರವಾಗಿ ನೀರು ಹರಿಯುತ್ತದೆ. ಮೂಗಿನತುದಿಯಲ್ಲಿ ಬೆವರಿನ ನೀರಿನ ಹನಿಯು ಬೀಳುತ್ತಲೇ ಇರುತ್ತದೆ. ಮುಟ್ಟುವುದಕ್ಕೆ ಅಯೋಗ್ಯನಾಗಿ ಕಾಣುತ್ತಾನೆ. ಇವನು ಸ್ವೇದಕರಣನೆಂಬ ಈಶ್ವರನ ಪೂಜೆಯನ್ನು ಮಾಡಿದನು.

೨೧೯. ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುವೆನು.

ಚೇಕಿತಾನಿರಿತಿ ಖ್ಯಾತೋ ಬ್ರಾಹ್ಮಣಃ ಕರ್ಷಕೋऽಭವತ್ ।
ಸ ನಿತ್ಯಂ ಕೃಷಿಮುತ್ಪಾದ್ಯ ಪ್ರಾತಸ್ಸ್ನಾತ್ವಾ ಚ ನಿತ್ಯಶಃ ॥ ೨೨೦ ॥

ಮಧ್ಯಾಹ್ನಕಾಲೇ ಸಂಪ್ರಾಪ್ತೇ ಸಂಜಪನ್ಬ್ರಾಹ್ಮಣಸ್ತ್ವಸೌ ।
ಅನ್ನಮಾನಯ ಮೇ ಕ್ಷಿಪ್ರಮಿತಿ ಭಾರ್ಯಾಮಭಾಷತ ॥ ೨೨೧ ॥

ತಯಾನೀತೇನ ಚಾನ್ನೇನ ವೇಗೇನ ಶಿವಪೂಜನಂ ।
ಕೃತವಾನರ್ಕಸಂತಪ್ತಃ ಸ್ವೇದಿಲಃ ಸರ್ವದೈವ ತು ॥ ೨೨೨ ॥

ಗಂಧಪುಷ್ಪಾಕ್ಷತಾದ್ಯೈಶ್ಚ ಸ್ವೇದಬಿಂದುಸಮನ್ವಿತೈಃ ।
ಅಥ ಸಾಯಂದಿನೇ ಪ್ರಾಪ್ತೇ ಕ್ಷಾಳಿತಾಂಗಸ್ಸುಶೋಭನಃ ॥ ೨೨೩ ॥

ಪೂಜಯಾಮಾಸ ದೇವೇಶಂ ಕಾಲಸಂಭವಸಾಧನೈಃ ।
ಮಮಾರಾಥ ಮಹಾಬುದ್ಧಿಃ ಶಿವಲೋಕಂ ಗತಶ್ಚ ಸಃ ॥ ೨೨೪ ॥

ವೀರಭದ್ರೇಣ ಚಾಪ್ಯುಕ್ತೋ ಭವ ತ್ವಂ ಸ್ವೇದಿಲೋ ಗಣಃ ।
ಸ್ವೇದಸ್ಪೃಷ್ಟಪದಾರ್ಥೈಶ್ಚ ಪುರಾ ಶಂಭುಃ ಪ್ರಪೂಜಿತಃ ।
ನಿತ್ಯಂ ಸ್ವೇದಸಮಾಯುಕ್ತಸ್ತೇನ ಸ್ವೇದಗಣೋ ಭವ ॥ ೨೨೫ ॥

---

೨೨೦-೨೨೧. ಚೇಕಿತಾನಿ ಎಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಉಳುತ್ತ ವ್ಯವಸಾಯ ಮಾಡುತ್ತಿದ್ದನು. ಅವನು ನಿತ್ಯವೂ ಬೆಳಗ್ಗೆ ಸ್ನಾನಮಾಡಿ, ಉಳುತ್ತ ಕೃಷಿಮಾಡಿ, ಮಧ್ಯಾಹ್ನದಲ್ಲಿ ಜಪಗಳನ್ನು ಮಾಡುತ್ತಾ ಈಶ್ವರ ಪೂಜೆಯನ್ನು ಮಾಡುತ್ತ, ಹೆಂಡತಿಗೆ ಬೇಗ ಅನ್ನವನ್ನು ತೆಗೆದುಕೊಂಡು ಬಾ ಎನ್ನುತ್ತಿದ್ದನು.

೨೨೨. ಅವಳು ತಂದ ಅನ್ನದಿಂದ ಬೇಗ ಶಿವಪೂಜೆಯನ್ನು ಮಾಡುತ್ತಿದ್ದನು. ಬಿಸಿಲಿನಲ್ಲಿ ಆಯಾಸಪಟ್ಟಿರುವುದರಿಂದ ಯಾವಾಗಲೂ ಬೆವರು ಬರುತ್ತಿತ್ತು.

೨೨೩-೨೨೪. ಗಂಧ, ಹೂ, ಅಕ್ಷತೆಗಳೆಲ್ಲಕ್ಕೂ ಆ ಬೆವರಿನ ನೀರು ಬೀಳುತ್ತಿದ್ದಿತು. ಅದರಿಂದಲೇ ಪೂಜೆಮಾಡುತ್ತಿದ್ದನು. ಸಾಯಂಕಾಲವಾಗುತ್ತಲೂ, ಮೈಯನ್ನೆಲ್ಲಾ ತೊಳೆದುಕೊಂಡು ಆ ಕಾಲದಲ್ಲಿ ಸಿಕ್ಕಿದ ಪದಾರ್ಥಗಳಿಂದ ಪೂಜೆ ಮಾಡುತ್ತಿದ್ದನು. ಹೀಗಿರಲು ಆ ಬುದ್ಧಿವಂತನು ಸತ್ತು ಶಿವಲೋಕಕ್ಕೆ ಹೋದನು.

೨೨೫. ಅಲ್ಲಿ ವೀರಭದ್ರನು, ನೀನು ಸ್ವೇದಿಲಗಣನಾಗು. ಯಾವಾಗಲೂ ನೀನು ಬೆವರಿನಿಂದ ಕಲುಷಿತವಾದ ಪದಾರ್ಥಗಳಿಂದ ಶಿವನನ್ನು ಪೂಜಿಸುತ್ತಿದ್ದೆ. ನಿತ್ಯವೂ ಬೆವರಿನಿಂದಲೇ ಕೂಡಿರುತ್ತಿದ್ದೆ. ಆದ್ದರಿಂದ ಸ್ವೇದಗಣನಾಗು ಎಂದನು.

॥ ಶಂಭುರುವಾಚ ॥

ವೀರೇಣಾಥ ಸಮಾದಿಷ್ಟಃ ಪ್ರಾಪ್ತೋ ರಾಮ ಗಣಃ ಸ್ವಯಂ ॥ ೨೨೬ ॥

ಅಮುಂ ಘಂಟಾಮುಖಂ ಪಶ್ಯಾಽಯಂ ಪುರಾ ವೈಶ್ಯೋ ವಿಭಾ-
ವಸೋ ನಾಮ ಧಾರ್ಮಿಕೋ ಮಹಾದಾನಕರ್ತಾ ನಿತ್ಯಂ
ಬ್ರಾಹ್ಮಣಭೋಜನಂ ಕಾರಯಿತ್ವಾ ಕೃತಾನುಷ್ಠಾನಃ ಪ್ರಾತಃ-
ಕಾಲೇ ಶಿವಂ ನಮಸ್ಕೃತ್ಯ ಕುಸುಮೈಸ್ಸಂಪೂಜ್ಯ ಕಿಂಚಿತ್ಪ್ರ-
ದೇಶಂ ಗೋಮಯೇನೋಪಲಿಪ್ಯ ಪದ್ಮಾದಿಕಂ ರಚಯಿತ್ವಾ
ದೇವಾಯ ಸಮರ್ಪ್ಯೋಪಹತಘಂಟಾನಾದಂ ಕೃತವಾನ್ ॥ ೨೨೭ ॥

॥ ರಾಮ ಉವಾಚ ॥

ಕಥಂಮುಪಹತಘಂಟಾ ॥ ೨೨೮ ॥

॥ ಶಂಭುರುವಾಚ ॥

ಆಸೀತ್ಪುರಾ ಬಲಃ ಕಶ್ಚಿತ್ಸೋಮ ಇತ್ಯಭಿವಿಶ್ರುತಃ ।

---

೨೨೬. ಶಂಭುವು ಹೇಳಿದನು :—ವೀರಭದ್ರನು ಹೇಳಲು ಮತ್ತೊಬ್ಬ ಗಣನು ಅಲ್ಲಿಗೆ ಬಂದನು.

೨೨೭ ಈ ಘಂಟಾಮುಖನನ್ನು ನೋಡು. ಇವನು ಪೂರ್ವದಲ್ಲಿ ಒಬ್ಬ ವೈಶ್ಯನು. ಇವನ ಹೆಸರು ವಿಭಾವಸು ಎಂದು. ಧರ್ಮಿಷ್ಠನು, ಮಹಾದಾನಗಳನ್ನು ಮಾಡಿದವನು, ಪ್ರತಿದಿನವೂ ಬ್ರಾಹ್ಮಣರಿಗೆ ಭೋಜನವನ್ನೂ ಮಾಡಿಸುತ್ತಿದ್ದನು. ಪ್ರಾತಃಕಾಲದಲ್ಲಿ ನಿತ್ಯಕರ್ಮಗಳನ್ನು ಮಾಡಿಕೊಂಡು ಶಿವನಿಗೆ ನಮಸ್ಕಾರಮಾಡಿ, ಹೂವಿನಿಂದ ಪೂಜೆಮಾಡಿ, ಸ್ವಲ್ಪ ಜಾಗವನ್ನು ಹಸುವಿನ ಸಗಣಿಯಿಂದ ಸಾರಿಸಿ ಪದ್ಮಾದಿಗಳನ್ನು ಬರೆದು ದೇವರಿಗೆ ಅರ್ಪಿಸುತ್ತಿದ್ದನು. ಆದರೆ ಒಡಕಲು ಗಂಟೆಯನ್ನು ಬಾರಿಸುತ್ತಿದ್ದನು.

೨೨೮. ರಾಮನು ಹೇಳಿದನು :—ಅದೇಕೆ ಒಡಕಲು ಗಂಟೆಯ ಧ್ವನಿಯನ್ನು ಮಾಡುತ್ತಿದ್ದನು ?

೨೨೯. ಶಂಭುವು ಹೇಳಿದನು :—ಪೂರ್ವದಲ್ಲಿ ಒಬ್ಬ ಸೋಮನೆಂಬ ಹೆಸರುಳ್ಳ,

ತಸ್ಯ ಪುತ್ರಶ್ಚ ಮುಂದಾಖ್ಯೋ ದಶವರ್ಷವಯಾ ಅಭೂತ್ ॥ ೨೨೯ ॥

ಸ ಚಾಗ್ನಿಪಕ್ವಕುಲ್ಮಾಷಾನ್ಘಂಟಾಯಾಂ ಪ್ರಾಕ್ಷಿಪನ್ನೃಪ ।
ತಾನಭಕ್ಷಯದಾಶೇಷಂ ತೇನ ಚೋಪಹತಾಭವತ್ ॥ ೨೩೦ ॥

ಗ್ರಹೀತುಮಥ ತಂ ವೈಶ್ಯಂ ಯುತಮಾನೋಽಬ್ರವೀದಿದಂ ।
ಅಥ ವೈಶ್ಯಸ್ಸ್ವಯಂ ತತ್ರ ನಿಶ್ಚಿತ್ಯ ದ್ರವ್ಯಶೋಧನಂ ॥ ೨೩೧ ॥

ಲೌಕಿಕೇ ಕೃತವಾಂಲ್ಲೋಕೇ ವ್ಯವಹಾರಪದಶ್ಚ ತಾಂ ।
ಏತೇನ ಪಾಪಯೋಗೇನ ಗಣೋ ಘಂಟಾಮುಖೋಽಭವತ್ ॥ ೨೩೨ ॥

॥ ರಾಮ ಉವಾಚ ॥

ದ್ರವ್ಯಶುದ್ಧೇರ್ವಿಶುದ್ಧಾ ಸಾ ಕಥಂ ಪಾಪಸ್ಯ ಕಾರಣಂ ।
ಸಮ್ಯಗುಕ್ತಂ ದ್ರವ್ಯಶುದ್ಧ್ಯೈ ಕಥಂ ನ ದ್ರವ್ಯಶೋಧಿನೀ ॥ ೨೩೩ ॥

---

ಅಡಿಗೆಯವನಿದ್ದನು. ಅವನಿಗೆ ಮುಂದನೆಂಬ ಒಬ್ಬ ಮಗನಿದ್ದನು. ಅವನಿಗೆ ಹತ್ತು ವರ್ಷ ವಯಸ್ಸಾಗಿದ್ದಿತು.

೨೩೦. ಅವನು ಅರ್ಧ ಬೆಂದಿರುವ ಬಿಸಿ ಅಕ್ಕಿಯನ್ನು ಘಂಟೆಯಲ್ಲಿ ಹಾಕಲು ಘಂಟೆಯು ಅಪರಿಶುದ್ಧವಾಯಿತು.

೨೩೧-೨೩೨. ಅದನ್ನು ಕೊಂಡುಕೊಳ್ಳಲು ಬಂದವನು ಇದನ್ನು ವೈಶ್ಯನಿಗೆ ಹೇಳಿದನು. ಅದನ್ನು ಕೇಳಿ ಆ ವೈಶ್ಯನು ಹಣಕೊಟ್ಟುದರಿಂದ ಶುದ್ಧಿಯಾಯಿತೆಂದು ನಿಶ್ಚಯಮಾಡಿಕೊಂಡು ಹಾಗೆ ಹೇಳಿ ಮಾರಿದನು. ಅಲ್ಲದೆ ಜನಗಳಲ್ಲಿ ಇದು ಬಳಕೆಗೆ ಬರುವಂತೆ ಮಾಡಿದನು. ಈ ಪಾಪದಿಂದ ಇವನು ಘಂಟಾಮುಖನೆಂದು ಅರ್ಥಕ್ಕೆ ಅನುಸಾರವಾದ ಹೆಸರನ್ನು ಪಡೆದನು

೨೩೩. ರಾಮನು ಹೇಳಿದನು :—ಹಣವನ್ನು ಕೊಟ್ಟು ಕೊಂಡುಕೊಂಡುದರಿಂದ ಆ ಘಂಟೆಯು ಶುದ್ಧವಾಯಿತಷ್ಟೆ? ಇದರಲ್ಲಿ ಪಾಪಕ್ಕೆ ಕಾರಣವೇನು ? ದ್ರವ್ಯದಿಂದ ಶುದ್ಧಿಯಾದುದು ಸರಿ. ಹಣ ಕೊಟ್ಟಮೇಲೆ ಹೇಗೆತಾನೆ ಶುದ್ಧಿಯಾಗಲಿಲ್ಲ ?

॥ ಶಂಭುರುವಾಚ ॥

ನ ಲೌಕಿಕವ್ಯವಹೃತೌ ತವ ಭಕ್ತೋ ಭವಿಷ್ಯತಿ ।
ಸ ಯಾತಿ ಚ ಶಿವಸ್ಥಾನಂ ವಕ್ತಾ ಚಾಪಿ ತಥಾ ಭವೇತ್ ॥ ೨೩೪ ॥

॥ ಸೂತ ಉವಾಚ ॥

ಯಶ್ಚ ವಕ್ತಿ ಕಥಾಮೇತಾಂ ಸ ತೇನ ಸದೃಶೋ ಭುವಿ ।
ಗುಹ್ಯಾದ್ಗುಹ್ಯತಮಂ ವಿಪ್ರಾಃ ಶಿವಜ್ಞಾನಪ್ರದಂ ಭವೇತ್ ॥ ೨೩೫ ॥

ಏತದ್ವಃ ಕಥಿತಂ ವಿಪ್ರಾಃ ಪುಣ್ಯಾಯುಷ್ಯತಮಂ ಮಹತ್ ।
ಯ ಇದಂ ಶೃಣುಯಾದ್ಭಕ್ತ್ಯಾ ಶಿವಲೋಕೇ ಮಹೀಯತೇ ॥ ೨೩೬ ॥

ಪುರಾಣವಕ್ತ್ರೇ ದಾತವ್ಯಂ ವಸ್ತ್ರಂ ಗೋಹೇಮಭೂಷಣಂ ।
ಭೂಮಿಸ್ಸಸ್ಯಫಲೋಪೇತಾ ದೇಯಾ ಶಕ್ತ್ಯನುಸಾರತಃ ॥ ೨೩೭ ॥

---

೨೩೪. ಶಂಭುವು ಹೇಳಿದನು :—ಲೋಕವ್ಯವಹಾರದಲ್ಲಿ ನಿನ್ನ ಭಕ್ತನು ನಿರತನಾಗಬಾರದು. ಅಂತಹವನೇ ಶಿವಲೋಕವನ್ನು ಹೊಂದುತ್ತಾನೆ. ಹೇಳತಕ್ಕವನೂ ಲೌಕಿಕ ವ್ಯವಹಾರದಲ್ಲಿ ನಿರತನಾಗಿರದಿದ್ದರೆ ಅವನೂ ಶಿವಲೋಕವನ್ನು ಹೊಂದುತ್ತಾನೆ. (ಲೌಕಿಕ ವ್ಯವಹಾರಿಯಾದ ಭಕ್ತನೂ ಅದರ ಉಪದೇಶಕನೂ ಶಿವಸ್ಥಾನವನ್ನು ಹೊಂದುವುದಿಲ್ಲ.)

೨೩೫. ಸೂತನು ಹೇಳಿದನು :—ಎಲೈ ಬ್ರಾಹ್ಮಣರಿರಾ, ಯಾವನು ಈ ಕಥೆಯನ್ನು ಲೋಕದಲ್ಲಿ ಹೇಳುತ್ತಾನೆಯೋ ಅವನು ಆ ಘಂಟಾಕರ್ಣನಿಗೆ ಸಮನಾಗುತ್ತಾನೆ. ಇದು ಗುಹ್ಯಗಳಲ್ಲಿ ಗುಹ್ಯವಾದುದು. ಶಿವಜ್ಞಾನವನ್ನು ಕೊಡುತ್ತದೆ.

೨೩೬. ಎಲೈ ವಿಪ್ರರಿರಾ! ಇದು ಹೆಚ್ಚಾದ ಪುಣ್ಯವನ್ನೂ, ಆಯುಸ್ಸನ್ನೂ ಕೊಡುತ್ತದೆ. ಇದನ್ನು ಭಕ್ತಿಯಿಂದ ಕೇಳಿದವನು ಶಿವಲೋಕದಲ್ಲಿ ಸುಖಿಸುತ್ತಾನೆ.

೨೩೭. ಪುರಾಣವನ್ನು ಹೇಳುವವನಿಗೆ ಬಟ್ಟೆಗಳನ್ನೂ, ಹಸು, ಚಿನ್ನ, ಒಡವೆಗಳನ್ನೂ ಪೈರುಪಚ್ಚೆಗಳಿಂದ ಕೂಡಿದ ಭೂಮಿಯನ್ನೂ ಶಕ್ತಿಗನುಗುಣವಾಗಿ ಕೊಡಬೇಕು.

ಶಿವರಾಘವಸಂವಾದಂ ಸರ್ವಾಘೌಘನಿಕೃಂತನಂ ।
ಯಃ ಪಠೇಚ್ಛೃಣುಯಾದ್ವಾಪಿ ಸಂಯಾತಿ ಪರಮಂ ಪದಂ ॥ ೨೩೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಪಾತಾಳಖಂಡೇ ಶಿವರಾಘವಸಂವಾದೇ
ಉಪರಿಭಾಗೇ ರಾಮಮೋಕ್ಷೋ ನಾಮ
ತ್ರಯೋದಶಾಧಿಕಶತತಮೋಽಧ್ಯಾಯಃ

ಇತಿ ಶ್ರೀ ಮಹಾಮುನಿವ್ಯಾಸಪ್ರಣೀತೇ ಮಹಾಪುರಾಣೇ ಪಾದ್ಮೇ
## ಚತುರ್ಥಂ ಪಾತಾಳಖಂಡಂ ಸಮಾಪ್ತಂ



---

೨೩೮. ಈ ಶಿವರಾಘವರ ಸಂವಾದಶ್ರವಣವು ಎಲ್ಲಾ ಪಾಪಗಳ ಗುಂಪನ್ನೇ ನಾಶಮಾಡುತ್ತದೆ. ಇದನ್ನು ಓದಿದವನೂ, ಕೇಳಿದವನೂ, ಉತ್ತಮಗತಿಯನ್ನು ಹೊಂದುತ್ತಾರೆ.

ಇಲ್ಲಿಗೆ ಪದ್ಮಮಹಾಪುರಾಣದ ಪಾತಾಳಖಂಡದಲ್ಲಿ ಶಿವರಾಘವಸಂವಾದದಲ್ಲಿ,
ರಾಮಮೋಕ್ಷವೆಂಬ ನೂರ ಹದಿಮೂರನೆಯ ಅಧ್ಯಾಯವು ಮುಗಿದುದು.

ಇಂತು ಶ್ರೀ ಮಹಾಮುನಿಯಾದ ವ್ಯಾಸರು ರಚಿಸಿದ ಪದ್ಮ ಮಹಾ
ಪುರಾಣದಲ್ಲಿ ನಾಲ್ಕನೆಯದಾದ ಪಾತಾಳಖಂಡವು
ಮುಗಿದುದು

ಮಂಗಳಂ

